"ದೇಗುಲ ಸಂಪದ"ರಾಗಿದ್ದಾರೆ. ಶ್ರೀಗಳು ಬಾಳೆಯ ಕಂಬದಂಥವರು: ಒಳಗಿಲ್ಲ 'ಅಹಂ' ಭಾವ. ಹೊರಗಿಲ್ಲ ತೋರಿಕೆಯ ಭಕ್ತಿಭಾವ. ಅವರಲ್ಲಿ ಸದುವಿನಯ ಮೃದುವಚನ ಎದೆತೆರೆದ ಮುಗ್ಧತೆ. ಪ್ರಸನ್ನತೆಯ ಮಂದಹಾಸ. ಗುರುಸ್ಮರಣೆಯ ಎಚ್ಚರ. ಸೇವಾ ತುರುಭಕ್ತಿ. ದಾಸೋಹ ನಿಷ್ಠೆಗಳು. ಎದ್ದು ಕಾಣುವ ಸದ್ಭಾವದ ಸದ್ಗುಣಗಳು. ಕಾರುಣ್ಯದ ಕರ್ಪೂರವಾಗಿರುವ ಶ್ರೀಗಳು ಶ್ರೀ ದೇಗುಲ ಮಠವನ್ನು ನಾಡಿನ ಎಲ್ಲ ಮಠಗಳೊಡನೆ ಮಧುರ ಬಾಂಧವ್ಯ ಬೆಳೆದುಬರುವಂತೆ ರಸದೀಪವಾಗಿ ಸುಳಿದಿದ್ದಾರೆ. ತಂಗಾಳಿಯಂತೆ ಸುಳಿದಿದ್ದಾರೆ. ಶ್ರೀಗುರು ಇಮ್ಮಡಿ ಮಹಾಲಿಂಗ ಸ್ವಾಮಿಗಳ ಅಂತರಂಗದ ಜ್ಯೋತಿಯಾಗಿ ಬೆಳಗುತ್ತಿದ್ದಾರೆ. ಶ್ರೀಗಳವರು ಶ್ರೀ ದೇಗುಲಮಠದ ಸೇವಾಧ್ಯಕ್ಷರಾಗಿ ಇಪ್ಪತ್ತೈದು ವರ್ಷಗಳು ತುಂಬಿ ಬಂದಿವೆಯೆಂಬುದನ್ನು ಅವರು ಶ್ರೀಮಠದಲ್ಲಿ ಹಾಗೂ ಭಕ್ತಕೋಟಿಯಲ್ಲಿ ಮಾಡಿರುವ ಸೇವೆಯೇ ಹೇಳುತ್ತಿರುವುದನ್ನು ಯಾರೂ ಗಮನಿಸಬಹುದು. ಅಧಿಕಾರಸ್ಥಾನ ಸ್ವಪ್ರತಿಷ್ಠೆಯ ಪ್ರದರ್ಶನವಲ್ಲ. ಸೇವೆಯ ಕರ್ಮಭೂಮಿ ಎಂಬುದನ್ನರಿತ ವಿನಯ ಸಮುದ್ರರು ಶ್ರೀಗಳವರು. ಮಠಾಧಿಪತಿಗಳಿಗೊಂದು ಮಾದರಿಯಾಗಿ ಶುಭ್ರಶೀಲಭದ್ರರಾಗಿ ಜನ ಕಲ್ಯಾಣದಲ್ಲಿ ಆತ್ಮ ಕಲ್ಯಾಣವನ್ನು ಕಾಣುತ್ತಿರುವ ಶ್ರೀಗಳವರು ವಿರಕ್ತಾಶ್ರಮದ ರಜತ ಮಹೋತ್ಸವವನ್ನು ಅಭೂತಪೂರ್ವಕವಾಗಿ ಆಚರಿಸುತ್ತಿರುವುದು ಸಂತೋಷವನ್ನುಂಟು ಮಾಡಿದೆ. ಈ ಪವಿತ್ರ ಮಹೋತ್ಸವದಲ್ಲಿ ತ್ರಿಕರಣ ಶುದ್ಧಿಯಿಂದ ಸೇವೆ ಸಲ್ಲಿಸುತ್ತಿರುವವರೆಲ್ಲ ಪ್ರಶಂಸನೀಯರು.

ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಗೂ ಶ್ರೀ ಸಿದ್ಧಗಂಗಾ ಮಠಕ್ಕೂ ಬೆಳೆದು ಬಂದಿರುವ ಅನ್ಯೋನ್ಯ ಬಾಂಧವ್ಯ ಲಿಂಗೈಕ್ಯ ಶ್ರೀ ಮಹಾಲಿಂಗ ಸ್ವಾಮಿಗಳವರ ಕಾಲದಿಂದ ಬಂದಿರುವಂಥದು. ಶ್ರೀಮಠಕ್ಕೂ, ಶ್ರೀ ದೇಗುಲ ಮಠಕ್ಕೂ ಬೆಳಗು ಬೆಳಗು ಕೂಡಿದಂತಹ ಸಂಬಂಧ. ಭಾವಾಂಶ ಭರಿತವಾದ ಭಕ್ತಿಯ ಅನುಬಂಧ. ಷಟ್‌ಸ್ಥಲಸೈದ್ಧಾಂತಿಕವಾದ ಆದರ್ಶ ಶಿವಸಂಬಂಧ. ಶ್ರೀಮಠದ ಸರ್ವ ಸಮಸ್ತದಾಸೋಹ ಕೈಂಕರ್ಯದಲ್ಲಿ ಶ್ರೀಗಳು ಭಾಗಿಯಾಗದ ಮುಖಗಳೊಂದೂ ಇಲ್ಲ. ನಮ್ಮ ಪರಮಪೂಜ್ಯ ಗುರುಗಳಾದ ಲಿಂಗೈಕ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಪುಣ್ಯಾರಾಧನೆ ಇರಬಹುದು. ಗ್ರಾಮಾಂತರ ಬಸವ ಜಯಂತಿ ಇರಬಹುದು. ಶರಣ ಮೇಳಗಳಿರಬಹುದು. ವಜ್ರ ಮಹೋತ್ಸವ ಇರಬಹುದು. ಹುಣ್ಣಿಮೆಯ ಪ್ರವಚನ ಕಾರ್ಯವಿರಬಹುದು. ಜಾತ್ರೆಯಿರಬಹುದು. ಸಂಸ್ಥೆಯ ಅಭಿವೃದ್ಧಿ ಪರವಾದ ಆಪ್ತಾಲೋಚನೆಯಿರಬಹುದು. ಆತ್ಮ ಶಕ್ತಿವಿಕಾಸಾತ್ಮಕ ಚಿಂತನೆಗಳಿರಬಹುದು. ಎಲ್ಲವುಗಳಲ್ಲಿ ಶ್ರೀಗಳವರು ಭಾಗವಹಿಸುವುದರ ಮೂಲಕ ಸಂತೋಷವನ್ನು ವೃದ್ಧಿಸುತ್ತ ಬಂದಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇವೆ. ಶ್ರೀಗಳವರ ಸಲ್ಲಲಿತ ಸನ್ಮಾರ್ಗದಲ್ಲಿಯೇ ನಡೆದಿರುವ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರದೂ ಗುರುಮಾರ್ಗಾಚಾರವೇ ಆಗಿರುವುದು ಪುಣ್ಯ ವಿಶೇಷವೆಂದೇ ಭಾವಿಸಿದ್ದೇವೆ. ಶ್ರೀಗಳವರು ಶ್ರೀ ದೇಗುಲ ಮಠದ ಸೇವಾ ಜ್ಯೋತಿಯನ್ನು ನೂರ್ಕಾಲ ಬೆಳಗುವಂತೆ ಶ್ರೀ ಮಠದ ಗುರುಪರಂಪರೆ ಮತ್ತು ಬಸವಾದಿ ಪ್ರಮಥರು ಆಶೀರ್ವದಿಸಲಿ ಎಂದು ಆಶಿಸುತ್ತೇವೆ.

ರಜತ ಮಹೋತ್ಸವ ಸ್ಮರಣ ಸಂಚಿಕೆ "ದೇಗುಲ ಸಂಪದ" ಸರ್ವಾಂಗ ಸುಂದರ ಮೌಲಿಕ ಕೃತಿಯಾಗಿ ಪ್ರಕಟವಾಗಲಿ ಎಂದು ಹಾರೈಸುತ್ತೇವೆ.



ದೂರವಾಣಿ : ಕಛೇರಿ : ೪೮೮೯೨/೪೮೧೧೬೫
ಫ್ಯಾಕ್ಸ್ : ೪೮೧೧೫೭

ದಿನಾಂಕ: ೧೬ನೇ ಏಪ್ರಿಲ್, ೨೦೦೫

ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಜಗದ್ಗುರು ಶ್ರೀ ವೀರಸಿಂಹಾಸನಮಠ, ಸುತ್ತೂರು ಕ್ಷೇತ್ರ,
ಮೈಸೂರು ಜಿಲ್ಲೆ.

# ಶುಭ ಹಾರೈಕೆ

"ಉದಾರಚರಿತಾನಾಂ ತು ವಸುಧೈವ ಕುಟುಂಬಕಂ" ಎಂಬ ಆರ್ಯೋಕ್ತಿಗೆ ತಕ್ಕಂತೆ ಎಲ್ಲರನ್ನೂ ತನ್ನವರನ್ನಾಗಿ ಕಾಣುತ್ತಾ ಸಕಲರಿಗೂ ಲೇಸನ್ನೇ ಹಾರೈಸಿ ಸರ್ವಸಮರ್ಪಣಭಾವದಿಂದ ಸೇವೆಗೈಯುವಂತಹ ಉದಾತ್ತ ವ್ಯಕ್ತಿಗಳ ಹಾಗೂ ಉನ್ನತೋನ್ನತ ಸಂಘ-ಸಂಸ್ಥೆಗಳ ಸುದೀರ್ಘವಾದ ಸೇವಾಪಥದಲ್ಲಿ ಕೆಲವೊಂದು ಕಾಲಘಟ್ಟಗಳು ಮೈಲಿಗಲ್ಲುಗಳಾಗಿ ಮೇಲೆದ್ದು ನಿಲ್ಲುತ್ತವೆ; ಲೋಕದ ಗಮನವನ್ನು ತಮ್ಮತ್ತ ಸೆಳೆಯುತ್ತವೆ. ಅಂತೆಯೇ, ಇದೆ 2005 ಏಪ್ರಿಲ್ 16-17 ರಂದು ನೆರವೇರಲಿರುವ ಕನಕಪುರ ಶ್ರೀ ದೇಗುಲ ಮಠದ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಪಟ್ಟಾಧಿಕಾರದ ರಜತ ಮಹೋತ್ಸವದ ಸಂದರ್ಭವೂ ಕೂಡ ಶ್ರೀಮಠದ ಇತಿಹಾಸದಲ್ಲಿ ಒಂದು ಮಹತ್ವದ ಕಾಲಘಟ್ಟವೆಂದು ಭಾವಿಸಬಹುದಾಗಿದೆ.

ವಿಶಿಷ್ಟವಾದ ಗುರುಪರಂಪರೆಯನ್ನುಳ್ಳ ಶ್ರೀಮಠದ ಸಮಾಜೋಧಾರ್ಮಿಕ ಸೇವಾಕ್ಷೇತ್ರಗಳನ್ನು ವಿಸ್ತರಿಸಿದವರು "ದೇಗುಲ ದಿವ್ಯಜ್ಯೋತಿ" ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಹಾಗೂ ಶ್ರೀ ಇಮ್ಮಡಿ ಚರಮೂರ್ತಿ ಮಹಾಲಿಂಗಸ್ವಾಮಿಗಳು. ಅವರು ತೋರಿದ 'ಗುರುಪಥ'ದಲ್ಲಿಯೇ ಮುನಡೆದವರು ಈಗಿನ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಎಂಬುದು ಸಂತೋಷದ ಸಂಗತಿ.

ಶ್ರೀಗಳವರು ವಿರಕ್ತಾಶ್ರಮಾಧಿಕಾರವನ್ನು ಸ್ವೀಕರಿಸಿದ ಬಳಿಕ ಕಳೆದ 25 ವರ್ಷಗಳ ಸತತ ಪ್ರಯತ್ನದ ಫಲವಾಗಿ ನಾಡಿನ ಧಾರ್ಮಿಕ-ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ನಡೆಸುತ್ತಾ ಬಂದಿರುವ ಸೇವಾಕಾರ್ಯಗಳು ಗಮನಾರ್ಹವಾಗಿವೆ; ಅವರ ಸತ್ಯಶುದ್ಧ ಕಾಯಕದ ಸತ್ಫಲಗಳ ದ್ಯೋತಕಗಳಾಗಿವೆ. ತಮ್ಮ ಹಿತಮಿತವಾದ ಮೃದುವಚನ, ಸರಳಸಜ್ಜನಿಕೆ ನಿರಾಡಂಬರ ಆಚಾರ-ವಿಚಾರಗಳಿಂದಾಗಿ ಸರ್ವಧರ್ಮೀಯರಿಗೂ ಪ್ರಿಯರಾದ ಶಿಷ್ಯರ ಪ್ರೀತಿ-ಗೌರವಗಳನ್ನು ಗಳಿಸಿರುವರು.

ಶ್ರೀಗಳವರ ಪಟ್ಟಾಧಿಕಾರದ ರಜತ ಮಹೋತ್ಸವದ ಈ ಶುಭ ಸಂದರ್ಭದಲ್ಲಿ ಶ್ರೀಮಠದ ಸೇವಾಕಾರ್ಯಗಳ ಸಂಸ್ಮರಣೆ, ಶ್ರೀಗಳವರಿಗೆ ಅಭಿವಂದನ - ಸವಿನೆನಪಿನ ಸಂಚಿಕೆ, ಗ್ರಂಥಗಳ ಸಮರ್ಪಣೆ, ಭಕ್ತಿ-ಗೌರವಗಳ ಅರ್ಪಣೆ ಇತ್ಯಾದಿ ಅರ್ಥಪೂರ್ಣ ಕಾರ್ಯಕ್ರಮಗಳೊಂದಿಗೆ ಸಮುಚಿತವಾದ ಸಮಾರಂಭವನ್ನು ಭಕ್ತಮಂಡಲಿಯವರು ನೆರವೇರಿಸುತ್ತಿರುವುದು ನಿಜಕ್ಕೂ ಶ್ಲಾಘನೀಯ ಹಾಗೂ ಅಭಿನಂದನೀಯ.

ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರಿಗೆ ದೀರ್ಘ ಆಯುರಾರೋಗ್ಯಾದಿಗಳನ್ನು ಕರುಣಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತಾ, 'ದೇಗುಲ ಸಂಪದ' ಸ್ಮರಣ ಸಂಚಿಕೆಯು ಸರ್ವಾಂಗ ಸುಂದರವಾಗಿ ಹೊರಬರಲೆಂದು ಆಶಿಸುತ್ತಾ ಸರ್ವರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

ಇತ್ಯಾಶಿಷಃ




ದೂರವಾಣಿ : ಕಛೇರಿ : ೯೧-೮೦-೨೩೩೨೦೯೩೩/
೨೩೧೮೮೨೨೯
ಫ್ಯಾಕ್ಸ್ : ೨೩೨೮೫೬೦೧

ಶ್ರೀ ಬಾಲಗಂಗಾಧರನಾಥಸ್ವಾಮಿಗಳು
ಪೀಠಾಧ್ಯಕ್ಷರು
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ


ದಿನಾಂಕ : ೧೩ನೇ ಏಪ್ರಿಲ್, ೨೦೦೫

## ಸಂದೇಶ

ಶ್ರೀ ದೇಗುಲ ಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವವನ್ನು ಆಚರಿಸುತ್ತಿರುವ ವಿಷಯ ತಿಳಿದು ನಮಗೆ ಬಹಳ ಸಂತೋಷವಾಯಿತು.

ಅದಿಗುರು ಶ್ರೀ ನಿರ್ವಾಣ ಮಹಾಶಿವಯೋಗಿಗಳಿಂದ ಸ್ಥಾಪನೆಗೊಂಡ ಶ್ರೀದೇಗುಲ ಮಠವು ತನ್ನ ಜನಕಲ್ಯಾಣ ಕಾರ್ಯಗಳಿಂದ ಜನಮಾನಸದಲ್ಲಿ ನೆಲೆಯಾಗಿದೆ. ನಾಡಿನ ಧಾರ್ಮಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಗೆ ಶ್ರೀಮಠವು ನೀಡಿರುವ ಕೊಡುಗೆ ಅಪಾರ. **"ವಿದ್ಯಾಧನಂ ಸರ್ವಧನ ಪ್ರಧಾನಂ"** ಎಂಬ ಉಕ್ತಿಯಂತೆ ಹಲವು ವಿದ್ಯಾ ಸಂಸ್ಥೆಗಳನ್ನು ತೆರೆದು ಸಾವಿರಾರು ಮಕ್ಕಳಿಗೆ ಜ್ಞಾನದಾಸೋಹ ನೀಡುತ್ತಿದೆ. ಅಂತೆಯೇ ಹಲವು ಉಚಿತ ಪ್ರಸಾದ ನಿಲಯಗಳನ್ನು ಪ್ರಾರಂಭಿಸಿ ಅನಾಥ ಮಕ್ಕಳಿಗೆ ಆಶ್ರಯ ನೀಡಿದೆ. ಶ್ರೀಮಠದ ಪ್ರಸ್ತುತ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಇದೇ ಮಾರ್ಗದಲ್ಲಿ ಮುನ್ನಡೆದು ತಮ್ಮ ಅವಧಿಯಲ್ಲಿ ಶ್ರೀಮಠದ ಸೇವಾ ಕ್ಷೇತ್ರವನ್ನು ದ್ವಿಗುಣಗೊಳಿಸಿದ್ದಾರೆ. ಭಕ್ತ ಜನರ ಆಧ್ಯಾತ್ಮಿಕ ಹಂಬಲ ಹಾಗೂ ಕೋರಿಕೆಗಳನ್ನು ಈಡೇರಿಸುತ್ತಾ ಲೋಕಸೇವೆಯಲ್ಲಿ ನಿರತರಾಗಿ, ಭಕ್ತಕೋಟಿಯ ಗೌರವಾದರಗಳಿಗೆ ಪಾತ್ರರಾಗಿದ್ದಾರೆ.

ರಜತ ಮಹೋತ್ಸವ ನಡೆಯುತ್ತಿರುವ ಈ ಶುಭಸಂದರ್ಭದಲ್ಲಿ **"ದೇಗುಲ ಸಂಪದ"** ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಸಮಯೋಚಿತವಾಗಿದೆ. ಈ ಸಂಚಿಕೆಯು ಶ್ರೀಗಳವರ ಆದರ್ಶವನ್ನು ಪ್ರತಿಬಿಂಬಿಸುವ ಹಾಗೂ ಶ್ರೀಮಠದ ಸಾರ್ಥಕ ಸೇವಾಕಾರ್ಯಗಳನ್ನು ಪರಿಣಾಮಕಾರಿಯಾಗಿ ತಿಳಿಸುವ ಅತ್ಯುತ್ತಮ ಲೇಖನಗಳಿಂದ ಕೂಡಿ ಸರ್ವಾಂಗ ಸುಂದರವಾಗಿ ಹೊರಬರಲೆಂದೂ, ಇದು ಮುಂದಿನ ಪೀಳಿಗೆಗೆ ಸ್ಫೂರ್ತಿದಾಯಕವಾಗಲೆಂದೂ, ಹಮ್ಮಿಕೊಂಡಿರುವ ಸಮಾರಂಭವು ಯಶಸ್ವಿಯಾಗಿ ನೆರವೇರಲೆಂದೂ ತುಂಬು ಹೃದಯದಿಂದ ಹಾರೈಸುತ್ತೇವೆ.

ಇಂತು ಭಗವತ್ಸೇವೆಯಲ್ಲಿ,



ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು




ಶ್ರೀ ತೋಂಟದಾರ್ಯ ಮಠ
ಡಂಬಳ – ಗದಗ
ಗದಗ – ೫೮೨ ೧೦೧

ದೂರವಾಣಿ : ೨೮೮೨೭, ೨೫೫೯೯


ದಿನಾಂಕ : 26-3-2005

## ಶುಭನುಡಿ

ಕನಕಪುರ ದೇಗುಲಮಠದ ಹಿರಿಯ ಗುರುಗಳಾದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ಬೆಳ್ಳಿಹಬ್ಬ ಸಮಾರಂಭವು 2005 ಏಪ್ರಿಲ್ 16 ಮತ್ತು 17 ರಂದು ಜರುಗುತ್ತಿರುವುದು ತಿಳಿದು ತುಂಬ ಸಂತೋಷವಾಯಿತು.

**"ಮಾಡುವಂತಿರಬೇಕು, ಮಾಡದಂತಿರಬೇಕು ಮಾಡುವ ಮಾಟದಲ್ಲಿ ತಾನಿಲ್ಲದಂತಿರಬೇಕು"** ಎಂಬ ಬಸವಣ್ಣನವರ ಮಾತಿಗೆ ಸಾಕ್ಷಿಯಂತಿರುವ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಸದ್ದಿಲ್ಲದ ಸಾಧನೆಯಲ್ಲಿ ತೊಡಗಿದವರು. ಸಹಸ್ರಾರು ವಿದ್ಯಾರ್ಥಿಗಳ ಬದುಕಿನ ಹಣತೆಗೆ ಅನ್ನ-ಅರಿವೆ-ಅರಿವುಗಳ ತೈಲವನ್ನೆರೆದು ಅವರ ವ್ಯಕ್ತಿತ್ವ ಉಜ್ವಲಗೊಳ್ಳುವಂತೆ ಮಾಡಿದ ಪೂಜ್ಯರ ಶ್ರಮ ದೊಡ್ಡದು. ಪಾರಂಪರಿಕ ಮೌಲ್ಯಗಳು ನಶಿಸುತ್ತಿರುವ ಇಂದಿನ ದಿನಮಾನಗಳಲ್ಲಿ ಜನತೆಯನ್ನು ಧಾರ್ಮಿಕ-ನೈತಿಕ ನೆಲೆಗಟ್ಟಿನಲ್ಲಿ ಮುನ್ನಡೆಸುತ್ತಿರುವ ಪೂಜ್ಯರು ನಾಡವರ ಗೌರವಕ್ಕೆ ಪಾತ್ರರಾಗಿದ್ದಾರೆ. ಕಳೆದ ಇಪ್ಪತ್ತೈದು ವರ್ಷಗಳಿಂದ ಸಮಾಜ ಸೇವೆಯನ್ನು ಶಿವಪೂಜೆಯೆಂದು ಭಾವಿಸಿ ಜಂಗಮ ಮುಖದಲ್ಲಿ ಲಿಂಗವನ್ನು ಕಾಣುತ್ತಿರುವ ಪೂಜ್ಯರ ಪಟ್ಟಾಧಿಕಾರ ರಜತೋತ್ಸವ ಕಾರ್ಯಕ್ರಮ ಯಶಸ್ವಿಯಾಗಲಿ. ಕಾರ್ಯಕ್ರಮದ ಅಂಗವಾಗಿ ಹೊರಬರುತ್ತಿರುವ ನೆನಹಿನ ಸಂಚಿಕೆ **"ದೇಗುಲ ಸಂಪದ"** ಅರ್ಥಪೂರ್ಣವಾಗಿ, ಸರ್ವಾಂಗಸುಂದರವಾಗಿ ಮೂಡಿ ಬರಲೆಂದು ಹಾರೈಸಲಾಗಿದೆ.

ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು





ಶ್ರೀ ಧರ್ಮಸ್ಥಳ – 574 216
ದಕ್ಷಿಣ ಕನ್ನಡ, ಕರ್ನಾಟಕ
☎ : ಕಛೇರಿ (08256) 277121
ಇ–ಮೇಲ್ : devheggade@hotmail.com

ದಿನಾಂಕ : **24-03-2005**

ಡಿ. ವೀರೇಂದ್ರ ಹೆಗ್ಗಡೆಯವರು

## ಸಂದೇಶ

ಕನಕಪುರ ಶ್ರೀ ದೇಗುಲ ಮಠದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮೀಜಿಯವರ ಪಟ್ಟಾಧಿಕಾರದ ರಜತ ಮಹೋತ್ಸವ ಸಮಾರಂಭವನ್ನು ಏರ್ಪಡಿಸಲಿರುವ ವಿಚಾರ ತಿಳಿದು ಸಂತೋಷವಾಯಿತು.

ರಜತ ಮಹೋತ್ಸವದ ಈ ಶುಭ ಸಂದರ್ಭ ಸವಿನೆನಪಿಗಾಗಿ **"ದೇಗುಲ ಸಂಪದ"** ಎಂಬ ಸ್ಮರಣ ಸಂಚಿಕೆಯೊಂದನ್ನು ಹೊರ ತರಲಿರುವುದು ಔಚಿತ್ಯಪೂರ್ಣವಾಗಿದೆ. ಶ್ರೀ ಮಠದ ಇತಿಹಾಸ, ಹಿನ್ನೆಲೆ, ಪೂಜ್ಯ ಶ್ರೀಯವರ ಪರಿಚಯ ಹಾಗೂ ಸಾಧನೆಗಳನ್ನೊಳಗೊಂಡ ವಿವಿಧ ವಿದ್ವಾಂಸರ ವಿಚಾರಪೂರ್ಣ ಲೇಖನಗಳಿಂದೊಡಗೂಡಿ ಸಂಚಿಕೆ ಆಕರ್ಷಕವಾಗಿ ಪ್ರಕಟವಾಗಲೆಂದು ಆಶಿಸುತ್ತೇನೆ.

ಈ ದಿಸೆಯಲ್ಲಿ ನಿಮ್ಮೆಲ್ಲ ಪ್ರಯತ್ನ-ಪರಿಶ್ರಮ ಸಫಲವಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

Heggade

ಶ್ರೀ ಜಗದ್ಗುರು ಮೂರುಸಾವಿರ
ಮಹಾಸಂಸ್ಥಾನ ಮಠ

ದೂರವಾಣಿ : 2363081, 2269449
ಫ್ಯಾಕ್ಸ್ : 0836-2266643

ಹುಬ್ಬಳ್ಳಿ – 580 0258
ಧಾರವಾಡ ಜಿಲ್ಲೆ

ದಿನಾಂಕ : **25-03-205**

## ಸಂದೇಶ

ಕನಕಪುರದ ಶ್ರೀ ದೇಗುಲಮಠದ ಅಧ್ಯಕ್ಷರಾಗಿ ಪರಮಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು 25 ವರ್ಷಗಳಿಂದ ತಮ್ಮ ಸೇವಾ ಕ್ಷೇತ್ರವನ್ನು ವಿಸ್ತರಿಸುತ್ತಾ ಬಂದಿದ್ದಾರೆ.

ಇಂಥಹ ಶ್ರೀ ವಿರಕ್ತಾಶ್ರಮದ ರಜತ ಮಹೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿ – ಅಭಿನಂದನೆ ಸಲ್ಲಿಸುವ ಈ ಸಮಾರಂಭವು ಅದ್ದೂರಿಯಿಂದ ನಡೆಯಲಿ – ಈ ಸಮಾರಂಭಕ್ಕೆ ನಾಡಿನ ಮಹಾಸ್ವಾಮಿಗಳು – ರಾಜಕೀಯ ಮಹಾನ್ ಮುಖಂಡರು, ವಿದ್ವಾಂಸರು, ಕಲಾವಿದರು – ಇವರೆಲ್ಲರೂ ಭಾಗವಹಿಸುವುದರಿಂದ ಬೀದಿಯಲ್ಲಿ ಸಾಗುವ ರಥಕ್ಕೆ ಹೊನ್ನ ಕಳಸವಿಟ್ಟಂತೆ ಸಮಾರಂಭ ಶೋಭಾಯಮಾನವಾಗಿದೆ.

ಕನಕಪುರ ದೇಗುಲಮಠದ ಶ್ರೀಗಳು ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಸಾಕಷ್ಟು ಕಾರ್ಯ ಮಾಡಿದವರು. ಕನಕಪುರದ ಜನರ ಹೃನ್ಮನದಲ್ಲಿ ಅವರ ಹೆಸರು ಉಳಿದಿದೆ.

ಈ ಅನನ್ಯ ಸಮಾರಂಭವು ಯಶಸ್ವಿಯಾಗಿ ಜರುಗಲಿ. ಇದೇ ಸಂದರ್ಭದಲ್ಲಿ **'ದೇಗುಲ ಸಂಪದ'** ಎಂಬ ಸ್ಮರಣ ಸಂಚಿಕೆ ಹೊರಬರಲಿ. ಈ ಸಮಾರಂಭದ ಹಾಗೂ ಸ್ಮರಣ ಸಂಚಿಕೆಯ ಸವಿ ನೆನಪು ಚಿರಸ್ಥಾಯಿಯಾಗಿ ಸಮಾಜ ಸ್ಪಂದಿಸುವಂತಾಗಲಿ. ಪೂಜ್ಯ ಶ್ರೀಗಳು ತಮ್ಮ ಧಾರ್ಮಿಕ-ಸಾಂಸ್ಕೃತಿಕ ಕಾರ್ಯಗಳನ್ನು ಹೊಸ ಸ್ಫೂರ್ತಿಯಿಂದ ಮುಂದುವರಿಸಿಕೊಂಡು ಹೋಗಲಿ ಎಂದು ಈ ಮೂಲಕ ಶುಭ ಹಾರೈಸುತ್ತೇವೆ.

ಶ್ರೀ ಗುರುಸಿದ್ಧರಾಜಯೋಗೀಂದ್ರ ಸ್ವಾಮಿಗಳು






ಸಿ.ಎಂ./ವಿ/ಸಂದೇಶ/81/05

ಬೆಂಗಳೂರು-560 001

ದಿನಾಂಕ : 6-4-2005

**ಧರ್ಮಸಿಂಗ್**
ಮುಖ್ಯಮಂತ್ರಿ

## ಸಂದೇಶ

ನಾಡಿನ ಪ್ರಸಿದ್ಧ ಶ್ರೀ ಕ್ಷೇತ್ರಗಳಲ್ಲಿ ಒಂದಾದ ಕನಕಪುರದ ಶ್ರೀ ದೇಗುಲ ಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರದ ರಜತ ಮಹೋತ್ಸವವನ್ನು 2005 ರ ಏಪ್ರಿಲ್ 16 ಮತ್ತು 17 ರಂದು ಆಯೋಜಿಸಿರುವುದನ್ನು ತಿಳಿದು ಹರ್ಷವಾಗಿದೆ.

ಇದೇ ಸಂದರ್ಭದಲ್ಲಿ ಪರಮಪೂಜ್ಯ ಶತಾಯುಷಿ ಶ್ರೀ ಇಮ್ಮಡಿ ನಿರ್ವಾಣ ಶಿವಯೋಗಿಗಳವರ ಹಾಗೂ ಶ್ರೀ ಇಮ್ಮಡಿ ಮಹಾಲಿಂಗ ಮಹಾಸ್ವಾಮಿಗಳವರ ಸಂಸ್ಮರಣೋತ್ಸವ ಮತ್ತು ಸರ್ವಧರ್ಮ ಸಮ್ಮೇಳನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಔಚಿತ್ಯ ಪೂರ್ಣವಾಗಿದೆ.

ಶ್ರೀಗಳವರ ರಜತ ಮಹೋತ್ಸವ ಮತ್ತು ಇತರ ಸಮಾರಂಭಗಳು ಯಶಸ್ವಿಯಾಗಿ ಜರುಗಲಿ ಹಾಗೂ ಈ ಸಂದರ್ಭದಲ್ಲಿ ಹೊರ ತರುತ್ತಿರುವ ಸ್ಮರಣ ಸಂಚಿಕೆ "ದೇಗುಲ ಸಂಪದ" ಆಧ್ಯಾತ್ಮಿಕ ವಿಚಾರಗಳು ಮತ್ತು ದೇಗುಲ ಮಠದ ಸಿದ್ಧಿ ಹಾಗೂ ಸಾಧನೆಗಳನ್ನು ಬಿಂಬಿಸುವ ಅರ್ಥಪೂರ್ಣ ಲೇಖನಗಳಿಂದೊಡಗೂಡಿ ಆಕರ್ಷಕವಾಗಿ ಮೂಡಿ ಬರಲಿ ಎಂದು ಹಾರೈಸುತ್ತೇನೆ.



**M.V. RAJASEKHARAN**




MINISTER OF STATE FOR PLANNING
GOVERNMENT OF INDIA
PLANNING COMMISSION
YOJANA BHAWAN SANSAD MARG
NEW DELHI-110 001
Tel : 011-23096561, 23096562
Fax : 011-23096713
E-mail : mvraja@yojana.nic.in

ದಿನಾಂಕ : 24-03-2005

## ಸಂದೇಶ

ಕನಕಪುರದ ಶ್ರೀ ದೇಗುಲಮಠವು ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸದಲ್ಲಿ ತನ್ನದೇ ಆದ ಪ್ರಭಾವವನ್ನು ಪಡೆದಿದೆ. ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ಬೆಳ್ಳಿಹಬ್ಬದ ಸಂದರ್ಭದಲ್ಲಿ **"ದೇಗುಲ ಸಂಪದ"** ಎಂಬ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಸಂತಸದ ವಿಚಾರ.

ಶ್ರೀ ದೇಗುಲಮಠವು ಈಗಾಗಲೇ ಅನೇಕ ಧಾರ್ಮಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅದನ್ನು ಅರ್ಥಪೂರ್ಣವಾಗಿ ಆಚರಣೆಗೆ ತರುವುದರ ಮೂಲಕ ಅಪಾರ ಜನರ ವಿಶ್ವಾಸಕ್ಕೆ ಪಾತ್ರವಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಸಹಭಾಗಿತ್ವ ಅಗತ್ಯವಿದೆಯೆಂದು ಎಲ್ಲೆಡೆಯಿಂದ ಕೇಳಬರುತ್ತಿರುವ ಮಾತಾಗಿದೆ.

ಬಹು ಹಿಂದಿನಿಂದಲೂ ನಮ್ಮ ಧಾರ್ಮಿಕ ಸಂಸ್ಥೆಗಳು 'ಅನ್ನ ದಾಸೋಹ' ಹಾಗೂ 'ಜ್ಞಾನ ದಾಸೋಹ' ಕಾರ್ಯವನ್ನು ಶ್ರದ್ಧಾಭಕ್ತಿಯಿಂದ ನಡೆಸಿಕೊಂಡು ಬರುತ್ತಿದೆ. ಈ ಕಾರಣಕ್ಕಾಗಿ ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಎಲ್ಲರಿಗೂ ಎಟುಕುವಂತಾಗಿದೆ. ಕರ್ನಾಟಕದ ವಿವಿಧ ಧಾರ್ಮಿಕ ಕೇಂದ್ರಗಳು ವಿದ್ಯಾರ್ಥಿಗಳಿಗೆ ನೀಡುತ್ತಿರುವ ಪ್ರೋತ್ಸಾಹ ಅನನ್ಯವಾದುದು. ಇಂತಹ ಪರಂಪರೆಗೆ ಕನಕಪುರದ ಶ್ರೀ ದೇಗುಲಮಠವು ಸೇರಿದೆ. ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿಯನ್ನು ಸದಾ ಚಿಂತಿಸುತ್ತಿರುವವರು. ಅವರ ಆಶ್ರಯದಲ್ಲಿ ಬದುಕಿನ ತತ್ವವನ್ನು ತಿಳಿದ ಅನೇಕ ವಿದ್ಯಾರ್ಥಿಗಳು ನಮ್ಮ ಮುಂದಿದ್ದಾರೆ. ಅವರೆಲ್ಲರ ದನಿಗೆ ನನ್ನ ದನಿಗೂಡಿಸಿ ಈ ಧಾರ್ಮಿಕ ಕೇಂದ್ರವು ಮತ್ತಷ್ಟು ಶ್ರೇಯೋಭಿವೃದ್ಧಿ ಹೊಂದಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಎಂ. ವಿ. ರಾಜಶೇಖರನ್



**ಪಿ.ಜಿ.ಆರ್. ಸಿಂಧ್ಯಾ**
**ಭಾರಿ ಮತ್ತು ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ**
**ಹಾಗೂ ಮೂಲಭೂತ ಸೌಲಭ್ಯ ಸಚಿವರು**




ದೂರವಾಣಿ : ಕಛೇರಿ : ೨೨೨೫೩೬೫೧ (ಫ್ಯಾಕ್ಸ್)
೨೨೮೯೨೪೧೩.
ನಿವಾಸ : ೨೬೫೪೨೬೧೧, ೨೬೫೪೨೬೨೫
ನಂ. ೩೪೨, ವಿಧಾನ ಸೌಧ, ಬೆಂಗಳೂರು - ೧.

ದಿನಾಂಕ: ೧೨ನೇ ಏಪ್ರಿಲ್, ೨೦೦೫

# ಸಂದೇಶ

ಕನಕಪುರದ - ಶ್ರೀ ದೇಗುಲಮಠವು ಅಖಂಡ ಕರ್ನಾಟಕದ ಪ್ರಸಿದ್ಧ ವೀರಶೈವ ಮಠಗಳಲ್ಲಿ ಒಂದಾಗಿದೆ. ಶ್ರೀ ಮಠವು ನಾಡಿನ ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ತನ್ನದೆ ಆದ ಅಮೂಲ್ಯ ಕೊಡುಗೆಯನ್ನು ನೀಡುತ್ತಾ ಬಂದಿದೆ. ಸುಮಾರು 600 ವರ್ಷಗಳ ಭವ್ಯ ಪರಂಪರೆಯನ್ನು ಹೊಂದಿರುವ ಶ್ರೀಮಠವು ಲಿಂಗೈಕ್ಯ ಆದಿಗುರು ತಪಸ್ವಿ ಪೂಜ್ಯ ಶ್ರೀ ನಿರ್ವಾಣ ಶಿವಯೋಗಿಗಳ ಕರುಣೆಯ ಫಲವಾಗಿ, ಶತಾಯುಷಿ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಹಾಗೂ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳ ಕಾಲದಲ್ಲಿ ಜನಸೇವೆಯ ಉತ್ತುಂಗ ಏರಿರುವುದು ಸ್ಮರಣೀಯ. ಶ್ರೀ ಮಠದ ಘನತೆ ಗಾಂಭೀರ್ಯವನ್ನು ದಿವ್ಯ ಪರಂಪರೆಯ ಪಾವಿತ್ರ್ಯತೆಯನ್ನು ಸಂವರ್ಧಿಸಿ, ರಕ್ಷಿಸಿಕೊಂಡು ಬರುತ್ತಿರುವ ಹಿರಿಯ ಗುರುಗಳಾದ ಪೂಜ್ಯಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು ಹಾಗೂ ಶ್ರೀ ಮುಮ್ಮಡಿ ಮಹಾಲಿಂಗಸ್ವಾಮಿಗಳು ಶ್ರೀಮಠದ ಸೇವಾ ಹಸ್ತವನ್ನು ಹಲವಾರು ಕ್ಷೇತ್ರಗಳಲ್ಲಿ ವಿಸ್ತರಿಸಿ ಅಹರ್ನಿಶಿ ದುಡಿಯುತ್ತಿದ್ದಾರೆ.

ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಗ್ರಾಮೀಣ ಜನಸಮುದಾಯದ ಅಭಿವೃದ್ಧಿಗೆ ಕಟಿಬದ್ಧರಾಗಿದ್ದು, ಪ್ರಾಥಮಿಕ ಹಂತದಿಂದ ಪದವಿ ಶಿಕ್ಷಣದವರೆಗೆ ಶಿಕ್ಷಣ ಸಂಸ್ಥೆಗಳನ್ನು, ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಔದ್ಯೋಗಿಕ ಶಿಕ್ಷಣವನ್ನು ಕೊಡುತ್ತಿರುವ ಶ್ರೀಮಠವು ಅನಾಥ ಮಕ್ಕಳಿಗೆ ನೆಲೆಯನ್ನು ಕಲ್ಪಿಸಿದ್ದಾರೆ.

ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪೀಠಾಧಿಕಾರದ ಬೆಳ್ಳಿ ಹಬ್ಬದ ಪ್ರಯುಕ್ತ 2005ರ ಏಪ್ರಿಲ್ ೧೬ ಮತ್ತು ೧೭ ರಂದು ರಜತ ಮಹೋತ್ಸವವನ್ನು ಆಚರಿಸುತ್ತಿರುವುದು ನಾಡಿನ ಜನತೆಗಲ್ಲದೆ ನೆರೆಯ ರಾಜ್ಯಗಳ ಹಾಗೂ ಅಪಾರ ವಿದೇಶಿ ಭಕ್ತ ಸಮುದಾಯಕ್ಕೆ ಆನಂದವನ್ನುಂಡುಮಾಡಿದೆ. ಈ ರಜತ ಮಹೋತ್ಸವದಲ್ಲಿ ಅನೇಕ ಸಾಂಸ್ಕೃತಿಕ ಉತ್ಸವಗಳನ್ನು ಧಾರ್ಮಿಕ ಪ್ರವಚನಗಳನ್ನು ಏರ್ಪಡಿಸಿವುದು ಆಧ್ಯಾತ್ಮಿಕ ವಿಕಸನಕ್ಕೆ ಮಾಡಿಕೊಟ್ಟಿದೆ.

ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳ ಪೀಠಾಧಿಕಾರದ ಬೆಳ್ಳಿಹಬ್ಬದ ಈ ಶುಭ ಸಂದರ್ಭದಲ್ಲಿ ಹೊರತರುತ್ತಿರುವ "ದೇಗಲ ಸಂಪದ" ಸ್ಮರಣ ಸಂಚಿಕೆಯು ಮೌಲಿಕ ಲೇಖನಗಳೊಂದಿಗೆ ಸೊಗಸಾಗಿ ಮೂಡಿಬರಲೆಂದು ಹಾಗೂ ರಜತ ಮಹೋತ್ಸವ ಕಾರ್ಯಕ್ರಮಗಳು ಎಲ್ಲಾ ವಿಧದಲ್ಲು ಯಶಸ್ವಿಯಾಗಲೆಂದು ಹಾರೈಸುತ್ತೇನೆ.

**ಪಿ.ಜಿ.ಆರ್. ಸಿಂಧ್ಯ**

**ಬಿ.ಎಸ್. ಯಡಿಯೂರಪ್ಪ**
**ವಿರೋಧ ಪಕ್ಷದ ನಾಯಕರು**
**ಕರ್ನಾಟಕ ವಿಧಾನಸಭೆ**



ದೂರವಾಣಿ : ಕಛೇರಿ : ೨೨೨೫೮೫೬೪
ನಿವಾಸ : ೨೨೨೬೪೯೩೧
ಫ್ಯಾಕ್ಸ್ : ೨೨೨೫೦೩೨೮
ವಿಧಾನಸೌಧ, ಬೆಂಗಳೂರು-೫೬೦ ೦೦೧

ಸಂಖ್ಯೆ : ವಿಪನಾ : 20 : ವಿಸ : 2005

ದಿನಾಂಕ: ೧ನೇ ಏಪ್ರಿಲ್, ೨೦೦೫

## ಶುಭ ಸಂದೇಶ

ಕನಕಪುರದ ಶ್ರೀ ದೇಗುಲ ಮಠವು ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆ ಅವಿಸ್ಮರಣೀಯವಾದುದು. ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಮಠದ ಕಾರ್ಯ ಚಟುವಟಿಕೆಗಳನ್ನು ಹಾಗೂ ಸೇವಾ ಕ್ಷೇತ್ರವನ್ನು ಅಭೂತಪೂರ್ವಕವಾಗಿ ವಿಸ್ತರಿಸಿರುವುದು ಶ್ಲಾಘನೀಯ. ಅವರ ವಿರಕ್ತಾಶ್ರಮದ ರಜತ ಮಹೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿ ಅವರಿಗೆ ಅಭಿನಂದನೆ ಸಲ್ಲಿಸಲು ತೀರ್ಮಾನಿಸಿರುವುದು ಸಹಾ ಅಭಿನಂದನಾರ್ಹವಾದುದಾಗಿದೆ. ಈ ಒಂದು ಸಮಾರಂಭವು ಹಾಗೂ **"ದೇಗುಲ ಸಂಪದ"** ಸ್ಮರಣ ಸಂಚಿಕೆಯು ನಾಡಿನ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳ ಸರ್ವತೋಮುಖ ಅಭಿವೃದ್ಧಿಗೆ ನಾಂದಿಯಾಗಲಿ ಹಾಗೂ ಈ ಸಮಾರಂಭವು ಅತ್ಯಂತ ಯಶಸ್ಸನ್ನು ಹೊಂದಲಿ ಎಂದು ಆಶಿಸುತ್ತೇವೆ.

ಬಿ.ಎಸ್. ಯಡಿಯೂರಪ್ಪ






Telephone : Off : 22255023
22092426

Room No. 344, Vidhana Soudha
Bangalore - 560 001

Dated : 29-03-2005

**D. MANJUNATH**
**MINISTER FOR HIGHER EDUCATION**

No. MHE/MS/2537/05

## ಸಂದೇಶ

ಕನಕಪುರದ ಶ್ರೀ ದೇಗುಲಮಠವು ನಾಡಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸುತ್ತಿದೆ. ಶ್ರೀ ಮಠದ ಅಧ್ಯಕ್ಷರಾಗಿ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಕಳೆದ 25 ವರ್ಷಗಳಿಂದ ಶ್ರೀಮಠದ ಚಟುವಟಿಕೆಗಳನ್ನು ನಾನಾ ವಿಧದಲ್ಲಿ ಆಚರಿಸುವುದಲ್ಲದೇ ಅವರ ಸೇವಾ ಕ್ಷೇತ್ರವನ್ನು ಕೂಡ ವಿಸ್ತರಿಸಿದ್ದಾರೆ. ಈ ಸಂಬಂಧ ಅವರ ವಿರಕ್ತಾಶ್ರಮದ ರಜತ ಮಹೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿ ಅಭಿನಂದನೆ ಸಲ್ಲಿಸಲು ಏಪ್ರಿಲ್ 16 ಮತ್ತು 17 ರಂದು ಸಮಾರಂಭವೊಂದನ್ನು ಇಟ್ಟುಕೊಳ್ಳಲು ಹಾಗೂ ಅದರಲ್ಲಿ ನಾಡಿನ ಅನೇಕಾನೇಕ ಧರ್ಮಗುರುಗಳು, ರಾಜಕೀಯ ಧುರೀಣರು, ವಿದ್ವಾಂಸರು, ಕಲಾವಿದರು ಭಾಗವಹಿಸುತ್ತಿರುವುದು ಹೆಮ್ಮೆಯ ವಿಷಯ.

ಮೇಲ್ಕಂಡ ಸಮಾರಂಭದ ಸವಿನೆನಪಿಗಾಗಿ **"ದೇಗುಲ ಸಂಪದ"** ಎಂಬ ಸ್ಮರಣ ಸಂಚಿಕೆ ಹೊರತರುತ್ತಿರುವುದು ಹರ್ಷದಾಯಕವಾಗಿರುತ್ತದೆ. ಸದರಿ ಸಂಚಿಕೆ ಶ್ರೀ ಮಠದ ಇತಿಹಾಸ, ಪೂಜ್ಯರ ಪರಿಚಯ ಹಾಗೂ ಸಾಧನೆಗಳನ್ನು ಕುರಿತು ನಾಡಿನ ಎಲ್ಲರಿಗೂ ತಿಳಿಸುವ ಸಾಧನವಾಗಲೆಂದು ಹಾರೈಸುತ್ತೇನೆ. ಇದಲ್ಲದೆ ನಾಡಿನ ವಿದ್ವಾಂಸರು ಬರೆದ ಲೇಖನಗಳನ್ನು ಕೂಡ ಹೊರತರಬೇಕೆಂದು ಆಶಿಸುತ್ತೇನೆ.

ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವ ಸಮಿತಿ ಸ್ಮರಣ ಸಂಚಿಕೆ "ದೇಗುಲ ಸಂಪದ" ಹೊರತರುತ್ತಿರುವ ಈ ಸುಸಂದರ್ಭದಲ್ಲಿ ಅದಕ್ಕೆ ನನ್ನ ಶುಭಾಶಯಗಳನ್ನು ಅರ್ಪಿಸುತ್ತಾ ಸಮಿತಿ ಹಮ್ಮಿಕೊಂಡಿರುವ ಕೆಲಸ ಎಲ್ಲ ರೀತಿಯಲ್ಲೂ ಯಶಸ್ವಿಯಾಗಲೆಂದು ಹಾರೈಸುತ್ತೇನೆ.





967, 2ನೇ ಮುಖ್ಯರಸ್ತೆ
ವಿಜಯನಗರ
ಬೆಂಗಳೂರು-560 040

ದೂರವಾಣಿ : ನಿವಾಸ : 23302397
ಶಾಸಕರ ಭವನ : 22209341

ದಿನಾಂಕ : 08-04-2005

**ವಿ. ಸೋಮಣ್ಣ**
**ಮಾಜಿ ಸಚಿವರು**
**ವಿಧಾನಸಭಾ ಸದಸ್ಯರು, ಬಿನ್ನಿಪೇಟೆ ಕ್ಷೇತ್ರ**

# ಸಂದೇಶ

ನಾಡಿನ ಧಾರ್ಮಿಕ ಮಠಗಳಲ್ಲಿ ಒಂದಾದ ಶ್ರೀ ದೇಗುಲ ಮಠವು ಸಾಮಾಜಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಅನುಪಮ ಸೇವೆಯನ್ನು ಸಮಾಜಕ್ಕೆ ನೀಡಿದೆ. ಸಾಮಾಜಿಕ ಹರಿಕಾರರಾದ ಶ್ರೀ ಬಸವಣ್ಣನವರು ಸ್ಥಾಪಿಸಿದ ಶೂನ್ಯ ಪೀಠದ ಪೀಠಾಧಿಪತಿ ಶ್ರೀ ಅಲ್ಲಮ ಪ್ರಭುದೇವರ ಪರಂಪರೆಯ ಆದಿಗುರು ಶ್ರೀ ನಿರ್ವಾಣ ಮಹಾಶಿವಯೋಗಿಗಳವರಿಂದ ಸ್ಥಾಪನೆಗೊಂಡಿರುವ ಶ್ರೀ ದೇಗುಲ ಮಠದ ಗುರು ಪರಂಪರೆಯು ಅನಾಥರಿಗೆ ಆಶ್ರಯವಾಗಿ, ಹಸಿದವರಿಗೆ ದಾಸೋಹ ಕೇಂದ್ರವಾಗಿ, ಜ್ಞಾನಪಿಪಾಸುಗಳಿಗೆ ಜ್ಞಾನದೇಗುಲವಾಗಿ ವಿರಾಜಿಸಿದೆ.

'ದಯವೇ ಧರ್ಮದ ಮೂಲ'ವೆಂಬ ಬಸವಾದಿ ಶರಣರ ಚಿಂತನೆಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡವರು ಶತಾಯುಷಿಗಳು; ಶಿವಯೋಗ ಸಂಪನ್ನರಾದ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು, ಅವರಂತೆ ತಮ್ಮ ದೂರದೃಷ್ಟಿಯ ಸಂಕಲ್ಪ, ಸಾಮಾಜಿಕ ಕಳಕಳಿಯ ಮೂಲಕ ಶ್ರೀ ಮಠದ ಅಭಿವೃದ್ಧಿಗೆ ಕಾರಣಕರ್ತರಾದ ಪೂಜ್ಯ ಶ್ರೀ ಇಮ್ಮಡಿ ಮಹಾಲಿಂಗ ಮಹಾಸ್ವಾಮಿಗಳವರ ಪರಿಶ್ರಮದಿಂದಾಗಿ ಶ್ರೀಮಠ ತ್ರಿವಿಧ ದಾಸೋಹ ಕೇಂದ್ರವಾಗಿ ಸಹಸ್ರಾರು ಗ್ರಾಮೀಣ ಬಡ ಮಕ್ಕಳಿಗೆ ವಿದ್ಯಾರ್ಜನೆಗೆ ಆಶ್ರಯ ಕಲ್ಪಿಸಿ ಅವರುಗಳ ಜೀವನದಲ್ಲಿ ನೆಮ್ಮದಿಯ ಬದುಕಿಗೆ ಪ್ರಾತಃಸ್ಮರಣೀಯರಾಗಿದ್ದಾರೆ.

ಹಿರಿಯ ಗುರುಗಳ ಸದಾಶಯದಂತೆ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರದು ಸದುವಿನಯವೇ ಅವರ ವ್ಯಕ್ತಿತ್ವ; ತಮ್ಮ ಶಿವಪೂಜಾನಿಷ್ಠೆ ಜೊತೆಗೆ ಎಲ್ಲರನ್ನು ಅಪ್ಪಿಕೊಳ್ಳುವ ಹೃದಯ ಅವರದು. ದಣಿವರಿಯದ ದುಡಿಮೆಯ ಫಲವಾಗಿ ಕಳೆದ 25 ವರ್ಷಗಳಿಂದ ಶ್ರೀ ಮಠದ ಕಾರ್ಯಕ್ಷೇತ್ರವನ್ನು ನಾಡಿನ ಒಳಗೆ ಮತ್ತು ಹೊರಗೆ ವಿಸ್ತರಿಸಿದ್ದಾರೆ. ಅವರ ಸೇವಾ ಮನೋಭಾವನೆ ಮತ್ತು ಕಾರ್ಯತತ್ಪರತೆ ಶ್ರೀ ಮಠದ ಜೀವಾಳವಾಗಿರುವ ಪೂಜ್ಯರ ವಿರಕ್ತಾಶ್ರಮದ ರಜತ ಮಹೋತ್ಸವ ಸಂದರ್ಭದಲ್ಲಿ ನಾವು ಕೃತಜ್ಞತೆ ಸಲ್ಲಿಸುವ ಸೌಭಾಗ್ಯ ನಮ್ಮದಾಗಿದೆ.

ಈ ಶುಭ ಸಂದರ್ಭದಲ್ಲಿ **"ದೇಗುಲ ಸಂಪದ"** ಸ್ಮರಣ ಸಂಚಿಕೆ ಹೊರತರುತ್ತಿರುವುದು ಶ್ಲಾಘನೀಯ. ಸಂಚಿಕೆಯು ಸರ್ವಾಂಗೀಣ ಸುಂದರವಾಗಿ ಮೂಡಿಬರಲೆಂದು ಆಶಿಸುತ್ತೇನೆ.

ಅಖಿಲ ಭಾರತ ವೀರಶೈವ ಮಹಾಸಭಾ (ರಿ)

ನಂ. 63/4, ಪಿಸ್ಟನಾಥರಾವ್ ರಸ್ತೆ
ಮಾಧವನಗರ, ಬೆಂಗಳೂರು-560 001

ದೂರವಾಣಿ : 080-22269400

ದಿನಾಂಕ : 28-03-2005

# ಸಂದೇಶ

ಮಹಾಸ್ವಾಮಿಗಳವರ ರಜತ ಮಹೋತ್ಸವ ಸಮಿತಿಯ ವತಿಯಿಂದ ಹೊರ ತರುತ್ತಿರುವ **"ದೇಗುಲ ಸಂಪದ"** ಸ್ಮರಣ ಸಂಚಿಕೆಯು ಸುಂದರವಾಗಿ ಮೂಡಿಬರಲೆಂದು ಆಶಿಸುತ್ತೇನೆ.

ಶ್ರೀ ದೇಗುಲಮಠವು ಧಾರ್ಮಿಕ ಕ್ಷೇತ್ರದಲ್ಲಿ ಧೃವತಾರೆಯಂತೆ ಬೆಳಗುತ್ತಿದ್ದು ಅಸಂಖ್ಯಾತ ದೀನ ದಲಿತರ ಬಾಳಿಗೆ ಸಂಜೀವಿನಿಯಾಗಿ ಲಕ್ಷಾವಧಿ ಬಡ ವಿದ್ಯಾರ್ಥಿಗಳ ಭವಿಷ್ಯಕ್ಕೆ ದಾರಿ ದೀಪವಾಗಿರುವುದು ಇಡೀ ನಾಡೇ ಹೆಮ್ಮೆಪಡುವ ಸಂಗತಿ.

ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ತಮ್ಮ ಸರಳ ಸಜ್ಜನಿಕೆಗಳಿಂದ ಸಮಾಜದಲ್ಲಿ ಬೆರೆತು ಶ್ರೀಮಠವನ್ನು ಜನಸಮಾನ್ಯರ ಹತ್ತಿರಕ್ಕೆ ಕೊಂಡೊಯ್ದು ಶ್ರೀಮಠದ ಅಭೂತಪೂರ್ವ ಬೆಳವಣಿಗೆಗೆ ಕಾರಣರಾಗಿರುತ್ತಾರೆ. ಅವರು ಪಟ್ಟಾಧಿಕಾರವಾಗಿ 25 ವರ್ಷಗಳನ್ನು ಪೂರೈಸುತ್ತಿರುವ ಈ ಶುಭಸಂದರ್ಭದಲ್ಲಿ ತತ್ಸಂಬಂಧ ಕಾರ್ಯಕ್ರಮಗಳು ಯಶಸ್ವಿಯಾಗಲೆಂದು ಹಾರೈಸುತ್ತೇನೆ.

ತಮ್ಮ ವಿಶ್ವಾಸಿ,






ದೂರವಾಣಿ : ಕಛೇರಿ : ೨೨೨೯೩೧೮
ನಿವಾಸ : ೨೩೬೯೦೦೦

ದಿನಾಂಕ: ೧೩ನೇ ಏಪ್ರಿಲ್, ೨೦೦೫

**ಡಿ.ಕೆ. ಶಿವಕುಮಾರ್**
**ಶಾಸಕರು, ಸಾತನೂರು ಕ್ಷೇತ್ರ**
**ಮಾಜಿ ಸಚಿವರು, ಕರ್ನಾಟಕ ಸರ್ಕಾರ**

## ಸಂದೇಶ

ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರದ ರಜತ ಮಹೋತ್ಸವ ಪ್ರಯುಕ್ತ "ದೇಗುಲ ಸಂಪದ ಸ್ಮರಣ" ಸಂಚಿಕೆ ಹೊರಬರುತ್ತಿರುವುದು ತುಂಬಾ ಸಂತೋಷಕರವಾದ ವಿಷಯವಾಗಿರುತ್ತದೆ. ಇದಕ್ಕೆ ನನ್ನ ಹೃತ್ಪೂರ್ವಕ ವಂದನೆಗಳು.

ಮಹಾಸ್ವಾಮಿಗಳ ಆಶೀರ್ವಾದದಿಂದ ಮಠವು ಹೆಚ್ಚು ಹೆಚ್ಚು ಬಡಮಕ್ಕಳಿಗೆ ಶಿಕ್ಷಣ ಹಾಗೂ ಉಚಿತ ಊಟ ನೀಡುತ್ತಿದ್ದು ಹಾಗೂ ಉತ್ತಮ ಶಿಕ್ಷಣ ಪಡೆದು ಉನ್ನತ ಸ್ಥಾನ ಪಡೆದಿರುವುದು ಹೆಮ್ಮೆಯ ವಿಷಯವಾಗಿರುತ್ತದೆ.

ದೇಗುಲ ಸಂಪದ ಸ್ಮರಣ ಸಂಚಿಕೆಯಲ್ಲಿ ಉತ್ತಮ ಹಾಗೂ ಜ್ಞಾನಾರ್ಜನೆಯುಳ್ಳ ವಿಷಯವನ್ನು ಹಾಗೂ ಅಜ್ಞಾನದಿಂದ ಜ್ಞಾನ ಹೊಂದುವ ವಿಚಾರಗಳೊಂದಿಗೆ ಹೊರಬರುವಂತೆ ಆಶಿಸುತ್ತೇನೆ.

**ಡಿ.ಕೆ. ಶಿವಕುಮಾರ್**

# ವಚನ ಸಂಪದ

ಕಾಯದ ಕಳವಳಕ್ಕಂಜಿ, 'ಕಾಯಯ್ಯಾ' ಎನ್ನೆನು,
ಜೀವನೋಪಾಯಕ್ಕೆ 'ಈಯಯ್ಯಾ' ಎನ್ನೆನು.
'ಯದ್ ಭಾವಂ ತದ್ ಭವತಿ':
ಉರಿ ಬರಲಿ, ಸಿರಿ ಬರಲಿ
ಬೇಕು ಬೇಡೆನ್ನೆನಯ್ಯಾ.
ಆ ನಿಮ್ಮ ಹಾರೆನು, ಮಾನವರ ಬೇಡೆನು.
ಆಣೆ ನಿಮ್ಮಾಣೆ, ಕೂಡಲಸಂಗಮದೇವಾ.

– ಬಸವಣ್ಣ

ಎನ್ನ ಹೃದಯ ಕಮಲದಲ್ಲಿ ಮೂರ್ತಿಗೊಂಡಿಪ್ಪ
ಎನ್ನ ಪ್ರಾಣೇಶ್ವರಂಗೆ ಎನ್ನ ಕ್ಷಮೆಯೇ ಅಭಿಷೇಕ
ಎನ್ನ ಪರಮ ವೈರಾಗವೇ ಪುಷ್ಪದ ಮಾಲೆ
ಎನ್ನ ಸಮಾಧಿ ಸಂಪತ್ತೇ ಗಂಧ
ಎನ್ನ ನಿರಹಂಕಾರವೇ ಅಕ್ಷತೆ
ಎನ್ನ ಸದ್ವಿವೇಕವೇ ವಸ್ತ್ರ
ಎನ್ನ ವಿಶ್ವಾಸವೇ ಧೂಪ, ಎನ್ನ ದಿವ್ಯಜ್ಞಾನವೇ ದೀಪ.
ಎನ್ನ ನಿಭ್ರಾಂತಿಯೇ ನೈವೇದ್ಯ,
ಎನ್ನ ನಿರ್ವಿಷಯವೇ ತಾಂಬೂಲ
ಎನ್ನ ಮೌನವೇ ಘಂಟೆ, ಎನ್ನ ನಿರ್ವಿಕಲ್ಪನೆಯೇ ಪ್ರದಕ್ಷಿಣೆ
ಎನ್ನ ಶುದ್ಧಿಯೇ ನಮಸ್ಕಾರ
ಎನ್ನ ಅಂತಃಕರಣದಿಂದ ಮಾಡುವ ಸೇವೆಯೇ ಉಪಚಾರಂಗಳು
ಈ ಪರಿಯಲ್ಲಿ ನಿಮ್ಮ ಗುಹೇಶ್ವರ ಲಿಂಗಕ್ಕೆ ಪ್ರಾಣಪೂಜೆಯ
ಮಾಡಿ ಬಾಹ್ಯಕ್ರಿಯ ಮರೆದೆನು ಕಾಣಾ, ಸಂಗನ ಬಸವಣ್ಣ.

– ಅಲ್ಲಮಪ್ರಭು

ಗುರುವಿನಲ್ಲಿ ಭಕ್ತಿ, ಲಿಂಗದಲ್ಲಿ ನಿಷ್ಠೆ,
ಜಂಗಮದಲ್ಲಿ ಸುಯಿಧಾನ, ಅರ್ಪಿತದಲ್ಲಿ ಅವಧಾನ,
ಪ್ರಸಾದದಲ್ಲಿ ಪರಿಣಾಮ-
ಇಂತೆಂದುದು ಕೂಡಲಚೆನ್ನಸಂಗನ ವಚನ.

– ಚನ್ನಬಸವಣ್ಣ

# ಒಳ ಹೂರಣ

## ಸಾಹಿತ್ಯ-ಶಾಸ್ತ್ರ-ಕ್ಷೇತ್ರೀಯ ಸಂಪದ



ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀ ಮ.ನಿ.ಪ್ರ
ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳವರ
ಪಟ್ಟಾಧಿಕಾರದ ರಜತ ಮಹೋತ್ಸವ
ಸಂದರ್ಭ ಸಂಚಿಕೆ

**ದೇಗುಲ ಸಂಪದ**

# ನಮನ ಸಂಪದ



# ಶ್ರೀ ಇಮ್ಮಡಿ ನಿರ್ವಾಣ ಶಿವಯೋಗಿಗಳು

– ಎಸ್. ವಿಶ್ವನಾಥ ಮೂರ್ತಿ *

**ಸ**ಮೃದ್ಧ ಆಧ್ಯಾತ್ಮಿಕ ಸಂಪತ್ತಿನ ಭಾರತವು ಅನೇಕ ಋಷಿ ಮುನಿಗಳೂ, ಮಹಾ ತಪಸ್ವಿಗಳೂ, ಪವಾಡಪುರುಷರು, ದಾರ್ಶನಿಕರೂ ಜನಿಸಿದ ಧಾರ್ಮಿಕ ಪರಂಪರೆಯ ಯೋಗಭೂಮಿ ಎನಿಸಿಕೊಂಡಿದೆ. ಇಂತಹ ಯೋಗಭೂಮಿಯಲಿರುವ ಸುಕ್ಷೇತ್ರಗಳಲ್ಲೊಂದು ತಪೋಭೂಮಿ ಕನಕಪುರದ ಶ್ರೀ ದೇಗುಲ ಮಠ. 12ನೇ ಶತಮಾನದ ಕಲ್ಯಾಣದ ಕ್ರಾಂತಿಯ ನಂತರ ಶೂನ್ಯ ಸಿಂಹಾಸನಾಧೀಶ್ವರರಾದ ಅಲ್ಲಮಪ್ರಭುದೇವರ ಅನುಯಾಯಿಗಳಾಗಿ ಧರ್ಮ ಪ್ರಚಾರಾರ್ಥವಾಗಿ ನಾಡಿನ ವಿವಿಧ ಭಾಗಗಳಿಗೆ ಹೊರಟ ನೂರೊಂದು ವಿರಕ್ತರ ಸಾಲಿನಲ್ಲಿ ಒಬ್ಬರಾಗಿ ಬಂದು ಕಾವೇರಿಗೆ ಸೇರುವ ನದಿಯಾದ ಅರ್ಕಾವತೀ ನದಿಯ ತೀರದಲ್ಲಿ, ನಿಸರ್ಗ ಸಿರಿಯ ನಡುವೆ ನೆಲಸಿದ ಮಹಾಮಹಿಮರು ಆದ್ಯ ನಿರ್ವಾಣಸ್ವಾಮಿಗಳವರು. ಅವರಿಂದ ಸ್ಥಾಪಿತವಾದ ನಿರುವಾಣ ದೇವರ ಮಠ ಕಾಲಾನಂತರದಲ್ಲಿ ದೇಗುಲ ಮಠವಾಯಿತೆಂದೂ ಪ್ರತೀತಿ ಇದೆ. ಈ ಮಠದ ಪರಂಪರೆಯಲ್ಲಿ ಬಂದ ಎಲ್ಲ ಗುರುಗಳೂ ಮಹಾ ಮಹಿಮರೂ, ತಪಸ್ವಿಗಳೂ, ಪವಾಡಪುರುಷರೂ, ಶಿವಸ್ವರೂಪಿಗಳೇ ಆಗಿದ್ದರೆಂದೂ ಜನಮನದ ನಂಬಿಕೆ. ಈ ಸಾಲಿನಲ್ಲಿ ಹತ್ತನೆಯವರಾಗಿ ಪಟ್ಟಕ್ಕೆ ಬಂದವರು ಶ್ರೀ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು.

ನಾನು ನಿರ್ವಾಣ ಬುದ್ಧಿಯವರನ್ನು ಸರಿಯಾಗಿ ನೋಡಿ ಗ್ರಹಿಸಿದ್ದು ಸುಮಾರು ನನ್ನ ಎಂಟನೇ ವಯಸ್ಸಿನ ನಂತರ. ಆ ವೇಳೆಗಾಗಲೇ ಅವರು ತಮ್ಮ 80ನೇ ವಯಸ್ಸನ್ನು ಮೀರಿದವರಾಗಿದ್ದರು. ನಮ್ಮ ಗ್ರಾಮಕ್ಕೆ ಬಿನ್ನಹಕ್ಕೆ ಬರುವಾಗ ಹತ್ತಿರದ ತಾಲ್ಲೂಕು ಕೇಂದ್ರಕ್ಕೆ ಬಸ್ಸಿನಲ್ಲಿ ಬಂದು ಅದಕ್ಕೆ ಹೊಂದಿಕೊಂಡಂತೆಯೇ ಇದ್ದ ನಮ್ಮ ಗ್ರಾಮಕ್ಕೆ ಕಾಲ್ನಡಿಗೆಯಲ್ಲಿ ದಯಮಾಡಿಸುತ್ತಿದ್ದರು, ದೂರದಿಂದಲೇ ಅವರ ಆಗಮನವನ್ನು ದೃಷ್ಟಿಸುತ್ತಿದ್ದರೆ ಸಾಕ್ಷಾತ್ ಶಿವನ ಆಗಮನವೇ ಆಗುತ್ತಿದೆಯೇನೋ ಎನ್ನುವ ಸಂವೇದನೆ ಎಂತಹವರಲ್ಲೂ ಮೂಡುವಂತಿರುತ್ತಿತ್ತು. ಎತ್ತರದ ನಿಲುವು, ತಮ್ಮದೇ ಶೈಲಿಯಲ್ಲಿ ಸುತ್ತುತ್ತಿದ್ದ ಪೇಟ, ನೊಸಲ ವಿಭೂತಿ, ಹೊಳೆಯುವ ನೇತ್ರಗಳು, ಸದಾ ಹಸನ್ಮುಖಿ, ಸ್ವಲ್ಪ ಉಬ್ಬಾಗಿದ್ದ ಮೇಲಿನ ದಂತದ್ವಯಗಳು ಆ ಹಸನ್ಮುಖಿಕ್ಕೆ ಮುತ್ತಿನಮಣಿಗಳನ್ನು ಜೋಡಿಸಿ ಅಲಂಕರಿಸಿದಂತೆ ಭಾಸವಾಗುತ್ತಿತ್ತು ಅವರ ಮುಖಭಾವ. ಒಂದು ಕೈಯಲ್ಲಿ ಛತ್ರಿ ಮತ್ತೊಂದರಲ್ಲಿ ಮಡಿಚೀಲ. ಇಷ್ಟು ಸರಳವಾಗಿತ್ತು ಅವರ ಕಾಯಕದ ಬದುಕು.

***ಪೂರ್ವಾಶ್ರಮ ಮತ್ತು ಅವರ ಪೂರ್ವಿಕರು***

**ಈ** ಶಿವಯೋಗಿಗಳ ಪೂರ್ವಾಶ್ರಮದ ಹೆಸರು ಬಸಪ್ಪದೇವರು. ಈಗಿನ ರಾಮನಗರಂ ಟೌನಿಗೇ ಸೇರಿದಂತಿರುವ ಐಜೂರು ಬಡಾವಣೆ ಹಿಂದೆ ಕ್ಲೋಸ್‌ಪೇಟೆ ತಾಲ್ಲೂಕು ಕಸಬಾ ಹೋಬಳಿಯ ಐಜೂರು ಗ್ರಾಮವಾಗಿತ್ತು. ಈ ಐಜೂರು ಗ್ರಾಮದ ಶರಣ ಸಂಪ್ರದಾಯದ ಪ್ರಸಿದ್ಧ ಜಂಗಮ ಮನೆತನದಲ್ಲಿ ಜನಿಸಿದವರು ಬಸಪ್ಪದೇವರು. ಮಹಾಶರಣರಾದ ಬಸಪ್ಪನವರು ಮತ್ತು ಶರಣೆ ಪುಟ್ಟಮ್ಮನವರು ಇವರ ಪೂರ್ವಾಶ್ರಮದ ತಾತ ಅಜ್ಜಿಯರು. ಇವರು ಮೊದಲಿಗೆ ತುರುವೇಕೆರೆ ತಾಲ್ಲೂಕು ದ್ವಾರನಹಳ್ಳಿಯವರಾಗಿದ್ದು ನಂತರ ನೆಲಮಂಗಲ ತಾಲ್ಲೂಕು ಹೊನ್ನರಾಯನಹಳ್ಳಿಗೆ ಬಂದು ನೆಲಸಿ ಊರಿನ ಶ್ರೀಮಂತರೆನಿಸುವಷ್ಟು ಆಸ್ತಿಯನ್ನು ಗಳಿಸಿದರು. ಈ ಶರಣ ದಂಪತಿಗಳ ಸುಪುತ್ರರಾಗಿ ಶರಣ ಶ್ರೀ ಸಾವಂದಪ್ಪನವರು ಜನಿಸಿದರು, ಸಾವಂದಪ್ಪನವರಿಗೆ ಐಜೂರು ಗ್ರಾಮದ ಶ್ರೀಮತಿ ಗೌರಮ್ಮನವರೊಡನೆ ವಿವಾಹವಾಯಿತು. ಈ ದಂಪತಿಗಳಿಗೆ ಬಡಬಗ್ಗರಲ್ಲಿ ಮಹಾ ಕರುಣೆ, ಗುರು ಲಿಂಗ ಜಂಗಮರಲ್ಲಿ ಅತಿಭಕ್ತಿ, ಹೀಗಿರುವಾಗ ಉತ್ತರ ಕರ್ನಾಟಕದಿಂದ ಬಂದು ಈ ಪ್ರದೇಶದಲ್ಲಿ ಸಂಚರಿಸಿ ತಪೋಧನರಾಗಿದ್ದ ಉಪಹಾರದ ಸ್ವಾಮಿಗಳು, ಖಾರದಪ್ಪನವರು ಮೊದಲಾದ ಶಿವಯೋಗಿಗಳು ಈ ದಂಪತಿಗಳ

ನಂ. 28, 3ನೇ ಅಡ್ಡರಸ್ತೆ, 8ನೇ ಮುಖ್ಯರಸ್ತೆ, ಅಪೂರ್ವ ಲೇಔಟ್, ಕೆಂಗೇರಿ ಉಪನಗರ, ಬೆಂಗಳೂರು - 560 060.

ಭಕ್ತಿಗಳಿಗೆ ಮೆಚ್ಚಿ ಇವರ ಗೃಹದಲ್ಲಿ ಬಹುಕಾಲ ಲಿಂಗಪೂಜಾ ನಿಷ್ಠರಾಗಿದ್ದು ಇವರ ಸೇವೆಗೆ ಮೆಚ್ಚಿ ಶಿವನು ನಿಮಗೆ ಪುತ್ರ ಪೌತ್ರಾದಿ ಸಕಲ ಸಂಪದಗಳನ್ನು ದಯಪಾಲಿಸಲೆಂದು ಆಶೀರ್ವದಿಸಿ ಹೋಗಿದ್ದರಂತೆ. ಈ ಪ್ರಾಂತ್ಯದಲ್ಲಿ ಒಮ್ಮೆ ಮೂರು ವರ್ಷಗಳ ಕಾಲ ಭೀಕರ ಕ್ಷಾಮ ಬಂದಿತು. ಜನರ ಕಷ್ಟ ಹೇಳತೀರದಾಯಿತು. ಇಂತಹ ಪರಿಸ್ಥಿತಿಯಲ್ಲಿ ಮತ್ತೊಬ್ಬ ಶರಣ ಶ್ರೀಮಂತ ಎಲೆಮಲ್ಲಪ್ಪಶೆಟ್ಟರೊಡಗೂಡಿ ಮನೆಯಲ್ಲಿದ್ದ ಧನಧಾನ್ಯಗಳನ್ನು ವಿನಿಯೋಗಿಸಿ ಅನ್ನ ಸತ್ರಗಳನ್ನಿಡಿಸಿ ಕ್ಷಾಮ ಪೀಡಿತ ಬಡ ಜನರಿಗೆ ಅನ್ನದಾನ ಮಾಡುವ ಏರ್ಪಾಡು ಮಾಡಿದರು. 2-3 ವರ್ಷಗಳಲ್ಲಿ ಇವರ ಸಂಪತ್ತೆಲ್ಲಾ ತೀರುತ್ತಾ ಬಂದಿತು. ಆದರೂ ಧೃತಿಗೆಡದೆ ಶಿವಕೊಟ್ಟ ಜೋಳಿಗೆ ನಮಗಿದೆಯೆಂದು ಸಂಪಾದಿಸಿದ ಆಸ್ತಿಪಾಸ್ತಿಗಳನ್ನೆಲ್ಲಾ ಬೇರೆಯವರಿಗೆ ಆಧಾರ ಭೋಗ್ಯ ಮಾಡಿ ಬಂದ ಹಣದಿಂದ ಜನರ ಪ್ರಾಣ ಉಳಿಸಿದರು. ಅಲ್ಲಿಂದ ಮುಂದೆ ಈ ಭಕ್ತರ ದೈವ ಪರೀಕ್ಷೆ ಪ್ರಾರಂಭವಾಯಿತು.

"ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ, ಅಗಿದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು".

ಎಂಬ ದೇವರ ದಾಸಿಮಯ್ಯನ ವಚನದಂತೆ ಅವರ ಜೀವನ ಪರಿವರ್ತಿತವಾಯಿತು. ಆ ವೇಳೆಗಾಗಲೇ ಅವರಿಗೆ ಒಂದು ವರ್ಷದ ರುದ್ರದೇವರು, ಎಂಟು ವರ್ಷದ ಚನ್ನವೀರದೇವರು ಮತ್ತು ಭದ್ರಕಾಳಮ್ಮ ಎಂಬ ಮಕ್ಕಳಿದ್ದರು. ಶರಣರ ಸಂಪರ್ಕದಿಂದ ಹಾಗೂ ಮನೋಧರ್ಮಕ್ಕನುಗುಣವಾಗಿ ಅವರು ಜ್ಞಾನಸಿಂಧು, ಅನುಭವಾಮೃತ, ಕೈವಲ್ಯ ಕಲ್ಪವಲ್ಲರಿ, ಕೈವಲ್ಯಪದ್ಧತಿ ಮುಂತಾದ ಧರ್ಮ ಗ್ರಂಥಗಳನ್ನು ಅಭ್ಯಾಸ ಮಾಡಿದ್ದರಿಂದ ಮೊದಲೇ ಒಂದು ರೀತಿಯ ವೈರಾಗ್ಯ ಬಂದಿತ್ತು. ಜೊತೆಗೆ ಮನೋವ್ಯಾಕುಲತೆಯಿಂದಾಗಿ ಸತಿಸುತರನ್ನು ಬಿಟ್ಟು ಯಾರಿಗೂ ಗೊತ್ತಿಲ್ಲದಂತೆ ದೇಶಪರ್ಯಟನೆಗೆ ಹೊರಟರು. ಇತ್ತ ನಾಲ್ಕಾರು ವರ್ಷ ಕಳೆದರೂ ಗೌರಮ್ಮನವರಿಗೆ ಪತಿಯವರ ಬಗ್ಗೆ ಏನೂ ಸುಳಿವು ಸಿಕ್ಕದೆ ಮಕ್ಕಳೊಡನೆ ತೌರೂರಾದ ಐಜೂರಿಗೆ ಬಂದರು. ಆದರೆ ತೌರಿನಾಶ್ರಯ ಸಿಗದೆ ಅನಾದರಣೆಗೊಳಗಾಗಿ ಕೂಲಿ ಕಾಯಕ ಮಾಡಿ ಸಣ್ಣ ಮಕ್ಕಳೊಂದಿಗೆ ಕಷ್ಟ ಜೀವನ ನಡೆಸಲಾರಂಭಿಸಿದರು. ದೇಶಪರ್ಯಟನೆಯಲ್ಲಿದ್ದ ಸಾವಂದಪ್ಪನವರು ಒಂದು ದಿನ ಮಲಗಿರುವಾಗ ಜಂಗಮ ಮೂರ್ತಿಯೊಬ್ಬರು ಕನಸಿನಲ್ಲಿ ಬಂದಂತಾಗಿ, ನಿನ್ನ ಸತಿಸುತರು ನಿನ್ನ ನಿರೀಕ್ಷೆಯಲ್ಲಿ ಬಹಳ ಕಷ್ಟ ಜೀವನ ನಡೆಸುತ್ತಿದ್ದಾರೆ ನಿನ್ನ ಸ್ವಗ್ರಾಮಕ್ಕೆ ಹಿಂತಿರುಗು, ನಿನಗೆ ಒಳ್ಳೆಯದಾಗಲಿ ಎಂದು ಹರಸಿದಂತಾಗಿ ತಮ್ಮ ಊರಾದ ಹೊನ್ನರಾಯನಹಳ್ಳಿಗೆ ಬಂದರು. ಅಲ್ಲಿ ಸತಿಸುತರ ಇತಿವೃತ್ತವನ್ನು ತಿಳಿದ ಸಾವಂದಪ್ಪನವರು ಐಜೂರಿಗೆ ಬಂದರು. ತೌರಿನಾಶ್ರಯ ಸಿಗದೆ ಅನಾದರಣೆಗೊಳಗಾಗಿದ್ದ ಗೌರಮ್ಮನವರಿಗೆ ಬದುಕಿದರೆ ಇಲ್ಲೆಯೇ ಇದ್ದು ಗೌರವದಿಂದ ಬದುಕಬೇಕೆಂಬ ಛಲವಿತ್ತು. ಅವರ ಕೋರಿಕೆಯ ಮೇರೆಗೆ ಕುಟುಂಬದ ಜವಾಬ್ದಾರಿ ವಹಿಸಿ, ಅಲ್ಲಿಯೇ ನೆಲಸಿ ಕೃಷಿಕಾಯಕ ಪ್ರಾರಂಭಿಸಿ ಗೌರವಜೀವನ ನಡೆಸುತ್ತಿದ್ದರು.

### *ಜನನ, ಬಾಲ್ಯ ಮತ್ತು ಎಳೆಯ ವಯಸ್ಸಿನಲ್ಲೇ ವೈರಾಗ್ಯ*

ಆಗಿನ ಕಾಲಕ್ಕೆ ವರ್ಷಕ್ಕೆ ಎರಡು ವರ್ಷಕ್ಕೆ ಕಾಲರಾ ಪ್ಲೇಗು ಮುಂತಾದ ಸಾಂಕ್ರಾಮಿಕ ರೋಗಗಳ ಪಿಡುಗು ಬರುತ್ತಿತ್ತು. ಈ ಊರಿಗೂ ಪ್ಲೇಗು ಬಂದಾಗ ಊರು ಬಿಟ್ಟು ತಮ್ಮ ಜಮೀನುಗಳಲ್ಲಿ ಗುಡಿಸಲು, ಮಾಳಿಗೆ ಮನೆಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದರು. ಪ್ಲೇಗು ಹೋದರೂ ವರ್ಷಗಟ್ಟಲೆ ಅಲ್ಲಿಯೇ ನೆಮ್ಮದಿಯಿಂದಿದ್ದರು. ಆ ಗುಡಿಸಲು ವಾಸದ ಸಮಯದಲ್ಲಿಯೇ ಕ್ರಿ.ಶ. 1869ರಲ್ಲಿ ಕಿರಿಯ ಪುತ್ರ ಬಸಪ್ಪದೇವರು ಜನಿಸಿದರು. ತಂದೆತಾಯಿಗಳು ಅವರನ್ನು ನಲ್ಮೆಯಿಂದ ಬೆಳೆಸಿದರು. ಬಾಲ್ಯದಲ್ಲಿ ಅವರಿಗೆ ಪ್ರಾಥಮಿಕ ವಿದ್ಯಾಭ್ಯಾಸವಾಯಿತು. ಹಿರಿಯ ಸಹೋದರರು ವ್ಯವಸಾಯ ವೃತ್ತಿಯನ್ನವಲಂಬಿಸಿದರೆ ಮುಗ್ಧತೆಯ ಮೂರ್ತಿ ಕಿರಿಯ ಬಸಪ್ಪದೇವರು ಗುರುಲಿಂಗ ಜಂಗಮ ದಾಸೋಹದಲ್ಲಿ ಪರಮ ನಿಷ್ಠರಾಗಿ, ಮನೆಗೆ ಬಂದ ಜಂಗಮ ಮೂರ್ತಿಗಳ ಮತ್ತು ಅತಿಥಿಗಳ ಸೇವೆ, ಅವರ ಶಿವಪೂಜೆಗೆ ಅಣಿಮಾಡುವ ಕೆಲಸ ಮಾಡುತ್ತಿದ್ದರು. ಆ ಕೆಲಸದಲ್ಲಿ ಅವರು ಬೇಸರವನ್ನೇ ಅರಿಯರು. ಆ ಸಮಯದಲ್ಲಿ ಶ್ರೀ ಸಿದ್ಧರಾಮ ಶಿವಯೋಗಿಗಳೆಂಬ ನಿಷ್ಠಾವಂತ ಶಿವಯೋಗಿಗಳು ಅವರ ಮನೆಯಲ್ಲಿ ನೆಲೆಗೊಂಡಿದ್ದರು. ಅವರ ಸೇವೆಯನ್ನು ಬಸಪ್ಪದೇವರು ಶ್ರದ್ಧೆಯಿಂದ ನೆರವೇರಿಸುತ್ತಿದ್ದರು. ಸ್ವಾಮಿಗಳ ಮಡಿವಸ್ತ್ರಗಳನ್ನು ಸಿದ್ಧಪಡಿಸುವುದು, ಹೂ ಪತ್ರೆ

ತರುವುದು, ಸ್ನಾನ ಪೂಜೆಗಳಿಗೆ ಅಣಿಮಾಡುವುದು ಅವರ ದೈನಂದಿನ ಉದ್ಯೋಗವಾಯಿತು. ಸ್ವಾಮಿಗಳು ಬಸಪ್ಪ ದೇವರ ಸೇವಾಸಕ್ತಿ, ವಿನಯ ವೈರಾಗ್ಯಾದಿ ಗುಣಗಳಿಗೆ ಮೆಚ್ಚಿ ಅವರಿಗೆ ಸ್ವಲ್ಪ ಮಟ್ಟಿನ ಆಧ್ಯಾತ್ಮಿಕ ಶಿಕ್ಷಣವನ್ನು ಕೊಟ್ಟರು. ಎಳೆತನದಲ್ಲಿ ದೊರೆತ ಧಾರ್ಮಿಕ ಶಿಕ್ಷಣದಿಂದ ಬಸಪ್ಪದೇವರ ಮನೋಭೂಮಿಕೆ ಸಹಜ ಭಕ್ತಿ ವೈರಾಗ್ಯ ಸಂಪತ್ತಿನ ಸಮೃದ್ಧಿ ಪಡೆಯಿತು.

### *ಶ್ರೀ ದೇಗುಲ ಮಠಕ್ಕೆ ಉತ್ತರಾಧಿಕಾರಿಗಳಾಗಿ ವಿರಕ್ತಾಶ್ರಮ ಸ್ವೀಕಾರ*

ಹೀಗಿರುವಾಗ ಕನಕಪುರದ ದೇಗುಲ ಮಠದ ಶ್ರೀ ಚನ್ನಬಸವ ಸ್ವಾಮಿಗಳು ವೃದ್ಧರಾಗಿದ್ದು ಅವರ ಇಚ್ಛೆಯಂತೆ ಶ್ರೀ ಸಾವಂದಪ್ಪ ದಂಪತಿಗಳು ಒಮ್ಮನದಿಂದ ಬಸಪ್ಪದೇವರನ್ನು ಶ್ರೀಗಳವರ ಸನ್ನಿಧಿಗೆ ಒಪ್ಪಿಸಿದರು. ಶಾಲೀವಾಹನ ಶಕ 1816 (ಕ್ರಿ.ಶ. 1894) ಜಯ ನಾಮ ಸಂವತ್ಸರದ ಪಾಲ್ಗುಣ ಮಾಸದಲ್ಲಿ ಮಾಹೇಶ್ವರ ದೀಕ್ಷೆಯಾಯಿತು. ಅಂದಿನಿಂದ ಹತ್ತು ವರ್ಷಕಾಲ ಬಸಪ್ಪದೇವರು ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಗುರುಸೇವೆ ಮಾಡಿದರು. ನಂತರ ಮಠದ ಭಕ್ತಮಂಡಲಿಯ ಸಹಕಾರದಿಂದ ಶ್ರೀ ಮಠಕ್ಕೆ ಉತ್ತರಾಧಿಕಾರಿಯಾಗಿ ಆರಿಸಲ್ಪಟ್ಟ ಶಾಲೀವಾಹನ ಶಕ 1825 (ಕ್ರಿ.ಶ. 1903)ನೇ ಶೋಭಕೃತು ನಾಮ ಸಂವತ್ಸರದ ಮಾಘ ಮಾಸದಲ್ಲಿ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳೆಂಬ ಅಭಿದಾನದಿಂದ ವಿರಕ್ತಾಶ್ರಮ ಪಟ್ಟಾಧಿಕಾರವನ್ನು ಸ್ವೀಕರಿಸಿದರು.

### *ಧಾರ್ಮಿಕ ಶಿಕ್ಷಣ*

ಹಿರಿಯ ಗುರುಗಳ ಅನುಜ್ಞೆಯಂತೆ ಬಿಡದಿಯ ಬಸಪ್ಪಶಾಸ್ತ್ರಿಗಳವರಿಂದ ವೇದಮಂತ್ರಪಾಠ, ಜ್ಯೋತಿಷ್ಯ, ಧರ್ಮಗ್ರಂಥಗಳ ಶಿಕ್ಷಣ ಪಡೆದರು. ಅದಾದ ನಂತರ **"ಶಿವಶರಣ ವಿಲಾಸ"** ಮುಂತಾದ ಯಕ್ಷಗಾನ ಕಾವ್ಯಗಳನ್ನು ರಚಿಸಿ ಇಡೀ ಕರ್ನಾಟಕದಲ್ಲೇ ಪ್ರಸಿದ್ಧ ಶಿವಕವಿಗಳಾಗಿದ್ದ ಬೆಂಗಳೂರಿನ ತಿಪ್ಪಶೆಟ್ಟಿ ಮಠದ ಚರಮೂರ್ತಿ ಶ್ರೀ ಮಹಾಂತ ಶಿವಯೋಗಿಗಳವರ ಆಶ್ರಯದಲ್ಲಿದ್ದು ಸ್ವಧರ್ಮ ಶಿಕ್ಷಣ ಪಡೆದರು. ತದನಂತರ ಶಿವಯೋಗನಿಷ್ಠರೂ, ಪರಮ ಅನುಭವಿಗಳೂ ಆಗಿದ್ದ ಚನ್ನಪಟ್ಟಣದ ಕುಡಿನೀರುಕಟ್ಟೆ ಮಠದ ಶೀ.ನಿ.ಪ್ರ. ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳ ನಿಕಟವರ್ತಿಗಳಾಗಿ ಚನ್ನಬಸವೇಶ್ವರರ ಶಿವಾನುಭವ ಶಾಸ್ತ್ರ, ಲಿಂಗಾಂಗ ಸಾಮರಸ್ಯ, ಕರಣಹಸಿಗೆ, ಮೊಗ್ಗೆಯ ಮಾಯಿದೇವರ ಶತಕತ್ರಯ, ಶಾಂತಲಿಂಗ ಸ್ವಾಮಿಗಳ ಅನುಭವಮುದ್ರೆ, ಸರ್ಪಭೂಷಣ ಶಿವಯೋಗ ಗಳ ಕೈವಲ್ಯ ಕಲ್ಪವಲ್ಲರಿ, ನಿಜಗುಣ ಶಿವಯೋಗಿಗಳವರ ಕೈವಲ್ಯ ಪದ್ಧತಿ, ಷಟ್‌ಶಾಸ್ತ್ರಗಳು ಮುಂತಾದ ತತ್ವಸಾಹಿತ್ಯ ಮತ್ತು ವಚನಸಾಹಿತ್ಯ ಗ್ರಂಥಗಳ ಅಧ್ಯಯನ ಮಾಡಿದರು.

### *ಶಿವಕ್ಷೇತ್ರಗಳ ಪ್ರವಾಸ*

ಶ್ರೀ ನಿರ್ವಾಣ ಸ್ವಾಮಿಗಳು ಕೆಲವು ಮಠಾಧೀಶ ರೊಡನೆ ಕ್ರಿ.ಶ. 1907ರ ಕಾರ್ತೀಕ ಮಾಸದಲ್ಲಿ ಶ್ರೀ ಚನ್ನಬಸವೇಶ್ವರ ರಥೋತ್ಸವವನ್ನು ಸಂದರ್ಶಿಸುವ ಸಲುವಾಗಿ ಉಳುವಿಗೆ ಪ್ರಯಾಣ ಮಾಡಿದರು. ಚಿತ್ರದುರ್ಗ, ದಾವಣಗೆರೆ, ಹರಿಹರ ಮಲ್ಲಾಪುರ, ಗದಗ, ಹುಬ್ಬಳ್ಳಿ, ಯಲ್ಲಾಪುರಗಳ ಮಾರ್ಗವಾಗಿ ಉಳುವಿ ಮಹಾಮನೆಯನ್ನು ಸೇರಿದರು. ಅಲ್ಲಿಂದ ಮುಂದೆ, ಗೋಕರ್ಣ, ಧರ್ಮಸ್ಥಳ, ಸಿರಸಿ, ಬನವಾಸಿ, ಬೆಳಗಾವಿ, ಬಾಗಲಕೋಟೆ, ಕೂಡಲಸಂಗಮ, ಬಾಗೇವಾಡಿ, ಸೊಲ್ಲಾಪುರ, ಕಲ್ಯಾಣ, ಮೀರಜ್, ಅಂಕಲಿ, ಬಂಥನಾಳ, ಬಿಜಾಪುರ, ಕಲ್ಬುರ್ಗಿ, ಶ್ರೀ ಶೈಲ, ಬಳ್ಳಾರಿ, ಉರವಕೊಂಡ, ಕೊಟ್ಟೂರು, ಸೊಂಡೂರು ಮುಂತಾದ ಅನೇಕ ಕ್ಷೇತ್ರಗಳನ್ನೂ ಸಂದರ್ಶಿಸಿ ಮಠಕ್ಕೆ ಹಿಂತಿರುಗಿದರು. ಕ್ರಿ.ಶ. 1918ರಲ್ಲಿ ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳು ಲಿಂಗೈಕ್ಯರಾದರು.

ಮತ್ತೊಮ್ಮೆ ಕ್ರಿ.ಶ. 1920ರ ಆಗಸ್ಟ್ ತಿಂಗಳಿನಲ್ಲಿ ಶಿವಕ್ಷೇತ್ರಗಳ ಎರಡನೆಯ ಪ್ರವಾಸವನ್ನು ಕೈಗೊಂಡರು. ಇವರೊಡನೆ ಚನ್ನಪಟ್ಟಣದ ಕುಡಿನೀರುಕಟ್ಟೆ ಮಠದ ಚರಮೂರ್ತಿ ಶ್ರೀ ಶಿವರುದ್ರಸ್ವಾಮಿಗಳವರು ಮತ್ತು ಸೇವೆಗಾಗಿ ಐಜೂರಿನ ಶ್ರೀ ವೀರಭದ್ರದೇವರು ಭಾಗಿಗಳಾದರು. ಮೊದಲಿಗೆ ಚಿತ್ರದುರ್ಗದ ಬೃಹನ್ಮಠಕ್ಕೆ ಭೇಟಿ ನೀಡಿ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳ ದರ್ಶನ ಪಡೆದರು. ಜಗದ್ಗುರುಗಳು ಶ್ರೀಗಳವರ ವ್ಯಕ್ತಿತ್ವದಿಂದ ಆಕರ್ಷಿತರಾಗಿ ಮೂರು ದಿವಸಗಳವರೆಗೆ ಇರಿಸಿಕೊಂಡು ಅವರಿಗೆ ಶಿವಕ್ಷೇತ್ರಗಳ ಪ್ರವಾಸಕ್ಕೆ ಬೇಕಾದ ಸಲಹೆ ಸೌಲಭ್ಯಗಳನ್ನು ನೀಡಿದರು. ಅಲ್ಲಿಂದ ಶ್ರೀಗಳವರು

ಹುಬ್ಬಳ್ಳಿಯ ಮೂರು ಸಾವಿರ ಮಠ, ಸಿದ್ಧಾರೂಢರ ಮಠಗಳಿಗೆ ಭೇಟಿ ನೀಡಿ ಧಾರವಾಡ ಶ್ರೀ ಮುರುಘಾ ಮಠಕ್ಕೆ ಭೇಟಿ ನೀಡಿ ಶ್ರೀ ಮೃತುಂಜಯ ಸ್ವಾಮಿಗಳವರನ್ನು ಸಂದರ್ಶಿಸಿದರು. ಮೂರನೆಯ ದಿವಸ ಅಲ್ಲಿ ನಡೆದ ಏಕಾದಶರುದ್ರರ ವೈಭವಯುತ ಪೂಜೆ ನಡೆಯಿತು. ಆ ಪೂಜಾಮೂರ್ತಿಗಳಲ್ಲಿ ಶ್ರೀ ನಿರ್ವಾಣ ಸ್ವಾಮಿಗಳವರೂ ಒಬ್ಬರು ಹಾಗೂ ಈ ಸಂದರ್ಭದಲ್ಲಿ ನಡೆದ ಉತ್ಸವದಲ್ಲಿ, ಮಠಾಧೀಶರ ಶ್ರೇಣಿಯಲ್ಲಿ ಅಗ್ರಸ್ಥಾನದಲ್ಲಿದ್ದರು. ಮುಂದೆ ಪುಣೆ, ಷಹಾಪುರ, ಬೆಳಗಾವಿ, ನಾಸಿಕದ ಮೂಲಕ ಗೋದಾವರಿ ತೀರದ ಪಂಚವಟಿ ಕ್ಷೇತ್ರ, ಅಥಣಿ, ಮುಂಬಯಿ ಮೂಲಕ ಅಲಹಾಬಾದ್(ಪ್ರಯಾಗ)ಗೆ ಬಂದರು. ಅಲ್ಲಿ ಗಂಗಾ ಯಮುನಾ ಸಂಗಮಸ್ಥಳವನ್ನು ವೀಕ್ಷಿಸಿ, ವಾರಣಾಸಿಯ ಕಡೆ ಹೊರಟರು. ಕಾಶೀ ಕ್ಷೇತ್ರದ ಸುರಭಾಂಡೇಶ್ವರದಲ್ಲಿ ಶ್ರೀ ಗೌರೀಶಂಕರ ಸ್ವಾಮಿಗಳವರು ಮೈಸೂರು ಅರಮನೆಯ ಪಂಚಗವೀ ಮಠಾಧ್ಯಕ್ಷರಾಗಿದ್ದು, ಸುಮಾರು 40ವರ್ಷಗಳ ಕಾಲ ಕಾಶಿಯಲ್ಲಿ ವ್ಯಾಸಂಗ ಮಾಡಿ ಸಂಸ್ಕೃತ, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಗಳಿಸಿದ್ದರು. ಬಳಿಕ ಶ್ರೀಗಳವರು ಕಾಶೀ ವಿಶ್ವಾರಾಧ್ಯ ಜಗದ್ಗುರು ಪೀಠದ ಶ್ರೀ ಜಂಗಮವಾಡಿ ಮಠಕ್ಕೆ ತೆರಳಿದರು. ಕಾಶೀ ವಿಶ್ವಾರಾಧ್ಯ ಜಗದ್ಗುರು ಪೀಠದ 82ನೇ ಪೀಠಾಧಿಪತಿಗಳಾಗಿದ್ದ ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು ಶ್ರೀ ನಿರ್ವಾಣ ಸ್ವಾಮಿಗಳವರನ್ನು ಭಕ್ತಿ ವಿಶ್ವಾಸಗಳಿಂದ ಆದರಿಸಿ, ತಮ್ಮ ಮಠದಲ್ಲಿಯೇ ತಂಗಬೇಕೆಂದು ಭಿನ್ನವಿಸಿದರು. 20 ದಿವಸಗಳ ಕಾಲ ಅಲ್ಲಿಯೇ ತಂಗಿದ್ದು, ಕ್ಷೇತ್ರದ ಎಲ್ಲಾ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಿದರು. ಶ್ರೀ ನಿರ್ವಾಣ ಸ್ವಾಮಿಗಳವರ ಮುಗ್ಧತೆ ಮಹಿಮಾತಿಶಯಗಳಿಂದ ಆಕರ್ಷಿತರಾದ ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು ಪ್ರತಿದಿನವೂ ಶಿವಾನುಭವ ತತ್ತ್ವ ವಿಚಾರ ಮಂಥನ ಮಾಡುತ್ತಿದ್ದರು.

ಇದರಿಂದ ಪುಲಕಿತರಾದ ಅವರು ಪರಸ್ಪರ ಅಗಲದಾದರು. ಅಲ್ಲೇ ಮತ್ತೆ ಕೆಲವು ದಿವಸ ಉಳಿಯಬೇಕಾಯಿತು. ಕಾಶಿಯನ್ನು ಬಿಟ್ಟು ಹೊರಡುವ ಮುನ್ನ ಸುರಭಾಂಡೇಶ್ವರದಲ್ಲಿ ಶ್ರೀ ಗೌರಿಶಂಕರ ಸ್ವಾಮಿಗಳು ಅವರನ್ನು ಕುರಿತು *"ಬುದ್ಧೀ! ತಾವಿದ್ದಕಡೆ ಹುಲಿ ಗೋವುಗಳೂ ಪರಸ್ಪರ ವೈಷಮ್ಯವನ್ನು ಬಿಟ್ಟು ಸಹಜ ಪ್ರೇಮದಿಂದಿರುತ್ತವೆ"* ಎಂದು ಉದ್ಗರಿಸಿದರಂತೆ. ಅಲ್ಲಿಂದ ಮುಂದೆ ಕಲ್ಕತ್ತೆ, ಬೆಜವಾಡ, ಜಗನ್ನಾಥ ಇತ್ಯಾದಿ ಸ್ಥಳಗಳನ್ನು ವೀಕ್ಷಿಸಿ ಮದರಾಸಿನ ಮೂಲಕ ಬೆಂಗಳೂರನ್ನು ತಲುಪಿ ಕನಕಪುರಕ್ಕೆ ಹಿಂತಿರುಗಿದರು. ಈ ಪ್ರವಾಸವು ಸುಮಾರು ಮೂರು ತಿಂಗಳು ಕಾಲ ಹಿಡಿಯಿತು. ಶ್ರೀಗಳು ಈ ರೀತಿ ಚರಜಂಗಮ ಕರ್ತವ್ಯವನ್ನು ನೆರವೇರಿಸಿದರು.

*ದೈನಂದಿನ ಆಚರಣೆ*

ಶ್ರೀ ನಿರ್ವಾಣ ಸ್ವಾಮಿಗಳ ದೈನಂದಿನ ಆಚರಣೆ ತಮ್ಮದೇ ಆದ ವಿಶಿಷ್ಟತೆಯಿಂದ ಕೂಡಿದ್ದಾಗಿದ್ದಿತು. ಮಠಾಧಿಪತಿಗಳೆಂಬ ಹಮ್ಮು ಬಿಮ್ಮುಗ್ಗಳಿಲ್ಲದ ಸಾತ್ವಿಕ ಶಿರೋಮಣಿ ಅವರು. ಪ್ರಾತಃಕಾಲ ಎದ್ದು ಶ್ರೀಗಳು ಮಾಡುತ್ತಿದ್ದುದು ಗೃಹಿಣಿಯ ಕೆಲಸ. ಎದ್ದ ಕೂಡಲೇ ನೀರೊಲೆಗೆ ಬೆಂಕಿಹಾಕಿ, ಉಳಿದವರ ಸ್ನಾನಕ್ಕೆ ಅಣಿಮಾಡುವುದು, ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿ ಕೊಳ್ಳುವುದು, ಕಸ ಗುಡಿಸುವುದು, ಹಾಲು ಕರೆಯುವುದು, ತರಕಾರಿ ಬಿಡಿಸಿ ಕೊಡುವುದು. ಚಿಕ್ಕಸ್ವಾಮಿಗಳ ಮೇಲೆ ಅವರಿಗೆ ಅಪಾರ ಪುತ್ರವಾತ್ಸಲ್ಯ, ಅವರಿಗೆ ನೀರು ಕಾಯಿಸುವುದು, ಉಪಹಾರ, ಕಾಫಿಗೆ ಅಣಿ ಮಾಡುವುದು ಮಾಡುತ್ತಿದ್ದರು. ಎಲ್ಲಾ ಉಪಚಾರವಾದ ಮೇಲೆ ಇದೆಲ್ಲಾ ತಮ್ಮ ಗುರುಗಳ ವ್ಯವಸ್ಥೆಯೆಂದು ಅವರಿಗೆ ಅರಿವಾಗುತ್ತಿತ್ತು. ಆದರೂ ಇದನ್ನು ಬೇಡವೆನ್ನುವಂತಿಲ್ಲ ಬಿಡುವಂತಿಲ್ಲ. ಇಂತಹ ಗುರುಗಳನ್ನು ಪಡೆದ ಶ್ರೀ ಮಹಾಲಿಂಗ ಸ್ವಾಮಿಗಳವರು ಪುಣ್ಯಾತ್ಮರು. ನಂತರ ಗೋವುಗಳಿಗೆ ಹುಲ್ಲು, ನೀರುಗಳ ವ್ಯವಸ್ಥೆ ಮಾಡಿ, ಸಾಕುಪ್ರಾಣಿಗಳಾದ ನಾಯಿ, ಬೆಕ್ಕುಗಳಿಗೂ ಆಹಾರವನ್ನೊದಗಿಸಿ ಶ್ರೀಗಳವರ ಸ್ನಾನ ಪೂಜೆ ಪ್ರಸಾದವೆಂದರೆ ಹತ್ತುಘಂಟೆ ನಂತರವೇ. ಇದರ ನಡುವೆ ಬಂದ ಭಕ್ತರನ್ನು ವಿಚಾರಿಸುವುದು ಅವರಿಗೆ ಪ್ರಸಾದ ವ್ಯಸ್ಥೆ ಮಾಡುವುದು ಇತ್ಯಾದಿಯಾಗಿ ಅವರ ದಿನಚರಿ ಸಾಗುತ್ತಿತ್ತು. ಬಂದವರು ನಮಸ್ಕರಿಸಿದರೂ ಸರಿ, ನಮಸ್ಕರಿಸದಿದ್ದರೂ ಸರಿ, ಏನೂ ಪರವಾಯಿಲ್ಲ. ಇವರಲ್ಲಿ ತಿರಸ್ಕಾರ, ಪುರಸ್ಕಾರ, ನಮಸ್ಕಾರ ಯಾವುದೂ ಲೆಕ್ಕಕ್ಕಿರಲಿಲ್ಲ. ಉರಿಬರಲಿ-ಸಿರಿಬರಲಿ ಯಾರಲ್ಲೂ ತಮ್ಮ ಕಷ್ಟ ತೋಡಿಕೊಂಡವರಲ್ಲ. ಯಾರನ್ನೂ ಧಿಕ್ಕರಿಸಿದವರಲ್ಲ, ಎಲ್ಲರಲ್ಲೂ ಮಮತೆ ತೋರಿದವರು. ಇಂತಹ ತ್ಯಾಗಮಯಿ ಆಶ್ರಮ ಜೀವನ, ಗೂಢ ತಪಶ್ಚರ್ಯೆ ಅವರದು.

*ಸಕಲ ಜೀವರಾಶಿಗಳಲ್ಲೂ ದಯಾಪರತೆ*

ಚಿಕ್ಕಂದಿನಿಂದಲೂ ಅವರಿಗೆ ಪಶುಪ್ರಾಣಿಗಳಲ್ಲಿ ಅಷ್ಟೇ ಅಲ್ಲ, ಸಕಲ ಜೀವರಾಶಿಗಳಲ್ಲೂ ದಯಾಪರತೆ. ಕ್ರಿಮಿಕೀಟಗಳ ಕ್ಷುದ್ರಜೀವಿಗಳ ಹಿಂಸೆಯೂ ಅವರಿಗೆ ಹಿಡಿಸುತ್ತಿರಲಿಲ್ಲ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಸಹಜ ಗುಣ ಅವರದಾಗಿತ್ತು. ದನಕರುಗಳು ಅವರ ಹೊಲಗಳಿಗೆ ನುಗ್ಗಿ ಮೇಯುತ್ತಿದ್ದರೂ ದೂರ ಅಟ್ಟುತ್ತಿರಲಿಲ್ಲ. ಯಾರಾದರೂ ಈ ಬಗ್ಗೆ ಪ್ರಶ್ನಿಸಿದರೆ *"ಪಾಪ ಬಡ ಪ್ರಾಣಿಗಳು ಹೊಟ್ಟೆಗಿಲ್ಲ ಮೇಯಲಿ ಬಿಡಿ"* ಎನ್ನುತ್ತಿದ್ದರಂತೆ. ಅವರ ಸಿಂಹಾಸನವೆಂದರೆ ಮಠದ ಹಜಾರದಲ್ಲಿನ ಮಂಚ. ಆ ಮಂಚದ ಮೇಲೆ ಹಾಸಿಗೆ, ಹೊದಿಕೆ, ಉಡುಪು, ದುಡ್ಡು ಎಲ್ಲಾ ಅಲ್ಲೇ. ಸುತ್ತಲೂ ದನಕರುಗಳ ಮೇವು, ತರಕಾರಿ, ಪಡಿತರಗಳಿರುತ್ತಿದ್ದವು. ಹಾಗಾಗಿ ಕೆಲವು ಸಾರಿ ಅವರ ಹಾಸಿಗೆಯಲ್ಲಿ ಹಾವುಗಳೂ ಸೇರಿದ್ದುಂಟು. ಶ್ರೀ ಮಠದಲ್ಲಿ ಹಸುಕರುಗಳಲ್ಲದೆ, ನಾಯಿ, ಬೆಕ್ಕುಗಳು, ಇತ್ಯಾದಿ ಎಲ್ಲ ಪ್ರಾಣಿಗಳಿಗೂ ಆಹಾರವನ್ನೊದಗಿಸಿದ ನಂತರವೇ ತಾವು ಶಿವಪೂಜೆ ಪ್ರಸಾದಗಳನ್ನು ಸ್ವೀಕರಿಸುತ್ತಿದ್ದರು.

*ಶ್ರೀಗಳವರ ವ್ಯಕ್ತಿತ್ವ*

ದುಡ್ಡಿನವರಲ್ಲ, ದೊಡ್ಡವನೆನ್ನಿರೆಂದವರಲ್ಲ. ಕಂತೆ ಬೊಂತೆಯ ಜಂಗಮರಂತೆಯೇ ಕಾಲ ಕಳೆದವರು. ಒಂದು ದಿನ ವೃಥಾ ಕಾಲಾಯಾಪನೆ ಮಾಡಿದವರಲ್ಲ. ಎಲ್ಲವನ್ನೂ ಮಾಡುತ್ತೇನೆಂದವರಲ್ಲ. ಇವರು ಅಂತರಂಗ ಬಹಿರಂಗ ಶುದ್ಧರು. ಎಂದೂ ಯಾರೂ ಅವರಲ್ಲಿ ಭೇದಭಾವವ ಕಂಡವರಿಲ್ಲ. ಮಠ ಸೋರಲಿ, ಸುಣ್ಣ ಹೊಡೆಯಲಿ ಬಿಡಲಿ, ಪಾವೋ, ಸೇರೋ, ಮೂಟೆಯೋ, ಖಂಡಗವೋ ಏನೇ ಇರಲಿ ಎಲ್ಲವನ್ನೂ ಎಲ್ಲರೂ ಸೇರಿ ಒಪ್ಪ ಮಾಡಿ ದಾಸೋಹ ಮಾಡಿದವರು. ಹಾಸಿಗೆಯೇ ಖಜಾನೆ, ಮೂಲೆಯೇ ಉಗ್ರಾಣ. ಯಾರಿಗೆ ಯಾವ ಅಧಿಕಾರ ಬೇಕಾದರೂ ಅದನ್ನು ಅವರೇ ಅನುಭವಿಸಬಹುದು. ಬಿಡಬಹುದು. ಕೊಡುವರಿಲ್ಲ ಅದನ್ನು ಕೊಂಡವರೂ ಇಲ್ಲ. ಬೀಗವಿಲ್ಲದ ಉಗ್ರಾಣ. ಸರ್ವರಿಗೂ ಸಮಪಾಲು. ಯಾರೇನು ಬೇಕಾದರೂ ಮಾಡಬಹುದು. ಅದನ್ನು ಕಂಡೂ ಕಾಣದಂತೆ ಅವರೊಡನೆ ದುಡಿದು ದಾಸೋಹ ಮಾಡುವ ಮಹಾನುಭಾವಿಯ ಮಹಾ ಸಾತ್ವಿಕ ಮೂರ್ತಿ. ಕರಸಂಜಾತರನ್ನೇ ಹಿರಿಯರನ್ನಾಗಿ ಮಾಡಿ, ಅವರನ್ನು ಕೇಳಿ, ಅವರನ್ನು ನೋಡಿರೆಂದೂ ತನ್ನದೇನೂ ಇಲ್ಲವೆಂಬ ಮಹಾನುಭಾವರನ್ನು ಕಾಣಬೇಕಾಗಿದೆ. ಅದರ ಮರ್ಮವನ್ನರಿತ ಅವರ ಉತ್ತರಾಧಿಕಾರಿಗಳು, ಎಲ್ಲವೂ ಅವರದೇ ಎನ್ನುವ ಪರಸ್ಪರ ಅರಿವು, ಸೌಜನ್ಯ ಅತಿ ವಿರಳ. ಊರಸುದ್ದಿಗೆ ಹೋದವರಲ್ಲ. ಅಸೂಯೆ, ದ್ವೇಷ, ಆತುರ, ದುರಾಸೆ ಇತ್ಯಾದಿಗಳು ಅವರನ್ನು ಕಾಣವು. ಅವರು ಮಹಾ ಆತ್ಮಜ್ಞಾನಿಗಳು, ಸರ್ವಜ್ಞಕವಿಯ *"ಬ್ರಹ್ಮವನು ಅರಿದಿಹರೆ ಸುಮ್ಮನಿದ್ದರಬೇಕು"* ಎಂಬ ಉಕ್ತಿಯಂತೆ, ಬ್ರಹ್ಮಜ್ಞಾನವನ್ನು ಅರಿತೂ ಅರಿಯದವರಂತಿದ್ದ ಮಹಾ ಮೌನಿಗಳು. ಶರಣರ ಕಾಯಕ ನಿಷ್ಠೆ, ದಾಸೋಹಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದವರು. ಸಕಲ ಜೀವಿಗಳಿಗೂ ಸಮಾನತೆಯನ್ನು ಕೊಟ್ಟ ಕಾರುಣ್ಯ ಮೂರ್ತಿ, ತತ್ವಜ್ಞಾನಿ, ಮಹಾ ತಪಸ್ವಿ, ಪರಮ ವೈರಾಗ್ಯ ಮೂರ್ತಿ.

*ತ್ರಿವಿಧ ದಾಸೋಹ ಪ್ರಾರಂಭ*

1942ರಲ್ಲಿ ಕೆಲವೇ ವಿದ್ಯಾರ್ಥಿಗಳನ್ನೊಳಗೊಂಡಂತೆ ಶ್ರೀ ನಿರ್ವಾಣೇಶ್ವರ ವಿದ್ಯಾರ್ಥಿ ನಿಲಯ ಪ್ರಾರಂಭವಾಯಿತು. ಕೇವಲ ಅನ್ನದಾಸೋಹ ನಡೆಯುತ್ತಿದ್ದ ಶ್ರೀ ಮಠದಲ್ಲಿ ಜ್ಞಾನದಾನ ವಿದ್ಯಾದಾನಗಳೂ ಪ್ರಾರಂಭವಾಗಿ ಇಲ್ಲಿ ಆಶ್ರಯ ಪಡೆದು ವಿದ್ಯೆ ಕಲಿತವರು ದೇಶ ವಿದೇಶಗಳಲ್ಲಿ ಉನ್ನತ ಹುದ್ದೆಗಳನ್ನಲಂಕರಿಸಿದ್ದಾರೆ, ಮಂತ್ರಿ ಮಹೋದಯರುಗಳಾಗಿದ್ದಾರೆ. ಶ್ರೀಗಳವರು ವಿದ್ಯಾರ್ಥಿಗಳಿಗೆ ತಾವೇ ಮೈಗೆ ಎಣ್ಣೆ ಹಚ್ಚಿ ಬಿಸಿನೀರು ಕಾಯಿಸಿ ಸ್ನಾನ ಮಾಡಿಸುವುದು. ತಾವೇ ಬಕೆಟ್ ಹಿಡಿದು ಪ್ರಸಾದವನ್ನು ನೀಡುವುದು. ಬಡ ವಿದ್ಯಾರ್ಥಿಗಳಿಗೆ ಹಾಸಿಗೆ ಹೊದಿಕೆಗಳನ್ನು ಪೂರೈಸಿ, ಮಾತೃವಾತ್ಸಲ್ಯದಿಂದ ಮಕ್ಕಳನ್ನು ಸಾಕುತ್ತಿದ್ದರೆಂದು ಆಗಿನ ಕಾಲದಲ್ಲಿ ಓದಿದ ಹಿರಿಯರು ತಮ್ಮ ಅನುಭವಗಳನ್ನು ಹೇಳುವಾಗ ತಿಳಿಸಿದ್ದಾರೆ. ಅವರು ಹಿಡಿದ ಕೆಲಸಗಳೆಲ್ಲಾ ಸುಗಮ, ನಡೆದ ದಾರಿಯೆಲ್ಲಾ ಪಾವನ, ಅವರ ಶಿವಯೋಗ ಬಲದಿಂದಲೇ ಅವರ ಉತ್ತರಾಧಿಕಾರಿಗಳಾಗಿ ಶ್ರೀ.ನಿ.ಪ್ರ. ಮಹಾಲಿಂಗಸ್ವಾಮಿಗಳು ದೊರೆತದ್ದು ಹಾಗೂ ಅವರ ಕಾಲದಲ್ಲಿ ಪ್ರಾರಂಭವಾದ ತ್ರಿವಿಧ ದಾಸೋಹವು ದಿನದಿಂದ ದಿನಕ್ಕೆ ವೃದ್ಧಿಗೊಳ್ಳುತ್ತಾ ಬಂದು, ಶ್ರೀ ನಿರ್ವಾಣೇಶ್ವರ ವಿದ್ಯಾಪೀಠವಾಗಿ ಬೆಳೆಯಿತು. ಅದರ ಆಶ್ರಯದಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳೂ, ಸಂಸ್ಕೃತ ವೇದ ಪಾಠಶಾಲೆಗಳೂ, ಪ್ರಾರಂಭವಾದವು.

ರಾಜ್ಯಾದ್ಯಂತ ಅನೇಕ ಜಿಲ್ಲಾ, ತಾಲ್ಲೂಕು ಮತ್ತು ಹೋಬಳಿ ಕೇಂದ್ರಗಳಲ್ಲಿ ಪ್ರಾಥಮಿಕ, ಮಾಧ್ಯಮಿಕ ಪೌಢಶಾಲೆಗಳು ಸ್ಥಾಪಿತವಾದವು.

ಈಗಿನ ಮಠಾಧ್ಯಕ್ಷರಾದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಈ ಸಂಸ್ಥೆಯನ್ನು ರೂಢಿಸಿ ಸಾವಿರಾರು ಜನ ಬಡ ವಿದ್ಯಾರ್ಥಿಗಳಿಗೆ ಆಶ್ರಯನೀಡಿ ವಿದ್ಯಾ ಕ್ಷೇತ್ರದಲ್ಲಿ ಬಹಳಷ್ಟು ಪ್ರಗತಿಯನ್ನು ಸಾಧಿಸಿ ಪದವೀಪೂರ್ವ ಕಾಲೇಜುಗಳೂ, ಐ.ಟಿ.ಐ. ವೃತ್ತಿಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಇಂದು ಶ್ರೀ ಮಠವು ಸಾವಿರಾರು ಬಡ ಮಕ್ಕಳಿಗೆ ಆಶ್ರಯತಾಣವಾಗಿ ಅಶನ ವಸನಗಳ ನ್ನೊದಗಿಸಿ ವಿದ್ಯಾದಾನ ಮಾಡುತ್ತಿದೆ. ಇವರ ಕರಸಂಜಾತ ರಾಗಿ ಪಟ್ಟಾಧಿಕಾರ ಪಡೆದ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರೂ ಕೂಡ ತಮ್ಮ ಹಿರಿಯ ಶ್ರೀಗಳವರ ಅಭಿವೃದ್ಧಿ ಕಾರ್ಯಗಳಲ್ಲಿ ನೀಡುತ್ತಿರುವ ಒತ್ತಾಸೆಯಿಂದ ಈ ವರ್ಷ ನರ್ಸಿಂಗ್, ಡಿ.ಇಡಿ., ವೃತ್ತಿಶಿಕ್ಷಣ ಕಾಲೇಜುಗಳು ಪ್ರಾರಂಭವಾಗಿವೆ, ಅಲ್ಲದೆ ಮತ್ತೊಂದು ತಾಂತ್ರಿಕ ತರಬೇತಿ ಮತ್ತು ಉತ್ಪಾದನಾ ಕೇಂದ್ರದ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದು ಸಧ್ಯದಲ್ಲಿಯೇ ಕಾರ್ಯಾರಂಭ ಮಾಡಲಿದೆ.

ಪ್ರಸ್ತುತ 2005ನೇ ಏಪ್ರಿಲ್ 16-17ರಂದು ನಡೆಯುತ್ತಿರುವ ಶ್ರೀಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತಮಹೋತ್ಸವದ ನೆನಪಿನಲ್ಲಿ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ಕಾಣಿಕೆಯಾಗಿ ಸಾರ್ವಜನಿಕರ ಹಾಗೂ ಸದ್ಭಕ್ತರ ನೆರವಿನಿಂದ ನೂರೊಂದು ಕೊಠಡಿಗಳುಳ್ಳ ವಿದ್ಯಾರ್ಥಿ ನಿಲಯದ ಕಟ್ಟಡ, ಸುಸಜ್ಜಿತ ಪ್ರಸಾದನಿಲಯ, ಅತಿಥಿಗೃಹ ಇತ್ಯಾಧಿಗಳು ಉದ್ಘಾಟನೆಗೊಳ್ಳಲಿವೆ. ಅಲ್ಲದೆ ಇದೇ ವರ್ಷ ಪ್ರಾರಂಭವಾಗಿರುವ ನರ್ಸಿಂಗ್, ಡಿ.ಇಡಿ., ವೃತ್ತಿಶಿಕ್ಷಣ ಕಾಲೇಜುಗಳು ಇದೇ ಸಂದರ್ಭದಲ್ಲಿ ವಿದ್ಯುಕ್ತವಾಗಿ ಉದ್ಘಾಟನೆಗೊಳ್ಳಲಿವೆ.

❑

---

ಉದಕ ಹೋಗಿ ಗುರುಪಾದೋದಕವೆನಿಸಿತ್ತು;
ಗುರುಪಾದೋದಕ ಹೋಗಿ
ಕ್ರಿಯಾಪಾದೋದಕವೆನಿಸಿತ್ತು;
ಕ್ರಿಯಾಪಾದೋದಕ ಹೋಗಿ
ಜ್ಞಾನಪಾದೋದಕವೆನಿಸಿತ್ತು;
ಜ್ಞಾನಪಾದೋದಕವೆ ಶರಣನ ಮನದ ಮೊನೆಯಲ್ಲಿ
ಕಪಿಲಸಿದ್ಧಮಲ್ಲಿಕಾರ್ಜುನನಾಗಿ ನಿಂದಿತ್ತು.

ಒಬ್ಬರ ಮನವ ನೋಯಿಸಿ,
ಒಬ್ಬರ ಮನವ ಘಾತವ ಮಾಡಿ,
ಗಂಗೆಯಮುಳುಗಿದಡೇನಾಗುವುದಯ್ಯಾ ?
ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು ?
ಕಲಂಕ ಬಿಡದಾಯಿತ್ತಯ್ಯಾ.
ಅದು ಕಾರಣ, ಮನವ ನೋಯಿಸದವನೆ,
ಒಬ್ಬರ ಘಾತವ ಮಾಡದವನೆ,
ಪರಮಪಾವನ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನಾ.

– ಸಿದ್ಧರಾಮ

# ನಾ ಕಂಡ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಶಿವಯೋಗಿಗಳು

– ವಿದ್ವಾನ್ ಕೆ.ಎಂ. ರೇವಣಸಿದ್ಧಯ್ಯ *

**ಪೂಜ್ಯ** ಶ್ರೀ ಇಮ್ಮಡಿ ಶ್ರಿ ನಿರ್ವಾಣ ಸ್ವಾಮಿಗಳು ಇಡೀ ವಿರಕ್ತ ಸಮುದಾಯದಲ್ಲಿ ಗೌರಿಶಂಕರ ಶಿಖರದಂತೆ ವಿರಾಜಮಾನರಾಗಿದ್ದರು. ಅವರದೊಂದು ಬಹು ಅಪರೂಪವಾದ ವ್ಯಕ್ತಿತ್ವ. ಹಸು ಮಕ್ಕಳಂತೆ ಕೋಮಲ ಹೃದಯ ಅವರದು, ದಯೆ, ಅನುಕಂಪ, ಕರುಣೆಯ ಸಾಕಾರ ಮೂರ್ತಿಗಳಾಗಿದ್ದರು.

ಬಸವಣ್ಣನವರ

*ದಯವಿಲ್ಲದ ಧರ್ಮ ಅದೇವುದಯ್ಯ*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ,*
*ದಯವೆ ಧರ್ಮದ ಮೂಲವಯ್ಯ*
*ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯ*

ಎನ್ನುವ ವಚನದ ಸಾರ ಸರ್ವಸ್ವವು ಶ್ರೀ ನಿರ್ವಾಣ ಸ್ವಾಮಿಗಳವರ ಮಾತು, ಕೃತಿ ಮತ್ತು ಮನೋಭಾವಗಳಲ್ಲಿ ಅಭಿವ್ಯಕ್ತವಾಗುತ್ತಿತ್ತು. ನಾನು, ಅಂದರೆ ಈ ಲೇಖನಕಾರ, ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಅಭ್ಯಾಸ ಮಾಡುತ್ತಿದ್ದ ಸಮಯ, ಅಂದರೆ ೧೯೪೯ ರಿಂದ ೪–೫ ವರ್ಷಗಳ ಕಾಲ ಶ್ರೀ ದೇಗುಲ ಮಠದ ಏಜೆಂಟಾಗಿ ವಿದ್ಯಾರ್ಥಿನಿಲಯದ ಕೆಲವು ಕೆಲಸ ಕಾರ್ಯಗಳ ನಿರ್ವಹಣೆಗಾಗಿ ಆಗಾಗ್ಗೆ ಶ್ರೀ ಮಠಕ್ಕೆ ಬಂದು ಹೊಗುತ್ತಿದ್ದಾಗ, ಶ್ರೀ ನಿರ್ವಾಣ ಸ್ವಾಮಿಗಳವರ ದರ್ಶನ ಮಡುತ್ತಿದ್ದೆ. ಅವರ ವಾತ್ಸಲ್ಯಪೂರಿತ ಮಾತುಗಳಿಂದ ಪ್ರೇರೇಪಿತನಾಗಿ ಅವರೊಡನೆ ಸಲಿಗೆಯಿಂದ ಮಾತನಾಡುತ್ತಿದ್ದೆನು. ಶ್ರೀಗಳವರಿಗೆ ಬಡ ವಿದ್ಯಾರ್ಥಿಗಳ ಮೇಲೆ ಅಪಾರವಾದ ಕರುಣೆ, ಊಟ ಬಡಿಸುವಾಗ ಸೊಂಟಕ್ಕೆ ಕೆಂಪು ವಸ್ತ್ರವನ್ನು ಬಿಗಿದು, ಬಗ್ಗಿ, ಪ್ರೀತಿಯಿಂದ ವಿಶೇಷವಾಗಿ ಸಾಂಬಾರನ್ನು ತಾವೇ ಬಡಿಸುತ್ತಿದ್ದರು. ಅಲ್ಲೇ ನಿಂತಿರುತ್ತಿದ್ದ ನಾನು, ಈ ಕೆಲಸವನ್ನು ಯಾರಾದರೂ ಒಬ್ಬ ವಿದ್ಯಾರ್ಥಿಗೆ ವಹಿಸಿದರೆ ನಡೆಯುತ್ತದೆ ಎಂದು ನಿವೇದಿಸಿಕೊಂಡಾಗ, 'ವಿದ್ಯಾರ್ಥಿಯೇ ಸಾಂಬಾರ್ ಬಡಿಸಿದರೆ ತನ್ನ ಸ್ನೇಹಿತರಿಗೆ ಹೆಚ್ಚಿಗೆ ತರಕಾರಿ ಹಾಕಿ ಬಿಡುತ್ತಾನೆ. ಎಲ್ಲರಿಗೂ ಒಂದೇ ಸಮ ಬಡಿಸುವುದಿಲ್ಲ, ತಾರತಮ್ಯವಾಗುತ್ತದೆ. ಅದಕ್ಕೆ ನಾನೇ ಎಲ್ಲರಿಗೂ ಬಡಿಸುತ್ತೇನೆ. ಇದು ನನ್ನ ಕಾಯಕ' ಎಂದರು.

ಪೂಜ್ಯರಲ್ಲಿನ ಈ ಪ್ರಸಾದ ಸಮವಾಗಿ ವಿತರಣೆ ಯಾಗಬೇಕೆಂಬ ಭಾವನೆ, ಪ್ರಾಣಿಗಳ ವಿಷಯದಲ್ಲಿಯೂ ಅನುಸರಣೆಯಾಗುತ್ತಿತ್ತು. ಒಂದು ದಿನ ಬೆಳ್ಳಿಗ್ಗೆ ಪೂಜ್ಯ ಶ್ರೀ ಮಹಾಲಿಂಗ ಸ್ವಾಮಿಗಳವರ ಸನ್ನಿಧಿಯಲ್ಲಿ ನಾನು ಪೂಜೆ ಮಾಡಿಕೊಂಡು ಪ್ರಸಾದ ಸ್ವೀಕರಿಸಿ ಹೊರಬಂದಾಗ, ಶ್ರೀ ನಿರ್ವಾಣ ಸ್ವಾಮಿಗಳು ಬಾವಿಯಿಂದ ನೀರು ಸೇದಿ ಪಕ್ಕದಲ್ಲೇ ಇದ್ದ ಕಲ್ಲು ತೊಟ್ಟಿಗೆ, ಒಂದು ಕೊಡ ನಿರು, ಒಂದು ಡಬ್ಬ ಹೊಟ್ಟು ತೌಡು ಹಾಕಿ ಒಂದೊಂದು ಎಮ್ಮೆಗೂ ಕುಡಿಯಲ್ಲಿಕ್ಕೆ ಬಿಡುತ್ತಿದ್ದರು. ಇದನ್ನು ನೋಡಿದ ನಾನು ಸುಮ್ಮನಿರಲಾರದೆ ಬೇರೆ ಯಾರಿಗಾದರೂ ಹೇಳಿದರೆ ಈ ಕೆಲಸ ನಡೆಯುತ್ತೇ. ತಾವೇ ಈ ಇಳಿ ವಯಸ್ಸಿನಲ್ಲಿ (ಆಗ ಅವರಿಗೆ ೮೦ ವರ್ಷ) ಈ ಕೆಲಸ ಮಾಡುವುದರಿಂದ ಆಯಾಸವಾಗುತ್ತದೆ ಎಂದು ಅರಿಕೆ ಮಾಡಿಕೊಂಡೆ. "ಹಾಗಲ್ಲಪ್ಪ, ಬೇರೆಯವರು ಮಾಡಿದರೆ ಒಂದೇ ಸಾರಿ ತೊಟ್ಟಿಗೆ ನೀರು ತುಂಬಿಬಿಟ್ಟು, ಒಂದಷ್ಟು ಹೊಟ್ಟು ತೌಡು ಹಾಕಿ ಬಿಡ್ತಾರೆ, ಮೊದಲು ಬಂದು ಕುಡಿದ ದೊಡ್ಡ ದೊಡ್ಡ ಎಮ್ಮೆಗಳು ಹೊಟ್ಟನೆಲ್ಲಾ ತಿಂದು ಬಿಡುತ್ತವೆ. ಪುಟ್ಟ ಪುಟ್ಟ ಕರುಗಳಿಗೆ ಪಾಪ ಏನೂ ಸಿಗುವುದಿಲ್ಲ. ಆದ್ದರಿಂದಲೇ ಈ ಕೆಲಸ ನಾನೇ ಮಾಡುತ್ತೇನೆ. ಆಯಾಸ ಆಗುತ್ತೇ ಅಂತ ಕೆಲಸ ಮಾಡುವುದನ್ನು ಬಿಡಬಾರದು' ಎಂದರು. ಇದು ಎಂತಹ ಪ್ರಾಣಿ ದಯೆ.

ಅವರಿಗೆ ಬೆಕ್ಕು ನಾಯಿ ಮೊದಲಾದ ಪ್ರಾಣಿಗಳ ಬಗ್ಗೆ ಅಪಾರ ಪ್ರೀತಿ. ಅವರ ಮಂಚದ ಮೇಲೆ ಯಾವಾಗಲೂ ಒಂದೆರೆಡು ಬೆಕ್ಕುಗಳು ಮಲಗೇ ಇರುತ್ತಿದ್ದವು. ಒಂದು ದಿನ

* ನಿವೃತ್ತ ಪ್ರಾಚಾರ್ಯರು, ಮೈಸೂರು

ರಾತ್ರಿ ನಾನು ಪೂಜ್ಯ ಶ್ರೀ ಮಹಾಲಿಂಗ ಸ್ವಾಮಿಗಳವರ ಜೊತೆಯಲ್ಲಿ ಸಂಭಾಷಿಸುತ್ತಿದ್ದಾಗ ೩-೪ ಬೆಕ್ಕಿನ ಮರಿಗಳು ತುಂಬಾ ಕಿರಿಚಾಡುತ್ತಿದ್ದವು. ಈ ಕಿರಿಚಾಟದಿಂದ ಸ್ವಲ್ಪ ಬೇಸರಗೊಂಡ ಶ್ರೀ ಮಹಾಲಿಂಗ ಸ್ವಾಮಿಗಳು ಅ ನಾಲ್ಕು ಮರಿಗಳನ್ನು ಹಿಡಿದುಕೊಂಡು ಹೋಗಿ ಮಠದ ಹಿಂಬದಿಯಲ್ಲಿದ್ದ ಬೇಲಿಯಲ್ಲಿ ಬಿಟ್ಟು ಬಂದರು. ಮರಿಗಳನ್ನು ಕಾಣದೆ ತಾಯಿ ಬೆಕ್ಕು ಕಿರಿಚಾಡುತ್ತಿತ್ತು. ಆಚೆ ಕಡೆ ಆ ಮರಿಗಳು ತಾಯಿಗಾಗಿ ಆಕ್ರಂದನ ಮಾಡಿತ್ತಿದ್ದವು. ಅಷ್ಟರಲ್ಲೇ ಶ್ರೀ ನಿರ್ವಾಣ ಸ್ವಾಮಿಗಳವರು ಪೂಜೆ ಮುಗಿಸಿಕೊಂಡು ಹೊರ ಬಂದವರೇ, ತಾಯಿ, ಮರಿಗಳ ಕಿರಿಚಾಟವನ್ನು ಕೇಳಿ ಸಿಟ್ಟಿನಿಂದ ಕೂಗಾಡಿದರು. ಲಾಟೀನು ತೆಗೆದುಕೊಂಡು, ಹಿಂಭಾಗಕ್ಕೆ ಹೋಗಿ ಬೇಲಿಯಲ್ಲಿದ್ದ ಮರಿಗಳನ್ನು ಎತ್ತಿಕೊಂಡು ಬಂದು, ತಾಯಿ ಬೆಕ್ಕಿನ ಸಮೀಪ ಬಿಟ್ಟರು. ಬೆಕ್ಕುಗಳ ಕಿರಿಚಾಟ ಶಾಂತವಾಯಿತು. **"ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ"** ಎನ್ನುವ ಸೂಕ್ತಿ ಶ್ರೀ ನಿರ್ವಾಣ ಸ್ವಾಮಿಗಳವರ ಜೀವನದ ಸಾರ ಸರ್ವಸ್ವವಾಗಿತ್ತು.

ಭಕ್ತರ ವಿಷಯದಲ್ಲಿ ಶ್ರೀ ನಿರ್ವಾಣ ಸ್ವಾಮಿಗಳವರಿಗೆ ಅಪಾರವಾದ ಅನುಕಂಪ, ಅಸಾಧಾರಣವಾದ ಪ್ರೀತಿ, ವಾತ್ಸಲ್ಯ, ಅವರ ಬಿನ್ನಹಗಳಿಗೆ ಆರೋಗ್ಯ ಸರಿಯಿಲ್ಲದಿರುತ್ತಿದ್ದರೂ, ಹೋಗಿ ಪೂಜೆ ಮಾಡಿ, ತೀರ್ಥ ಪ್ರಸಾದ ಕೊಟ್ಟು ಬರುತ್ತಿದ್ದರು. ಒಂದು ದಿವಸ ಮಧ್ಯಾಹ್ನ ನಾನು ಮಠಕ್ಕೆ ಹೋದಾಗ, ಆಗತಾನೇ ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳವರು ಎಲ್ಲಿಂದಲೋ ಹಿಂತಿರುಗಿ ಬಂದಿದ್ದರು. ನಾನು ಎಲ್ಲಿಗೆ ದಯಮಾಡಿಸಿದ್ದಿರಿ ಬುದ್ದಿ, ಎಂದಾಗ "ಶಿವನಹಳ್ಳಿಯಲ್ಲಿ ೩-೪ ಮನೆಯಲ್ಲಿ ಬಿನ್ನಹ ಇತ್ತು ಹೋಗಿ ಬಂದೆ ಕಣಯ್ಯ" ಎಂದರು. ನಾನು ಸುಮ್ಮನಿರದೆ ಆ ಮನೆಗಳಲ್ಲಿ ದಕ್ಷಿಣೆ (ಕಾಣಿಕೆ) ಎಷ್ಟುಕೊಟ್ಟರು ಬುದ್ಧಿ ಎಂದು ಕೇಳಿದೆ ಕೂಡಲೇ ಪೂಜ್ಯರು ಸ್ವಲ್ಪ ಸಿಟ್ಟಿನಿಂದಲೇ "ದಕ್ಷಿಣೆ ಆಸೆಗಾಗಿ ಭಕ್ತರ ಮನೆಗೆ ಬಿನ್ನಹಕ್ಕೆ ಹೋಗಬಾರದು. ಭಕ್ತರಿಗೆ ಲಿಂಗ ಪೂಜೆ ಮಾಡಿಸಿ, ತೀರ್ಥಪ್ರಸಾದ ಕೊಡುವುದು ಸ್ವಾಮಿಗಳ ಕರ್ತವ್ಯ, ಅದು ಸನ್ಯಾಸಿಗಳ ಕಾಯಕ, ಕೆಲಸವನ್ನು ನಿಷ್ಕಾಮದಿಂದ ಮಾಡಬೇಕು ಕಣಯ್ಯ" ಎಂದು ಅಪ್ಪಣೆ ಕೊಡಿಸಿದರು. ಅವರ ಆ ಮಾತುಗಳು ವಿರಕ್ತ ಧರ್ಮಕ್ಕೇ ಭಾಷ್ಯ ಬರೆದಂತೆ ಇತ್ತು.

*"ಧನಕ್ಕೆ ಮನವ ನೊಡ್ಡಿದರೇನು?*
*ಮನಕ್ಕೆ ಧನವ ನೊಡ್ಡಿದರೇನು?*
*ತನು ಮನ ಧನವ ನೀಡಿ*
*ಮಾತಾನಾಡಬಲ್ಲಡೆ ಆತ ನಿಸ್ಸೀಮನು*
*ಆತ ನಿಜೈಕ್ಯನು.*

ಎನ್ನುವ ಬಸವಣ್ಣನವರ ವಚನಕ್ಕೆ ಪೂಜ್ಯರ ಜೀವನ ಒಂದು ಸುಂದರವಾದ ಉದಾಹರಣೆ.

ಒಂದೊಂದು ದಿನ ೧೦-೧೫ ಭಕ್ತರ ಮನೆಗಳಲ್ಲಿ ಬಿನ್ನಹಕ್ಕೆ ದಯಮಾಡಿಸಿ ಪೂಜೆ ಮಾಡಿ, ತೀರ್ಥ ಪ್ರಸಾದ ಕೊಟ್ಟು ಬರುತ್ತಿದ್ದರು. ಸಂಕ್ರಾತಿ, ಶಿವರಾತ್ರಿ, ಯುಗಾದಿ ಹಬ್ಬಗಳಲ್ಲಂತೂ ಬಹಳ ಜನ ಭಕ್ತರ ಮನೆಗೆ ಬಿನ್ನಹಗಳಿಗೆ ಹೋಗಿ ಬರುತ್ತಿದ್ದರು. ಅಲ್ಲಿ ಅವರು ವಿವಿಧ ಭಕ್ಷ ಭೋಜ್ಯಗಳನ್ನು ಎಂದೂ ಬಯಸಿದವರಲ್ಲ. ರಾಗಿ ಮುದ್ದೆ , ಸೊಪ್ಪಿನ ಸಾರು, ಅವರ ಅತ್ಯಂತ ಪ್ರಿಯವಾದ ಆಹಾರವಾಗಿತ್ತು. "ಬಯಸಿ ಬಂದುದು ಅಂಗ ಭೋಗ, ಬಯಸದೇ ಬಂದುದು ಲಿಂಗ ಭೋಗ" ಎನ್ನುವ ತತ್ವ ಅವರಲ್ಲಿ ಅನುಷ್ಠಾನವಾಗಿತ್ತು.

ಪೂಜ್ಯ ಶ್ರೀ ನಿರ್ವಾಣ ಶಿವಯೋಗಿಗಳವರು ಲಿಂಗ ಪೂಜಾ ವಿನೋದ ಪ್ರಿಯರು. ಅವರ ಲಿಂಗ ಪೂಜಾ ವೈಖರಿಯನ್ನು ನೊಡುವುದೇ ಒಂದು ಸೌಭಾಗ್ಯ. ಪೂಜೆಗೆ ಮುನ್ನ ಅವರು ಸ್ನಾನ ಮಾಡುವ ವಿಧಾನ ಅಪರೂಪದ್ದಾಗಿತ್ತು. ಸ್ನಾನಕ್ಕೆ , ಮೊದಲು ಇಷ್ಟಲಿಂಗವನ್ನು ಎಡಗೈಯಲ್ಲಿ ಹಿಡಿದು ಜೊತೆಗೆ ಅದೆ ಕೈಯ ಬೆರಳುಗಳಲ್ಲಿ ನೀರಿನ ಚಂಬನಿಟ್ಟುಕೊಂಡು, ಅದರಿಂದ ಲಿಂಗದ ಮೇಲೆ ಬಿದ್ದ ಜಲಧಾರೆಯನ್ನು ಶಿರಸ್ಸಿನ ಮೇಲೆ ಹಾಕಿಕೊಂಡು, ಲಿಂಗವನ್ನು ಕರಡಿಗೆಯಲ್ಲಿ ಇಟ್ಟು, ಆಮೇಲೆ ಸ್ನಾನ ಮಾಡುತ್ತಿದ್ದರು. ಅವರ ಪೂಜೆ, ಲಿಂಗಯ್ಯನನ್ನು ಮಾತನಾಡಿಸುವಂತೆ ಕಾಣುತ್ತಿತ್ತು.

*"ಲಿಂಗಯ್ಯ ಲಿಂಗದಲ್ಲಿ ಕಂಗಳು ನೆಟ್ಟು,*
*ಎದೆ ಹಳಚದೆ, ಮನ ಕವಲಿಡದೆ,*
*ಚಿತ್ರದ ರೂಹಿನ ತೆರನಂತೆ,*
*ಲಿಂಗನ ನೋಡಿ ನೋಡಿ ಕಂಗಳಲ್ಲಚ್ಚೊತ್ತಿ,*
*ಮನದಲ್ಲಿ ನೆನೆ ನೆನೆದು ಮರೆದ*
*ಲಿಂಗಮುಖ ಸಂಪನ್ನರನೇ ಲಿಂಗವೆಂಬನು*
*ನಿಜಗುರು ಸ್ವತಂತ್ರ ಸಿದ್ದಲಿಂಗೇಶ್ವರ!"*

ಎನ್ನುವ ಸ್ವತಂತ್ರ ಸಿದ್ದಲಿಂಗೇಶ್ವರ ವಚನ ಪೂಜ್ಯರ ಲಿಂಗಪೂಜಾ ವಿಧಾನವನ್ನು ವಿವರಿಸುವಂತಿದೆ. ಅವರ ಲಿಂಗಾಂಗ ಸಾಮರಸ್ಯದ ಸಂಪತ್ತೇ ಅವರ ಅಪಾರವಾದ ಸಂಪತ್ತಾಗಿತ್ತು..

ಶ್ರೀ ದೇಗುಲ ಮಠದ ಪ್ರಭೆ ಪ್ರಕಾಶಮಾನವಾಗಿ ಶ್ರೀ ಮಠದ ಸ್ವಾಮಿಗಳನ್ನಾಗಿ ಪಡೆದದ್ದು, ಶ್ರೀ ನಿರ್ವಾಣ ಸ್ವಾಮಿಗಳವರ ಪೂಜಾ ಫಲದಿಂದಲೇ ಎಂದರೆ ಅತಿಶಯೋಕ್ತಿಯಾಗಲಾರದು. ಬಹಳಷ್ಟು ಮಠಗಳಲ್ಲಿ ನಡೆಯುತ್ತಿದ್ದ ಪಟ್ಟಾಧಿಕಾರ ಮಹೋತ್ಸವಗಳಲ್ಲಿ ಹಾಗೂ ಶಿವಗಣಾರಾಧನೆ ಸಮಾರಂಭಗಲ್ಲಿ ಶ್ರೀ ನಿರ್ವಾಣ ಸ್ವಾಮಿಗಳವರ ಸಾನ್ನಿಧ್ಯ ಪ್ರಧಾನವಾಗಿರುತ್ತಿತ್ತು.

*"ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ,*
*ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ"*

ಎನ್ನುವ ಅಣ್ಣನವರ ವಚನದ ಸಾರವನ್ನು ಜೀವನದಲ್ಲಿ ಸಂಪೂರ್ಣ ಅಳವಡಿಸಿಕೊಂಡು ಪರಿಪೂರ್ಣ ಅಂತರಂಗ ಶುದ್ಧಿ ಹಾಗೂ ಬಹಿರಂಗ ಶುದ್ಧಿಯ ಸಿದ್ಧಿಗಳನ್ನು ಪಡೆದುಕೊಂಡು ಶಾಶ್ವತವಾದ ಶಿವಯೋಗ ನಿದ್ರಾ ಮುದ್ರೆಯಲ್ಲಿ ತಾ॥ ೩೦-೧-೧೯೭೨ ರಲ್ಲಿ ಲಿಂಗೈಕ್ಯರಾದರು.

ಹುಟ್ಟಿದಾಗ ಶ್ರೀ ನಿರ್ವಾಣ ಮಹಾಸ್ವಾಮಿಗಳವರಿಂದಲೇ ಲಿಂಗಧಾರಣೆ, ತದನಂತರ ಅವರಿಂದಲೇ ಶಿವದೀಕ್ಷೆ ಪಡೆದುಕೊಂಡು ನನಗೆ ಶ್ರೀ ಶಿವಯೋಗಿಗಳವರ ಸವಿ ನೆನಪಿಗೆ ಈ ನಾಲ್ಕಾರು ನುಡಿ ಕುಸುಮಗಳನ್ನು ಸಮರ್ಪಿಸುವ ಸದವಕಾಶ ಲಭ್ಯವಾದದ್ದು ಒಂದು ವಿಶೇಷ.



---

ವಚನಕಾರರು ಸಮಾಜಕ್ಕೆ ನೀಡಿದ ಒಂದು ಅತ್ಯಮೂಲ್ಯ ಕಾಣಿಕೆ ಎಂದರೆ, ಕಾಯಕತತ್ವದ ಪರಿಕಲ್ಪನೆ. ಅದು ವಚನ ಸಾಹಿತ್ಯದಲ್ಲಿ ಸರಳವಾಗಿ ಅಭಿವ್ಯಕ್ತಿ ಗೊಂಡಿದೆ. ''ಸರ್ವೋದಯದ ಎಲ್ಲ ಅರ್ಥಗಳನ್ನು ಒಳಗೊಂಡು ಅವನ್ನು ಮೀರಿರುವುದು ಶರಣರ ಕಾಯಕ ತತ್ವದ ಪರಿಕಲ್ಪನೆ. ಇಂದು ಅದು ತೀರ ಅಗತ್ಯವಾಗಿ ಮತ್ತು ತೀರಾ ತುರ್ತಾಗಿ ಬೇಕಾಗಿರತಕ್ಕ ಒಂದು ಮೌಲ್ಯ. ಇಂತಹ ಅನೇಕ ಜೀವನ ಮೌಲ್ಯಗಳನ್ನು ಕೇವಲ ಬರಿ ಬೋಧಿಸದೆ ನಿಜಜೀವನದಲ್ಲಿ ಶರಣರು ತೋರಿಸಿದರು. ಇಂದಿನ ಯಾವ ಪ್ರಜಾಪ್ರಭುತ್ವ ಯುಗದಲ್ಲಿ ಬಾಯಿ ಇಲ್ಲದವರಿಗೆ ಬಾಯಿ ಬಂತು, ಕೈ ಇಲ್ಲದವರಿಗೆ ಕೈಬಂತು ಎಂದು ಏನು ಹೇಳುತ್ತಿದ್ದೇವೆಯೋ ಅಂತಹುದನ್ನು ಆ ಯುಗದಲ್ಲೇ ನೀಡಿದ್ದು ಶರಣ ಸಾಹಿತ್ಯ. ಅದು ಕುಳಿತುಕೊಂಡು ಬರದಂತಹ ಸಾಹಿತ್ಯ ಅಲ್ಲ; ಜೀವನದಲ್ಲಿ ಬೆರೆತು ನಡೆದು ಬಂದಂತಹ ಸಾಹಿತ್ಯ''.

ಯಾವುದೇ ಸಾಹಿತ್ಯಕ್ಕೆ ಒಂದು ಸಾಮಾಜಿಕ ಬದ್ಧತೆ ಇರಬೇಕು. ಈ ಸಾಮಾಜಿಕ ಬದ್ಧತೆಯನ್ನು ಸಾಧ್ಯವನ್ನಾಗಿ ಮಾಡಿ ತೋರಿಸುವುದರ ಮೂಲಕ ಆ ಸಾಹಿತ್ಯದಿಂದ ಸಮಾಜ ಅಭಿವೃದ್ಧಿ ಹೊಂದುತ್ತದೆ. ಇಂತಹ ಚಲನಶೀಲವುಳ್ಳ ಸಾಹಿತ್ಯ ನಮಗೆ ಇಂದು ಅಗತ್ಯವಾಗಿದೆ. ಇಂತಹ ಸಾಹಿತ್ಯ ನಿರ್ಮಾಣದಿಂದ ಸಮಾಜ ಜಾಗೃತಿಯಾಗುತ್ತದೆ. ವಚನ ಸಾಹಿತ್ಯ ಅಂತಹ ಸಮಷ್ಟಿ ಜಾಗೃತಿಯನ್ನು ಮಾಡಿದ್ದರಿಂದ ಅದೊಂದು ಜೀವಂತ ಸಾಹಿತ್ಯವಾಹಿನಿಯಾಗಿ ಜನರನ್ನು ಜಾಗೃತಿಗೊಳಿಸಿತು, ಎಚ್ಚರಿಸಿತು.

12ನೇ ಶತಮಾನದ ಶರಣ ಸಾಹಿತ್ಯ ಒಂದು ಪ್ರಕಾರವಲ್ಲ; ಒಂದು ಜೀವನದ ವಿಧಾನ. ವಚನದಿಂದ ಒಂದು ದೊಡ್ಡ ಚಳುವಳಿಯಾಯಿತು ಎಂಬುದು ಬಹುಶಃ ಕನ್ನಡ ಇತಿಹಾಸದಷ್ಟೇ ಅಲ್ಲ, ಯಾವತ್ತೂ ಇತಿಹಾಸದ ಚರಿತ್ರೆಯಲ್ಲಿ ಇಂತಹ ಘಟನೆಗಳು ಸಿಗುವುದು ಬಹಳ ಅಪರೂಪ. ಇದು ಬರೀ ಸಾಹಿತ್ಯವಾಗಿ ಉಳಿಯದೆ ಇಡೀ ಜನರನ್ನು ಎಚ್ಚರಿಸುವಂತಹ ಒಂದು ಚಳುವಳಿಯಾಯಿತು.

*- ಲಿಂ. ಡಾ. ಹೆಚ್. ತಿಪ್ಪೇರುದ್ರಸ್ವಾಮಿ*

# ಕಾಯಕಯೋಗಿ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳು

- ಪಾಲನೇತ್ರ *

ಹಲವು ಮಾತೇನು, ನೀನೊಲಿದು ಪಾದವನಿಟ್ಟ ನೆಲವೇ ಸುಕ್ಷೇತ್ರ, ಜಲವೇ ಪಾವನತೀರ್ಥ, ಶ್ರೀ ಗುರುವೇ ಕೃಪೆಯಾಗು ! ಎಂಬಂತೆ ಬಸವಾದಿ ಶಿವಶರಣರ ಮತ್ತು ಪ್ರಭುದೇವರ ಶೂನ್ಯ ಪರಂಪರೆಯಲ್ಲಿ ಬಂದ ಅನೇಕ ಜಂಗಮ ಮೂರ್ತಿಗಳು ನಾಡಿನ ಎಲ್ಲೆಡೆ ಸಂಚರಿಸಿ ತಮ್ಮ ಪಾದಸ್ಪರ್ಶದ ಜೊತೆಗೆ ಶಿವಯೋಗ ಫಲದಿಂದ ಮತ್ತು ದಿವ್ಯತೇಜುಸ್ಸುಗಳಿಂದ ಸಂಸ್ಥಾಪಿಸಲ್ಪಟ್ಟ ಅನೇಕ ಮಠಗಳು ಇಂದಿಗೂ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿದ್ದು, ಅಂತಹ ಭವ್ಯ ಪರಂಪರೆಯಲ್ಲಿ ಆದಿಗುರು ಶ್ರೀ ನಿರ್ವಾಣ ಸ್ವಾಮಿಗಳಿಂದ ಸಂಸ್ಥಾಪಿಸಲ್ಪಟ್ಟ ಮಠ ಇಂದಿಗೂ ಕನಕನಪುರ (ಅಂದಿನ ಕಾಣಿಕಾರನಹಳ್ಳಿ ಮಠ) ದೇಗುಲಮಠ ಪ್ರಖ್ಯಾತವಾಗಿ ವೀರಶೈವ ಧರ್ಮದ ಮತ್ತು ಶಿವತತ್ತ್ವ ಬೆಳಗುವ ಜ್ಞಾನದ ತಪೋಭೂಮಿ ಯಾಗಿದೆ.

ಅರ್ಕಾವತಿ ದಡದಲ್ಲಿ ಕಂಗೊಳಿಸುತ್ತಿರುವ ದೇಗುಲ ಮಠವು ಶಿವಯೋಗದ ತಪೋಭೂಮಿ, ನಿಸರ್ಗ ರಮಣೀಯ ಸುಂದರ ಚಿತ್ತಾಕರ್ಷಕವಾಗಿ ಆಕರ್ಷಿಸುವ ತೆಂಗು-ಮಾವು, ಅಡಿಕೆ, ಮುಂತಾದ ತೋಟದ ವನರಾಶಿಗಳ ಮಧ್ಯೆ ವೀರಶೈವ ಧರ್ಮದ ಸಮನ್ವಯದ ಕೇಂದ್ರವಾಗಿ **"ಶರಣರ ಬರುವನೆಗೆ ಪ್ರಾಣವೇ ಜೀವಾಳವಯ್ಯ, ದಯವೇ ಧರ್ಮದ ಮೂಲವಯ್ಯ"** ಎಂಬ ಬಸವಣ್ಣನವರ ಸಂದೇಶದಂತೆ ಹಸಿದ ಹೊಟ್ಟೆಗೆ ಅನ್ನ, ಮಸ್ತಕಕ್ಕೆ ಜ್ಞಾನ ನೀಡಿರುವ ಕರ್ಮಭೂಮಿಯಾಗಿದೆ. ನಿತ್ಯ ಬದುಕಿನಲ್ಲಿ ಬಸವಳಿದ ಜೀವಿಗಳಿಗೆ ಅವರ ದುಃಖ ದುಮ್ಮಾನಗಳಲ್ಲಿ ಬೆರೆತು ಅವರ ಬಾಳಿಗೆ ಬೆಳಕು ಮೂಡಿಸುವಲ್ಲಿ ಅನೇಕ ಪೂಜ್ಯರು ಶ್ರಮಿಸಿದರ ಫಲವಾಗಿ ಇಂದು ಕನ್ನಡ ನಾಡಿನಲ್ಲಷ್ಟೇ ಅಲ್ಲದೆ ಹೊರ ರಾಜ್ಯಗಳಲ್ಲೂ ದೇಗುಲಮಠವು ಭಕ್ತ ಜನತೆಯನ್ನು ಅಪಾರ ಸಂಖ್ಯೆಯಲ್ಲಿ ಆಕರ್ಷಿಸಿದೆ. ಶ್ರೀಮಠವು ಬಸವಾದಿ ಶಿವಶರಣರ ತತ್ತ್ವಗಳನ್ನು ಆಚರಣೆಗೆ ತರುವ ಪ್ರಯೋಗಶಾಲೆಯಾಗಿದೆ. ನಾಡಿನ ಅನೇಕ ಪೂಜ್ಯರು ಗುರು-ವಿರಕ್ತ ಎಂಬ ಭಾವನೆಯಿಲ್ಲದೆ ಎಲ್ಲಾ ಪೂಜ್ಯರ ಮತ್ತು ಭಕ್ತರ ಮನೆಮನಗಳಲ್ಲಿ ದೇಗುಲ ಮಠವು ತನ್ನ ವೈಶಿಷ್ಟ್ಯ ಪರಂಪರೆಯನ್ನು ಬಿತ್ತರಿಸಿರುವುದರಿಂದ ೨೦ನೇ ಶತಮಾನದಲ್ಲಿ ಈ ಮಠವು ಸಾಧಿಸಿದ ಮಹಾಕಾರ್ಯಗಳು ನಿಜಕ್ಕೂ ಒಂದು ಪವಾಡವೆಂದರೂ ಸರಿ.

ಶ್ರೀ ದೇಗುಲಮಠದ ಗುರುಪರಂಪರೆಯಲ್ಲಿ ಅನೇಕ ಪೂಜ್ಯರು ತಮ್ಮ ಶಿವತತ್ತ್ವದ ಬೆಳಕಿನಲ್ಲಿ ಬೆಳಗಿ ಜನಸಮುದಾಯದ ಇಷ್ಟಾರ್ಥಗಳನ್ನು ಈಡೇರಿಸಿ, ಅವರ ಹೃದಯದಲ್ಲಿ ನೆಲಸಿ ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬಂತೆ ಎಲ್ಲಾ ಸಂದರ್ಭದಲ್ಲೂ ಶಿವಭಕ್ತ ಸಮೂಹದ ನಡುವೆ ಬದುಕಿದವರು. ಅವರೊಡನೆ ಬೆರತು, ನರನನ್ನು ಹರನನ್ನಾಗಿ ಮಾಡಿದ ಅನೇಕ ಪೂಜ್ಯರು "ನಡೆದಾಡುವ ದೇವರೆಂದು" ಭಕ್ತ ಸಮುದಾಯ ತಿಳಿದು ಇಂದಿಗೂ ಸಹ ಶ್ರೀ ದೇಗುಲಮಠದ ಗುರುಪರಂಪರೆಗೆ ಭಕ್ತಿ ಗೌರವಗಳನ್ನಿಟ್ಟು ನಡೆಯುತ್ತಿರುವುದೇ ಸಾಕ್ಷಿಯಾಗಿದೆ.

ಆದಿಗುರು ಶ್ರೀ ನಿರ್ವಾಣಸ್ವಾಮಿಗಳಿಂದ ಸಂಸ್ಥಾಪನೆಗೊಂಡ ಈ ಪ್ರಾಚೀನ ಮಠದಲ್ಲಿ ಶ್ರೀ ನಂಜಯ್ಯಸ್ವಾಮಿಗಳು, ಶ್ರೀ ಮಹಾಲಿಂಗಸ್ವಾಮಿಗಳು, ಶ್ರೀ ಹುಚ್ಚಪ್ಪಸ್ವಾಮಿಗಳು, ಶ್ರೀ ಮರುಳಸಿದ್ಧದೇವರು, ಶ್ರೀ ಚನ್ನಬಸವಸ್ವಾಮಿಗಳು, ಶ್ರೀ ಇಮ್ಮಡಿ ಮರುಳಸಿದ್ದರು, ಶ್ರೀ ಇಮ್ಮಡಿ ಹುಚ್ಚಪ್ಪಸ್ವಾಮಿಗಳು, ಶ್ರೀ ಮಹಾಲಿಂಗ ಸ್ವಾಮಿಗಳು, ಶ್ರೀ ದೇವಲಿಂಗಸ್ವಾಮಿಗಳು, ಶ್ರೀ ನಾಗಲಿಂಗಸ್ವಾಮಿಗಳು, ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು, ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು ಶಿವತತ್ತ್ವಗಳನ್ನು ಜನಮನದಲ್ಲಿ ಪ್ರಸಾರ ಮಾಡಿ ಅಮರರಾಗಿದ್ದು, ಪ್ರಸ್ತುತ ಮಠಾಧ್ಯಕ್ಷರಾಗಿರುವ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಈ ಮಠದ ಪರಂಪರೆಯಲ್ಲಿ ಬಂದಿರುವ ಗಮನಾರ್ಹ ಗುರುವರ್ಯರಾಗಿದ್ದಾರೆ.

* ವಿಜಯನಗರ, ಬೆಂಗಳೂರು-೫೬೦ ೦೪೦

ಶಿವಯೋಗ ಸಂಪನ್ನರು, ಧರ್ಮನಿಷ್ಠರು, ವೈರಾಗ್ಯ ಚಕ್ರವರ್ತಿಗಳಾದ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ತಮ್ಮ ದಿವ್ಯ ವ್ಯಕ್ತಿತ್ವದಿಂದ ಜನಮನಕ್ಕೆ ಹತ್ತಿರವಾದರು. ಬಡವ-ಬಲ್ಲಿದ, ಜಾತಿ-ಬೇಧಗಳು ಅವರಲ್ಲಿ ಕಿಂಚಿತ್ತು ಸುಳಿಯಲಿಲ್ಲ. **"ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ"** ಎಂಬಂತೆ ಭಕ್ತಸಮುದಾಯವನ್ನು ಯಾವುದೇ ಜಾತಿ-ಮತ ಭೇದಗಳನ್ನು ಮಾಡದೆ ಸರ್ವರನ್ನು ಅಪ್ಪಿಕೊಂಡರು, ಮಾತೃವಾತ್ಸಲ್ಯ ಸ್ವರೂಪಿಗಳಾಗಿದ್ದ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಸಕಲ ಪ್ರಾಣಿಗಳಲ್ಲಿ ದಯವಿರಬೇಕೆನ್ನುವ ಕಾರುಣ್ಯಮೂರ್ತಿ, ಮಠದಲ್ಲಿನ ಬಿಸಿಲಿನಲ್ಲಿ ಬಸವಳಿದ ಎಲ್ಲಾ ಮೂಕ ಪ್ರಾಣಿಗಳ ಮೈದಡವಿ ಅವುಗಳಿಗೆ ಮೇವು ಹಾಕಿ ಸಲುಹಿತ್ತಿದ್ದ ಅವರ ಅವಿನಾಭಾವ ಸಂಬಂಧಗಳು ಅಚ್ಚರಿಯುಂಟು ಮಾಡುತ್ತಿತ್ತು.

ಶಿವಸಂಪತ್ತಿನ ಬೆಳಕಿನಲ್ಲಿ ಬೆಳಗುತ್ತಿರುವ ಶ್ರೀ ದೇಗುಲ ಮಠಕ್ಕೆ ಸಮರ್ಥ ಉತ್ತರಾಧಿಕಾರಿ ನೇಮಿಸಬೇಕೆಂದು ನಿರ್ಧರಿಸಿದ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ತಮ್ಮ ಮಠದ ಭಕ್ತರೊಂದಿಗೆ ಚರ್ಚಿಸಿ ನಂತರ ಸಮರ್ಥ ವ್ಯಕ್ತಿಯೊಬ್ಬರನ್ನು ನೀಡುವಂತೆ ಸಿದ್ಧಗಂಗೆಯ ಜ್ಯೋತಿ, ಶಿವಯೋಗ ನಿಷ್ಠರಾದ ಪೂಜ್ಯ ಉದ್ದಾನ ಶಿವಯೋಗಿಗಳಲ್ಲಿ ಬಿನ್ನವಿಸಿಕೊಂಡಾಗ ತಮ್ಮ ಶಿಷ್ಯರೊಬ್ಬರಾದ ಶ್ರೀ ಕಾಳಪ್ಪ ಅವರನ್ನು ದೇಗುಲಮಠಕ್ಕೆ ಉತ್ತರಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಉದ್ದಾನ ಶಿವಯೋಗಿಗಳು ಅಪ್ಪಣೆ ಮಾಡಿ ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳ ಬಯಕೆಯನ್ನು ಈಡೇರಿಸಿದರು.

ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳ ಕೃಪಾಕಟಾಕ್ಷದಲ್ಲಿ ಬೆಳೆದು ಕಾರುಣ್ಯ ಮೂರ್ತಿಗಳಾದ ಪ್ರಸಕ್ತ ಸಿದ್ಧಗಂಗೆಯ ಸಿದ್ಧಪುರುಷ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ದೇಗುಲಮಠದ ಶ್ರೀ ಮಹಾಲಿಂಗಸ್ವಾಮಿಗಳು, ಕಂಚುಗಲ್ಲು ಬಂಡೇಮಠದ ಶ್ರೀ ಶಿವರುದ್ರಸ್ವಾಮಿಗಳು ಮತ್ತು ಅಂಕನಹಳ್ಳಿ ಗವಿಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯಸ್ವಾಮಿಗಳು ಇವರ್ಯಾರೂ ಒಬ್ಬರನ್ನು ಬಿಟ್ಟು ಒಬ್ಬರು ಇರದವರು, ಸದಾ ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಸಾಧನೆ ಮಾಡಿದವರು, ಸತತ ಸಾಧನೆಗಳಿಂದ ತಮ್ಮ ಮಠಗಳನ್ನು ಅವಿಮುಕ್ತ ಕ್ಷೇತ್ರಗಳನ್ನಾಗಿ ಮಾಡಿದ ಕೀರ್ತಿ ಇವರದು. ಬಯಸಿ ಬಂದದ್ದು ಅಂಗಭೋಗ, ಬಯಸದೇ ಬಂದದ್ದು ಲಿಂಗಭೋಗ ಎಂಬಂತೆ ತಮ್ಮ ಪಾಲಿಗೆ ಬಂದ ಕರ್ತವ್ಯಗಳನ್ನು ಮಾಡುವಲ್ಲಿ ಸಿದ್ಧಪುರುಷರಾದರು, ಶಿವಯೋಗದ ಸಂಪನ್ನರಾದರು. ಸೂರ್ಯಚಂದ್ರರಂತೆ ಬೆಳಕಿನ ಬೆಳದಿಂಗಳಾಗಿ ಆಕಾಶದಲ್ಲಿ ಧ್ರುವನಕ್ಷತ್ರದಂತೆ ಜನರ ಹೃದಯದಲ್ಲಿ ರಾರಾಜಿಸುವ ಜ್ಯೋತಿ ಸ್ವರೂಪರಾಗಿದ್ದಾರೆ.

ಶ್ರೀ ಉದ್ದಾನ ಶ್ರೀ ಶಿವಯೋಗಿವರ್ಯರ ಅಪಾರ ಕರುಣೆಯ ಆಶೀರ್ವಾದ ಪಡೆದಿದ್ದ ಶ್ರೀ ಕಾಳಪ್ಪನವರು ಪೂಜ್ಯ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳ ಕರಕಮಲ ಸಂಜಾತರಾಗಿ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು ಎಂಬ ನೂತನ ಅಭಿಧಾನದಿಂದ ೧೯೩೯ ಫೆಬ್ರವರಿಯಲ್ಲಿ ಶ್ರೀ ದೇಗುಲಮಠದ ಚರಪಟ್ಟಾಧಿಕಾರಿಗಳಾಗಿ ಅಧಿಕಾರ ಸ್ವೀಕರಿಸಿದ ಅವರು ಅಕ್ಕಮಹಾದೇವಿಯ ವಚನದಂತೆ ***"ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ, ಭವಬಂಧನವ ಬಿಡಿಸಿ ಪರಮಸುಖವ ತೋರಿದ ಗುರುವೆ, ಭವಿ ಎಂಬುದ ತೊಡೆದು ಭಕ್ತನೆಂದೆನಿಸಿದ ಗುರುವೆ ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಶ್ರೀ ಗುರುವಿಗೆ ಶರಣು"*** ಎಂಬಂತೆ ಪೂಜ್ಯ ನಿರ್ವಾಣಸ್ವಾಮಿಗಳ ಕೃಪಾಶೀರ್ವಾದಕ್ಕೆ ಪಾತ್ರರಾದರು. ಶ್ರೀಮಠದ ಬೆಳವಣಿಗೆಯ ಬಗ್ಗೆ ಗಮನವನ್ನು ಹರಿಸಿ ಶಿವಶರಣರ ತತ್ತ್ವಚಿಂತನೆಗಳನ್ನು ಮತ್ತು ಈ ಮಠದ ಗುರುಪರಂಪರೆಯ ಧರ್ಮದ ಯಜ್ಞವು ಜನರ ಬದುಕಿಗೆ ನಂದಾದೀಪದಂತೆ ಚಿರಕಾಲ ಬೆಳಗಬೇಕು, ಅರುವಿನ ಬೆಳಕಿನಲ್ಲಿ ಮುಕ್ತಿಯನ್ನು ಪಡೆಯಬೇಕೆಂದು ಶ್ರೀಮಠದಲ್ಲಿ ಧಾರ್ಮಿಕ ಚಟುವಟಿಕೆಗಳ ಜೊತೆಗೆ ಶಿವಾನುಭವ ಗೋಷ್ಠಿಗಳು, ವಿವಿಧ ಧಾರ್ಮಿಕ ಸಮಾರಂಭಗಳನ್ನು ಆರಂಭಿಸಿದರು. ಅವರ ಸಂಕಲ್ಪದ ಫಲದಿಂದ ಶ್ರೀ ದೇಗುಲಮಠವು ಇಂದಿಗೂ ತನ್ನ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ; ಸರ್ವತೋಮುಖವಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದೆ.

ಹಮ್ಮು-ಬಿಮ್ಮುಗಳಲ್ಲಿ, ಸೃಷ್ಠಿ ಸಮಸ್ತದಲ್ಲಿ ಬೆರೆತ ಅನಂತಾನಂತ ರೂಪವನ್ನು ಪ್ರತಿವಸ್ತುವಿನಲ್ಲಿ ಕಂಡರಸಿದ ಮಹಾನುಭಾವಿಗಳು ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು, ಪರುಷ ತಾಗಿದ ಲೋಹದಂತೆ ಪಾವಕರು, ಪರಿಶುದ್ಧರು, ಇವರ ಸನ್ನಿಧಿಯಲ್ಲಿದ್ದವರು ಪರಮ ಪವಿತ್ರರು. ತಮ್ಮದೇ ಆದ ಅನುಭಾವದ ಮೂಲಕ ನಡೆ-ನುಡಿಯಲ್ಲಿ ಏಕತೆಯನ್ನು ಸಾಧಿಸಿ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕವಾಗಿ ತ್ರಿವೇಣಿ ಸಂಗಮದಂತೆ ತಮ್ಮ ಸಂಕಲ್ಪಶಕ್ತಿಯಿಂದ ಅದ್ಭುತವಾದ ಸಾಧನೆ

ಮಾಡಿದರು. ದೇಗುಲಮಠವನ್ನು ಮಹಾಮನೆಯನ್ನಾಗಿಸಿ ತ್ರಿವಿಧ ದಾಸೋಹ ಕೇಂದ್ರವನ್ನಾಗಿ ಮಾರ್ಪಡಿಸಿದರು. ಹಸಿದು ಬಂದವರಿಗೆ ಶ್ರೀಮಠದಲ್ಲಿ ಪ್ರಸಾದ ನೀಡಿ ಹಸಿವನ್ನು ಇಂಗಿಸಿ, ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದ ಅವರು : ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ. ಶರಣರ ವಚನಂಗಳೇ ಜಪಂಗಳಯ್ಯ, ಸದುವಿನಯವೇ ಸದಾಶಿವನ ಒಲುಮೆಯಯ್ಯಾ ಎಂಬಂತೆ ಎಲ್ಲರೊಂದಿಗೆ ಬೆರೆತು, ಭಕ್ತರ ಬದುಕಿನ ದುಃಖದುಮ್ಮಾನಗಳಿಗೆ ಸಾಂತ್ವನ ಹೇಳಿ ಅವರಲ್ಲಿ ಪರಿವರ್ತನೆಯ ಹಾದಿಯನ್ನು ಹಿಡಿಯುವಂತೆ ಪ್ರಚೋದಿಸುವುದರ ಮೂಲಕ ಬಂದ ಜನತೆಯಲ್ಲಿ ಆತ್ಮಶಕ್ತಿಯನ್ನು ತುಂಬಿಸುತ್ತಿದ್ದರು.

ತಮ್ಮ ನಡೆ-ನುಡಿ ಗುಣಗಳಿಂದ ಘನ ವ್ಯಕ್ತಿತ್ವ ಪಡೆದ ಪೂಜ್ಯ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳು ಸದಾ ಹಸನ್ಮುಖಿಗಳು. ಸದೃಢಕಾಯದ ಬಿಳಿಯ ಬಣ್ಣ, ಹಣೆಯಲ್ಲಿ ತ್ರಿಪುಂಡ ಭಸ್ಮ, ಕೈಯಲ್ಲಿ ಬೆತ್ತ, ಮೈತುಂಬ ಹೊದೆದ ಸ್ವಚ್ಛವಾದ ಕಾವಿಬಟ್ಟೆ ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ತವಕ, ಮಿಗಿಲಾಗಿ ಅಪರಿಚಿತರನ್ನೂ ಸಹ ತಮ್ಮ ಅಂತಃಕರಣದಿಂದ ಅವಲೋಕಿಸುವ ಮನಸ್ಸು, ಬಸವಾದಿ ಶಿವಶರಣರು ತೋರಿದ ದಾರಿಯಲ್ಲೇ ಮುಂದುವರೆದು **"ದಯವೇ ಧರ್ಮದ ಮೂಲ"**ದ ನೆಲೆಯನ್ನು ತಮ್ಮ ಅನುಭವದಡಿಯಲ್ಲಿ ಕಂಡು ಕೊಂಡಿದ್ದ ಅವರು ಜ್ಞಾನಯೋಗಿಗಳಾಗಿರುವಂತೆ ಕರ್ಮಯೋಗಿಗಳೂ ಹೌದು, **"ರಾಟಿ-ಮೇಟಿಗಳಲ್ಲದಿದ್ದರೆ ಲೋಕದಾಟವೇ ಕೆಡಗು"** ಎಂಬಂತೆ **"ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು"** ಎಂಬ ಕ್ರಾಂತಿಕವಿ ಸರ್ವಜ್ಞನ ಸಂದೇಶ ದಂತೆ ಮಠದಲ್ಲಿನ ಎಲ್ಲಾ ಹೊಲ-ಗದ್ದೆಗಳ ಕಡೆ ಹೆಚ್ಚು ಗಮನವನ್ನು ಹರಿಸುವುದರ ಜೊತೆಗೆ; ಸ್ವತಃ ತಾವೇ ಕೃಷಿಯ ಉಸ್ತುವಾರಿಯನ್ನು ವಹಿಸಿ, ಸಂದರ್ಭಕ್ಕೆ ತಕ್ಕ ಬೆಳೆ ಬೆಳೆಯುತ್ತಿದ್ದ ರಲ್ಲದೆ ಗ್ರಾಮೀಣ ಪ್ರದೇಶದಲ್ಲಿ ಪ್ರವಾಸ ಮಾಡಿದ ಸಂದರ್ಭದಲ್ಲಿ ರೈತರ ಬೆಳೆಯ ಬಗ್ಗೆ ಸಮಾಲೋಚಿಸಿ ಅವರುಗಳಿಗೆ ಸಮಯೋಚಿತವಾದ ಸಲಹೆ ಸೂಚನೆಗಳನ್ನು ನೀಡುತ್ತಿದ್ದ ಹಿರಿಮೆ ಶ್ರೀಗಳವರದು.

ಶ್ರೀ ಮಹಾಲಿಂಗಸ್ವಾಮಿಗಳು ಇದ್ದ ಕಡೆಯಲ್ಲಿ ಭಕ್ತ ಸಮುದಾಯದ ಜೊತೆಗೆ ಅನೇಕ ಮಠಾಧಿಪತಿಗಳು, ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಸಮಾಜ ಬಂಧುಗಳು ಸೇರಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಅನೇಕ ವಿಷಯಗಳ ಬಗೆಗೆ ಚರ್ಚಿಸುತ್ತಿದುದ್ದನ್ನು ಗಮನಿಸಿದರೆ ಅದೊಂದು "ಅನುಭವ ಮಂಟಪ"ದಂತೆ ಗೋಚರಿಸುವಂತಹುದು. ಅನೇಕ ವಿಷಯಗಳ ಚರ್ಚೆಯ ನಂತರ ಶ್ರೀ ಮಹಾಲಿಂಗಸ್ವಾಮಿಗಳು ತಮ್ಮದೇ ಆದ ಸ್ಪಷ್ಟ ಮತ್ತು ಸರಳವಾದ ಭಾಷೆಯಲ್ಲಿ ವಿಷಯಗಳನ್ನು ಪ್ರಸ್ತಾವನೆ ಮಾಡಿದಾಗ ಅವರ ಗಂಭೀರವಾದ ಭಾವನೆಗಳನ್ನು ಗಮನಿಸಿದರೆ ಅವರೊಬ್ಬರು ಲೋಕಕಲ್ಯಾಣದ ಜವಾಬ್ದಾರಿಯನ್ನು ಹೊತ್ತ ಸಿದ್ಧಪುರುಷರಾಗಿದ್ದರು. ಶ್ರೀ ಮಹಾಲಿಂಗಸ್ವಾಮಿಗಳು ಪವಾಡ ಪುರುಷರೇನಲ್ಲ, ಜನಮೆಚ್ಚುವ ಅಥವಾ ಮಠಕ್ಕೆ ಆಕರ್ಷಿಸಲು ಯಾವ ಚಮತ್ಕಾರಳಿಗೆ ಕೈಹಾಕಲಿಲ್ಲ. ಅವರ ನಡೆ-ನುಡಿಗಳು ಮಂತ್ರವಾಗಿ, ಅವರು ಕೈಗೊಂಡ ಕಾರ್ಯಗಳು ಘನಸ್ವರೂಪಗಳಾಗಿದ್ದವು. ಸ್ವತಃ ಸಂಸಾರದಿಂದ ದೂರವಾದರೂ ಲೋಕಸಂಸಾರದ ಜವಾಬ್ದಾರಿಯನ್ನು ಹೊತ್ತವರಾಗಿ ದುಡಿದು, ಸ್ವಾವಲಂಬನೆಯ ಸಂಕೇತವಾಗಿ ಕಾಯಕ ತತ್ವವನ್ನು ತಮ್ಮ ನಿತ್ಯ ಜೀವನದಲ್ಲಿ ಆಚರಣೆಗೆ ತಂದು ಇತರರಿಗೆ ಮಾರ್ಗದರ್ಶಕ ರಾದರು.

ಶ್ರೀ ದೇಗುಲಮಠಕ್ಕೆ ವಿಪುಲ ಆದಾಯ ಬರುವಂತಹ ಆಸ್ತಿಗಳಾವುವು ಇಲ್ಲ. ಕೇವಲ ಭಕ್ತರ ಸಹಕಾರದಿಂದ ದಾನಿಗಳಿಂದ ಎಲ್ಲವೂ ನಡೆಯುತ್ತಿದೆ. ಇಂದಿಗೂ ಸಹ ಈ ಮಠಕ್ಕೆ ಭಕ್ತ ಸಮುದಾಯ ತಮ್ಮ ಹೃದಯ ಸಂಪನ್ನತೆಯಿಂದ ಉದಾರ ಹಸ್ತವನ್ನು ಚಾಚುತ್ತಲೇ ಬಂದಿದೆ. ಮಠದ ಬೆಳವಣಿಗೆಗೆ ಶ್ರೀ ಮಹಾಲಿಂಗ ಸ್ವಾಮಿಗಳವರ ಜೋಳಿಗೆಯೇ ದೊಡ್ಡ ಸಂಪತ್ತು. ಅದನ್ನು ಅಕ್ಷಯ ಪಾತ್ರೆಯನ್ನಾಗಿಸಿ ಶ್ರೀಮಠದಲ್ಲಿ ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿದ್ದಲ್ಲದೆ ಸಾಮಾಜಿಕ, ಧಾರ್ಮಿಕ ಚಟುವಟಿಕೆ ಗಳನ್ನು ಎಡಬಿಡದೆ ನಡೆಸಿ, ನಾಡಿನ ವಿವಿಧ ಕ್ಷೇತ್ರಗಳ ಗಣ್ಯರುಗಳನ್ನು ಗುರುತಿಸಿ ಅವರುಗಳ ಸೇವಾ ಕಾರ್ಯಗಳನ್ನು ಪ್ರಶಂಸಿಸಿ ಆಶೀರ್ವದಿಸುವ ವಿಶಾಲ ಭಾವನೆ ಅವರಲ್ಲಿತ್ತು. ಎಲ್ಲಾ ಧಾರ್ಮಿಕ-ವಿಧಾನಗಳ ಬಗ್ಗೆ ಮತ್ತು ಎಲ್ಲಾ ಧರ್ಮಿಯರುಗಳ ಬಗ್ಗೆ ಗೌರವ ಭಾವನೆ ಉಳ್ಳವರಾಗಿದ್ದ ಶ್ರೀಗಳು ಸರ್ವಧರ್ಮದ ಸಮನ್ವಯದ ಮೂರ್ತಿಯಾಗಿ, ಶ್ರೀಗಳು ನುಡಿದರೆ ಮುತ್ತಿನಹಾರದಂತೆ, ಬಸವಾದಿ ಶಿವಶರಣರ, ದಾರ್ಶನಿಕರ ಬಗ್ಗೆ ಸಭೆ ಸಮಾರಂಭಗಳಲ್ಲಿ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಹೇಳುವ ಮೂಲಕ ಶರಣ ಸಾಹಿತ್ಯ ಮತ್ತು ವೀರಶೈವ ಸಂಸ್ಕೃತಿಯನ್ನು ಮನೆ-ಮನಕ್ಕೆ ತಲುಪುವಂತೆ ಮಾಡಿದ ಕಾರ್ಯ ಅದ್ಭುತವಾದುದು.

ಹಿರಿಯ ಶ್ರೀಗಳಾದ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳ ಬಗ್ಗೆ ಅಪಾರ ಗೌರವ ಉಳ್ಳವರಾಗಿದ್ದರು. ಅವರ ಸೇವಾ ಕೈಂಕರ್ಯಗಳಿಗೆ ಕೈಗೂಡಿಸಿದರು. ಅವರುಗಳು ಸೂರ್ಯ ಚಂದ್ರರಂತೆ ಪರಿಮಳ-ಪುಷ್ಪದಂತೆ, ಗುರು-ಶಿಷ್ಯರುಗಳ ಸಂಬಂಧಗಳು ವರ್ಣಿಸಲು ಅಸಾಧ್ಯವಾದುದು, ಹಿರಿಯ ಶ್ರೀಗಳು ಸಹ ಶ್ರೀಮಠದ ಎಲ್ಲಾ ಜವಾಬ್ದಾರಿಗಳನ್ನು ಶ್ರೀ ಮಹಾಲಿಂಗ ಸ್ವಾಮಿಗಳೇ ನಿರ್ವಹಿಸಲು ಅನುವು ಮಾಡಿಕೊಡುತ್ತಿದ್ದರ ಫಲವಾಗಿ ಶಿಕ್ಷಣ ಪ್ರೇಮಿಗಳಾಗಿದ್ದ ಪೂಜ್ಯ ಶ್ರೀ ಮಹಾಲಿಂಗಸ್ವಾಮಿಗಳು, ಪೂಜ್ಯ ಶ್ರೀ ನಿರ್ವಾಣಸ್ವಾಮಿಗಳ ಶಿವಪೂಜಾಶಕ್ತಿ, ತಮ್ಮ ಸಂಕಲ್ಪಶಕ್ತಿ ಮತ್ತು ಶ್ರೀಮಠದ ಭಕ್ತರ ಭಕ್ತಿಗಳನ್ನು ಸಮೀಕರಿಸಿ ಶ್ರೀ ದೇಗುಲಮಠದಲ್ಲಿ ಶ್ರೀ ನಿರ್ವಾಣಸ್ವಾಮಿ ಕೃಪಾ ವಿದ್ಯಾಪೀಠವನ್ನು ಆರಂಭಿಸಿ, ಜಾತಿ-ಮತಗಳ ಭೇದವಿಲ್ಲದೆ ಗ್ರಾಮೀಣ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆ ಮಾಡಲು ಅವಕಾಶ ಕಲ್ಪಿಸಿ, ಅವರುಗಳಿಗೆ ಉಚಿತ ಊಟ, ವಸತಿ ನಿಲಯಗಳನ್ನು ಆರಂಭಿಸಿದರು. ಪ್ರಾಥಮಿಕ ಹಂತದಿಂದ ಹಿಡಿದು ಪ್ರೌಢಶಾಲೆಗಳು, ಪದವಿಪೂರ್ವ ಕಾಲೇಜು, ಅನಾಥಾಶ್ರಮ, ಸಂಸ್ಕೃತ, ವೇದ ಆಗಮ ಪಾಠಶಾಲೆಗಳು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಪ್ರೌಢಶಾಲೆಗಳನ್ನು ಆರಂಭಿಸಿ ಗ್ರಾಮೀಣ ಮಕ್ಕಳು ವಿದ್ಯಾವಂತರಾಗಲು ಅನುಕೂಲ ಮಾಡಿಕೊಟ್ಟ ಫಲವಾಗಿ ವಿದ್ಯಾರ್ಥಿಗಳು ಇಂದು ನಾಡಿನ ವಿವಿಧ ಹುದ್ದೆಗಳನ್ನು ಅಲಂಕರಿಸಿದ್ದಾರೆ. ಶ್ರೀ ಕ್ಷೇತ್ರದಲ್ಲಿನ ವಿದ್ಯಾರ್ಜನೆ ಮಾಡಿದ ವಿದ್ಯಾರ್ಥಿಗಳು ತಮ್ಮ ಕುಟುಂಬಕ್ಕೂ ಮತ್ತು ಮಠಕ್ಕೂ ಕೀರ್ತಿ ತಂದಿದ್ದಾರೆ. ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳವರ ಮಹತ್ ಸಾಧನೆಗೆ ಸಿದ್ಧಗಂಗೆಯ ತ್ರಿವಿಧ ದಾಸೋಹ ಮೂರ್ತಿಗಳಾದದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಮಾರ್ಗದರ್ಶನವನ್ನು ಮರೆಯುವಂತಿಲ್ಲ. ಸಮಾಜದ ಏಳ್ಗೆಗಾಗಿ ಮತ್ತು ಗ್ರಾಮೀಣದ ವಿದ್ಯಾರ್ಥಿಗಳ ಅಭ್ಯುದಯಕ್ಕೆ ತಮ್ಮನ್ನು ತಾವೇ ಸಮರ್ಪಿಸಿ ಕೊಂಡಿದ್ದ ಶ್ರೀ ಮಹಾಲಿಂಗಸ್ವಾಮಿಗಳು ಗಂಧದ ಕೊರಡಿನಂತೆ ತಮ್ಮ ಮಾನಸಿಕ ಆಯಾಸವನ್ನು ಲೆಕ್ಕಿಸದೇ ಸದಾ ತಮ್ಮ ಉಸಿರನ್ನು ಅಂಧಕಾರದಲ್ಲಿ ಮುಳುಗಿದ್ದ ಸಮಾಜವನ್ನು ಎಚ್ಚರಿಸಲು ಸದ್ವಿನಿಯೋಗಿಸಿದರು. ಅವರ ಬದುಕನ್ನು ತಿದ್ದುವಂತ ಜಂಗಮರಾಗಿ ಲೋಕ ಸಂಸಾರವೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಅಜ್ಞಾನದ ಕತ್ತಲೆಯನ್ನೋಡಿಸಿ, ಸುಜ್ಞಾನವೆಂಬ ಸುಧೆಯನ್ನುಣಿಸಿ ನಿರುಪಮ ನಿರಂಜನ ಪರಬ್ರಹ್ಮ ರೂಪವೇ ಆಗಿ, ಮಾನವ ರೂಪದಿಂದ ಧರೆಯೊಳಗೆ ಅವತರಿಸಿ, ಜ್ಞಾನದ ಹಸಿವಿದ್ದವರಿಗೆ ಸುಜ್ಞಾನದ ಧಾರೆಯೆರೆದು ಭವದುಃಖದ ಭಾದೆಯುನ್ನು ಕಳೆದು ಭಕ್ತರನ್ನುದ್ಧಾರ ಮಾಡಿದ ಶ್ರೀ ಮಹಾಲಿಂಗಸ್ವಾಮಿಗಳು ತಮ್ಮ ಎಲ್ಲಾ ಇಹಲೋಕದ ಸಾಧನೆಯ ಫಲವನ್ನು ಶ್ರೀ ದೇಗುಲಮಠದ ಸರ್ವ ಅಧಿಕಾರವನ್ನು ಈಗಿನ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳವರಿಗೆ ವಹಿಸಿಕೊಟ್ಟು ಶಿವನ ಬೆಳಕಿನ ಕಡೆ ಹೊರಟು ಮಹಾಲಿಂಗದಲ್ಲಿ ಲೀನರಾಗಿ, ಭಕ್ತ ಸಮೂಹಕ್ಕೆ ಮಹಾಬೆಳಕಾಗಿ ಪ್ರತಿನಿತ್ಯವೂ ಪ್ರಾತಃಸ್ಮರಣೆಯ ಪ್ರಾಂಜಲ ಜ್ಯೋತಿಯಾಗಿದ್ದಾರೆ.

❑

---

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ;
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ;
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ.

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ.
ಕೂಡಲ ಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ.

ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು,
ಕಂಗಳಿಚ್ಛೆಗೆ ಪರವಧುವ ನೆರೆವರು.
ಲಿಂಗಲಾಂಛನಧಾರಿಯಾದಲ್ಲಿ ಫಲವೇನು
ಲಿಂಗಪಥವ ತಪ್ಪಿ ನಡೆವವರು ?
ಜಂಗಮಮುಖದಿಂದ ನಿಂದೆ ಬಂದಡೆ
ಕೊಂಡ ಮಾರಿಂಗೆ ಹೋಹುದು ತಪ್ಪದು
ಕೂಡಲಸಂಗಮದೇವಾ.

– ಬಸವಣ್ಣ

ಶ್ರೀ ದೇಗುಲ ಮಠಾಧ್ಯಕ್ಷರಾದ

# ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು

– ಟಿ.ಆರ್. ಮಹಾದೇವಯ್ಯ*

ಕಾವೇರಿ ಪ್ರಾಂತವೆಂದೇ ಹೆಸರಾದ ಟಿ.ನರಸೀಪುರ ತಾಲ್ಲೋಕಿನ ಕುರುಬೂರು ಒಂದು ಸಣ್ಣಗ್ರಾಮ. ಅಲ್ಲಿದ್ದ ಆಚಾರ ಸಂಪನ್ನರೂ, ಸಜ್ಜನರೂ ಆದ ವೀರಭದ್ರಪ್ಪ ಮತ್ತು ತಾಯಪ್ಪ ದಂಪತಿಗಳಿಗೆ ೧೯೪೩ ಮೇ ತಿಂಗಳ ೨೦ನೇ ದಿನಾಂಕ ಶಿವರುದ್ರಸ್ವಾಮಿ ಜನಿಸಿದರು. ಈ ದಂಪತಿಗಳಿಗೆ ನಾಲ್ವರು ಪುತ್ರರೂ, ಒಬ್ಬ ಪುತ್ರಿಯೂ ಇದ್ದರು. ವ್ಯವಸಾಯವು ಅವರ ಮುಖ್ಯ ಕಸುಬು. ಕಷ್ಟಪಟ್ಟು ದುಡಿದು ಜೀವನ ನಡೆಸುವ ಕಾಯಕ ಜೀವಿಗಳಿದ್ದ, ಅಕೃತಕವಾದ ಗ್ರಾಮೀಣ ಪರಿಸರದಲ್ಲಿ ಮಗು ಬೆಳೆಯಿತು. ಪ್ರಾಥಮಿಕ ವಿದ್ಯಾಭ್ಯಾಸವು ಕುರುಬೂರಲ್ಲೇ ನಡೆಯಿತು. ಮುಂದಿನ ಓದು ಚಾಮರಾಜ ನಗರಲದಲ್ಲಿ ಸಾಗಿತು. ಅದೇ ತಾಲ್ಲೋಕಿನ ಮರಿಯಾಲದಲ್ಲಿ ಉತ್ತರದೇಶ ದಿಂದ ಬಂದಿದ್ದ ಶ್ರೀ ಮುರುಘೇಂದ್ರ ಸ್ವಾಮಿಗಳು ಒಂದು ಮಠವನ್ನು ಸ್ಥಾಪಿಸಿದರು. ಅವರು ದೇವನೂರು ದಾಸೋಹ ಮಠದ ಶ್ರೀ ಗುರುಮಲ್ಲೇಶ್ವರ ಮಹಾಸ್ವಾಮಿಗಳ ಸಮಕಾಲೀನ ರಾಗಿದ್ದರು. ಅದೇ ಮಠಕ್ಕೆ ಶಿವರುದ್ರಸ್ವಾಮಿಗಳ ದೊಡ್ಡಪ್ಪ ಶ್ರೀ ಮಹಾಂತಸ್ವಾಮಿಗಳು ಸ್ವಾಮಿಗಳಾದರು. ಕಾಲಾನಂತರ ಅವರ ದೊಡ್ಡಣ್ಣ ಶ್ರೀ ಸದಾಶಿವಸ್ವಾಮಿಗಳು ಅವರ ಉತ್ತರಾಧಿಕಾರಿ ಯಾದರು. ಶ್ರೀ ಶಿವರುದ್ರಸ್ವಾಮಿ ಆ ಮಠದಲ್ಲಿದ್ದುಕೊಂಡೇ ಚಾಮರಾಜನಗರದಲ್ಲಿ ತಮ್ಮ ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದರು.

ಹೀಗಾಗಿ ಶಿವರುದ್ರಸ್ವಾಮಿಗಳಿಗೆ ಶ್ರೀ ಮಠಗಳ ಸಂಪರ್ಕ ೧೯೫೩ ರಿಂದಲೂ ಇತ್ತು. ಜೊತೆಗೆ ಅವರು ನೆಲ್ಲಿಗೆರೆಯ ಮಠ, ದೇವನೂರಮಠ, ಸುತ್ತೂರುಮಠ, ಮಲ್ಲನಮೂಲೆ ಮೊದಲಾದ ಮಠಗಳಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಪರಿಪಾಠವಿತ್ತು. ಪರಿಸರ ಪ್ರಭಾವದಿಂದಾಗಿ ಕೃಷಿಕ ಮನೆತನದಲ್ಲಿ ಹುಟ್ಟಿದ ಶಿವರುದ್ರಸ್ವಾಮಿಗಳಿಗೆ ಅಧ್ಯಾತ್ಮ ಕೃಷಿಯ ಬಗ್ಗೆ ಆಸಕ್ತಿ ಬಂದುದು ಸಹಜವಾಗಿಯೇ ಇದೆ. ಎಸ್.ಎಸ್.ಎಲ್.ಸಿ. ಪಾಸಾದಾಗ ಅವರಿಗೆ ಮುಂದೆ ಓದಬೇಕೆಂಬ ಉತ್ಕಟ ಅಭಿಲಾಷೆ ಮೂಡಿತು. ಮೈಸೂರಿನ ಶಾರದಾವಿಲಾಸ ಕಾಲೇಜಿನಲ್ಲಿ ಪಿಯುಸಿ ತರಗತಿಗೆ ಸೇರಿದರು. ಅವರಿಗೆ ಇರಲು ಶ್ರೀ ಸುತ್ತೂರು ಮಠದ ಉಚಿತ ವಿದ್ಯಾರ್ಥಿ ನಿಲಯ ಆಶ್ರಯ ನೀಡಿತು. ಹೋಟೆಲು, ಸಿನಿಮಾ ಮೊದಲಾದ ಆಕರ್ಷಣೆಯಿಂದ ದೂರ ಉಳಿದು, ತಮ್ಮೆಲ್ಲ ಗಮನವನ್ನು ಓದಿನತ್ತ ಕೇಂದ್ರೀಕರಿಸಿ ಪಿಯುಸಿ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮುಂದೆ ಮಹಾರಾಜಾ ಕಾಲೇಜಿನಲ್ಲಿ ಬಿ.ಎಸ್ಸಿ. ತರಗತಿಗೆ ಸೇರಿದರು. ಅಲ್ಲಿ ಅರ್ಥಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದರು. ಅಶನ ಮತ್ತು ವಸತಿಗೆ ಮೈಸೂರಿನಲ್ಲಿದ್ದ ತುಂಬುನೇರಳೆ ಸಾಹುಕಾರ್ ಸಿದ್ಧಲಿಂಗಯ್ಯ ಉಚಿತ ವಿದ್ಯಾರ್ಥಿ ನಿಲಯವನ್ನು ಸೇರಿದರು.

ರಜದಲ್ಲಿ ಊರಿಗೆ ಹಿಂತಿರುಗಿ, ಮನೆಯವರೊಡನೆ ಕೃಷಿ ಕೆಲಸದಲ್ಲಿ ದುಡಿಯುತ್ತಿದ್ದರು. ೧೯೬೫ ರಲ್ಲಿ ಅವರ ತಂದೆ ತೀರಿಕೊಂಡರು. ಅದೇ ಹೊತ್ತಿಗೆ ಅವರಿಗೆ ಕೋರ್ಟಿನಲ್ಲಿ (ಲ್ಯಾಂಡ್ ಟ್ರಿಬ್ಯೂನಲ್) ೨ನೇ ದರ್ಜೆಯ ಗುಮಾಸ್ತನಾಗಿ ಕೆಲಸ ಸಿಕ್ಕಿತು. ೧೯೬೭ ರ ಡಿಸೆಂಬರ್‌ನಿಂದ ಅವರ ವೃತ್ತಿಜೀವನ ಆರಂಭಗೊಂಡಿತು. ತಾವಾಯಿತು, ತಮ್ಮ ಕೆಲಸವಾಯಿತು. ಬಾಡಿಗೆ ರೂಂ ಮಾಡಿ, ತಾವೇ ಅಡಿಗೆ ಮಾಡಿ ಊಟ ಮಾಡಿಕೊಂಡು ಕೆಲಸಕ್ಕೆ ಹೋಗುತ್ತಿದ್ದರು. ಸರಳ ಜೀವನಕ್ಕೆ ಒಗ್ಗಿಕೊಂಡ ಅವರ ಮನ ಹೆಚ್ಚಿನದೇನನ್ನು ಬಯಸಲಿಲ್ಲ. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುವ ಅಭ್ಯಾಸ ಅವರಿಗೆ ಬಂತು. ಸರಳ ಜೀವನ, ಉದಾತ್ತ ಚಿಂತನ ಅವರ ಧ್ಯೇಯಾ ದರ್ಶ ವಾಯಿತು.

ಶ್ರೀ ಶಿವರುದ್ರಸ್ವಾಮಿಗಳಿಗೆ ಬಾಲ್ಯದಿಂದಲೂ ಗುರುಲಿಂಗ ಜಂಗಮ ಪ್ರೇಮ, ಜೊತೆಗೆ ಮಠದ ಸಂಪರ್ಕದಿಂದಾಗಿ ಆಧ್ಯಾತ್ಮ ಶಿಕ್ಷಣದ ಬುನಾದಿ ಸಿಕ್ಕಿತ್ತು. ಧರ್ಮನಿಷ್ಠೆ, ಆಚಾರ ವಿಚಾರಗಳ ಬಗ್ಗೆ ಶ್ರದ್ಧೆ ಬೆಳೆದವು.

ಮರಿಯಾಲ ಮಠದ ಪೀಠಾಧಿಪತಿಗಳಾಗಿದ್ದ ಇವರ ಅಣ್ಣಂದಿರಾದ ಶ್ರೀ ಸದಾಶಿವ ಸ್ವಾಮಿಗಳು ತಮ್ಮ ಸಹೋದರ ಶಿವರುದ್ರಸ್ವಾಮಿಗಳೇ ಶ್ರೀಮಠದ ಉತ್ತರಾಧಿಕಾರಿಯೆಂದು

* ಸದಸ್ಯರು, ರಾಜ್ಯಭಾಷಾ ಆಯೋಗ, ಕಾವೇರಿ ಭವನ, ಬೆಂಗಳೂರು – ೫೬೦ ೦೦೯.

ಉಯಿಲು ಬರೆದಿದ್ದರು. ೧೯೭೦ ರಲ್ಲಿ ಅವರು ಲಿಂಗೈಕ್ಯರಾದಾಗ ಶ್ರೀ ಶಿವರುದ್ರಸ್ವಾಮಿಗಳು ಆ ಮಠದ ಉತ್ತರಾಧಿಕಾರಿಯಾಗ ಬೇಕಿತ್ತು. ಆದರೆ ಪರಿಸ್ಥಿತಿ ಅನುಕೂಲವಾಗಿರಲಿಲ್ಲ. ತಕರಾರು, ಸಂಘರ್ಷಗಳನ್ನು ಎದುರಿಸಬೇಕಾಯಿತು. ಕೋರ್ಟಿನ ಕಟ್ಟೆ ಹತ್ತಿ, ತಮಗೇ ಗೆಲುವಾದರೂ ಶ್ರೀ ಶಿವರುದ್ರಸ್ವಾಮಿಗಳು ಅಲ್ಲಿಗೆ ಹೋಗಲಿಲ್ಲ.

ಅದೇ ಹೊತ್ತಿಗೆ ಮಳವಳ್ಳಿ ತಾಲ್ಲೋಕಿನ ನೆಲ್ಲಿಗೆರೆಯಲ್ಲಿ ಸದ್ಭ್ಕರೊಬ್ಬರು ಮಠವೊಂದನ್ನು ಸ್ಥಾಪಿಸಲು ಒಂದು ಮನೆ ಮತ್ತು ಜಮೀನನ್ನು ಮರಿಯಾಲ ಮಠದ ಶ್ರೀ ಸದಾಸಿವ ಸ್ವಾಮಿಗಳಿಗೆ ದಾನವಾಗಿ ಕೊಟ್ಟಿದ್ದರು. ನೆಲ್ಲಿಗೆರೆಯ ಸದ್ಭಕ್ತರು ಶ್ರೀ ದೇಗುಲಮಠ ಹಾಗೂ ಶ್ರೀ ಸಿದ್ಧಗಂಗಾಮಠದ ಪೂಜ್ಯರುಗಳ ಸಲಹೆಯಂತೆ ಶ್ರೀ ಶಿವರುದ್ರಸ್ವಾಮಿಗಳು ಆ ಹೊಸ ಮಠಕ್ಕೆ ನಿಯೋಜಿತರಾದರು. ಆದರೆ ಅವರನ್ನು ಉತ್ತರಾಧಿಕಾರಿಯಾಗಿ ಆಶ್ರಮ ಪಟ್ಟಾಧಿಕಾರ ನಡೆಸುವ ಬಗ್ಗೆ ಜಿಜ್ಞಾಸೆಯುಂಟಾದಾಗ ಅಂಕನಹಳ್ಳಿ ಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯರು, ಬಂಡೇಮಠದ ಶ್ರೀ ಶಿವರುದ್ರ ಮಹಾಸ್ವಾಮಿಗಳು ಮಹಂತೇಶ್ವರ ಗದ್ದುಗೆ ಮಠದಲ್ಲಿ ವಿದ್ಯುಕ್ತವಾಗಿ ಸಂನ್ಯಾಸದೀಕ್ಷೆಯ ಕಾರ್ಯಕ್ರಮವನ್ನು ನಡೆಸಿದರು. ಶ್ರೀ ದೇಗುಲಮಠ ಮತ್ತು ಶ್ರೀ ಸಿದ್ಧಗಂಗಾ ಮಠದ ಪೂಜ್ಯರ ಆಶೀರ್ವಾದ ದೊರಕಿತು. ಸ್ವಾಮಿಗಳು ಸಿದ್ಧಗಂಗೆಯಲ್ಲಿ ಕೆಲವು ಕಾಲ ಇದ್ದು ಆಚಾರ ಸಂಪತ್ತನ್ನು ಗಳಿಸಿ ಧರ್ಮಪೀಠವೊಂದರ ಕರ್ಣಧಾರತ್ವ ವಹಿಸಲು ಅಣಿಯಾದರು. ಈ ಅವಧಿಯಲ್ಲಿ ಅವರಿಗೆ ಯಾವುದೇ ಪರಿಸ್ಥಿತಿಯನ್ನು ಎದುರಿಸುವ ಸಾಮರ್ಥ್ಯ, ಆತ್ಮವಿಶ್ವಾಸ, ಧೈರ್ಯಸ್ಥೈರ್ಯಗಳು ಮೈಗೂಡಿದವು.

ನೆಲ್ಲಿಗೆರೆಗೆ ಬಂದು ಮಠದ ಅಧಿಕಾರವನ್ನು ವಹಿಸಿಕೊಂಡಾಗ ಮಠವು ಶಿಥಿಲಾವಸ್ಥೆಯಲ್ಲಿತ್ತು. ಆ ಪ್ರದೇಶದ ಜನ ಸಂಸ್ಕಾರವಿಲ್ಲದ ಬರಡುಜೀವನ ನಡೆಸುತ್ತಿದ್ದರು. ಆ ಮಠವನ್ನು ಕಟ್ಟುವುದರ ಜೊತೆಗೆ ಜನಮನವನ್ನೂ ಕಟ್ಟಬೇಕಿತ್ತು. ಸುತ್ತೆಲ್ಲಾ ಅವಿದ್ಯಾವಂತರೇ ತುಂಬಿಕೊಂಡಿದ್ದರು. ಸ್ವಾಮಿಗಳು ತಮ್ಮ ಮಾನವಾಂತಃಕರಣದಿಂದ ವ್ಯವಹಾರಿಕ ಚಾಕಚಕ್ಯತೆಯಿಂದ ಜನರ ಮನವನ್ನು ಒಲಿಸಿಕೊಂಡರು. ವಿದ್ಯೆಯಿಲ್ಲದೆ ಬೆಳೆಯುತ್ತಿದ್ದ ಆ ಪ್ರದೇಶದ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುವ ಮೂಲಕ ಸಾಮಾಜಿಕ ಪರಿವರ್ತನೆ ತರುವ ಸಂಕಲ್ಪ ಮಾಡಿದರು. ಹಿರಿಯರನ್ನು ಒಪ್ಪಿಸಿ ಅನೇಕ ಮಕ್ಕಳನ್ನು ತಾವೇ ಚಾರ್ಜುಕೊಟ್ಟು ಸಿದ್ಧಗಂಗಾಮಠ, ಸುತ್ತೂರು ಮಠಗಳಿಗೆ ಕಳಿಸಿ ಓದಿಸಿದರು. ಮನೆಯಲ್ಲಿ ಒಬ್ಬ ಓದಿ ಬುದ್ಧಿವಂತನಾದರೆ, ಸಂಸ್ಕಾರವಂತನಾದರೆ ಇಡೀ ಕುಟುಂಬ ಪ್ರಭಾವಿತವಾಗುತ್ತದೆ ಎಂಬುದನ್ನು ಅವರು ಬಲ್ಲವರಾಗಿದ್ದರು. ಒಂದು ರೀತಿಯಲ್ಲಿ ಪೂಜ್ಯರು ಆ ಪ್ರದೇಶದ ಜನಮನವನ್ನು ಬೆಳಗಿದ ಸೂರ್ಯನಾದರು. ಆ ಗ್ರಾಮೀಣ ಪ್ರದೇಶದಲ್ಲಿ ಮಿಂಚಿನ ಹೊಳೆ ತುಳುಕಾಡಿತು. ಅಜ್ಞಾನದ ಪೊರೆ ಕಳಚಿದಂತಾಗಿ ಜನರು, ಸ್ವಾಮಿಗಳು ತಮ್ಮ ಉದ್ಧಾರಕ್ಕಾಗಿ ಬಂದ ಪರದೈವವೆಂದೇ ಬಗೆದರು. ಪೂಜ್ಯರು ಮಠವನ್ನು ಕಟ್ಟಬೇಕೆಂದು ಸಂಕಲ್ಪಿಸಿದಾಗ ಜನರೆಲ್ಲಾ ಒಗ್ಗೂಡಿ ತನುಮನಧನಗಳನ್ನು ನೀಡಿ ಕೆಲಸವನ್ನು ಆಗು ಮಾಡಿದರು. ಮಠಕ್ಕೆ ಒಂದು ನಿಶ್ಚಿತ ಆದಾಯವೇ ಇಲ್ಲದಿರುವಾಗ ಅಂಥ ದೊಡ್ಡಕೆಲಸವು ನೆರವೇರಿದ ರೀತಿ ಪೂಜ್ಯರ ಜನಪ್ರಿಯತೆಗೆ ಸಾಕ್ಷಿಯಾಯಿತು. ಬಹಳ ಮುತುವರ್ಜಿಯಿಂದ ಶ್ರೀಮಠದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಭಕ್ತರ ಸಹಕಾರದಿಂದ ಕೈಗೆತ್ತಿಕೊಂಡರು. ಕ್ಷಿಪ್ರದಲ್ಲೇ ಅನೇಕ ಜನಹಿತ ಕಾರ್ಯಗಳು ಅಲ್ಲಿ ನೆರವೇರಿದರು. ಅಲ್ಲದೆ ಅನೇಕ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಾಡಿನ ಅನೇಕ ಸ್ವಾಮಿಗಳನ್ನು, ಸಾಹಿತಿಗಳನ್ನು, ಜನಮುಖಂಡರನ್ನು ಶ್ರೀಮಠದ ಚಟುವಟಿಕೆಗಳ ಕಡೆ ಎಲ್ಲರ ಗಮನ ಸೆಳೆದರು. ಅದರಲ್ಲೂ ವರ್ಷಕ್ಕೊಮ್ಮೆ ಅವರು ನಡೆಸುತ್ತಿದ್ದ ಹಿರಿಯ ಗುರುಗಳಾಗಿದ್ದ ಮರಿಯಾಲ ಮಠದ ಶ್ರೀ ಶ್ರೀ ಮುರುಘರಾಜೇಂದ್ರ ಸ್ವಾಮಿಗಳವರ ಆರಾಧನಾ ಮಹೋತ್ಸವ ಒಂದು ಅರ್ಥಪೂರ್ಣ ಕಾರ್ಯಕ್ರಮವಾಗಿ ಜನಪ್ರಿಯವಾಯಿತು. ಶ್ರೀ ಸಿದ್ಧಗಂಗೆಯ ಪೂಜ್ಯರು, ಕನಕಪುರ ದೇಗುಲ ಮಠದ ಆಗಿನ ಪೂಜ್ಯರು ಈ ಸಮಾರಂಭಗಳಿಗೆ ಆಗಮಿಸುತ್ತಿದ್ದುದುಂಟು. ಸಮಾರಂಭದ ಅಚ್ಚುಕಟ್ಟಾದ ವ್ಯವಸ್ಥೆ, ಸ್ವಾಮಿಗಳ ಸಂಘಟನಾಶಕ್ತಿ, ಜನಾನುರಾಗಗಳ ಬಗ್ಗೆ ಅತಿಥಿಗಳ ಸಂತೋಷ ವ್ಯಕ್ತಪಡಿಸುತ್ತಿದ್ದುದಲ್ಲದೆ, ಶ್ರೀ ಶಿವರುದ್ರಸ್ವಾಮಿಗಳಂಥ ಸಮರ್ಥ ಸಂಘಟಕರಿಗೆ, ಯೋಜಕಸತ್ವವಿರುವ ಸ್ವಾಮಿಗಳಿಗೆ ಒಂದು ದೊಡ್ಡಮಠ ಬೇಕು ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದರು. ಆಗಲೇ ಅವರು ಬಹಳ ಜನರ ಗಮನಕ್ಕೆ ಬಂದದ್ದು.

ಅದು ಬೇಕು, ಇದು ಬೇಕು ಎಂಬ ಎದೆಗುದಿತನವೇಕೆ? ಯಾರ್‍ಯಾರಿಗೆ ಏನನ್ನು, ಎಷ್ಟನ್ನು, ಯಾವಾಗ ಕೊಡಬೇಕೆಂಬುದು ದೇವರಿಗೆ ಗೊತ್ತಿದೆ. ಅದಕ್ಕೆ ಏಕೆ ಕಾತರ, ವ್ಯಾಕುಲ ? ಪಾಲಿಗೆ ಬಂದದ್ದು ಪಂಚಾಮೃತ ಎನ್ನುವ ಶರಣರ ವಿವೇಕದ ನುಡಿ ಈ ಪೂಜ್ಯರಿಗೆ ಆದರ್ಶ. ಅವರಿಗೆ ಒದಗಿದ ಅವಗಡಗಳು ಅವರ ಅಂತಸ್ಸತ್ವವನ್ನು ಪರೀಕ್ಷೆಗೆ ಒಡ್ಡಿದವು ಎನ್ನಬಹುದು. ಒಂದು

ರೀತಿಯಲ್ಲಿ ಅವು ಅವರ ವ್ಯಕ್ತಿತ್ವವನ್ನು ಗಟ್ಟಿಗೊಳಿಸುತ್ತಾ ಹೋದವು. ಒಂದು ಕಂಬವನ್ನು ನಡುವವರು ಅದನ್ನು ಕುಳಿಯಲ್ಲಿಟ್ಟು ಮಣ್ಣುತುಂಬಿ ಅಳ್ಳಾಡಿಸುತ್ತಾ ಮತ್ತಷ್ಟು ಮಣ್ಣು ಕೂರಿಸುತ್ತಾ ಬಿಗಿಗೊಳಿಸುವಂತೆ ಸ್ವಾಮಿಗಳ ಬದುಕಿನಲ್ಲಿ ಒದಗಿದ ಒಂದೊಂದು ಕುತ್ತೂ ಕೂಡ ಅವರ ಆದರ್ಶಸ್ತಂಭವನ್ನು ಬಿಗಿಗೊಳಿಸುತ್ತಾ ಹೋದವು. ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವ ಶಕ್ತಿ, ಸಮಸ್ಯೆಗಳನ್ನು ಬಿಡಿಸುವ ಧೈರ್ಯ ಹಾಗೂ ಛಾತಿಗಳು ಅವರಿಗೆ ಅಳವಟ್ಟವು. ಅವರು ಪರಿಸ್ಥಿತಿಯ ಕೈಗೊಂಬೆಯಾಗದೆ ಒಳ್ಳೆಯದನ್ನು ಸಾಧಿಸುವ ದೃಢಮನಸ್ಸಿನ ಸಹನಾಮೂರ್ತಿಯಾದರು. ಅಷ್ಟೇ ಅಲ್ಲ, ಜನರನ್ನು ಸಂಘಟಿಸುವ, ಅವರಲ್ಲಿ ಧರ್ಮಪ್ರಜ್ಞೆಯನ್ನು ಅರಳಿಸುವ, ಸಮಾಜಕಟ್ಟುವ ಮಣಿಹದಲ್ಲಿ ಅವರನ್ನು ಸಾರ್ಥಕವಾಗಿ ದುಡಿಸಿಕೊಳ್ಳುವ ತಂತ್ರವೂ ಸಹ ಅವರಿಗೆ ಸಿದ್ಧಿಸಿತು.

೧೯೭೬ ರಲ್ಲಿ ಕನಕಪುರದ ಶ್ರೀ ದೇಗುಲಮಠದ ಇಮ್ಮಡಿ ಮಹಾಲಿಂಗಸ್ವಾಮಿಗಳು ಅಸ್ವಸ್ಥರಾದರು. ಶ್ರೀಮಠದ ಜವಾಬ್ದಾರಿ ಜಾಸ್ತಿಯಾಗಿತ್ತು. ಸಮರ್ಥ ಉತ್ತರಾಧಿಕಾರಿಗೆ ಅದನ್ನು ವಹಿಸಿ ತಾವು ಪೂರ್ಣವಾಗಿ ಲಿಂಗಪೂಜಾನುಸಂಧಾನದಲ್ಲಿ ತೊಡಬೇಕೆಂಬ ಇಚ್ಛೆಯನ್ನು ಶ್ರೀ ಸಿದ್ಧಗಂಗೆಯ ಸ್ವಾಮಿಗಳಲ್ಲಿ ವ್ಯಕ್ತಪಡಿಸಿ, ಆ ಬಗ್ಗೆ ಸಮಾಲೋಚನೆ ನಡೆಸಿದರು. ನೆಲ್ಲಿಗೆರೆ ಮಠದಲ್ಲಿರುವ ಸ್ವಾಮಿಗಳ ಪ್ರಸ್ತಾಪ ಬಂತು. ಅವರ ತಾಳ್ಮೆ ಆಚಾರ ಸಂಪನ್ನತೆ ಹಾಗೂ ಕರ್ತವ್ಯಶಕ್ತಿಗಳನ್ನು ಮೆಚ್ಚಿಕೊಂಡಿದ್ದ ಉಭಯ ಶ್ರೀಗಳು ಶ್ರೀ ಶಿವರುದ್ರಸ್ವಾಮಿಗಳಿಗೆ ಕರೆ ಕಳಿಸಿದರು. ದೇಗುಲ ಮಠದ ಉತ್ತಾರಾಧಿಕಾರಿಯಾಗಲು ಒಪ್ಪಿ ಕರ್ಪೂರ ಹಚ್ಚಿ ಗುರುಗಳಿಗೆ ನಮಸ್ಕಾರ ಹಾಕುವಂತೆ ಹೇಳಿದರು. ಅದರಂತೆ ಶ್ರೀ ಶಿವರುದ್ರಸ್ವಾಮಿಗಳು ದೀರ್ಘದಂಡ ಪ್ರಣಾಮ ಮಾಡಿದರು.

ಶ್ರೀಮಠಕ್ಕೆ ಸಮರ್ಥ ಉತ್ತರಾಧಿಕಾರಿ ಬೇಕೆಂಬ ಕೊರಗಿನಲ್ಲಿದ್ದ ಮಹಾಲಿಂಗಸ್ವಾಮಿಗಳ ಆರೋಗ್ಯ ಕ್ಷೀಣಿಸಿತ್ತು. ಕೊರಗು ನಿವಾರಣೆಯಾಗುತ್ತಿದ್ದಂತೆ ಅವರ ಆರೋಗ್ಯ ಸುಧಾರಿಸಿ ಚೇತರಿಸಿಕೊಳ್ಳಲಾರಂಭಿಸಿದರು. ೧೯೭೭ ರಲ್ಲಿ ಸಾಂಪ್ರದಾಯಿಕ ಪಟ್ಟಾಧಿಕಾರ ಮಹೋತ್ಸವ ವೈಭವದಿಂದ ನಡೆಯಿತು. ಶಾಸ್ತ್ರೋಕ್ತ ವಿಧಿವಿಧಾನಗಳ ನಂತರ ಶ್ರೀ ಶಿವರುದ್ರಸ್ವಾಮಿಗಳು ಶ್ರೀ ದೇಗುಲಮಠದ ಸ್ವಾಮಿಗಳ ಪರಂಪರೆಗೆ ಸೇರಿ **ಮೂರನೆಯ ನಿರ್ವಾಣ ಮಹಾಸ್ವಾಮಿ ಗಳಾದರು.**

ಎಂಥ ಅರ್ಥಪೂರ್ಣವಾದ ಪದ 'ನಿರ್ವಾಣ' ! ಆ ಪದದ ಅರ್ಥವ್ಯಾಪ್ತಿ ಮತ್ತು ದೀಪ್ತಿ ಅತ್ಯದ್ಭುತವಾದದ್ದು. ಅದಕ್ಕೆ ಶಾಂತಿ, ಮೋಕ್ಷ, ಪರಮಸುಖ, ಶೂನ್ಯ, ತಪಸ್ಸು, ದೇಹಾತ್ಮಗಳ ಅಂತಿಮವಾದ ಅಳಿವು, ಸಂಸಾರಕ್ಲೇಶಗಳ ನಿವೃತ್ತಿ, ಅಹಂಕಾರ-ಮಮಕಾರಗಳ ನಿವೃತ್ತಿ ಮೊದಲಾದ ಅರ್ಥಗಳಿವೆ. ನಿರ್ವಾಣವನ್ನು ಕುರಿತ ಶರಣ ಆಧ್ಯಯನ ಸೂತ್ರಪ್ರಾಯವಾದ ವಚನವೊಂದು ಇಲ್ಲಿ ಉಲ್ಲೇಖನೀಯ :

*ಹುಟ್ಟು ಹೊಂದುಗೆಟ್ಟುದೇ ನಿರ್ವಾಣ*
*ಮಲ ಮಾಯ ಕರ್ಮಂಗಳಳಿದುದೇ ನಿರ್ವಾಣ*
*ಶೋಕ ಮೋಹ ಹಿಂಗಿದುದೇ ನಿರ್ವಾಣ*
*ಇಹಪರದಾಸೆ ಬಿಟ್ಟುದೇ ನಿರ್ವಾಣ*
*ಇಂತಪ್ಪ ನಿರ್ವಾಣ ಸದ್ಯೋನ್ಮುಕ್ತಿ ಸೋಮೇಶ್ವರಾ.*

*(ಜನನ ಮರಣಗಳಿಲ್ಲದ್ದು. ಮಲತ್ರಯಂಗಳಳಿದದ್ದು, ದುಃಖ. ಮೋಹಗಳು ಇಲ್ಲದ್ದು, ಈ ಲೋಕ-ಪರಲೋಕದ ಆಸೆಗಳನ್ನು ಬಿಟ್ಟ ಸ್ಥಿತಿಯೇ ನಿರ್ವಾಣ. ಇದೇ ಸದ್ಯೋನ್ಮುಕ್ತಿ).*

ಕಿರಿಯ ಶ್ರೀಗಳ ಶ್ರದ್ಧಾಪೂರ್ವಕ ಉಪಚಾರದಿಂದ ಕಾಯಕಯೋಗಿ ಶ್ರೀ ಮಹಾಲಿಂಗ ಮಹಾಸ್ವಾಮಿಗಳ ಕ್ಷೀಣಿಸಿದ್ದ ಆರೋಗ್ಯ ಸುಧಾರಿಸುತ್ತಾ ಬಂತು. ಮತ್ತೆ ಅವರ ಸೇವಾವಕಾಶ ಹಾಗೂ ಮಾರ್ಗದರ್ಶನಗಳು ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳಿಗೆ ದೊರಕಿದವು. ಅಪಾರ ಅನುಭವದ ಗಣಿಯು ಉತ್ಸಾಹಭರಿತ ಚೇತನಕ್ಕೆ ತೆರೆದುಕೊಂಡಿತು. ಗುರುಗಳು ಶ್ರೀಮಠದ ಸಂಪ್ರದಾಯ, ರೀತಿ-ರಿವಾಜುಗಳ ಬಗ್ಗೆ ಮನವರಿಕೆ ಮಾಡಿಕೊಟ್ಟರು. ಶ್ರೀಮಠದ ಸೇವಾಕರ್ತರನ್ನು, ಶಿಷ್ಯ ಮಕ್ಕಳನ್ನು ಪರಿಚಯ ಮಾಡಿಕೊಟ್ಟರು. ಅತ್ಯಲ್ಪಕಾಲದಲ್ಲೇ ಇವರ ಗುರು-ಶಿಷ್ಯ ಸಂಬಂಧ ಎಷ್ಟು ಅನ್ಯೋನ್ಯವಾಯಿತೆಂದರೆ ಗುರುಗಳು ಬಾಯಿಬಿಟ್ಟು ಹೇಳುವುದರೊಳಗೇ ಶಿಷ್ಯ ಆ ಯೋಜನೆಯ ರೂಪುರೇಷೆಯನ್ನು ಸಿದ್ಧಪಡಿಸಿರುತ್ತಿದ್ದರು. ಹಳೆಬೇರು, ಹೊಸ ಚಿಗುರು ಸೇರಿ ಮರವು ಸೊಗಸುವಂತೆ ಎರಡು ಶಕ್ತಿಗಳೂ ಒಂದುಗೂಡಿ ಶ್ರೀಮಠದ ಭವಿಷ್ಯವು ಉಜ್ವಲವಾಗುವಂತೆ ರೂಪಿಸಿದವು. ಶ್ರೀ ಗುರು ಮಹಾಲಿಂಗಸ್ವಾಮಿಗಳು ತಾವು ಸಾಕ್ಷಾತ್ಕಾರಿಸಿಕೊಂಡಿದ್ದ ಎಲ್ಲಾ ಆಧ್ಯಾತ್ಮಿಕ ಶಕ್ತಿಯನ್ನು ವ್ಯವಹಾರ ಜ್ಞಾನವನ್ನು ಶ್ರೀ ನಿರ್ವಾಣಮಹಾಸ್ವಾಮಿಗಳಿಗೆ ಧಾರೆಯೆರೆದರು.

ಶ್ರೀ ಮುಮ್ಮಡಿ ನಿರ್ವಾಣಮಹಾಸ್ವಾಮಿಗಳು ಸ್ನಾತಕ ಮಟ್ಟದವರೆಗೆ ಕಾಲೇಜು ಶಿಕ್ಷಣ ಪಡೆದಿದ್ದರೂ ಅವರು ಬೆಳೆದ ಪರಿಸರ ಪ್ರಭಾವದಿಂದ, ಹುಟ್ಟಿನಿಂದ ಬಂದ ಸಾತ್ವಿಕಗುಣದಿಂದ,

ತಮಗೆ ಒದಗಿದ ಸಂಪರ್ಕದಿಂದಾಗಿ ಮೈಗೆ ಕಾವಿ ಧರಿಸುವ ಮುಂಚೆಯೇ ಮನಸ್ಸಿಗೆ ಕಾವಿ ಹೊದ್ದಿದ್ದರು. ಧಾರ್ಮಿಕ ಆಚಾರ–ವಿಚಾರಗಳಲ್ಲಿ, ಸಾಮಾಜಿಕ ನಡಾವಳಿಗಳಲ್ಲಿ ಅವರು ಚೆನ್ನಾಗಿ ಪಳಗಿದರು; ಪರಿಶುದ್ಧ ಜೀವನದ ಕ್ರಿಯಾಮೂರ್ತಿ ಯಾಗಿದ್ದು. ಬಂಗಾರದ ಹೂವಿಗೆ ಪರಿಮಳ ಮೂಡುವಂತೆ ಸಿದ್ಧಗಂಗೆಯ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಹಾಗೂ ದೇಗುಲಮಠದ ಶ್ರೀ ಶ್ರೀ ಇಮ್ಮಡಿ ಮಹಾಲಿಂಗ ಮಹಾಸ್ವಾಮಿಗಳ ಕಣ್ಣರಿಕೆಯಲ್ಲಿ ತರಬೇತಿ ಹೊಂದಿ ಅವರ ಅನುಗ್ರಹಕ್ಕೆ ಪಾತ್ರರಾಗಿ ತಮ್ಮ ವ್ಯಕ್ತಿತ್ವಕ್ಕೆ ದಿವ್ಯಪ್ರಭೆಯನ್ನು ದೊರಕಿಸಿಕೊಂಡರು.

ಶ್ರೀ ಮಠದ ಚಟುವಟಿಕೆಗಳು ಅಧಿಕಗೊಂಡವು. ಶ್ರೀಮಠದಲ್ಲಿ ಪ್ರಾಚೀನಕಾಲದ ಋಷ್ಯಾಶ್ರಮದ ಪವಿತ್ರ ವಾತಾವರಣವನ್ನು ಮುಂದುವರಿಸಿಕೊಂಡು ಬರುವ ಸರ್ವ ಪ್ರಯತ್ನವನ್ನು ಮಾಡಿದರು. ಆಧುನಿಕ ಜೀವನದ ಗಲಿಬಿಲಿಯಿಂದ ಕ್ಷೋಭೆಗೊಂಡ ಜನರ ಮನಸ್ಸಿಗೆ ಪ್ರಶಾಂತತೆಯನ್ನು ಅದು ಒದಗಿಸಬೇಕಾಗಿತ್ತು. ಹೊಟ್ಟೆಗೆ ಅನ್ನ, ಬುದ್ಧಿಗೆ ಬೆಳಕು, ಮನಕ್ಕೆ ಪ್ರಸನ್ನತೆಗಳೆಂಬ ತ್ರಿವಿಧ ದಾಸೋಹವನ್ನು ಪೂರೈಸಬೇಕಾಗಿತ್ತು. ಇದರ ಜೊತೆಗೆ ಮಕ್ಕಳಿಗೆ ಕಾಲೋಚಿತ ವಾದ ಜ್ಞಾನ–ಸುಜ್ಞಾನ–ತಂತ್ರಜ್ಞಾನವನ್ನು ನೀಡುವ ವ್ಯವಸ್ಥೆಯ ಅಗತ್ಯವನ್ನು ಅವರು ಕಂಡುಕೊಂಡರು. ಕಷ್ಟಪಟ್ಟು ಓದಿದ ಮಕ್ಕಳು ಮುಂದೆ ನೌಕರಿಗಾಗಿ ಸುತ್ತಾಡುವ ಬದಲು ತಮ್ಮ ಕಾಲ ಮೇಲೆ ನಿಂತು ತಮ್ಮ ಜೀವನೋಪಾಯವನ್ನು ಕಂಡುಕೊಳ್ಳಲು ಸಹಾಯಕವಾಗುವ ತಾಂತ್ರಿಕ ವೃತ್ತಿಪರ ತರಬೇತಿ ನೀಡುವ ಶಾಲೆಗಳನ್ನು ತೆರೆಯುವ ಆಲೋಚನೆಯನ್ನು ಪೂಜ್ಯರು ಮಾಡಿದ್ದು ಅವರ ಮುಂದಾಲೋಚನೆಯ ಫಲವಾಗಿದೆ. ಇದರ ಸಲುವಾಗಿ ಅವರು ವಿಶೇಷ ಕಾಳಜಿ ವಹಿಸಿದರು. ಶ್ರೀಮಠದಲ್ಲಿರುವ ಶಿಕ್ಷಣ ಸಂಸ್ಥೆಗಳಲ್ಲದೆ ನಾಡಿನ ನಾನಾ ಕಡೆ ಗ್ರಾಮೀಣ ಪ್ರದೇಶದಲ್ಲಿ ಶಾಲಾ ಕಾಲೇಜುಗಳನ್ನು ತೆರೆದು ಹಳ್ಳಿಗಾಡಿನ ಬಡಮಕ್ಕಳ, ಅದರಲ್ಲೂ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಒದಗಿಸಿದರು. ಅವರ ಇಂಥ ಉದಾರ ಧೋರಣೆ ಹಾಗೂ ಪ್ರೋತ್ಸಾಹದಿಂದಾಗಿ ವಿದ್ಯಾರ್ಥಿನಿಲಯ ಹಾಗೂ ಅನಾಥಾಲಯದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಅಲ್ಲಿನ ಮಕ್ಕಳಿಗೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಲು ಸ್ವಾಮಿಗಳ ಮಾತೃಹೃದಯ ಸದಾ ತುಡಿಯು ತ್ತಿರುತ್ತದೆ.

ಬಡ ವಿದ್ಯಾರ್ಥಿಗಳನ್ನು, ದೀನ ದಲಿತರನ್ನು ಕಂಡರೆ ಅವರ ಅಂತಃಕರಣ ಕರಗುತ್ತದೆ. ಅವರ ಬಗ್ಗೆ ಹೆಚ್ಚಿನ ಕಾಳಜಿ ವಹಿಸುತ್ತಾರೆ. ಪೂಜ್ಯರು ನಿಷ್ಠುರವಾಗಿ ಮಾತನಾಡಿ ಯಾರ ಮನಸ್ಸನ್ನು ನೋಯಿಸುವುದಿಲ್ಲ. ತಪ್ಪು ಮಾಡಿದವರಿಗೆ ತಿದ್ದಿಕೊಳ್ಳಲು ಅವಕಾಶ ಕೊಡುತ್ತಾರೆ. ಕೆಲವು ಸಂದರ್ಭಗಳಲ್ಲಿ ವಿದ್ಯಾರ್ಥಿಗಳು ಅವರು ಒಂಟಿಯಾಗಿದ್ದಾಗ ಬಂದು ತಮ್ಮ ಕಷ್ಟಗಳನ್ನು ತೋಡಿಕೊಳ್ಳುತ್ತಾರೆ. ಅದಕ್ಕೆ ಸ್ಪಂದಿಸಿದ ಪೂಜ್ಯರು ಯಾರಿಗೂ ತಿಳಿಯದಂತೆ ಸಹಾಯ ಮಾಡುವರು. ಅವರ ಇಂಥ ಔದಾರ್ಯವನ್ನು ಕೆಲವು ವಿದ್ಯಾರ್ಥಿಗಳು ದುರುಪಯೋಗ ಪಡಿಸಿಕೊಂಡದ್ದೂ ಉಂಟಂತೆ! ಇದು ಗೊತ್ತಾಗಿ ಆತ್ಮೀಯರು ತಮ್ಮ ಬಳಿ ಬಂದು ಗೋಳು ಹೇಳಿಕೊಳ್ಳುವವರು ನಿಜವಾಗಿ ತೊಂದರೆಗೆ ಸಿಕ್ಕಿದವರಲ್ಲ. ನಿಮ್ಮ ಅನುಕಂಪದ ದುರುಪಯೋಗ ವಾಗುತ್ತಿದೆ ಎಂದು ಹೇಳಿದರೆ ಪೂಜ್ಯರು ಏನೂ ಉತ್ತರ ಕೊಡದೆ ನಕ್ಕು ಸುಮ್ಮನಾಗುತ್ತಾರೆ.

ಪೂಜ್ಯರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರ ಒಂದು ಮಾದರಿ. ಅಲ್ಲಿನ ಕುಲಪತಿಗಳಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶರಣರ ಕಲ್ಪನೆಯ ಮಾನವ ಹಿತಸಾಧನೆಗೆ ಮಾರ್ಗದರ್ಶಿ, ತೋರುಗಂಬ. ಅಲ್ಲಿ ನಡೆಯುವ ನಿರಂತರ ದಾಸೋಹ, ಸಂಸ್ಕೃತ ಕಲಿಕೆಗೆ ಅವಕಾಶ, ಶ್ರಮದಾನ, ಸಾಮೂಹಿಕ ಪ್ರಾರ್ಥನೆ, ಸಂಸ್ಕೃತಿ ಸಂವರ್ಧನೆಯ ಚಟುವಟಿಕೆಗಳು, ಅನಾಥ ಮಕ್ಕಳ ಹಾಗೂ ಕುರುಡು ಮಕ್ಕಳ ಬಾಳಿಗೆ ಆಶ್ರಯ ನೀಡುವುದು ಮೊದಲಾದ ಕಲ್ಯಾಣಕಾರಕ ಸೇವೆಗಳನ್ನು ಶ್ರೀ ದೇಗುಲ ಮಠದಲ್ಲೂ ಅಳವಡಿಸಲಾಗಿದ್ದು, ಆ ಬಗ್ಗೆ ಒಂದು ಸ್ಥಾಯಿ ವ್ಯವಸ್ಥೆಯನ್ನು ಮಾಡಿರುವುದು ಕಂಡುಬರುತ್ತೆ. ಅಂತೆಯೇ ಶ್ರೀಮಠವು ಈ ಭಾಗದಲ್ಲಿ ಎರಡನೆಯ ಶ್ರೀ ಸಿದ್ಧಗಂಗಾ ಕ್ಷೇತ್ರವಾಗಿ ಬೆಳಗುತ್ತಿದೆ.

ಅದರಂತೆ ಪೂಜ್ಯರು ಶ್ರೀಮಠದ ಕೃಷಿ ಕ್ಷೇತ್ರದಲ್ಲೂ ಸಹ ಸುಧಾರಣೆಯನ್ನು ತಂದಿದ್ದಾರೆ. ಆಧುನಿಕ ರೀತಿಯ ವ್ಯವಸಾಯ ಪದ್ಧತಿಯನ್ನು ಜಾರಿಗೊಳಿಸಿದ್ದಾರೆ. ಟ್ರ್ಯಾಕ್ಟರ್ ಮೊದಲಾದ ಉಪಕರಣಗಳನ್ನು ಒದಗಿಸಿದ್ದಾರೆ. ಶ್ರೀಮಠವು ಸಾಂಪ್ರದಾಯಿಕ ವ್ಯವಸಾಯದಿಂದಲೇ ಸಾಕಷ್ಟು ಪ್ರಗತಿ ಸಾಧಿಸಿತ್ತು. ಈಚೆಗೆ ವಾಣಿಜ್ಯ ಬೆಳೆಯನ್ನು ಬೆಳೆಯುವ ಆಲೋಚನೆ ಮಾಡಿ ಅರಿಶಿನ ಬೆಳೆದರು. ಪರಿಣಾಮವಾಗಿ ಒಂದು ವರ್ಷ ೨೫೦ ಕ್ವಿಂಟಲ್ ಅರಿಶಿನದ ಇಳುವರಿ ಪಡೆದು ದಾಖಲೆ ಸ್ಥಾಪಿಸಿದ್ದುಂಟು. ಕರ್ನಾಟಕ ಸರ್ಕಾರದ ಕೃಷಿ ಇಲಾಖೆ ಈ ಸಾಧನೆಗೆ ಪುರಸ್ಕಾರ ನೀಡಿ ಪ್ರೋತ್ಸಾಹಿಸಿದೆ. ವ್ಯವಸಾಯದ ಜೊತೆಗೆ ಹೈನುಗಾರಿಕೆಯನ್ನು ಸಹ ಅಭಿವೃದ್ಧಿಗೊಳಿಸಲಾಗಿದೆ. ಬಡಮಕ್ಕಳ

ವಿದ್ಯಾಭ್ಯಾಸಕ್ಕೆ, ದಾಸೋಹದ ಖರ್ಚಿಗೆ ಮಠದ ಹುಟ್ಟುವಳಿಯನ್ನು ಹೆಚ್ಚಿಸುವ ಯೋಜನೆಗಳನ್ನು ಕೈಗೆತ್ತಿಕೊಂಡಿದ್ದಾರೆ.

ಶ್ರೀಮಠದಲ್ಲಿ ಜನಜಾಗೃತಿಯ ಕಾರ್ಯಕ್ರಮಗಳು ನಿರಂತರವಾಗಿ ನಡೆಯುವ ವ್ಯವಸ್ಥೆಯಾಗಿದೆ. ದೇಶದ ನಾನಾ ಕಡೆಯಿಂದ ವಿದ್ವಾಂಸರನ್ನು, ಕಲಾವಿದರನ್ನು ಕರೆಸಿ ಜನರಿಗೆ ಹೊಸ ಹೊಸ ವಿಚಾರಗಳು ಹಾಗೂ ಮನರಂಜನೆಯು ಒದಗುವಂತೆ ವಿಧಾಯಕವಾದ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದಾರೆ. ಅವರು ಬಿಜಾಪುರದ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ದೇಶ್ವರಸ್ವಾಮಿಗಳವರ ಆದ್ಯಾತ್ಮ ಪ್ರವಚನವನ್ನು ತಿಂಗಳುಗಟ್ಟಲೆ ನಡೆಸಿದ್ದನ್ನು ಉದಾಹರಿಸಬಹುದು.

ಮಠಗಳೆಂದರೆ ಜನಮನವನ್ನು ತಿಳಿಗೊಳಿಸುವ, ಅವರ ಬದುಕಿಗೆ ನೆಮ್ಮದಿ ತರುವ ಪಾವನ ನೆಲೆಗಳು. ಅವು ಧರ್ಮದ ನೆಲೆವೀಡಿದ್ದಂತೆ ಸಾಮಾಜಿಕ ಜಾಗೃತಿಯ ತಾಣಗಳೂ, ಸಂಘಟನೆಗಳ ಶಕ್ತಿಕೇಂದ್ರಗಳೂ ಆಗಿವೆ. ಶ್ರೀ ದೇಗುಲಮಠವು ಅಂಥ ಹೆಗ್ಗಳಿಕೆಗೆ ಪಾತ್ರವಾದದ್ದು ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳ ಜನಪರ ಕಾಳಜಿಯಿಂದಾಗಿ ಎಂಬ ಮಾತಿನಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಪೂಜ್ಯರು ಒಡೆದ ಮನಗಳನ್ನು ಒಂದುಗೂಡಿಸುವ ಸಾರ್ಥಕ ಕೆಲಸವನ್ನು ಮಾಡುತ್ತಿದ್ದಾರೆ. ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ನೀಡುತ್ತಿದ್ದಾರೆ. ಶ್ರೀಮಠವು ಒಂದು ನ್ಯಾಯಪೀಠವಾಗಿ ಪೂಜ್ಯ ಶ್ರೀ ನಿರ್ವಾಣ ಮಹಾಸ್ವಾಮಿಗಳು ನ್ಯಾಯಾಧೀಶರಾಗಿ ನಿಷ್ಪಕ್ಷಪಾತವಾದ ತೀರ್ಪುನೀಡಿ ಜನರ ಮನಸ್ಸನ್ನು ಪ್ರಸನ್ನಗೊಳಿಸಿದ್ದಾರೆ. ಜನರಿಗೆ ಸಹಬಾಳ್ವೆಯ ಮಹಾತತ್ವವನ್ನು ಮನವರಿಕೆ ಮಾಡಿದ್ದಾರೆ. ಮುಖ ಗಂಟುಹಾಕಿಕೊಂಡೋ, ಮುಖ ಸಪ್ಪಗೆ ಮಾಡಿಕೊಂಡೋ, ಲೋಕದ ಎಲ್ಲಾ ನೋವೂ ತನಗೇ ಬಂದಿದೆಯೆಂದು ಬಸವಳಿದು ಬಂದ ಜನರನ್ನು ಕರುಣಾಳು ಪೂಜ್ಯರ ಒಂದು ನಗೆ ನಿರಾಳವಾಗಿಸಿ ಬಿಡುತ್ತದೆ. ಜನರು ಮಂತ್ರಮುಗ್ಧರಾಗಿ ಅವರಿಗೆ ಶರಣಾಗುತ್ತಾರೆ. ಅಂಥ ಮಾಂತ್ರಿಕ ಶಕ್ತಿ ಪೂಜ್ಯರ ತೇಜಃಪೂರ್ಣ ವ್ಯಕ್ತಿತ್ವಕ್ಕೆ ಕೂಡಿ ಬಂದಿದೆ.

ಪೂಜ್ಯರು ಉಳಿದ ಎಲ್ಲಾ ಮಠಗಳೊಡನೆ ಸೌಹಾರ್ದಯುತ ಸಂಬಂಧವನ್ನು ಹೊಂದಿದ್ದಾರೆ. ಅದು ಚಿಕ್ಕದಿರಲಿ, ದೊಡ್ಡದಿರಲಿ, ಮಠಗಳ ಸಂಪರ್ಕವಿರಿಸಿಕೊಂಡಿದ್ದಾರೆ. ಎಲ್ಲ ಸ್ವಾಮಿಗಳೂ ಕೂಡ ಮಾನವ ಕಲ್ಯಾಣಕ್ಕಾಗಿಯೇ ತಮ್ಮ ತಮ್ಮ ಶಕ್ತ್ಯಾನುಸಾರ ಶ್ರಮಿಸುತ್ತಿದ್ದಾರೆ. ಅವರಿಗೆ ಸ್ಫೂರ್ತಿ ನೀಡುವುದು, ಅವಶ್ಯವಾದಲ್ಲಿ ನೆರವಾಗುವುದು ತಮ್ಮ ಕರ್ತವ್ಯವೆಂದೇ ಅವರು ಭಾವಿಸುತ್ತಾರೆ. ಯಾವುದೇ ಮಠದಲ್ಲಿ ಸಮಸ್ಯೆಗಳುಂಟಾದಲ್ಲಿ ಅದನ್ನು ಬಗೆಹರಿಸಿ ಅದರ ಸೇವೆ ನಿರುಪಾಧಿಕವಾಗಿ ನಡೆಯುವಂತೆ ಶ್ರಮಿಸಿರುವುದೂ ಉಂಟು. ಹೀಗಾಗಿ ಎಲ್ಲಾ ಮಠಗಳವರೂ ಸಹ ಅವರನ್ನು ಮಾತೃ ಹೃದಯದ ಪೂಜ್ಯರೆಂದು ಆದರಿಸುತ್ತಿದ್ದಾರೆ; ಅವರ ಒತ್ತಾಸೆ, ಮಾರ್ಗದರ್ಶನ, ಪ್ರೋತ್ಸಾಹಗಳಿಗಾಗಿ ಹಾತೊರೆಯುತ್ತಾರೆ. ತಮ್ಮ ಶ್ರೀಮಠದಲ್ಲಿಯೇ ಉಳಿದ ಎಲ್ಲಾ ಮಠಗಳೂ ಬೆಳೆಯಬೇಕು. ಜನಕಲ್ಯಾಣ ಮಣಿಹ ನಿರಂತರವಾಗಿ ನಡೆಯಬೇಕು ಎಂಬುದು ಅವರ ಆಶಯ. ಅವರ ಇಂಥಾ ನಿಲವು ಅನನ್ಯವಾಗಿ ಕಾಣುತ್ತದೆ.

ಮಳವಳ್ಳಿ ತಾಲ್ಲೋಕು ಹೆಬ್ಬಣಿ ಗ್ರಾಮದಲ್ಲಿ, ಗ್ರಾಮಸ್ಥರ ಅಪೇಕ್ಷೆಯಂತೆ ಶ್ರೀದೇಗುಲಮಠದ ಶಾಖಾಮಠ 'ಶ್ರೀ ನಿರ್ವಾಣೇಶ್ವರ ವಿರಕ್ತಮಠ' ೨೦೦೧ ರಲ್ಲಿ ಆರಂಭವಾದುದು ಒಂದು ಚಾರಿತ್ರಿಕ ಘಟನೆ. ಪೂಜ್ಯ ಮುಮ್ಮಡಿ ನಿರ್ವಾಣ ಸ್ವಾಮಿಗಳು ಚಿ. ಶಂಭುಲಿಂಗ ಸ್ವಾಮಿ ಎಂಬ ವಟುವಿಗೆ ವಿರಕ್ತಾಶ್ರಮ ಚರಪಟ್ಟಾಧಿಕಾರವನ್ನು ಅನುಗ್ರಹಿಸಿದರು. ದಾನಿಗಳಾದ ಶ್ರೀ ಹೆಚ್.ಬಿ. ಗುರುಮಲ್ಲಪ್ಪನವರು ಈ ಶಾಖಾಮಠಕ್ಕೆ ಅಗತ್ಯವಾದ ನಿವೇಶನ ಹಾಗೂ ಕಟ್ಟಡಗಳನ್ನು ಕಟ್ಟಿಸಿಕೊಟ್ಟಿರುತ್ತಾರೆ. ಆ ವಟುವು ಈಗ ಪೂಜ್ಯರ ಕಣ್ಣರಿಕೆಯಗಲ್ಲಿ ಯುಕ್ತ ತರಬೇತಿಯನ್ನು ಪಡೆಯುತ್ತಿದ್ದಾರೆ.

ತವರಿಗೆ ಬರುವ ಹೆಣ್ಣುಮಕ್ಕಳ ಸಡಗರ ಶ್ರೀ ದೇಗುಲ ಮಠಕ್ಕೆ ಬರುವ ಭಕ್ತ ಬಳಗಕ್ಕೆ ! ಅವರು ಶ್ರೀಗಳಿಗೆ ಭಕ್ತಿಕಾಣಿಕೆ ನೀಡಿ, ಪ್ರೀತಿಯ ಸೇವೆ ಮಾಡಿ ಕೃತಾರ್ಥರಾದರೆ, ತಾಯಿ ಕರುಳಿನ ಸ್ವಾಮಿಗಳು ಅವರಿಗೆ ಪ್ರೀತಿಯ ಉಪಚಾರ ಮಾಡಿ, ದಿವ್ಯ ಆಶೀರ್ವಾದ ನೀಡಿ ಅವರನ್ನು ಧನ್ಯರಾಗಿಸುತ್ತಾರೆ. ಅಲ್ಲದೆ ಭಕ್ತರು ತಮ್ಮ ಮನೆಗಳಿಗೆ ಪೂಜ್ಯರನ್ನು ಶಿವಪೂಜೆಗೆಂದು ಅಥವಾ ತಮ್ಮ ಊರಿನ ಸಾಂಸ್ಕೃತಿಕ ಸಮಾರಂಭಗಳಲ್ಲಿ ಆಶೀರ್ವಚನ ನೀಡಲೆಂದು ಆಹ್ವಾನಿಸಿ ಧನ್ಯತೆ ಪಡೆಯುವುದೂ ಉಂಟು. ಹೀಗಾಗಿ ನಾನಾ ಕಡೆಯಿಂದ ಬಿನ್ನಹದ ಕರೆಗಳು ನಿರಂತರ. ಜೊತೆಗೆ ಭಿಕ್ಷೆಗಾಗಿ ಬೇರೆ ಬೇರೆ ಊರುಗಳಿಗೆ ಆಹ್ವಾನಗಳ ಒತ್ತಡ. ಇದರಿಂದಾಗಿ ಬಿಡುವು ಸಿಕ್ಕದ ಸಂದರ್ಭವೇರ್ಪಟ್ಟಿತು. ಹೀಗೆ ಕಾರ್ಯಬಾಹುಳ್ಯದ ಅನಿವಾರ್ಯತೆಯಿಂದ ಪೂಜ್ಯರಿಗೆ ಸಹಾಯಕರಾಗಿ ನಿಲ್ಲುವ ಕಿರಿಯ ಸ್ವಾಮಿಗಳ ಅವಶ್ಯಕತೆ ಕಂಡು ಬಂತು.

ಶ್ರೀ ದೇಗುಲಮಠದ ಉತ್ತರಾಧಿಕಾರಿಯ ಬಗ್ಗೆ ಹುಡುಕಾಟ ಆರಂಭವಾಯಿತು. ಶ್ರಿ ನಿರ್ವಾಣ ಮಹಾಸ್ವಾಮಿಗಳು ಶ್ರೀ ಸಿದ್ಧಗಂಗೆಯ ಪೂಜ್ಯರೊಡನೆ ಸಮಾಲೋಚನೆ ನಡೆಸಿದರು. ತುಮಕೂರು ಜಿಲ್ಲೆ ಹೆಬ್ಬೂರು ಬಳಿಯ ಕೆಂಬಳಲು ಗ್ರಾಮದ ಶರಣ ದಂಪತಿ ವಿಶ್ವೇಶ್ವರಯ್ಯ-ರೇಣುಕಮ್ಮನವರ ಹಿರಿಯ ಮಗ ರೇಣುಕೇಶರು ಅವರ ಗಮನಕ್ಕೆ ಬಂದರು. ಪ್ರೌಢಶಾಲಾ ಶಿಕ್ಷಣವನ್ನು ಶ್ರೀ ದೇಗುಲಮಠದಲ್ಲೇ ಮುಗಿಸಿ ಆನಂತರ ಶ್ರೀ ಸಿದ್ಧಗಂಗೆಯಲ್ಲಿ ಓದು ಮುಂದುವರಿಸಿ ಸ್ನಾತಕೋತ್ತರ ಪದವಿ ಪಡೆದಿದ್ದ ಶ್ರೀ ರೇಣುಕೇಶ ಸಂಸ್ಕೃತ ಅಧ್ಯಯನವನ್ನೂ ಮಾಡಿದ್ದ ಹುಟ್ಟುವಿರಾಗಿಯಾಗಿದ್ದರು. ದೈವಶ್ರದ್ಧೆ, ಗುರುಭಕ್ತಿ ಹಾಗೂ ಸೇವಾಕಾಂಕ್ಷೆಯನ್ನು ಹೊಂದಿದ್ದು ಶ್ರೀಮಠದ ಉತ್ತರಾಧಿಕಾರಿಯಾಗಲು ಎಲ್ಲಾ ಅರ್ಹತೆಯನ್ನು ಪಡೆದಿರುವುದನ್ನು ಗಮನಿಸಿದರು. ಅವರನ್ನು ಆಯ್ಕೆ ಮಾಡಿ ಶ್ರೀ ಮುಮ್ಮಡಿ ಮಹಲಿಂಗಸ್ವಾಮಿಗಳೆಂದು ಕರೆದು ಪಟ್ಟಾಧಿಕಾರವನ್ನು ದಿನಾಂಕ ೨೩-೩-೧೯೮೮ ರಂದು ನಡೆದ ಪವಿತ್ರ ಸಮಾರಂಭದಲ್ಲಿ ವಹಿಸಿಕೊಟ್ಟರು. ತಮಗೆ ಸಮರ್ಥ ಉತ್ತರಾಧಿಕಾರಿ ದೊರೆತ ಬಗ್ಗೆ ಪೂಜ್ಯರಿಗೆ ತೃಪ್ತಿಯಿದೆ. ಉಭಯಭಾಷಾ ವಿದ್ವಾಂಸರೂ ಉತ್ಸಾಹೀ ಶರಣಪಥಗಾಮಿಗಳೂ ಆದ ಶ್ರೀ ಮುಮ್ಮಡಿ ಮಹಾಲಿಂಗಸ್ವಾಮಿಗಳು ಶ್ರೀ ದೇಗುಲಮಠದ ತೇರನ್ನು ಸರಿಯಾಗಿ ಮುನ್ನಡೆಸುವರೆಂಬ ವಿಶ್ವಾಸ ಅವರಿಗೆ ಇದೆ.

ಇಷ್ಟೆಲ್ಲಾ ನಿರಂತರ ಕಾರ್ಯಭಾರಗಳ ನಡುವೆಯೂ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ದೇಶ-ವಿದೇಶಗಳಲ್ಲಿ ಸುತ್ತಾಡಿ ತಮ್ಮ ಅನುಭವದ ಕ್ಷಿತಿಜವನ್ನು ವಿಸ್ತರಿಸಿಕೊಂಡಿದ್ದಾರೆ. ಶ್ರೀ ಸುತ್ತೂರು ಜಗದ್ಗುರುಗಳಾದ ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಏರ್ಪಡಿಸಿದ್ದ ಸಮಸ್ತ ಭಾರತ ದರ್ಶನ ಯಾತ್ರೆಯಲ್ಲಿ ಪಾಲ್ಗೊಂಡುದ್ದಲ್ಲದೆ, ಅಮೆರಿಕ, ಯುರೋಪು ಮೊದಲಾದ ವಿದೇಶಗಳ ಪ್ರವಾಸ ಮಾಡಿಬಂದಿದ್ದಾರೆ. ಆಯಾ ದೇಶದ ಜನರ ಸಾಂಸ್ಕೃತಿಕ ಹಾಗೂ ಧಾರ್ಮಿಕ ಜೀವನವನ್ನು ವಿಶೇಷವಾಗಿ ಗಮನಿಸಿ ಬಂದು, ವಿದೇಶಿಯರ ಸಮಯಪಾಲನೆ, ಕಷ್ಟಸಹಿಷ್ಣುತೆ, ದೇಶಾಭಿಮಾನ ಮೊದಲಾದ ಗುಣಗಳನ್ನು ಭಾರತೀಯರು ಅಳವಡಿಸಿಕೊಳ್ಳುವುದು ಅಪೇಕ್ಷಣೀಯವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಬರಿಯ ಕನಸುಗಾರರಲ್ಲ; ಯೋಜಕ ಸತ್ವವುಳ್ಳ ಕ್ರಿಯಾಶೀಲರು. ಅವರೊಬ್ಬ ಅದ್ಭುತ ಕ್ರಿಯಾತ್ಮಕ ತತ್ವಜ್ಞಾನಿ. ತಮ್ಮ ಬಳಿ ಬಂದವರಲ್ಲಿ ಇಂಥವೇ ಸದ್ಭಾವನೆಗಳನ್ನು ಮತ್ತು ಕ್ರಿಯಾಚಾರಗಳನ್ನು ಮೂಡಿಸಲು ಯತ್ನಿಸುತ್ತಾರೆ. ಅವರ ನಡೆ-ನುಡಿಗಳೇ ಉಳಿದವರಿಗೆ ಮಾದರಿ. ತಮ್ಮ ಸಂಪರ್ಕಕ್ಕೆ ಬಂದವರಲ್ಲಿ ಎಷ್ಟು ಜನರನ್ನು ಇಂಥ ಸನ್ಮಾರ್ಗಗಾಮಿಯಾಗುವಂತೆ ಮಾಡಿದೆ ಎಂದು ಅವರು ಲೆಕ್ಕ ಹಾಕುತ್ತಿದ್ದರು ! ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ತೂಗಿ ನೋಡು ಎಂದು ಲಿಂಗದೇವನಿಗೆ ನಿತ್ಯ ನಿವೇದಿಸುತ್ತಿರಬಹುದೇನೋ ಎನಿಸುತ್ತದೆ.

ಪೂಜ್ಯರ ವ್ಯಕ್ತಿತ್ವದ ವಿಚಾರ ಮಾಡಿದಾಗ, ಅವರ ಸಾಧನೆಗಳನ್ನು ಕುರಿತು ಬರೆಯುವಾಗ ಶರಣರ ಸೂಳ್ನುಡಿಯೊಂದು ಕಿವಿಯಲ್ಲಿ ನಿನದಿಸಿದಂತಾಗುತ್ತದೆ.

*ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ*
*ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ*
*ವಿಷಯಂಗಳಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ,*
*ಜ್ಞಾನದಲ್ಲಿ ಪರಮಾನಂದವೆಡೆಗೊಂಡ ಬಳಿಕ*
*ಸೌರಾಷ್ಟ್ರ ಸೋಮೇಶ್ವರನೆಂಬ ಲಿಂಗ ಬೇರಿಲ್ಲ ಕಾಣಿರೆ (ಆದಯ್ಯ)*

ಮೋಹ, ಅಹಂಕಾರ, ಭಯ, ಅಪೇಕ್ಷೆ, ಭಾವ, ವಿಷಯ- ಇವುಗಳಿಂದ ಮುಕ್ತನಾಗಿ, ಜ್ಞಾನದಲ್ಲಿ ಪರಮಾನಂದ ತುಂಬಿಕೊಂಡ ದೈವೀಗುಣ ಸಂಪನ್ನನ್ನು ಸಾಕ್ಷಾತ್ ದೇವರೇ.

ಇಂಥ ಅಪೂರ್ವವಾದ ಗುಣಮೌಲ್ಯಗಳ ಗಣಿಯಾಗಿರುವ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ನಮ್ಮ ನಡುವಿರುವ ನುಡಿವ, ನಡೆದಾಡುವ ಲಿಂಗವೇ ಆಗಿದ್ದಾರೆ. ಇಂಥ ದೈವೀ ಸ್ವರೂಪಿಗಳು ನಮ್ಮೊಡನೆ ಇನ್ನೂ ನೂರ್ಕಾಲವಿದ್ದು ನಮ್ಮನ್ನು ಹರಸುತ್ತಿರಲಿ ಎಂಬುದು ಎಲ್ಲರ ಒಕ್ಕೊರಲಿನ ಮೊರೆ. ಅವರ ಪಟ್ಟಾಧಿಕಾರದ ರಜತ ಮಹೋತ್ಸವದ ಪವಿತ್ರ ಸಂದರ್ಭದಲ್ಲಿ ಅವರಿಗೆ ಭಕ್ತಿಪೂರಸ್ಸರವಾದ ಅಭಿನಂದನೆಗಳು.

❑

ನೆನೆ ನೆನೆಯೆಂದಡೆ ಏನ ನೆನೆವೆನಯ್ಯ ?
ಎನ್ನ ಕಾಯವೇ ಕೈಲಾಸವಾಯಿತ್ತು.
ಮನವೆ ಲಿಂಗವಾಯಿತ್ತು, ತನುವೆ ಸೆಜ್ಜೆಯಾಯಿತ್ತು.
ನೆನೆವಡೆ ದೇವನುಂಟೆ ? ನೋಡುವಡೆ ಭಕ್ತನುಂಟೆ ?
ಗುಹೇಶ್ವರ ಲಿಂಗ ಲೀಯವಾಯಿತ್ತು.

– ಅಲ್ಲಮಪ್ರಭು



# ಮಂಗಳಮೂರ್ತಿ ಕಿರಿಯ ಶ್ರೀ ಶ್ರೀಗಳು

– ಎಲ್ಲೇಗೌಡ ಬೆಸಗರಹಳ್ಳಿ*

ಕನ್ನಡ ನಾಡಿನಲ್ಲಿ ವಚನ ಸಾಹಿತ್ಯ ಕ್ರಾಂತಿಯುಂಟಾದುದು ಹನ್ನೆರಡನೆಯ ಶತಮಾನದಲ್ಲಿ. ಶರಣಕುಲದಲ್ಲಿ ಕಳಸಪ್ರಾಯಳಾದ ವ್ಯಕ್ತಿಯೆಂದರೆ ಪರಮ ವೈರಾಗ್ಯನಿಧಿ ಅಕ್ಕಮಹಾದೇವಿ ಅಕ್ಕನ ಮಾತೆಲ್ಲವೂ ವಚನಗಳಾದವು, ವಚನಗಳೆಲ್ಲವೂ ಭಾವಗೀತೆಗಳಾದವು. ಅನುಭಾವ ಸಂಪತ್ತಿನ ಘನವಾದ ನುಡಿಗಳು ಇಂದಿಗೂ ಸತ್ಯವಾಗಿ "ಅಜಕೋಟಿವರ್ಷದವರೆಲ್ಲ ಹಿರಿಯರಲ್ಲ ಹುತ್ತವೇರಿ ಬೆತ್ತವಿಡಿದವರೆಲ್ಲ ಹಿರಿಯರಲ್ಲ... ಎಂಬ ವಚನವು. ನಮ್ಮ ಶ್ರೀದೇಗುಲ ಮಠದ ಕಿರಿಯ ಶ್ರೀಗಳಿಗೆ ಖಂಡಿತ ಒಪ್ಪುವ ವಚನವಾಗಿದೆ. ಕಿರಿಯ ವಯಸ್ಸಿನಲ್ಲಿ ಹಿರಿತನದ ಆಲೋಚನೆಗಳಿವೆ. ಹಿರಿಯ ಶ್ರೀಗಳವರ ಮಾರ್ಗದರ್ಶನದಲ್ಲಿ ನಡೆಯುವ ಹಂಬಲವಿದೆ. ಸಾಮಾಜಿಕ ತುಡಿತಗಳಿವೆ. ಮಕ್ಕಳಲ್ಲಿ ಅಕ್ಕರೆ ತೋರುವ ಮಾತೃವಾತ್ಸಲ್ಯವಿದೆ. ಶ್ರೀ ಶ್ರೀ ಮುಮ್ಮಡಿ ಮಹಾಲಿಂಗಸ್ವಾಮಿಗಳ ಶ್ರೀ ಮಠದ ಉತ್ತರಾಧಿಕಾರದ ಉತ್ಸವ ಜರುಗಿ ಏಳು ವರ್ಷಗಳು ಕಳೆದಿವೆ. ಈ ಏಳು ವರ್ಷದಲ್ಲಿ ಇವರು ಹಿರಿಯ ಶ್ರೀಗಳೊಂದಗಿನ ಅವಿನಾಭಾವ ಸಂಬಂಧವೆಂದರೆ ಶರಣ ಬಸವೇಶ್ವರರ ಭಾವಚಿತ್ರವೆಂಬಂತೆ ಕಣ್ಮುಂದೆ ಬರುತ್ತದೆ. ಮಠದ ಏಳಿಗೆಯೊಂದಿಗೆ ಮನದ ಏಳಿಗೆ ಮಾಡಿಕೊಂಡವರಾಗಿದ್ದಾರೆ. ಎಲ್ಲರಿಗೂ ಗೊತ್ತಿರುವಂತೆ ಸರ್ವಜನಾಂಗದ ಶಾಂತಿಯ ತೋಟದಂತಿರುವ ಶ್ರೀ ದೇಗುಲ ಮಠವು ಪ್ರಗತಿಯ ಪಥದಲ್ಲಿ ಸಾಗುತ್ತಿದೆ. ಎಲೆಮರೆಯ ಕಾಯಂತೆ, ಕಾಡಮಲ್ಲಿಗೆಯಂತೆ, ಅರ್ಕಾವತಿಯ ಮಂಗಳಕರ ಜುಳು ಜುಳುನಾದ, ತಂಪೆರೆಯುತ್ತಿರುವ ತೆಂಗಿನ ತೋಪಿನ ಮಧ್ಯೆ ಕಂಗೊಳಿಸುವ ದಿವ್ಯಕ್ಷೇತ್ರ ಹೆಸರಿನ ಕೆಸರಿಗೆ ಹಂಗಾಗದೇ ನಡೆಯುತ್ತಾ ಸಾಗಿ ಬಂದಿದೆ. ಮನೆಯೊಂದರ ನಿರ್ವಹಣೆಯೇ ಮಹತ್ತೆಂದು ಭಾವಿಸಿರುವ ಜನಲೋಕದಲ್ಲಿ, ಮಠವು ಮಹತ್ತರವಾದುದು; ಮಾನವರನ್ನು ಮಹದೇವರ ನ್ನಾಗಿಸುವ ತಾಣವಾಗಿದೆಯೆಂಬ ಅಂಶವನ್ನು ಅಕ್ಷರಶಃ ಕಾರ್ಯಗತ ಮಾಡುವ ದಿಸೆಯಲ್ಲಿ ಪೂಜೆ ಸ್ವೀಕರಿಸುತ್ತಲೇ ಪೂರ್ಣತ್ವದೆಡೆಗೆ ಸಾಗುವ, ಕಾಯಕಮಾರ್ಗದಲ್ಲಿ ನಡೆಯುತ್ತಾ, ಮಠದ ಪರಂಪರೆಯಲ್ಲಿ ಸಾಗಿ ಬಂದ ಪೂಜನೀಯರು ನೀಡಿರುವ ಆಶೀರ್ವಾದಗಳು, ತೋರಿರುವ ದಾರಿ ಮಹೋನ್ನತವಾದುದಾಗಿದೆ. ಬೆಳೆವ ಸಿರಿ ಮೊಳಕೆಯಲ್ಲಿ ಎಂಬಂತೆ ಚೈತನ್ಯದ ಚಿಲುಮೆಯಾಗಿ ಶ್ರೀ ಮಠದಲ್ಲಿ ಪದವಿ ಪೂರ್ವ ಶಿಕ್ಷಣ ಮುಗಿಸಿ, ಸಿದ್ಧಂಗೆಯ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಮುಂದಿನ ವ್ಯಾಸಂಗ ಮುಗಿಸಿ, ಆಧ್ಯಾತ್ಮ ಕ್ಷೇತ್ರಕ್ಕೆ ಬೇಕಾದ ಎಲ್ಲ ಅನುಭವಗಳನ್ನು ಪಡೆದುಕೊಂಡು ಶ್ರೀ ದೇಗುಲಮಠಕ್ಕೆ ಉತ್ತರಾಧಿಕಾರಿಯಾಗಿ ಆಗಮಿಸಿದ ಕಿರಿಯ ಶ್ರೀಗಳು ಮಠದಲ್ಲಿ ನಡೆಯುತ್ತಿರುವ ಕಾರ್ಯಕ್ರಮಗಳು ಭಕ್ತರಿಗೆ ತಿಳಿಯಬೇಕು. ನಾಡಿನಾದ್ಯಂತ ಮಠ ಪರಿಚಯಗೊಳ್ಳಬೇಕೆಂಬ ಹಿರಿಯಾಸೆಯನ್ನು ಹೊತ್ತವರಾಗಿ, ಹಿರಿಯ ವಿದ್ಯಾರ್ಥಿ ಸಂಘದ ಸಹಕಾರ ಶ್ರೀ ಶ್ರೀಗಳ ಮಾರ್ಗಮರ್ಶನ ಪಡೆದ "ದೇಗುಲ ಪ್ರಭೆ"ಯನ್ನು ಮಾಸಿಕ ಪತ್ರಿಕೆಯಾಗಿ ಶ್ರೀಮಠದ ವತಿಯಿಂದ ಆರಂಭಿಸಿಯೇ ಬಿಟ್ಟರು. ನುರಿತ ಪತ್ರಕರ್ತರಾದ ಶ್ರೀ ಮಲ್ಲಿಕಾರ್ಜುನಯ್ಯನವರು ಪ್ರಧಾನ ಸಂಪಾದಕರಾಗಿ ಪತ್ರಿಕೆಯನ್ನು ಮುನ್ನಡೆಸುತ್ತಿದ್ದಾರೆ.

ಶಿಕ್ಷಣ ಕ್ಷೇತ್ರಕ್ಕೆ ಶ್ರೀ ಮಠದ ಕೊಡುಗೆ ಅಪಾರ. ಮಠವಿಲ್ಲದಿದ್ದರೆ ನಾನು ಈ ಸ್ಥಾನಕ್ಕೆ ಬರುತ್ತಿರಲಿಲ್ಲ. ಈ ಮಠದ ಆಶ್ರಯವಿಲ್ಲದಿದ್ದರೆ ಈ ಹುದ್ದೆಗೆ ಬರಲಾಗುತ್ತಿರಲಿಲ್ಲ. ಈ ಮಠವು ನನಗೆ ಎಲ್ಲಾ ಸ್ಥಾನಮಾನ ನೀಡಿದೆಯೆಂದು ಹೇಳಿಕೊಳ್ಳುವವರ ಸಂಖ್ಯೆ ಸಾವಿರ ಸಾವಿರ; ಜನಮಾನಸದಲ್ಲಿ ಶ್ರೀ ಮಠದ ಕೀರ್ತಿ ಉಳಿದಿದೆ. ಮಠದ ಕೀರ್ತಿ ದಿನದಿಂದ ದಿನಕ್ಕೆ ತಾಲ್ಲೂಕಿನ ಗಡಿದಾಟಿ, ಜಿಲ್ಲೆ, ರಾಜ್ಯಕ್ಕೆ ಹಬ್ಬಿದೆ. ಉತ್ತರ ಕರ್ನಾಟಕದಿಂದ ತಮಿಳುನಾಡಿನವರೆಗೆ ಶ್ರೀಮಠವು ತನ್ನ ಸೇವಾವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಭಕ್ತರು, ವಿದ್ಯಾರ್ಥಿಗಳನ್ನು ತನ್ನ ಶಿಕ್ಷಣ

* ಮಾಜಿ ಅಧ್ಯಕ್ಷರು, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಾಣಂತ ಮಾರಮ್ಮನ ಗುಡಿಬೀದಿ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಸಂಸ್ಥೆಗಳಿಗೆ ಆಕರ್ಷಿಸಿ ಕೊಂಡಿದೆ. ಇದೆಲ್ಲವನ್ನೂ ಮನಗಂಡ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು, ಶ್ರೀ ಶ್ರೀ ಮುಮ್ಮಡಿನಿರ್ವಾಣ ಮಹಾಸ್ವಾಮಿಗಳವರ ಮನವನ್ನು ಗೆದ್ದವರು. ಅವರೊಡನೆ ಮಾತನಾಡಿ ಮಠದ ಆವರಣ ದೊಳಗೆ ಶಿಕ್ಷಣ ಸಂವರ್ಧನೆಗೆ ಮುಂದಾಗಿ ನರ್ಸಿಂಗ್ ಕಾಲೇಜ್ ಡಿ.ಎಚ್. ಕಾಲೇಜ್, ಬಿ.ಎಡ್ ಕಾಲೇಜ್‌ಗಳು ಆರಂಭಗೊಳ್ಳಲು ಕಾರಣಕರ್ತರಾಗಿದ್ದಾರೆ. ಹಿರಿಯ ಶ್ರೀಗಳ ಹೆಜ್ಜೆಗೆ ಹೆಜ್ಜೆಹಾಕುತ್ತಾ ಸಾಗುವ ಹಿರಿಯರನ್ನು ಕೇಳದೇ ಯಾವ ಕಾರ್ಯಕ್ಕೂ ಮುಂದಾಗುವುದಿಲ್ಲ: ಮಠವು ಸೇವಾ ಕೇಂದ್ರವಾಗಿದೆ. ಇದನ್ನು ಬೆಳೆಸುವ ಇದರ ಸೇವೆಯಲ್ಲಿ ಎಲ್ಲರೂ ಪಾಲ್ಗೊಳ್ಳುವಂತಾಗ ಬೇಕು. ಮಠ ನಮ್ಮದು, ನಮ್ಮದು ಮಠ ಎನ್ನುವ ಭಾವನೆ ಎಲ್ಲರಲ್ಲೂ ಉಂಟಾಗಬೇಕೆಂಬ ಹಿರಿಯಾಸೆಯನ್ನು ಹೊತ್ತವರಾಗಿದ್ದಾರೆ.

*ಅಲ್ಲಮ ಅಲ್ಲಾನನ್ನು ಮುದ್ದಾಡಿದ ಕನಸುಕಂಡೆ*
*ಅಲ್ಲಾ ಅಲ್ಲಮನನ್ನು ಅಪ್ಪಿಕುಣಿದ ಕನಸುದಂಡೆ*
*ಕನಸು ನನಸಾಗಲು ಕಾಯಬೇಕು*
*ಕಾಯುತ್ತಾ ಕಂಡದ್ದಕ್ಕೆ ಹರಸಬೇಕು*
*ಹಾರೈಕೆ ಅನುಗಾಲ ಇರಬೇಕು, ಸರ್ವೇಶ್ವರ*

ಎಂಬ ಪ್ರೋ॥ ಡಿ. ಲಿಂಗಯ್ಯನವರ ವಚನ ಎಲ್ಲಿ ಅನುಷ್ಠಾನಗೊಂಡಿದೆ.

ಜಾತಿಭೇದ, ಮತಧರ್ಮಗಳ ಭೇದವಿಲ್ಲದಂತೆ ಎಲ್ಲರಿಗೂ ಶೈಕ್ಷಣಿಕ, ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕವಾಗಿ ಶ್ರೀಮಠವು ತೆರೆದ ಬಾಗಿಲಾಗಿದೆ.

ಮಠದ ಕೀರ್ತಿಯನ್ನು ದೇಶ ವಿದೇಶಗಳಿಗೂ ಹಿರಿಯ ಶ್ರೀಗಳು ತಮ್ಮ ಪ್ರವಾಸದ ಮೂಲಕ ಮುಟ್ಟಿಸಿ ಬಂದಿದ್ದಾರೆ. ರಜತಮಹೋತ್ಸವದ ಸಂದರ್ಭದಿಂದ ಶ್ರೀಮಠದ ಕೀರ್ತಿ ನೀಡಿನ ಮನೆ ಮನೆಗಳಲ್ಲಿ ಬೆಳಗಾಗುವಂತಾಗಬೇಕೆಂಬುದು ಕಿರಿಯ ಶ್ರೀಗಳ ಮುಖ್ಯ ಆಶಯವಾಗಿದೆ.

*ಮಹಾಜ್ಯೋತಿ ಬೆಳಗುವುದು ಈಶಧರ್ಮ*
*ಕಿರು ಜ್ಯೋತಿ ಮೆರೆಯುವುದು ಲೋಕಧರ್ಮ*
*ಸಾಧನೆಯ ಹಾದಿಗೆ ನೂರುದಾರಿ*
*ಗುರಿ ಒಂದೇ ಗುರು ಬೇರೆ*
*ಎಲ್ಲಾ ಗುರುಗಳ ಬೋಧೆ ಒಂದೇ ಸರ್ವೇಶ್ವರ*

ಎಂಬ ಪ್ರೊ. ಡಿ. ಲಿಂಗಯ್ಯನವರ ವಚನದಂತೆ ಶ್ರೀ ಮಠದ ಪರಂಪರೆಯಲ್ಲಿ ಹೊಸ ಅಧ್ಯಾಯ ಆರಂಭವಾಗಿದೆ. ಇದು ಮಂಗಳಕರವಾದ ಸೂಚನೆಯಾಗಿದೆ.

ಶಿಸ್ತು ಬದುಕಿನೊಳಗೆ ಒಡಮೂಡಬೇಕು. ಬದುಕು ಹಸನಾಗಲು ಬಡತನವನ್ನು ತೊರೆದು ಮೇಲೇಳಬೇಕು. ನಮ್ಮ ನಮ್ಮ ಕೈಲಾದ ಸೇವೆಯನ್ನು ಮಾಡುತ್ತಾ ಹೋಗಬೇಕು. ವೈಯಕ್ತಿಕವಾಗಿ ಪರಸ್ಪರ ದ್ವೇಷವನ್ನು ಬಿಟ್ಟು ಬದುಕುವುದನ್ನು ಕಲಿಯಬೇಕೆಂಬ ಮಾತನ್ನು ಮನದಾಳದಿಂದ ಕಿರಿಯ ಶ್ರೀಗಳು ಹೇಳುತ್ತಾರೆ. ಆರೋಗ್ಯಶಿಬಿರ ಆಧ್ಯಾತ್ಮ ಶಿಬಿರಗಳಿಗೆ ಪ್ರೋತ್ಸಾಹ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ದೀಪಾ ರಾಧನೆಯ ಸಂದರ್ಭದಲ್ಲಿ ಹಮ್ಮಿಕೊಳ್ಳುವುದರಲ್ಲಿ ವೈವಿಧ್ಯತೆಯಿರ ಬೇಕೆನ್ನುತ್ತಾರೆ. ಆಗ ಬಸವಣ್ಣನವರ ವಚನ ನೆನಪಾಗುತ್ತದೆ.

*ನುಡಿದರೆ ಮುತ್ತಿನ ಹಾರದಂತಿರಬೇಕು*
*ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು*
*ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು*
*ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು*
*ನುಡಿದಂತೆ ನಡೆಯದಿದ್ದರೆ ಅದೆಂತೊಲಿವನಯ್ಯ*
*ಕೂಡಲಸಂಗಮದೇವಾ*



---

ಆಚಾರವಿಡಿದು ಲಿಂಗ, ಅನುಭಾವವಿಡಿದು ಜಂಗಮ,
ತನುವಿನ ಪ್ರಾಣ ಆಚಾರ, ಮನದ ಪ್ರಾಣ
ಅನುಭಾವ.
ಇದು ಕಾರಣ ಕೂಡಲಚೆನ್ನಸಂಗಮದೇವಾ,
ಲಿಂಗವನೂ ಜಂಗಮವನೂ ಬೇರರಸಲಿಲ್ಲ.

ಅನ್ನವನಿಕ್ಕಿದರೆ ಪುಣ್ಯವಹುದು, ವಸ್ತ್ರವ ಕೊಟ್ಟರೆ
ಧರ್ಮವಹುದು,
ಹಣವ ಕೊಟ್ಟರೆ ಶ್ರೀಯಹುದು.
ತ್ರಿಕರಣ ಶುದ್ಧವಾಗಿ ನೆನದರೆ ಮುಕ್ತಿಯಹುದು
ಕೂಡಲಚೆನ್ನ ಸಂಗಯ್ಯನಲ್ಲಿ.

*– ಚನ್ನಬಸವಣ್ಣ*

# ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು

- ಎನ್. ಸಿದ್ಧಲಿಂಗಯ್ಯ

ಹನ್ನೆರಡನೇ ಶತಮಾನದ ಶರಣರು ಸಮಾಜದ ವಿವಿಧ ರಂಗಗಳಲ್ಲಿ ಪ್ರವೇಶಿಸಿ ಕ್ರಾಂತಿಕಾರಕ ಕಾರ್ಯಗಳನ್ನು ಮಾಡಿದರು. ವಚನ ಸಾಹಿತ್ಯದಿಂದ ಕನ್ನಡ ಸಾಹಿತ್ಯದ ಹಿರಿಮೆ, ಗರಿಮೆಗಳು, ಹೆಚ್ಚಿರುವುದನ್ನು ಕಾಣಬಹುದಾಗಿದೆ. ಉನ್ನತ ವಿಚಾರಗಳಿಗೆ ಹೊಸ ಹೊಸ ರೀತಿಯಲ್ಲಿ ಅಭಿವ್ಯಕ್ತಿ ನೀಡಲು ಹೊರಟ ವಚನಕಾರರು ತಮ್ಮ ವಚನಗಳಲ್ಲಿ ಅಂದಿನಿಂದ ಲೋಕಾನುಭವ, ಶಿವಾನುಭವಕ್ಕೆ ಸಹಜವಾಗಿ ಅಭಿವ್ಯಕ್ತಿಯನ್ನು ನೀಡಿದ್ದಾರೆ. ಪ್ರಮಥರ ವಚನಗಳನ್ನು ಪರಿಶೀಲಿಸಿದರೆ ಹಾಡಿನ ರೂಪದಲ್ಲಿ ಹಲವು ವಚನಗಳು ರೂಪುಗೊಂಡಿವೆ. ವಚನ, ಸ್ವರ ವಚನಗಳನ್ನು ಶರಣರು ರಚಿಸಿರುವುದು ಸ್ಪಷ್ಟವಾಗುತ್ತದೆ.

ನಿಜಗುಣ ಶಿವಯೋಗಿಗಳ ಯುಗದ ಗೀತಗಳ ವಿಶಿಷ್ಟ ಪರಂಪರೆಗೆ, ಎಂದರೆ ಕೈವಲ್ಯ ಸಾಹಿತ್ಯ ಕಲಾಪರಂಪರೆಗೆ ಬಸವ ಯುಗ ಆಕರವಾಗಿದೆ. ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರವನ್ನು **'ತತ್ವ ಪದಗಳು'** ಅಥವಾ **'ಕೈವಲ್ಯ ಸಾಹಿತ್ಯ'** ಎಂಬ ಹೆಸರಿನಿಂದ ಗುರುತಿಸಲಾಗಿದೆ. ವಿವಿಧ ಪ್ರಕಾರಗಳಲ್ಲಿ ಸೃಷ್ಟಿಯಾಗುತ್ತಾ ಬಂದ ಕನ್ನಢ ಸಾಹಿತ್ಯ, ತನ್ನ ಕಾವ್ಯಗಳ ಕಮನೀಯತೆಯ ಜೊತೆ-ಜೊತೆಗೆ, ವಿಶಿಷ್ಟವಾದ ಕೆಲವು ಘಟ್ಟಗಳನ್ನು ನಿರ್ಮಿಸಿಕೊಂಡಿದೆ. ವಚನ ಸಾಹಿತ್ಯ, ದಾಸ ಸಾಹಿತ್ಯ ಇವುಗಳನ್ನು ಪ್ರಮುಖವಾಗಿ ಎತ್ತಿ ತೋರಿಸಬಹುದು. ಇವುಗಳಂತೆ ಜನಜೀವನವನ್ನು ಮುಟ್ಟಿ ಹಸನುಗೊಳಿಸಲು ಕಾರಣವಾದ ಇನ್ನೊಂದು ಬಗೆಯ ಹಾಡುಗಳು ಕನ್ನಡ ಸಾಹಿತ್ಯದಲ್ಲಿ ಕಂಡುಬರುತ್ತವೆ. ಇವುಗಳನ್ನು ರಚಿಸಿದವರು ಶರಣ ಮಾರ್ಗಾವಲಂಬಿಗಳಾದ ಅನುಭಾವಿಗಳು. ಈ ಹಾಡುಗಳನ್ನು ಸಾಮಾನ್ಯವಾಗಿ **'ತತ್ತ್ವಪದ'** ಗಳೆಂದು ಕರೆಯಲಾಗಿದೆ. ಅಂತರಂಗದ ಅರಿವಿನ ಮೂಲಭೂತ ತತ್ತ್ವವನ್ನು ಅವು ಪ್ರತಿಪಾದಿಸಿರುವುದರಿಂದ **'ತತ್ತ್ವಪದ'** ಗಳೆಂದು ಗುರುತಿಸಿರ ಬಹುದು.

ಕನ್ನಡ ಸಾಹಿತ್ಯದಲ್ಲಿ 'ಕೈವಲ್ಯ ಸಾಹಿತ್ಯ' ವಿಶಿಷ್ಟವೂ, ವಿನೂತನವೂ, ಆದ ಮಂಗಳ ಪರಂಪರೆಯನ್ನು ಒಳಗೊಂಡಿದೆ. ಈ ಪ್ರಕಾರದ ತತ್ತ್ವ ಸಾಹಿತ್ಯ ಅನುಭಾವಿಗಳ ಅನುಭವ ವಾಣಿಯಾಗಿ ಮಾನವಜೀವನದ ಯೋಗ ಕ್ಷೇಮಕ್ಕಾಗಿ ಹೊರ ಹೊಮ್ಮಿದವು ಕೈವಲ್ಯ ತತ್ತ್ವಗಳು. ವಚನಕಾರರು ತಮ್ಮ ಸೂಳ್ನುಡಿಯ ಮೂಲಕ ನಾಡು-ನುಡಿಯ ಮೇಲೆ ಎಂತಹ ಸತ್ಪರಿಣಾಮವನ್ನು ಉಂಟುಮಾಡಿರುವರೋ, ಕೈವಲ್ಯಕಾರರು ಸಹ, ತಮ್ಮ ಹಸನಾದ ತತ್ತ್ವಪದಗಳಿಂದ ಬಗೆ ಮಿಗುವಂತೆ ಸಮಾಜ ಜೀವನವನ್ನು ಸಂಸ್ಕರಿಸಿದ್ದಾರೆ. ಸ್ವಾನುಭಾವದ ಸಿದ್ಧಿ ಸೌಭಾಗ್ಯವನ್ನು ಕರುಣಿಸಿರುತ್ತಾರೆ. ಆತ್ಮಾನುಸಂಧಾನ, ಪರಮ ಸುಖಾನುಭವಕ್ಕೆ , ಕೈವಲ್ಯ ಸಾಹಿತ್ಯ ಸಾಧನ ಸಂಪತ್ ಆಗಿದೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೈಂಕರ್ಯ ಹೊತ್ತು, ಅವರ ಜೀವನಕ್ಕೆ ಸ್ಪಂದಿಸಿ ಹಸನುಗೊಳಿಸಲು ರೂಪಿತಗೊಂಡ ಸುವರ್ಣ ಮಾಧ್ಯಮಗಳು, ಗೇಯ ಪ್ರಧಾನ, ಸ್ವರ ಪ್ರಧಾನ ಮಾಧ್ಯಮವಾದ ಈ ಕಾವ್ಯ ಪ್ರಕಾರವನ್ನು ಅನುಭಾವಿಗಳು ತತ್ತ್ವಪದಗಳೆಂದು ಕರೆದಿರುವರು. ವಿಭಿನ್ನ ಮಟ್ಟುಗಳಲ್ಲಿ, ತಾಳ, ಲಯ, ಭಾವ ಪ್ರಧಾನವಾಗಿ ಹಾಡಲು ಸರಳವಾಗುವಂತೆ ಜನ ಸಾಮಾನ್ಯರಿಗೆ ಮನ ಮುಟ್ಟುವ ನೇರ ಭಾಷೆಯಲ್ಲಿ ಈ ಹಾಡುಗಬ್ಬಗಳನ್ನು ರಚಿಸಿರುವರು. ಸಂಗೀತ , ಸಾಹಿತ್ಯ , ಆಧ್ಯಾತ್ಮ ಈ ಮೂರು ಪ್ರಕಾರದ ವಿಶಿಷ್ಟ ಸಾಧನ. ಇದು ಶರಣರ ಬದುಕಿನ ಮೌಲ್ಯಗಳನ್ನು ಲೋಕಕ್ಕೆ ತಿಳುಹಿಸಲು ಸಾರ್ಥಕ ಬದುಕಿನ ನಿರ್ಮಾಣಕ್ಕೆ ಅನುಭವ ಪದಗಳು ದಾರಿದೀಪವಾಗಿದೆ.

ಕರ್ನಾಟಕದ ಆಧ್ಯಾತ್ಮಿಕ ಚರಿತ್ರೆಯಲ್ಲಿ ಶರಣರ ಬಳಿವಿಡಿದು ಬಂದ ಅನುಭಾವಿಗಳ ಪರಂಪರೆ ತುಂಬಾ ದೊಡ್ಡದು. ಷಟ್‌ಶಾಸ್ತ್ರಗಳ ರಚನಾಕಾರರಾಗಿ, ತತ್ವಜ್ಞಧ ಮೇರು ಶಿಖರವನ್ನೇರಿದ ನಿಜಗುಣ ಶಿವಯೋಗಿಗಳು, ಈ ಪರಂಪರೆಯಲ್ಲಿಯೇ ಬಂದ ಮೊದಲಿಗರು. ಅವರು ಬಾಳಿ ಬದುಕಿದುದು ಹದಿನೈದನೆಯ ಶತಮಾನದಲ್ಲಿ , ತತ್ತ್ವಪದ, ಹಾಡುಗಬ್ಬ ಹಾಗೂ ಅನುಭವ ಗೀತೆಗಳು ಇವರಿಂದ ರಚಿತವಾಗಿದೆ. ಒಟ್ಟಾರೆ ಕೈವಲ್ಯ ಸಾಹಿತ್ಯಕ್ಕೆ ಇವರನ್ನು ಆದ್ಯ ಪ್ರವರ್ತಕರೆಂದು ವಿದ್ವಾಂಸರು ಗುರುತಿಸಿದ್ದಾರೆ. ೧೭ನೇ

* ೨೩೦೬, ಜ್ಞಾನ ಸದನ, ೩ನೇ 'ಬಿ' ಮುಖ್ಯರಸ್ತೆ, ವಿಜಯನಗರ, ಆರ್.ಪಿ.ಸಿ. ಬಡಾವಣೆ, ಬೆಂಗಳೂರು-೪೦

ಶತಮಾನದ ಶರಣರು ಹಾಡುಗಳನ್ನು ಬರೆದಿರುವಂತೆ ಕಂಡು ಬಂದರೂ, ಅವರ ವಚನಗಳಂತೆ ಹಾಡುಗಳು ಜನಜೀವನದಲ್ಲಿ ಬೆರೆಯಲಿಲ್ಲ. ಇದಕ್ಕೆ ಕಾರಣ ಬಹುಶಃ ಅವುಗಳಲ್ಲಿ ಪ್ರತಿಪಾದಿತವಾದ ತತ್ತ್ವಗಳು ಗಹನವಾಗಿದ್ದು ಸಾಮಾನ್ಯ ಜನರಿಗೆ ಸುಲಭವಾಗಿ ಎಟುಕುವಂತಿರಲಿಲ್ಲವೆನ್ನಬಹುದು . ಆದರೆ, ನಿಜಗುಣರು ಗಹನವಾದ ಮತ್ತು ಉದಾತ್ತವಾದ ತತ್ತ್ವಗಳನ್ನು ಜನಪ್ರಿಯವಾಗಬಲ್ಲ ಸರಳವಾದ ಮತ್ತು ಸುಂದರವಾದ ರೀತಿಯಲ್ಲಿ ಹಾಡಿದರು. ಈ ಅರ್ಥದಲ್ಲಿ ಅವರು ತತ್ತ್ವಪದಗಳ ಆದ್ಯಪ್ರವರ್ತಕರಾದರು.

ಇವರ ಸಮಕಾಲೀನರೆಂದು ಸಾರುವ ಮುಪ್ಪಿನ ಷಡಕ್ಷರಿಗಳು ಸರ್ಪಭೂಷಣ ಶಿವಯೋಗಿಗಳು (೧೭೬೫-೧೮೩೮) ಘನಮಠಾರ್ಯರು, ಮೈಲಾರ ಬಸವಲಿಂಗ ಶರಣರು, ಬಾಲಲೀಲಾ ಮಹಂತ ಶಿವಯೋಗಿಗಳು ಕಡಕೋಳದ ಮಡಿವಾಳೇಶ್ವರರು, ಶೌಲ್ಯದ ಅರಸರು, ಕರಿಬಸವ ಸ್ವಾಮಿಗಳು, ಶಂಕರಾನಂದ, ನಿಂಬರಗಿ ಮಹಾರಾಜ್, ಮತಕೂರು ನಂಜುಂಡ ಸ್ವಾಮಿಗಳು , ಶಿಶುನಾಳ ಷರೀಫ್ ಮೊದಲಾದವರಿಂದ ತತ್ತ್ವಪದಗಳು ವಿಪುಲವಾಗಿ ಬೆಳೆದವು. ಇವರೆಲ್ಲರೂ ಅನುಭಾವ ಪದಗಳ ಪರಂಪರೆಯಲ್ಲಿ ಮಿನುಗುವ ಅನುಭಾವಿ ರತ್ನಗಳು.

ಈ ತಮ್ಮ ತತ್ವಪದಗಳ ಸಂಕಲನವನ್ನು ನಿಜಗುಣ ಶಿವಯೋಗಿಗಳು **'ಕೈವಲ್ಯ ಪದ್ಧತಿ'** ಎಂದು ಅರ್ಥವತ್ತಾಗಿ ಕರೆದಿರುವರು. ಇದೇ ಮಾರ್ಗದಲ್ಲಿ ನಡೆದು ಬಂದ ಸರ್ಪಭೂಷಣ ಶಿವಯೋಗಿಗಳು ತಮ್ಮ ಒಂದು ಅನುಭವ ಗ್ರಂಥವನ್ನು **"ಕೈವಲ್ಯ ದರ್ಪಣ"** ಎಂಬುದಾಗಿ ಹೆಸರಿಸಿದರು. ಇಂತಹ ಪದಗಳ ರಚನೆ ೧೮-೧೯ನೇ ಶತಮಾನದಲ್ಲಿ ವಿಪುಲವಾಗಿ ಬೆಳೆಯಿತು. ತತ್ತ್ವಪದಗಳ ಸಮೃದ್ಧ ಯುಗ ಎಂಬುದಾಗಿಯೂ ಇದನ್ನು ಕರೆಯ ಬಹುದಾಗಿದೆ.

ಕನ್ನಡದಲ್ಲಿಯೇ ವಚನಗಳು, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರ ಶಿವಯೋಗಿ, ಬಾಲಲೀಲಾ ಮಹಾಂತ ಶಿವಯೋಗಿಗಳಂಥವರ ಸ್ತೋತ್ರ, ಪದ-ಪದ್ಯಗಳು ಇವೆ. ಒಂದೇ ವಚನವಾಗಲಿ, ಒಂದೇ ಪದ್ಯವಾಗಲಿ, ಹಾಡಿದರೆ ಸಾಕು ಅದೇ ಶಿವಮಂತ್ರ ಎಂಬುದಾಗಿ *(ಶ್ರೀ. ಮ. ನಿ. ಪ್ರ. ಶ್ರೀ ಮೃತ್ಯುಂಜಯ ಮಹಾ ಸ್ವಾಮಿಗಳವರು, ಮುರುಘಾಮಠ ಧಾರವಾಡ)* ಅಭಿಪ್ರಾಯ ಪಟ್ಟಿರುತ್ತಾರೆ.

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳವರು ಲೀಲಾಮೂರ್ತಿಗಳು , ಬಾಲಲೀಲೆ ಈ ಮಹಿಮಾ ಪುರುಷರ ಸಂಭ್ರಮಗಳಲ್ಲಿ ವಿಶಿಷ್ಟವಾದುದಾಗಿದೆ. ದೇವಲೀಲೆಯ ಮತ್ತೊಂದು ರೂಪವೇ ಬಾಲಲೀಲೆ. ಎಳೆಯ ಮಗುವಿನಂತಹ ಹೃದಯ ಈ ಶರಣರದು . ಮುಗ್ಧತೆ, ನಿರ್ಮಲ ಹೃದಯ , ನಿಷ್ಕಪಟಭಾವ , ನಿಷ್ಕುಟಿಲತೆಗಳನ್ನು ನಾವು ಕಾಣುವುದು ಬಾಲ್ಯವಸ್ಥೆಯಲ್ಲಿ ತಾನೇ ದೇವಭಾವಕ್ಕೆ ಸಮಾನವಾದಂಥ ಶಿಶು ಸ್ವಭಾವವನ್ನು ತಮ್ಮ ಚೇತನದಲ್ಲಿಯೇ ಸಮರಸಗೊಳಿಸಿಕೊಂಡು ಅನಂತಲೀಲೆಗಳನ್ನು ಮೆರೆದ ಅವತಾರ ಪುರುಷರಿವರು.

ಬಿಜಾಪುರ ಜಿಲ್ಲೆಯ ಎರನಾಳ ಎಂಬ ಗ್ರಾಮದಲ್ಲಿ ಬಾಲಲೀಲಾ ಮಹಾಂತೇಶ್ವರರು ಕ್ರಿ. ಶ. ಸುಮಾರು ೧೮೨೩ ರಲ್ಲಿ ಜನಿಸಿದರು ಎಂಬುದಾಗಿ ತಿಳಿದು ಬರುತ್ತದೆ. ಹಡೆದ ತಾಯಿ-ತಂದೆಯರ ಹೆಸರೂ ಕೂಡ ತಿಳಿಯದು. ಅವರು ಹರಕೆ ಹೊತ್ತಿದ್ದರೊ ಏನೊ ! ಮುಳಗುಂದದ ಕಲ್ಮಠದ ಶ್ರೀ ಗುರು ಮಹಾಂತಲಿಂಗೇಶ್ವರರಿಗೆ ಈ ಶಿಶುವನ್ನು ಒಪ್ಪಿಸುವರು. ದೇಶಸಂಚಾರಿಗಳಾದ ಮಹಾಂತೇಶ್ವರರು ಬಿಜಾಪುರದ ಆಲಮಟ್ಟಿಗೆ ದಯಮಾಡಿಸಿದಾಗ ಅಲ್ಲಿ ಅನ್ನಪೂರ್ಣಾಂಬೆ, ಮಲ್ಲಿಕಾರ್ಜುನ ಎಂಬ ಶಿವಭಕ್ತ ದಂಪತಿಗಳು ಮಕ್ಕಳಿಲ್ಲದ ಚಿಂತೆಯಿಂದ ಮುಳುಗಿರುವ ಸಂಗತಿಯನ್ನು ಮಹಾಂತೇಶ್ವರರು ತಮ್ಮ ಸುಚಿತ್ತಕ್ಕೆ ತಂದು ಕೊಳ್ಳುತ್ತಾರೆ . ಆಗ ಆಲಮಟ್ಟಿಯ ಅನ್ನಪೂರ್ಣಾಂಬೆಯನ್ನು ಕುರಿತು ಕಲ್ಮಠದ ಶ್ರೀಗುರು ಮುಹಾಂತಲಿಂಗೇಶ್ವರರು 'ಎಲೆ ಮಗಳೆ ಬಾ ಸೆರಗೊಡ್ಡು . ಹಿಡಿ ಕೊಡುವೆನೀ ಕುಮಾರನನ್'[1] ಇದು ನಿನ್ನ ಇಷ್ಟಾರ್ಥಸಿದ್ಧಿಯು , ಇವನು ಅಭವಗಣವರನು ಶಂಕಿಸಬೇಡ. ಪರಶಿವನು ನಿನ್ನ ಶಿಶುವಾಗಿ ಬಂದಿಹನು. ಇವನನ್ನು ಒಳಿತಾಗಿ ಜೋಪಾನಮಾಡು. ಇನ್ನು ಎಂಟು ವರ್ಷದ ಪರಿಯಂತಹ ನಿನ್ನೊಡನೆ ಈತನು ಬಾಲಕ್ರೀಡೆ ಯಾಡುತ್ತಾ ನಿನಗೆ ಸುಖ ಸಂತೊಷವನ್ನುಂಟುಮಾಡುವನು. ಅನಂತರ ವಿರಕ್ತಿಯ ಉದ್ವೇಗದಿಂದ ಪರಮ ವೈರಾಗ್ಯಶೀಲನಾಗಿ ದೇಶ ಸಂಚಾರ ಹೊರಟು, ಅನೇಕ ಪವಾಡಗಳಂ ತೋರುತ್ತಾ ಅಸಾಧಾರಣ ವ್ಯಕ್ತಿಯಾಗುವನು. ನಿಮಗೆ ಈತನ ಸೇವಾ ಶುಶ್ರೂಷೆಯಿಂದ ಕೈವಲ್ಯಪದ ದೊರಕುವುದು. ಎಂದು ಆಶೀರ್ವದಿಸಿ ಅನುಗ್ರಹಿಸಿದ ಜ್ಞಾನ ಶಿಶುವೆ ಈ ಬಾಲಲೀಲಾ ಮಹಾಂತ ಶಿವಯೋಗಿಗಳು. ಈ ಮಹಾಮಹಿಮರ ಅವತಾರ ವಿಶೇಷಗಳು ನಿದರ್ಶನ

---

೧. ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ (ಸಂಧಿ ೨. ಪದ್ಯ ೪೪)

ಸ್ವರೂಪವಾಗಿದೆ. ಗುರುದತ್ತವಾದ ಈ ಕಾರಣಿಕ ಶಿಶುವನ್ನು ಅನ್ನಪೂರ್ಣಾಂಬೆ, ಮಲ್ಲಿಕಾರ್ಜುನರು ಪ್ರೀತಿಯಿಂದ ಬೆಳೆಸಿದರು. ಸಂಪ್ರದಾಯಕ್ಕನುಸಾರವಾಗಿ ಶಿಶುವಿಗೆ ೧೨ನೇಯ ದಿವಸದಲ್ಲಿ ತೊಟ್ಟಿಲೊಳು ಹಾಕಿ ತಮ್ಮ ಬಂಧು ಬಳಗದವರನ್ನು ಬರಮಾಡಿಕೊಂಡು ಶಿಶುವಿಗೆ 'ಮಹಾಂತಲಿಂಗ' ಎಂಬುದಾಗಿ ನಾಮಕರಣವನ್ನು ಮಾಡಿದರು. ನಂತರ ಬೆಳೆದು ದೊಡ್ಡವನಾದ ಮೇಲೆ ಅಕ್ಷರಾಭ್ಯಾಸಕ್ಕೆ ಲಿಂಗನಾಯಕನ ಹಳ್ಳಿಯಲ್ಲಿರುವ ವಿರಕ್ತ ಮಠದ ಶ್ರೀ ಶಿವಯೋಗಿ ಚೆನ್ನವೀರ ಸ್ವಾಮಿಗಳ ಆಶ್ರಯದಲ್ಲಿ ಶಾಲೆಗೆ ಸೇರಿಸಿದರು. ಸೇರಿಸಿದ ಮೊದಲ ದಿನವೇ 'ಶ್ರೀ ಗುರು ಬಸವಲಿಂಗಾಯ ನಮಃ' ಎಂಬುದಾಗಿ ಬಾಲಕ ಮಹಾಂತೇಶ ಬರೆದುದನ್ನು ಕಂಡು ಗುರುಗಳು ಬೆಕ್ಕಸ ಬೆರಗಾದರು. ಈತನು ಅಸಾಮಾನ್ಯ ಬಾಲಕನೆಂಬ ಉದಾತ್ತ ಭಾವನೆಯನ್ನು ತಳೆದರು. ಹೀಗೆ ಚಿಕ್ಕ ವಯಸ್ಸಿನಲ್ಲಿಯೇ ಈ ಬಾಲಕನ ಸಂಸ್ಕೃತಿ ಆತ್ಮಶಕ್ತಿಯ ಪ್ರಕಾಶ ಪ್ರಕಟವಾಯಿತು.

ಶ್ರೀ ಗುರು ಮಹಾಂತೇಶ್ವರ ಅನ್ನಪೂರ್ಣಾಂಬೆ – ಮಲ್ಲಿಕಾರ್ಜುನ ಶಿವಭಕ್ತ ದಂಪತಿಗಳಿಗೆ ಈ ಶಿಶುವನ್ನು ಆಶೀರ್ವಾದ ಪೂರ್ವಕ ಅವರ ಮಡಿಲಿಗೆ ನೀಡುವಾಗಲೇ ಅರುಹಿದ್ದ ಪ್ರಕಾರ ಎಂಟು ವರ್ಷಗಳು ಮುಗಿದ ಮೇಲೆ, ಬಾಲಕ ಮಹಾಂತೇಶನು ಮನೆಯನ್ನು ಬಿಟ್ಟು ಹೊರಟನು. ಕಡು ವೈರಾಗ್ಯ ಭಾವ ತಾಳಿದನು. ಶಿವಕ್ಷೇತ್ರಗಳನ್ನು ಸಂಚರಿಸುತ್ತಾ ಬಳ್ಳಾರಿಯ ಲಿಂಗನಾಯಕನಹಳ್ಳಿಯ ಅಪ್ರತಿಮ ಅನುಭಾವಿಗಳಾದ ಹಾಲವರ್ತಿಯ ಶ್ರೀ ಚೆನ್ನವೀರ ಮಹಾ ಶಿವಯೋಗಿಗಳ ಪರಮ ಅನುಗ್ರಹಕ್ಕೆ ಪಾತ್ರರಾದರು. ಅವರ ಶಿಷ್ಯೋತ್ತಮರಲ್ಲಿ ಒಬ್ಬರಾದ ಶ್ರೀ ಶಾಂತವೀರ ಚರಮೂರ್ತಿಗಳಿಂದ ಶಿವಜ್ಞಾನೋಪದೇಶವನ್ನು ಪಡೆದರು. ಅನಂತರ ಶ್ರಿ ಶೈಲ, ಕಂಚಿ, ಸಂಗಮ, ಕಲ್ಯಾಣ, ಗೋಕಾಕ್ ಮೊದಲಾದ ಪುಣ್ಯ ಕ್ಷೇತ್ರಗಳಲ್ಲಿ ಸುತ್ತಿ ಅಲ್ಲಲ್ಲಿ ಪವಾಡಗಳಂ ತೋರುತ್ತಾ ಹಿಂದಕ್ಕೆ ಆಲವಟ್ಟಿಯ ಅನ್ನಪೂರ್ಣಾಂಬೆಗೆ ತಮ್ಮನ್ನು ಒಪ್ಪಿಸಿ ಆಶೀರ್ವಾದ ಮಾಡಿದ್ದ ಗುರು ಶ್ರೀಮಹಾಂತ ಲಿಂಗ ದೇಶಿಕರು ಮುಳಗುಂದದಲ್ಲಿ ರುವುದನ್ನು ಕೇಳಿ ಅಲ್ಲಿಗೆ ದಯಮಾಡಿಸಿದರು. ಆದರೆ ಅಲ್ಲಿಯ ಭಕ್ತಾದಿಗಳು ಇವರ ವ್ಯಕ್ತಿತ್ವ, ವೈರಾಗ್ಯ, ತಪಃಶಕ್ತಿಯನ್ನು ಕಂಡು ಮುಳುಗುಂದದಲ್ಲಿ ಒಂದು ಮಠವನ್ನು ಕಟ್ಟಿಸಿ ಅಲ್ಲಿಯೇ ವಾಸ ಮಾಡಿಕೊಂಡಿರಲು ಬಿನ್ನವಿಸಿಕೊಂಡರು. ಈ ಭಕ್ತರ ಬಿನ್ನಹವನ್ನು ಮನ್ನಿಸಿ ಶ್ರೀ ಮಹಾಂತಲಿಂಗರು ಶ್ರೀಗವಿಮಠಕ್ಕೆ ಸ್ವಾಮಿಗಳಾದರು.

ಶ್ರೀ ಮಹಾಂತಲಿಂಗರು ವಯಸ್ಕರಾದರೂ ಬಾಲಕರಂತೆ ಮಾತನಾಡುವುದು, ಮುಗ್ಧ ಮಗುವಿನಂತೆ ಬಟ್ಟೆಗಳನ್ನು ತೊಡುವುದು, ಕೂಸುಗಳಂತೆ ಶೂನ್ಯ ದೃಷ್ಟಿಯಿಂದ ಬಾಹ್ಯ ಜಗತ್ತನ್ನು ನೋಡುವುದು ಇವರ ಲೀಲಾವಿನೋದಗಳಾಗಿದ್ದವು. ಆದ್ದರಿಂದಲೇ ಶ್ರೀ ಮಹಾಂತರನ್ನು **'ಬಾಲಲೀಲಾ ಮಹಾಂತ'** ರೆಂದು ಕರೆದಿರುವುದು ಸೂಕ್ತವೆಂದು ಕಾಣುತ್ತದೆ. ಪರಾವಸ್ಥೆಯ ಅತ್ಯುನ್ನತ ಮಟ್ಟವನ್ನೇರಿದವರು ಮಾತ್ರ ಶಿಶು ಮನೋ ವೃತ್ತಿಯನ್ನು ಪಡೆಯಲು ಸಾಧ್ಯ ಎಂಬ ಮಾತು ಮಹಾಂತರಿಗೆ ಚೆನ್ನಾಗಿ ಅನ್ವಯಿಸುತ್ತಿತ್ತು. ಒಮ್ಮೆ ಒಂದು ಘಟನೆ ನಡೆಯಿತು. ಬಸಮ್ಮ ಎಂಬ ತಾಯಿಯೊಬ್ಬಳು ತನ್ನ ಇಬ್ಬರು ಮಕ್ಕಳನ್ನು ಕಳೆದುಕೊಂಡು ಸಂಕಟದಲ್ಲಿದ್ದ ಆಕೆಗೆ ಮಹಾಂತರು ಸಮಾಧಾನ ಪಡಿಸುವುದರ ಮೂಲಕ 'ನನ್ನನ್ನೇ ನಿನ್ನ ಶಿಶುವನ್ನಾಗಿ ಸಲಹು ನನಗೂ ತಾಯಿಯಿಲ್ಲ, ನಿನಗೂ ಮಕ್ಕಳಿಲ್ಲ' ಎಂಬುದಾಗಿ ಅರುಹುತ್ತಾರೆ. ಇದರಿಂದ ಸಮಾಧಾನಗೊಂಡ ಬಸಮ್ಮ ಅವರನ್ನು ತನ್ನ ಮಗುವಿನಂತೆಯೇ ಸಲಹತೊಡಗಿದಳು. ಅಂದಿನಿಂದ ಅವರಿಬ್ಬರಲ್ಲಿ ತಾಯಿ – ಮಕ್ಕಳ ಸಂಬಂಧ ಏರ್ಪಡುವುದು ಸೋಜಿಗದ ಸಂಗತಿಯಾಗಿದೆ. ಹೀಗೆಯೇ ಮಹಾಮಾತೆ ಬಸವಾಂಬೆಯ ಪ್ರೀತಿಯ ಪುತ್ರನಾಗಿ ಬಾಲಲೀಲೆಗಳನ್ನು ತೋರಿದರು. ಉಜ್ವಲ ತಪಃಶ್ಕಕ್ತಿಯಿಂದ ಶಿವಯೋಗಾನಂದ ಜೀವನವನ್ನು ನಡೆಸಿದರು. ಮಂಗಳ ಆಚರಣೆಯಿಂದ , ಲೀಲಾಸಂಭ್ರಮದಿಂದ ಜಗದ ಜನರನ್ನು ಸಹಜವಾಗಿ ತಿದ್ದಿದರು. ಲೋಕದಲ್ಲಿ ಶಿವಧರ್ಮದಲ್ಲಿ ಬೆಳಗಿದರು. ಆ ಕಾಲದಲ್ಲಿಯೇ ಭಕ್ತಾದಿಗಳಿಗೆ ನೀತಿ – ಧರ್ಮಬೋಧೆ ಮಾಡಿದುದಲ್ಲದೆ ಶಿವಾನುಭವ ತತ್ತ್ವಗಳನ್ನೊಳಗೊಂಡ ಅನೇಕ ಹಾಡು – ಪದ್ಯಗಳನ್ನು ರಚಿಸಿ ಹಾಡತೊಡಗಿದರು. ಬಸವಾದಿ ಪ್ರಮಥರಲ್ಲಿ ಬಾಲಲೀಲಾ ಮಹಾಂತೇಶರು ತಳೆದಿರುವ ಭಕ್ತಿ ಅಸದೃಶವಾಗಿದೆ. ಬಸವ, ಚೆನ್ನಬಸವ, ಪ್ರಭುದೇವರನ್ನು ಅನುಕ್ರಮವಾಗಿ ಸ್ಥೂಲ, ಸೂಕ್ಷ್ಮ, ಕಾರಣ ತನು ಸ್ವರೂಪರೆಂದು ಹೃದಯಾರೆ ಭಾವಿಸಿದ್ದರು. ಗುರು, ಲಿಂಗ, ಜಂಗಮ ಪರಮ ಪ್ರಸಾದದಿಂದ ಅರಿವು, ಪ್ರಾಣ, ಮಹಾಜ್ಞಾನ ಪ್ರಸಾದ ಪ್ರಾಪ್ತಿಯಾಯಿತೆಂದು ಶ್ರೀ ಮಹಾಂತೇಶರು ತಿಳಿಸಿರುತ್ತಾರೆ.

ಶ್ರೀ ಚನ್ನವೀರ ಶಿವಯೋಗಿಗಳವರ ಶಿಷ್ಯ ಸಮೂಹದಲ್ಲಿ ಶಾಂತವೀರ ಚರಮೂರ್ತಿಗಳು, ಸಣ್ಣ ಬರಹದ ರಾಚೋಟಿಸ್ವಾಮಿಗಳು, ಮೈಸೂರು ಕಡೆಯ ಶಿವಬಸವಸ್ವಾಮಿಗಳು, 'ಗುರುಕರುಣತ್ರಿವಿಧಿ' ಯನ್ನು

ವಿರಚಿಸಿರುವ ಮೈಲಾರ ಬಸವಲಿಂಗಶರಣರು, 'ಕೈವಲ್ಯ ದರ್ಪಣ' ದ ಕರ್ತೃ ಬಾಲಲೀಲಾ ಮಹಾಂತ ಶಿವಯೋಗಿಗಳು ಪ್ರಮುಖರಾಗಿದ್ದಾರೆ. ಅಷ್ಟಾವರಣ, ಪಂಚಾಚಾರ, ಷಟಸ್ಥಲ, ನೂರೊಂದು ಸ್ಥಲ ವಿಚಾರಗಳ ಅವಿರಳ ಸಾರತತ್ತ್ವ ಜ್ಞಾನ ಸಂಪುಟವೇ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳವರ **'ಕೈವಲ್ಯ ದರ್ಪಣ'.**

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳವರಿಗೆ ಸಂಬಂಧಿಸಿದ ಅಧಿಕೃತವಾದ ಉಪಲಬ್ದ ಸಾಹಿತ್ಯಗಳು ಯಾವುದೆಂದರೆ : (೧) ಕೈವಲ್ಯ ದರ್ಪಣ, (೨) ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ, (೩) ವೈರಾಗ್ಯದಲರು. ಇವುಗಳಲ್ಲಿ ಮೊದಲನೆಯದು ಕೈವಲ್ಯದರ್ಪಣ. ಇದು ಶ್ರೀ ಬಾಲಲೀಲಾ ಮಹಾಂತೇಶ್ವರರಿಂದಲೇ ರಚಿತವಾದವು. ಆಶುಕವಿತ್ವದ ಪವಿತ್ರ ಗ್ರಂಥವಿದು.

ಮಹಾಂತರು ೧೪೨ ಹಾಡುಗಳನ್ನು ರಚಿಸಿದ್ದಾರೆ. ಅನೇಕ ಹಾಡುಗಳು ನಾಶವಾಗಿರಬೇಕು. ಲಭ್ಯ ಕೃತಿಗಳು ವೈವಿಧ್ಯ ಪೂರ್ಣವಾಗಿದೆ. ಮನೋಭಾವ, ದೇಸಿಯ ಚೆಲುವು ಸರ್ವಾರ್ಪಣ ದೃಷ್ಟಿ, ಬಾಲಲೀಲೆಯ ಮುಗ್ಧತೆ, ಪ್ರಾರ್ಥನೆ, ಇವು ಇವರ ಹಾಡುಗಳ ಲಕ್ಷಣವಾಗಿರುವಂತೆ ಮನೋಹರವೂ ಆಗಿವೆ ಎಂಬುದಾಗಿ ಡಾ|| ಎಚ್. ತಿಪ್ಪೇರುದ್ರಸ್ವಾಮಿಯವರು ನುಡಿದಿರುವುದು ಸಮಂಜಸವಾಗಿದೆ. *(ಕನ್ನಡದಲ್ಲಿ ಕೈವಲ್ಯ ಸಾಹಿತ್ಯ – ಪು. ೮೪ – ೯೩)* ಮಹಾಂತರ ಕೃತಿಯಾದ ಕೈವಲ್ಯ ದರ್ಪಣದಲ್ಲಿ ಶ್ಲೋಕ, ಸ್ವರವಚನ. ಪದ, ಶರ, ಕುಸುಮ, ಭೋಗ, ಭಾಮಿನಿ, ವಾರ್ಧಕ, ಪರಿವರ್ಧಿನಿ, ಷಟ್ಪದಿಗಳು, ಹೋಳಿಪದ, ಜೋಗುಳಪದ, ಮಂಗಳಾರತಿ ಪದ, ಪರಾಕು, ವೃತ್ತ, ವಾಚ್ಯಮಾಲಿಕೆ, ಶಿವನವಾಕ್ಯ, ನಿರಾಲಂಬದ ವಚನ, ತ್ರಿವಿಧಿ. ಕಂದ, ಮೊದಲಾದ ಛಂದೋರೂಪಗಳಲ್ಲಿ ಶ್ರೀ ಮಹಾಂತೇಶ್ವರರ ಆಶುಕವಿತೆ ಹೊಮ್ಮಿದೆ. ವಿವಿಧ ರಾಗಗಳು ನಿರ್ದೇಶನದೊಡನೆ ಕೈವಲ್ಯ ದರ್ಪಣದಲ್ಲಿ ಗೀತೆಗಳು ರಚಿಸಲ್ಪಟ್ಟಿವೆ.

**ಬಾ**ಲ್ಯಾವಸ್ಥೆಯನ್ನು ಕಳೆದರೆ ಸಾಕು, ಬರುತ್ತದೆ ಯೌವನಾವಸ್ಥೆ. ಕಾಮ, ಕ್ರೋಧಾಧಿಗಳಿಗೆ ಒಳಗಾಗುವ ಅವಸ್ಥೆ. ಅರಿಷಡ್ವರ್ಗ ವ್ಯಕ್ತಿಯನ್ನು ಲೋಕ ಮುಖವಾಗಿ ತಿರುಗಿಸುತ್ತದೆ. ಮನಸ್ಸನ್ನು ಹರಿದು ಹಂಚಿಹಾಕುತ್ತದೆ. ಆದಕಾರಣವೇ ಬಾಲಲೀಲಾ ಮಹಾಂತೇಶ್ವರರು ಈ ಪರಿಯಲ್ಲಿ ಪ್ರಾರ್ಥಿಸಿದ್ದಾರೆ.

"ಕಾಡು ಕಾಡ್ಯೆ ಶಿವನೆ । ಕಾಡದಿರ್ದಡೆ ನೀನು
ಖೋಡಿ ಮನ ಕಾಡಿ, ಎನ್ನ ಬುದ್ಧಿ ಕೆಡಿಸುವುದು"

**ಮ**ನದ ನಿರಂತರ ಹೋರಾಟವನ್ನು ಪರಶಿವನಲ್ಲಿ ಸಲ್ಲಿಸಿರುವ ವಿಶಿಷ್ಟವೂ ವಿಲಕ್ಷಣವೂ ಆದ ಪರತರ ಪ್ರಾರ್ಥನೆಯಿದು. ಚಿತ್ತ ಪ್ರಸನ್ನತೆಗಿಂತ ಮಿಗಿಲಾದ ಚಿರಸಂಪದವಿಲ್ಲ, ಮನದ ಯೋಗ ಕ್ಷೇಮಕ್ಕಾಗಿ ಮಹಾಂತೇಶರು **'ಕಾಡು ಕಾಡ್ಯೆ ಶಿವನೆ,** ಎಂದು ಬೇಡಿಕೊಂಡಿರುವ ಬಗೆ ಅಸಾಮಾನ್ಯವಾಗಿದೆ. ಅತ್ಯಂತ ಬೆರಗುಗೊಳಿಸುತ್ತದೆ.

**ಅ**ನ್ವೇಷಣೆ – ಅನುಸಂಧಾನದಿಂದ ಕಾಣಬೇಕಾದ ಪರಮ ಸತ್ಯವನ್ನು ಗಳಿಸಬೇಕಾದ ಸದೃಢ ಚಿತ್ತ ಹಾಗೂ ಸಮ್ಯಕ್ ಜ್ಞಾನ ಆಚಾರ ಸಂಪದವನ್ನು ಸಹಜವಾಗಿ ಪಡೆದಿರುವ ಪರಮ ಶಿವಾನುಭಾವಿಗಳು ಶ್ರೀ ಮಹಾಂತೇಶರು . ಇಂತಹ ಘನವಾದ ನಿಲುವಿನಲ್ಲಿದ್ದರೂ ' ಕಾಡು ಕಾಡ್ಯೆ ಶಿವನೆ ' ಎಂದು ಹಾರೈಸಿರುವುದು ಅದೆಷ್ಟು ಸೋಜಿಗದ ಸಂಗತಿಯಾಗಿದೆ. ಚಿಂತಿಸಿದಷ್ಟು ಅನುಭಾವ ಪೂರ್ಣವಾದ ಭಾವನೆಗಳು ಚಿಮ್ಮುತ್ತವೆ .

ಶ್ರೀಮಹಾಂತೇಶ್ವರರು ಎಂದಿಗೂ ಭೋಗ ಜೀವನವನ್ನು ಇಷ್ಟಪಟ್ಟವರಲ್ಲ ಅದನ್ನು ಅವರು ತಿರಸ್ಕರಿಸುತ್ತದ್ದರು. ಒಮ್ಮೆ ಸ್ತ್ರೀಯರು ಇವರನ್ನು ಉಪಚರಿಸಲು ಶ್ರೀಮಠಕ್ಕೆ ಬಂದಾಗ ಹಾಡಿರುವ ಆತ್ಮ ಬೋಧೆಯ ಹಾಡು ಮಾರ್ಮಿಕವಾಗಿದೆ.

ಜೋಕೆ ಕಂಡ್ಯಾ । ಆತ್ಮಾ । ಜೋಕೆ ಕಂಡ್ಯಾ ॥
ಕಾಕು ಸ್ತ್ರೀಯರ ಬಳಗ ವನೇಕ ಬರುತಿಹುದಿಲ್ಲಿ ॥ ಪ ॥
ಮರವೆಯ ಮನೆಯೊಳಗರುವಿಲ್ಲದಂಗನೆಯರು
ಪರಿಪರಿ ನೆರೆದು ನಿನ್ನ । **ನಿರುತಾಗಿ ನುಡಿವೆ ನೀನು** ॥ ೧ ॥
ವಿರತಿ ವಿರತಿಯೆಂದು । **ಮರುಳು ಮಾಡುವರಯ್ಯಾ**
ವಿರತಿಯೆಂತೆಂಬ ದೃಷ್ಟ । ಅರಿತರೆ ತಿಳಿವುದಿಲ್ಲಿ ॥ ೨ ॥
ನೋಡದೆ ನುಡಿಸದೆ । ಮಾಡಬಹುದು ವಿರತಿ
ನಾಡರಿಯಲು ಮಹಂತ ಪ್ರೌಢನೊಳ್ ರತಿಯಿರಲಿ ॥ ೩ ॥

(ಕೈವಲ್ಯ ದರ್ಪಣ ಪದ್ಯ ೧೨, ಪುಟ:೧೩)

**ಈ** ಮೇಲಿನ ಹಾಡಿನಲ್ಲಿ ಮಾಯೆಯ ವಿವಿಧ ಪರಿಗಳನ್ನು ಸೂಕ್ಷ್ಮವಾಗಿ ನಿರೂಪಿಸಿ ಅವುಗಳ ನಡುವೆಯಿದ್ದು ವಿರತಿಯನ್ನು ಸಾಧಿಸುವ ಬಗೆಯನ್ನು ಸುಂದರವಾಗಿ ಚಿತ್ರಿಸಿದ್ದಾರೆ .

ಅಡ್ಡಿ - ಆತಂಕಗಳು ಬಂದಾಗ ಸಾಧಕ ಎದೆಗುಂದಬಾರದು , ದೈವೀ ಸಾಧಕನು ಏನೆಲ್ಲಾ ಸಿದ್ಧಾಂತ - ವೇದಾಂತಗಳ ಬಲದಿಂದ ಅವೆಲ್ಲವನ್ನು ಅರಿಯಬೇಕು . ಶ್ರೇಷ್ಠ ಸತ್ಯವನ್ನು ಸುಂದರವಾದ ತಿಳಿಗನ್ನಡ ಶೈಲಿಯಲ್ಲಿ ತತ್ತ್ವಪದವೊಂದರ ಮೂಲಕ ಮನ ಮುಟ್ಟುವಂತೆ ಮಹಾಂತರು ಬೆಡಗಿನ ನುಡಿಯಿಂದ ಅರುಹುತ್ತಾರೆ . ಒಳಬಾಳಿನ ಸಾಧಕರಿಗೆ ಅಮೂಲ್ಯವಾದ ಸಂದೇಶವನ್ನು ನೀಡಿದ್ದಾರೆ .

ಈ ಮಹಾಂತರ ಅವತಾರ ಲೋಕಕ್ಕೆ ಏಕೆ ಆಯಿತು , ಈ ಬಗೆಗೆ ಆ ಮಹಾಶರಣರ ಹೃದಯ ವಾಣಿಯನ್ನು ಆಲಿಸಿರಿ:

*ಬಾಲ ಬಂದನೀ ಇಳೆಗೆ ಶಿವಭಕ್ತರ ಬಳಿಗೆ*
*ಬಾಲ ಬಂದ ಶಿವಲೀಲೆಯ ಮಾಡಿ,*
*ಕೋಲಿಯ ಭಕ್ತರ ಶಿವಪುರಕೆ ಒಯ್ಯೆ ।*

*(ಕೈವಲ್ಯ ದರ್ಪಣ. ಪುಟ: ೧೦೮)*

ಪರಬ್ರಹ್ಮದ ಶಿಶು, ಇಳೆಗೆ ಇಳಿದು ಬಂದುದರ ಪವಿತ್ರ ಉದ್ದೇಶವಿದೆ. ಇದೇ ವಿಷಯವನ್ನು ಕುರಿತು ಮತ್ತಷ್ಟು ವಿವರಣೆಯನ್ನು ಶ್ರೀಮಹಾಂತೇಶರಿಂದಲೇ ತಿಳಿಯಬಹುದು:

*ಮಗನ ತೂಗಿರೋ , ಭಕ್ತರು ಮಗನ ತೂಗಿರೋ*
*ಅಗಜೆ ತನಗೆ ಮೊಲೆ ಹಾಲಿಲ್ಲದೆ ।*
*ಜಗಕೆ ಕಳುಹಿದಳು ಪುತ್ರನ*
*ಭಕ್ತರಸವದಣಿಯ ಉಂಡು । ಶಕ್ತಿವಂತನಾಗಿ ಬಹಳ*
*ಮುಕ್ತಿ ಮಾರ್ಗ ವಿಡಿದು*
*ಬಾರೆಂದ್ಯುಕ್ತಿಯಿಂದ ಕಳುಹಿದಳು ॥ ೧ ॥*

*(ಕೈವಲ್ಯ ದರ್ಪಣ. ಪುಟ ೧೦೨)*

ಎಷ್ಟೊಂದು ಅರ್ಥಪೂರ್ಣವಾದ , ಧ್ವನಿ ಪೂರ್ಣವಾದ ಮಹದಾನಂದವನ್ನು ಉಂಟು ಮಾಡುವ ಶಿವಯೋಗಿಗಳವರ ತತ್ತ್ವಪದ ಇದು. 'ಅಗ-ಜೆ ' - ಹಿಮಗಿರಿತನಯ : ಬೆಟ್ಟದಿಂದ ಹುಟ್ಟಿ ಬಂದವಳು ಶಿಲಾರೂಪದ ಮಾತೆಯಿಂದ ಮೊಲೆಹಾಲು ಬಾ ಎಂದರೆ ಎಲ್ಲಿ ಬರುತ್ತದೆ? ಎಲ್ಲಿ ಪ್ರಾಣವಿದೆಯೋ, ಚೇತನ್ಯವಿದೆಯೋ ಅಲ್ಲಿ ಮೊಲೆಹಾಲು ಬರುವುದು ಸಹಜ. ಶ್ರೇಷ್ಠ ಸಾಹಿತ್ಯದ ಜೀವಾಳವಾದ 'ಧ್ವನಿ' ಇದೆ ಇಲ್ಲಿ ;

ಮುಳಗುಂದದ ಗವಿಮಠದ ಈ ಶರಣರ ಬಾಲಲೀಲೆಗಳನ್ನು ವರ್ಣಿಸಲು ಅಸದಳ . ತೂಗುಮಂಚದ ಮೇಲೆ 'ಪರಬ್ರಹ್ಮದ ಶಿಶು' ವಾಗಿ ಶಿವಯೋಗಿಗಳವರು ಮಲಗುತ್ತಾರೆ . ಶ್ರೀ ಮಠಕ್ಕೆ ಬಂದಂತಹ ಮಾತೆಯರನ್ನು ಲೀಲಾ ಸಂಭ್ರಮದಿಂದ ಕರೆದು ಅಪ್ಪಣೆ ಮಾಡುತ್ತಿದ್ದರಂತೆ :

*ಕಂದನ ತೂಗಿ । ಬಂಧನ ನೀಗುವೆ ಬನ್ನಿರೆ ॥ ಪ ॥*
*ಬಾರೆ ಮುಕ್ತಾಯಕ್ಕ । ಬಾರೆ ಮಹಾದೇವಿ ।*
*ಬಾರೆ ಬಸವರಾಣಿ । ನೀಲಲೋಚನೆಯೆ ।*
*ಬಾರೆ ಮಂಚಲದೇವಿ । ಬಾರೆ ನಿಂಬೆಕ್ಕೆ*
*ಬಾರೆ ದುಗ್ಗಲದೇವಿ । ದಾಸಿ ಪಟ್ಟವ್ವೆ ।*
*ಬಾರೆ ಸತ್ಯಕ್ಕ । ಬಾರೆ ಚೋಳಕ್ಕ*
*ಬಾರೆ ಅಮ್ಮವ್ವೆ । ನೀ ಕರೆಸಿ ಕೊಳ್ಳುವರೇನೇ ।*
*ಚಿನ್ನ ಬೆಳ್ಳಿಯನೊಲ್ಲ । ರನ್ನ ಮುತ್ತುಗಳೊಲ್ಲ ।*
*ಮನ್ನಿಸಿ ಮನ ಮುಟ್ಟಿ ತೂಗಿದರೆ ನಲಿವಾ*
*ತನ್ನ ಲಿಂಗಾನಂದ ಚಿಕ್ಕ ತೊಟ್ಟಿಲದೊಳು*
*ಚೆನ್ನಾಗಿ ನಲಿವಾ ಶ್ರೀ ಸಣ್ಣ ಮಹಂತ ।*

*(ಕೈವಲ್ಯ ದರ್ಪಣ. ಪುಟ: ೧೦೩)*

ಮಾತೆಯರು, ಈ ಕಂದನನ್ನು ತೂಗಿರಿ, ನನ್ನ ಬಂಧನವನ್ನು ನಿಮ್ಮಿಂದ ನಾನು ನೀಗಿಸಿಕೊಳ್ಳುವೆ . ಪರಿಹರಿಸಿ ಕೊಳ್ಳವೆ ಎಂದು ಒಂದು ರೀತಿಯಲ್ಲಿ ಅರ್ಥ ಹೊಳೆದರೆ , ಶ್ರೀ ಸಣ್ಣ ಮಹಂತನನ್ನು ಮನ್ನಿಸಿ ಮನಮುಟ್ಟಿ ಓ ಮಾತೆಯರೆ , ನೀವು ತೂಗಿರಿ , ನಾನು ನಲಿಯುವೆ , ನಿಮ್ಮ ಭವಬಂಧನವನ್ನು ನಾನು ಪರಿಹರಿಸುವೆ ಎಂಬ ಮತ್ತೊಂದು ಬಗೆಯ ಅರ್ಥವೂ ಮೇಲಣ ಗೀತದ ಪಲ್ಲವಿಯಿಂದ ಧ್ವನಿಸುತ್ತದೆ . ಈ ಕ್ರಮದ ದ್ವಂದ್ವಾರ್ಥದ ಹಿನ್ನೆಲೆಯಲ್ಲಿ ಮಹಾಂತೇಶರ ಗೀತೆಗಳ ಕಾವ್ಯ ಶೈಲಿ, ಧ್ವನಿರಮ್ಯತೆಯನ್ನು ಕಾಣಬಹುದಾಗಿದೆ . ಈ ದೃಷ್ಟಿಯಿಂದ " ಕೈವಲ್ಯ ದರ್ಪಣ " ಮಹಾಂತೇಶರ ಆತ್ಮಗೀತಾಂಜಲಿ , ಶಿವಾನುಭವದ ಮಿಂಚಿನಗೊಂಚಲು ಎಂಬುದಾಗಿಯೂ ಹೇಳಬಹುದು .

ನಮ್ಮ ದೇಶದಲ್ಲಿ ದೇವರ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ಕಿತ್ತಾಟ, ಕಚ್ಚಾಟ ನಡೆಯುತ್ತಲೇ ಇರುತ್ತವೆ. ಆದರೆ , ಭಕ್ತಿ ಜ್ಞಾನವೈರಾಗ್ಯಗಳ ಸಂಗಮವಾಗಿದ್ದವರು ಮಹಂತರು . ಸರ್ವವ್ಯಾಪಕವೂ ವಿಶ್ವ ವಿಶಾಲ ದೃಷ್ಟಿಯಿಂದ ಕೂಡಿದ್ದು ಅವರ ಮನಸ್ಥಿತಿ ತುಂಬಾ ಹಿತವಾದುದು . ಧರ್ಮದ ಉನ್ನತವಾದ ವೇದಿಕೆಯ ಮೇಲೆನಿಂತು ಒಟ್ಟು ಮಾನವತೆಯನ್ನೇ ಇಡಿಯಾಗಿ

ನೋಡಬಲ್ಲ ದೃಷ್ಟಿ ಅವರದಾಗಿತ್ತು. ಧಾರ್ಮಿಕ ಸಾಧನೆ ಹಾಗೂ ಮಾನವೀಯ ಮನೋಭಾವನೆಯ ಉತ್ತರದಲ್ಲಿ ಸರ್ವವೂ ಸಮಾನವಾಗಿ ಕಾಣುತ್ತದೆ. ಈ ಕೆಳಗಿನ ಹಾಡು ಮಹಾಂತರ ಉಜ್ವಲ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿದೆ.

*"ಅವರವರ ಭಕ್ತಿಗೆ ಅವರವರ ಭಾವಕ್ಕೆ*
*ಅವರವರ ತೆರನಾಗಿ ಇರುತಿಹನು ಶಿವಯೋಗಿ ॥ ಪ ॥*

*ಇರದೊಂದು ಕನ್ನಡಿಯ ನೂರಾರು ಜನ ಪಿಡಿಯೆ*
*ಸರಳಾಗಿ ಅವರವರ ರೂಪು ಕಾಣುವಂತೆ ।*
*ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ ।*
*ನರರೇನು ಭಾವಿಸುವರದರಂತೆ ತೋರುವನು ॥ ೧ ॥*

*ಮತಭೇದದವರು ದುರ್ಮತಿಯಿಂದ ಯತಿವರಗೆ*
*ಸ್ತುತಿನಿಂದೆ ಮಾಡಿದರೆ ಅವರಿಗೆ ತಿರುಗುವುವು ।*
*ಯತಿವರನು ತಾ ತನ್ನ ಪಥದಲ್ಲಿಯಿರುವನು ।*
*ಕ್ಷಿತಿಯ ಜನರ ಪಾಪ ಪುಣ್ಯ ಫಲಪರೀಕ್ಷೇ ॥ ॥ ೨ ॥*

*ಕುಲಛಲವ ಹಿಡಿದಿರುವ ಕಲಕು ಮನದವರಲ್ಲಿ ।*
*ತಿಳಿವಳಿಕೆ ಶಿವಚಂದ್ರಮ ಕಾಣುವ ಪರಿಯೆಂತು ।*
*ಕುಲಛಲವನತಿಗಳೆದ ತಿಳಿಯ ಮನದವರಲ್ಲಿ ।*
*ಸಲೆ ಮಹಂತಲಿಂಗ ಚಿತ್ಸೂರ್ಯ ಕಾಣುವನು । ॥ ೩ ॥*

*(ಕೈವಲ್ಯ ದರ್ಪಣ ಪುಟ: ೮೫)*

ಈ ಸಂದರ್ಭದಲ್ಲಿ ಮುಪ್ಪಿನ ಷಡಕ್ಷರಿಯವರ ಈ ಹಾಡು ಜ್ಞಾಪಕಕ್ಕೆ ಬರುತ್ತದೆ.

*ಅವರವರ ದರುಶನಕೆ*
*ಅವರವರ ವೇಷದಲಿ*
*ಅವರವರಿಗೆಲ್ಲ ಗುರು ನೀನೋಬ್ಬನೆ ।*
*ಅವರವರ ಭಾವಕ್ಕೆ*
*ಅವರವರ ಪೂಜೆಗಂ*
*ಅವರವರಿಗೆಲ್ಲ ಶಿವನೀನೋಬ್ಬನೆ ॥*

ಎಂಬ ಈ ಕೃತಿ ಮಹಾಂತರ ಕೃತಿಯೊಂದರಂತೆ ನೆನಪಿಗೆ ಬರುತ್ತದೆ. ಮುಪ್ಪಿನ ಷಡಕ್ಷರಿಯವರ ಪ್ರಭಾವ ಮಹಾಂತರ ಮೇಲೂ ಆಗಿದೆ ಎಂಬುಂದು ಇವರ ಕೆಲವು ಹಾಡುಗಳನ್ನು, ಪದ್ಯಗಳನ್ನು ಓದಿದಾಗ ತಿಳಿದು ಬರುತ್ತದೆ. ಇದೊಂದು ಸ್ವತಂತ್ರವೂ, ಸುಂದರವೂ ಆದ ಕೃತಿಯಾಗಿದೆ.

ಸಂಸಾರ ಲೋಲುಪ್ತರನ್ನು ಎಚ್ಚರಿಸಿ ಮಹಾಂತರು ಸಾರಿರುವ ಸಂದೇಶವೆಂತಹದು ನೋಡಿ :

*ಎಲೆ ಮಾನವನೆ ಕೇಳು ಸ್ಥಿರವೆಂದು ಸಂಸಾರ*
*ಮಲದೇಹವನು ಮೆಚ್ಚಿ ಕೆಡಬೇಡ ಬರಿದೆ । ॥ ಪ ॥*

*ನಾರಿ ನಿನ್ನವಳಲ್ಲ ಹೇಮ ನಿನ್ನದು ಅಲ್ಲ ।*
*ಧೀರ ಪುತ್ರಾಪ್ತರುಗಳಾರಾರು ಅಲ್ಲ ॥*
*ಸಾರಿ ಹೇಳುವೆನೀಗ ತಿಳಿಯದದು ಮುಂದೆ ನೀ ।*
*ಘೋರ ನರಕಾರ್ಣವದೆ ಬೀಳ್ವಾಗ ತಿಳಿವೆ । ॥ ೧ ॥*

*ಕದನ ಕರ್ಕಶದಿಂದೆ ಜರಿದೆ ನೀನನ್ಯರನು ।*
*ಮದಸೋಕಿದಾನೆಯೋಲ್ ಜರಿಯದಿರು ಮನುಜಾ ।*
*ಪದವಿಗಿದು ತರವಲ್ಲಕುತ್ತಹುದು ಮುಂದೆ । ॥ ೨ ॥*

*ಗುರು ಹಿರಿಯರನು ಕಂಡು ಕೋಣನಂದದಿ ಮಲೆತು*
*ಸಿರಿಬಾಗದಿರೆ ಮುಂದೆ ಘನಬಾಧೆ ಬಿಡುವೆ ।*
*ಮೊರೆವ ಕಾಲನ ಕೈಗೆ ಸೆರೆಯ ಸಿಕ್ಕುವೆ ನೀನು*
*ಭರದಿ ಮಹಂತೇಶ ನಡಿವಿಡಿಯೋ ಮರುಳೇ ॥ ॥೩॥*

*(ಕೈವಲ್ಯ ದರ್ಪಣ. ಪುಟ: ೫೫)*

ಮಹಾಂತರು ಭಜನೆಗೆ ಹೊಂದಿಕೊಳ್ಳುವ ಸ್ತೋತ್ರ ಗೀತೆಗಳನ್ನು, ಮಂಗಳಾರತಿ ಪದಗಳನ್ನು ರಚಿಸಿದ್ದಾರೆ. *'ಮಂಗಳಾರತಿಯೆತ್ತಿರೆ ಸರ್ವಾಂಗ ಲಿಂಗಮಯ ಶಿವಯೋಗಿಗೆ: ಗಂಗೆ ಸರಸ್ವತಿ ಯಮುನೆ ನದಿ ಮಂತ್ರಮಯವಾಗಿ ರಂಜಿಸುವ ಪರಮಾತ್ಮಗೆ : ಎತ್ತುವೆನಾರತಿಯು । ಮದ್ಗುರುವಿಗೆ ಬೆಳಗುವೆನಾರತಿಯ'* ಎಂಬ ಹಾಡು ಪರಿಣಾಮಕಾರಿಯಾಗಿದೆ. ಒಂದೊಂದು ಹಾಡೂ ಅವರ ಸಾಧನೆಯ ವಿಕಾಸವನ್ನು, ಅವರು ದರ್ಶಿಸಿದ ಶರಣ ತತ್ತ್ವ ಸ್ವರೂಪವನ್ನು ಪ್ರತಿಬಿಂಬಸುವುದರಲ್ಲಿ ಸಫಲವಾಗಿವೆ. *"ಜಯಮಂಗಳಂ । ಜಯ ಜಯ ಶಿಶು ಮಹಂತ ಲಿಂಗೇಶಗೆ"* ಎಂಬ ಮಂಗಳಾರತಿ ಪದದಲ್ಲಿ ಆಧ್ಯಾತ್ಮಿಕ ಶಕ್ತಿಯ ಅನಂತ ಮಹಿಮೆಯನ್ನು ವರ್ಣಿಸಲಾಗಿದೆ. ಈ ಬಗೆಯ ಹಾಡುಗಳನ್ನು ಕಂದ ಪದ್ಯ, ಷಟ್ಪದಿಗಳ ಮಾಧ್ಯಮಗಳಲ್ಲಿ ಪರಿಣಾಮಾಕಾರಿಯಾಗಿ ಮೂಡಿಬಂದಿದೆ. ಲಾಲಿಪದಗಳು ಲಾಲಿ ಲಾಲಿಯು ಪರಬ್ರಹ್ಮದ ಶಿಶುವಿಗೆ । ಮಾಲೆಯ ಧರಿಸುವೆ ಮಲ್ಲಿಗೆ ಹೂವಿನ ಲಾಲಿ ಸದ್ಗುಣ ಶೀಲಲಾಲಿ ನಿತ್ಯಾನಂದ, ಲಾಲಿತ್ರಿಕೂಟಶಯನನೇ ಎನ್ನುವ ಲಾಲಿಪದಗಳು, ಇಷ್ಟೇ ಅಲ್ಲದೆ ಜೋಗುಳ ಪದಗಳು ಇವೆ. *'ತೂಗುವ ಬನ್ನಿರೆ ಬನ್ನಿ*

*ಸಖಿಯರು',* ಎನ್ನುವಂತಹ ಎಲ್ಲಾ ಹಾಡುಗಳಲ್ಲಿ ನಿಚ್ಚಳವಾದ ಲೋಕಾನುಭವ ಪ್ರಕಟವಾಗಿದೆ.

*'ತಂದೆ ಬಡಿದರೆ ಬುದ್ಧಿ । ಮಂದಿ ಬಡಿದರೆ ಕೆಡಕು' ಜ್ಞಾನವಿಲ್ಲದ ಭಕ್ತಿದರ್ಶನದಿಂದೇನು ಫಲ. । ಸಿರಿಯ ಕೊಡದಿರು ಬಹಳ । ಹರ ನಿನ್ನ ಮರತೇವು । 'ಸತಿಪತಿ ಸಮರಸದ ಬಾಳುವೆಗೆ ಪ್ರತಿಯುಂಟೇ', 'ಸಂಕಟ ಬಂದಾಗ ಸಂಗಯ್ಯ ಲಿಂಗಯ್ಯ', ಕರಿಗೆ ಹೆದರದ ಪುರುಷ ಕುರಿಗೆ ಹೆದರುವುದುಂಟೇ? 'ಸರ್ವ ದೇವರ ಪೂಜೆ ತನ್ನತೆಂಬಾತನೆ ಮಹಂತಲಿಂಗ', 'ನಾನು ಸಣ್ಣವನಾದರೇನು, ಜ್ಞಾನ ನಿನ್ನದು ಸಣ್ಣದಲ್ಲ* , ಮುಂತಾದ ಸೂಕ್ತಿಗಳನ್ನು ಮಹಾಂತರ ಹಾಡುಗಳಲ್ಲಿ ನೋಡಬಹುದು.

ಕವಿರತ್ನ ಶ್ರೀ ಚೆನ್ನಕವಿ ವಿರಚಿತ **"ಶ್ರೀ ಬಾಲಲೀಲಾ ಮಹಂತೇಶ್ವರ ಪುರಾಣ.** ಇದರಲ್ಲಿ ೨೪ ಸಂಧಿಗಳು, ೯೯೩ ವಾರ್ಧಕ ಷಟ್ಪದಿಗಳು ಇವೆ . ಒಟ್ಟಾರೆ ಈ ಗ್ರಂಥ ಸರಳವೂ, ಸುಂದರವೂ ಆದ ಕಾವ್ಯ , ಶಿವಯೋಗಿಗಳವರ ಜೀವನ ಚರಿತೆಯನ್ನು ಅದ್ಭುತವಾಗಿ ಚಿತ್ರಿಸಲಾಗೆದೆ . ಶಿವಯೋಗಿಗಳವರ ಪವಾಡಗಳ ನಿರೂಪಣೆಗೆ ಈ ಕಾವ್ಯ ಮೀಸಲಾಗಿದೆ .

೧. ನೀರಿನಲ್ಲಿ ಮುಳುಗಿದ ಲಿಂಗವನ್ನು ಮತ್ತೇ ಬರಿಸಿದ ಘಟನೆ.
೨. ಭಕ್ತ ದಂಪತಿಗಳಿಗೆ ಸಂತಾನವನ್ನು ದಯ ಪಾಲಿಸಿದುದು.
೩. ನೀರಿಲ್ಲದ ಬಾವಿಯಲ್ಲಿ ಸವಿಯಾದ ಜಲಬರುವಂತೆ ಮಾಡಿದುದು.
೪. ಟೊಪ್ಪಿಗೆಯಲ್ಲಿ ಕುಳಿತು ಹೊಳೆ ದಾಡಿದ ಪ್ರಸಂಗ.
೫. ಮೈಸೂರಿನಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಬೇನೆಯನ್ನು ಪರಿಹರಿಸಿ ಆಶೀರ್ವದಿಸಿದ್ದು.
೬. ಮುಳಗುಂದದ ಭಕ್ತರಿಗೆ ತಮ್ಮ ಶ್ರೀ ಮಠದ ಲಿಂಗ ಪೂಜಾಗವಿಯೊಳಗೆ ಉಳಿವೆ ಜಾತ್ರೆಯ ದರ್ಶನ ಮಾಡಿಸಿದ ಅದ್ಭುತ ಲೀಲಾ ಪ್ರಸಂಗ – ಇತ್ಯಾದಿ , ಪವಾಡಗಳ ನಿರೂಪಣೆ ಈ ಪುರಾಣ ಕಾವ್ಯದಲ್ಲಿ ಹೃದಯಂಗಮವಾಗಿ ಮೂಡಿಬಂದಿದೆ. ನಿದರ್ಶನ ರೂಪವಾಗಿ ಬಾಲಲೀಲಾ ಮಹಾಂತೇಶ್ವರರ ಪವಾಡ ಪ್ರಸಂಗವೊಂದನ್ನು ಇಲ್ಲಿ ನೋಡಬಹುದು.

ಉಳಿವೆಯ ಜಾತ್ರೆಗೆ ಪ್ರತಿ ವರುಷವೂ ಮಹಂತ ಶಿವಯೋಗಿಗಳು ಭಕ್ತರ ಒಡಗೂಡಿ ಹೋಗಿ ಬರುವ ನೇಮ – ನಿಷ್ಠೆಯನ್ನು ತಳೆದಿದ್ದರು. ಒಮ್ಮೆ ಉಳಿವೆಯ ಜಾತ್ರೆ ಇನ್ನು ಕೇವಲ ಐದು ದಿನಗಳು ಮಾತ್ರ ಇದ್ದರೂ ಶಿವಯೋಗಿಗಳು ಈ ಬಗ್ಗೆ ಆಲೋಚನೆಯನ್ನೇ ಮಾಡಿರಲಿಲ್ಲ. ಭಕ್ತರು ಗುರು ಮಠಕ್ಕೆ ಬಂದು ಸವಿನಯದಿಂದ ತಮ್ಮ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಈ ವರ್ಷ ಉಳಿವಿಗೆ ಹೊರಡುವುದಿಲ್ಲವೇ ಎಂದು ಬಿನ್ನವಿಸಿದರು. ಆಗ ಮಹಾಂತೇಶರು !

*"ಅವಧರಿಸಿ ಭಕ್ತರೇ, ಯಾತ್ರೆಯಂ ಬಿಡಲಹುದೆ*
*ತವೆಪಿಂದೆ ಪನ್ನೆರಡು ಬರಿಸನ್ನಮಂ ಪೋಗಿ*
*ಈ ವರ್ಷ ಉಳಿವುದೇಕೆ ?"*

ಎಂದು ಅಪ್ಪಣೆ ಮಾಡಿದರು. ಉಳಿವೆಗೆ ಬಯಕೆ ಉಳ್ಳವರೆಲ್ಲ ಸಿದ್ಧರಾಗಿರಿ ಎಂದು ಸವಿನುಡಿಯಿಂದ ಅರುಹಿದರು.

ಅಂದು ಹುಣ್ಣಿಮೆ ಯಾತ್ರಾರ್ಥಿಗಳನ್ನು ಮುಳಗುಂದದ ಶ್ರೀ ಮಠಕ್ಕೆ ಬರಮಾಡಿಕೊಂಡರು: ಲಿಂಗ ಪೂಜಾಗವಿಯೊಳಗೆ ಕರೆದೊಯ್ದರು: ಅಲ್ಲಿ ಭಕ್ತರು ಕಂಡದ್ದು ಏನು !

*"ಗುರು ಮಠದ ಪೊರಬಾಗಿಲಂ ಬಲಿಸಿ ತನ್ನ ಸುಂ*
*ದರ ಲಿಂಗ ಪೂಜಾ ನಿಲಯದೊಳವರಂ ಕರೆಯ*
*ಲರರೆ ನೆರೆದುಳಿವೆಯ ಮಹಾಯಾತ್ರೆಯೊಳು ನಿಂದು–*
*ಚೆನ್ನಬಸವನ ಗುಡಿಯನು !*
*ಪಿರಿಯ ಪರುಷೆಯನು ತೇರೆಳೆವುದಂ ಛತ್ರ ಚಾ*
*ಮರಗಳಂ ಪಲ್ಲಕ್ಕಿಯಂ ಪಗಲ ದೀಪಮಂ*
*ಹರಹರ ಮಹಾದೇವ ಎಂದೆಲ್ಲ*
*ಜನರು ಕೈ ಪರೆಗುಟ್ಟುವುದನು ಮತ್ತೆ"*

*(ಬಾಲಲೀಲಾ ಮಹಂತೇಶ್ವರ ಪುರಾಣ ಸಂದಿ ೨೪. ಪದ್ಯ ೬೭೮)*

ಹೀಗೆ ಮುಳಗುಂದದ ಗುರು ಮಠದಲ್ಲಿಯೇ ಉಳಿವೆಯ ಯಾತ್ರಾ ದರ್ಶನವನ್ನು ಮಾಡಿಸಿದ ಶ್ರೀ ಬಾಲಲೀಲಾ ಮಹಂತೇಶ್ವರರ ಈ ಲೀಲಾ ಪ್ರಸಂಗ ಅದ್ಭುತವಾಗಿದೆ. ಅನಂತ ಮಹಿಮೆಗಳಿಂದ ಸದ್ಭಕ್ತರನ್ನು ಉದ್ಧರಿಸಿದ ಶಾಂತಗುಣನಿಧಿ ಮಹಂತೇಶ್ವರರ ಪಾವನ ಚಾರಿತ್ರ್ಯವನ್ನು ಮನಗಾಣಲು ಶ್ರೀ ಚೆನ್ನಕವಿಗಳು ವಿರಚಿಸಿರುವ ಪುರಾಣ ಕಾವ್ಯವನ್ನು ಓದಬೇಕಾಗಿದೆ.

ಶ್ರೀ ಬಾಲಲೀಲಾ ಮಹಾಂತೇಶ್ವರರ ಸದಮಲಚಾರಿತ್ರ ಮಹಿಮಾಪೂರ್ಣ ವ್ಯಕ್ತಿತ್ವವನ್ನು ವರ್ಣಿಸಲು ಅಸದಳ. ಶಿವಯೋಗಿಗಳ ಲೀಲಾಪ್ರೌಢಿಮೆ, ಜ್ಞಾನ ಕ್ರಿಯೆಗಳ ಸಾಮರಸ್ಯ, ಈ ನಿತ್ಯ ನಿರಾಲಂಬ ಸ್ವರೂಪವನ್ನು ಪರಿಣಾಮಕಾರಿಯಾಗಿ ಚೆನ್ನ ಕವಿಗಳು ಪುರಾಣದಲ್ಲಿ ವರ್ಣಿಸಿರುತ್ತಾರೆ.

ಮತ್ತೊಂದು ಮಹತ್ವಪೂರ್ಣ ಸನ್ನಿವೇಶ, ಚಿತ್ರದುರ್ಗದ ಶ್ರೀ ಬೃಹನ್ಮಠದ ಅಂದಿನ ಜಗದ್ಗುರುಗಳಾದ ಶ್ರೀ ಶಾಂತವೀರಸ್ವಾಮಿಗಳವರು ತಮ್ಮ ಮಠಕ್ಕೆ ಸಹಜವಾಗಿ ಸಲ್ಲಬೇಕಾದ ಕಾಣಿಕೆಯನ್ನು ಪಡೆದು ಬಾ ಎಂದು ಚರಮೂರ್ತಿ ರಾಚವಟ್ಟೇಶನನ್ನು ಬಾಲಲೀಲಾ ಮಹಾಂತೇಶರ ಬಳಿಗೆ ಕಳುಹಿಸಿದಾಗ ಇವರು ಎಂತಹ ಕಾಣಿಕೆಯನ್ನು ಸಲ್ಲಿಸಿದರು !

'ನನ್ನ ಸಂಪತ್ತೆಲ್ಲವೂ ನಿನ್ನದೇ, ನಿನ್ನ ಸ್ವರೂಪವೇ ನಾನಾಗಿರುವೆ. ನಿನ್ನಿಂದಲೇ ನಾನು, ನಿಮಗೆ ನಾನು ಏನು ಕಾಣಿಕೆ ಕೊಡಬಲ್ಲೆ !' ಬಾಲಲೀಲಾ ಮಹಾಂತೇಶ್ವರ ಅನರ್ಘ್ಯವಾದ ಈ ಉತ್ತರ, ಕಾಣಿಕೆಯನ್ನು ತರಲು ತಿಳಿಸಿದ ಪೂಜ್ಯಶ್ರೀ ಮುರುಘರಾಜೇಂದ್ರ ಶಾಂತವೀರ ಜಗದ್ಗುರುಗಳವರ ಹೃದಯವನ್ನು ಸೆಳೆಯದೆ ಮತ್ತೇನು ! ಈ ಪ್ರಸಂಗವು ಶ್ರೀ ಮಹಾಂತೇಶ್ವರರ ವಿನಯಗುಣ ಹಾಗೂ ದಿಟ್ಟತನಕ್ಕೆ ಸುಂದರ ಸಾಕ್ಷಿಯಾಗಿದೆ.

ಶ್ರೀ ಚನ್ನ ಕವಿಗಳು ಗ್ರಹಿಸಿರುವ ಈ ಮೂಲಭಾವದ ಆಕರಗ್ರಂಥ ಮಹಾಂತೇಶ್ವರರ **'ಕೈವಲ್ಯ ದರ್ಪಣ'** ವಾಗಿದೆ ಎಂದು ಹೇಳಬಹುದು. ಇದರಿಂದ ಮಹಾಂತೇಶ್ವರ ಪದ – ಪದ್ಯಗಳಿಂದ ಚನ್ನಕವಿಗಳು ಪ್ರಭಾವಿತರಾಗಿದ್ದಾರೆ . ಸ್ಫೂರ್ತಿಯನ್ನು ಪಡೆದು ಪುರಾಣ ಕಾವ್ಯ ರಚಿಸಿದ್ದಾರೆ ಎಂಬ ವಿಷಯ ಚೆನ್ನಾಗಿ ಮನದಟ್ಟಾಗುತ್ತದೆ .

ಮೈಸೂರು ಒಡೆಯರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ( ೧೭೯೪ – ೧೮೬೮ ) ಅವರು ತಮಗೆ ಒದಗಿದ್ದ ಬೇನೆಯ ಪರಿಹಾರಕ್ಕಾಗಿ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳವರ ದರ್ಶನ ಭಾಗ್ಯವನ್ನು ಪಡೆಯಲು ಬಯಸಿದರು. ತಮ್ಮ ಅರಮನೆಗೆ ಶಿವಯೋಗಿಗಳವರನ್ನು ಬರಮಾಡಿ ಕೊಳ್ಳಲು ಬಹುಬಾರಿ ಪ್ರಯತ್ನಿಸಿದರೂ ಮಹಾಂತ ಶಿವಯೋಗಿಗಳು 'ನಾಳೆ ನೋಡೋಣ' ಎಂದು ತಿಂಗಳಾರು ಗಟ್ಟಲೆ ಉತ್ತರ ಹೇಳಿ, ಕರೆಯಲು ಬಂದ ರಾಯಭಾರಿಯನ್ನು ಕಳುಹಿಸಿ ಬಿಡುತ್ತಿದ್ದರು. ಈ ಸ್ವಭಾವವನ್ನು ಕಂಡು ಮಹಾಂತೇಶ್ವರ ಸಾಕುತಾಯಿ ಬಸವಾಂಬೆಗೆ ಹಿಡಿಸದಾಯಿತು. 'ಏನಪ್ಪಾ ! ಮಹಂತ, ಬರುವುದಾದರೆ ಬರುತ್ತೇನೆ ಎನ್ನಬೇಕು . ಇಲ್ಲವಾದರೆ ನಾನು ಅರಮನೆಗೆ ಬರುವುದಿಲ್ಲ ಎಂದು ಹೇಳಿ ಕಳಿಸಬೇಕು. ಅದನ್ನು ಬಿಟ್ಟು ಪೂಜ್ಯ ಭಾವದಿಂದ ಕರೆಯಲು ಬಂದವರನ್ನು ದಿನವೂ 'ನಾಳೆ ನೋಡೋಣ' ಎಂದು ತಿಳಿಸುವುದು ಸರಿಯಲ್ಲ ಎಂದು ನುಡಿದಳು. ಆಗ ಆಕೆಯ ಮಾತಿಗೆ 'ನೀನು ಬರುವುದಾದರೆ ನಾನು ಸಮ್ಮತಿ ನೀಡುತ್ತೇನೆ' ಎಂದು ಒಪ್ಪಿಗೆ ನೀಡಿದರು. ಅಂತೂ ಮಹಾಮಾತೆ ಬಸವಾಂಬೆಯ ಮಾತಿನ ಪ್ರಕಾರ ಮಹಾಂತೇಶರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರಿಗೆ ದರ್ಶನ ಆಶೀರ್ವಾದಗಳನ್ನಿತ್ತು ಅವರ ಎಲ್ಲಾ ಸಂಕಷ್ಟಗಳನ್ನು ಪರಿಹಾರ ಮಾಡಿದರು. ಈ ವಿಶಿಷ್ಟ ಸಂದರ್ಭದಲ್ಲಿ ಮೈಸೂರಿನ ಒಡೆಯರು ಭಕ್ತಿ ಪೂರ್ವಕವಾಗಿ ಶಿವಯೋಗಿಗಳಿಗೆ ಕನಕಾಭಿಷೇಕವನ್ನು ಮಾಡಿದರು. ಕನಕಾಭಿಷೇಕ ಮಾಡುವ ಸಂದರ್ಭದಲ್ಲಿ ಮಹಾಂತೇಶ್ವರರು ಆತ್ಮಲಿಂಗ ನಿರೀಕ್ಷೆಯಲ್ಲಿದ್ದರೆಂಬ ಸಂಗತಿ ತಿಳಿದು ಬರುತ್ತದೆ. ಅರಸರು ಅರ್ಪಿಸಿದ ಮುತ್ತು ರತ್ನಗಳನ್ನು ಬಯಸದೆ ಮಹಾಂತ ಶಿವಯೋಗಿಗಳು ಚಿತ್ರ ಮಯವಾದ ಒಂದು ಕುಂಬಳಕಾಯಿ ಬುರುಡೆ (ಕುಂಬಳಕಾಯಿ ಬುರುಡೆ ಮುಳುಗುಂದದ ಶ್ರೀ ಗವಿಮಠದಲ್ಲಿ ಇಂದಿಗೂ ಕಂಗೊಳಿಸುತ್ತಿದೆ ಎಂಬುದಾಗಿ ತಿಳಿದು ಬರುತ್ತದೆ.) ಯನ್ನು ಮಾತ್ರ ಸ್ವೀಕರಿಸಿದರೆಂಬುದು ಈ ಮಹಿಮರ ಪರಿಪೂರ್ಣ ವೈರಾಗ್ಯ ನಿಷ್ಠೆಯನ್ನು ನಿಜ ತತ್ತ್ವದ ನಿಲವನ್ನು ವ್ಯಕ್ತಿತ್ವ ಅನುಭಾವದರ್ಶನವನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಅಜಾನುಬಾಹುಗಳಾಗಿದ್ದ ಮಹಾಂತೇಶ್ವರರು ಅನುಭಾವದ ರಸಾವೇಶದಲ್ಲಿ ಮುಳಗುಂದದ ಶ್ರೀ ಮಠದ ಕಂಬ, ತೊಲೆ, ಬೋದಿಗೆಯ ಮೇಲೆ ಹಾಡುಗಳನ್ನು ಬರೆಯುತ್ತಿದ್ದರು, ಎಂಬ ಸಂಗತಿ ಪ್ರಸಿದ್ಧವಾಗಿದೆ. ವಿಭೂತಿಯ ಉಂಡೆಯಿಂದ ಹಾಗೆ ಬರೆದ ಹಾಡುಗಳೇ **'ಕೈವಲ್ಯ ದರ್ಪಣ'**ವಾಗಿದೆ. ಮಹಾಂತೇಶರು ಅಂತಃಸ್ಫೂರ್ತಿ ಬಂದಾಗ ಶ್ರೀ ಮಠದ ತೊಲೆ, ಬೋದಿಗೆಯ ಮೇಲೆ ಬರೆದ ಅಂದಂದಿನ ಹಾಡುಗಳನ್ನು ಸಂಗ್ರಹಿಸಿ ಸಂರಕ್ಷಿಸಿರುವ ಅವರ ನೆಚ್ಚಿನ ಶಿಷ್ಯ ಶ್ರೀ ಮರಿದೇವರನ್ನು ನಾವು ಸ್ಮರಿಸಬೇಕಾಗುತ್ತದೆ. ಗುರುಸೇವೆಯನ್ನು ಮಾಡಿಕೊಂಡಿದ್ದವರು ಶ್ರೀ ಮರಿದೇವರು ಜೊತೆಗೆ ಅನರ್ಘ್ಯ ಸಾಹಿತ್ಯ ಸೇವೆಯನ್ನು ಮಾಡಿದವರು ಆಗಿದ್ದಾರೆ. (ಕಲ್ಯಾಣದ ವಚನ ಭಂಡಾರಿ ಶಾಂತರಸ ಹಾಗೂ ಓಲೆಯ ಶಾಂತಯ್ಯ

ಶರಣರ ಸಮ್ಮಿಲನವು ಉಂಟಾಗುತ್ತದೆ.) ಶ್ರೀ ಬಾಲಲೀಲಾ ಮಹಾಂತೇಶ್ವರರ ಪಾದ ಸನ್ನಿಧಿಯ ಸಾತತ್ಯ ಸೇವೆಯಿಂದ ಶ್ರೀ ಮರಿದೇವರ ಜೀವನ ಪಾವನವಾಗಿದೆ.

ವೈರಾಗ್ಯದಲರು

ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳ ಶತಮಾನೋತ್ಸವ ಸ್ಮಾರಕ ಗ್ರಂಥವಾಗಿ ೧೯೫೯ರಲ್ಲಿ ಪ್ರಸಿದ್ಧವಾಗಿದೆ. ಪರಮ ಪೂಜ್ಯ ಶ್ರೀ.ಮ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ದಿವ್ಯ ಪ್ರೇರಣೆಯಿಂದ ಈ ಗ್ರಂಥ ಪ್ರಕಾಶಗೊಂಡಿದೆ. ಸಾರ ಸದ್ಭಕ್ತರ ವಿದ್ವಜ್ಜನರ ಲೇಖನಗಳು ಹಾಗೂ ಅಗತ್ಯವಾದ ಕೆಲವು ಚಿತ್ರಗಳು ಈ ಗ್ರಂಥದಲ್ಲಿ ಸೇರ್ಪಡೆಯಾಗಿವೆ. ಕೈವಲ್ಯ ದರ್ಪಣ, ಕವಿರತ್ನ ಚೆನ್ನಕವಿಗಳ ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ, ವೈರಾಗ್ಯದಲರು ಸ್ಮಾರಕ ಗ್ರಂಥ – ಇವಿಷ್ಟು ಶಿವಯೋಗಿಗಳವರನ್ನ ಕುರಿತು ಲಭ್ಯವಾಗಿರುವ ಅಧಿಕೃತ ಸಾಧನ ಸಾಹಿತ್ಯಗಳಾಗಿವೆ.

ಕೇವಲ ೩೬ ವರುಷಗಳ ಜೀವಿತಾವಧಿಯಲ್ಲಿ (೧೮೨೩ – ೧೮೫೯) ಶ್ರೀಬಾಲಲೀಲಾ ಮಹಾಂತ ಶಿವಯೋಗಿಗಳು ಸಾಧಿಸಿರುವ ತಪ್ಪಸ್ಸು, ಕರುಣಿಸಿರುವ ಅನುಭಾವ ಸಂಪತ್ತು ಸಹಜವಾಗಿ ಮೆರೆದಿರುವ ಅನಂತ ಲೀಲೆಗಳು ಮಹತ್ತರವಾಗಿವೆ. ಒಟ್ಟಿನಲ್ಲಿ ಅವರ ಧ್ಯಾನ, ಮೌನ, ನೇಮ, ಮಹಾನುಭಾವಗಳಿಂದ ಪ್ರಕಾಶ ಪೂರ್ಣವಾದುದು. ಅವರ ಜೀವನ ಚರಿತ್ರೆ, ಹೆಚ್ಚಿನ ಕೀರ್ತಿ ಪಡೆದುಕೊಳ್ಳವ ಇಚ್ಛೆ ಇಲ್ಲದೆ, ಪುರಾತನರ ಕರುಣೆಯ ಕಂದ ತಾವೆಂಬ ಸಂಕೇತ ಭಾವದಿಂದ ತಮ್ಮ ನಿಲುವಿನ ಬಗೆಗೆ ಜಗತ್ಪುತ್ರನೆಂದು ತಾವೇ ಕರೆದುಕೊಂಡಿರುವುದು ಈ ಶರಣರ ಸೌಜನ್ಯದ ಪರಾಕಾಷ್ಠೆಯಾಗಿದೆ.

ಬಾಲಲೀಲೆ, ಪಾಂಡಿತ್ಯ, ಶಿವಯೋಗಿಗದ ಅನುಭಾವ ದಿಂದ ತುಂಬಿ ಬಂದಿರುವ ಈ ಮಹಾಶರಣರ ಜೀವನ ಚರಿತ್ರೆಯಲ್ಲಿ ಮುಖ್ಯವಾಗಿ ಅಂತಃ ಶುದ್ಧಿಯನ್ನು ಧರ್ಮಬುದ್ಧಿಯನ್ನು ಮುಖ್ಯವಾಗಿ ದೈವೀಸ್ಫೂರ್ತಿ ಶಕ್ತಿಯನ್ನು ಎಲ್ಲ ಕಾಲದ ಜನರು ಸಂಪಾದಿಸಿಕೊಂಡು ಕೃತಾರ್ಥರಾಗಲಿ, ಶಿವಯೋಗಿಯ ಕರುಣೆ ತುಂಬಿಬರಲಿ ಎಂಬುದಾಗಿ ಹೇಳುತ್ತಾ ಆಶ್ರಯಿಸಿದವರನ್ನು ರಕ್ಷಿಸಬೇಕು, ಹಸಿದವರಿಗೆ ಅನ್ನವನ್ನು ನೀಡಬೇಕು. ಚರಮೂರ್ತಿಗಳನ್ನು ಶಿವನೆಂದು ಭಜಿಸಬೇಕು, ನರರನ್ನು ಕೊಂಡಾಡಿ ಬೇಡಬಾರದು, ಹಿಂಸೆಯನ್ನು ಮಾಡಬಾರದು, ನಿಷ್ಠುರದ ನುಡಿಯನ್ನಾಡಿ ಅನ್ಯರನ್ನು ಪೀಡಿಸಬಾರದು, ಕೃಪಣತ್ವವನ್ನು ಬಿಡಬೇಕು, ಭಕ್ತಜಾತಿಯಲ್ಲಿ ಜಾತಿಸೂತಕವನ್ನು ಎಣಿಸಬಾರದು ಎಂಬಿವೇ ಮುಂತಾದ ಮಹಾಂತರ ನುಡಿಮಾತುಗಳನ್ನು ಮಾನವ ಜೀವನದ ಉದ್ಧರಕ್ಕೆ ಕಾರಣವಾಗಿರುವಂತಹವುಗಳಾಗಲಿ.

❑

## ಸಹಾಯಕ ಗ್ರಂಥಗಳು


೧. **ಕೈವಲ್ಯ ದರ್ಪಣ** : ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು – ಸಂ. ಪ್ರೊ. ಶಿ.ಶಿ. ಬಸವನಾಳ. ಪ್ರ: ಮುರುಘಾಮಠ, ಧಾರವಾಡ.

೨. **ಕೈವಲ್ಯ ಕಲ್ಪವಲ್ಲರಿ** : ಶ್ರೀ ಸರ್ಪಭೂಷಣ ಶಿವಯೋಗಿಗಳು : ಪ್ರ : ಪಿ.ಸಿ. ಶಾಬಾದಿಮಠ, ಗದಗ.

೩. **ಕೈವಲ್ಯ ಪದ್ಧತಿ** : ನಿಜಗುಣ ಶಿವಯೋಗಿಗಳು: ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪. **ಕನ್ನಡದಲ್ಲಿ ಕೈವಲ್ಯ ಸಾಹಿತ್ಯ** : ಡಾ. ಎಚ್. ತಿಪ್ಪೇರುದ್ರಸ್ವಾಮಿ. ಪ್ರ : ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ, ಇಲಕಲ್ಲ.

೫. **ಶರಣ ಸಾಹಿತ್ಯ ಚಿಂತನ** : ಪ್ರೊ ಜಿ. ಅಬ್ದುಲ್ ಬಷೀರ್. ಪ್ರ. ಬಸವ ಸಮಿತಿ, ಬೆಂ.

೬. **ಬಾಲಲೀಲಾ ಮಹಾಂತ ಶಿವಯೋಗಿ** : ಹೊ.ಜ. ಸುಂದರೇಶನ್, ಬೆಂ.

೭. **ವೈರಾಗ್ಯದಲರು** : ಶ್ರೀ ಬಾಲಲೀಲಾ ಮಹಾಂಸ ಶಿವಯೋಗಿಗಳ ಶತಮಾನೋತ್ಸವ ಸ್ಮಾರಕ ಗ್ರಂಥಮಾಲೆ.

# ನಡೆದಾಡುವ ದೇಗುಲ

– ಹೆಚ್.ವಿ. ವೀರಭದ್ರಯ್ಯ *

ಐದಾರು ದಿನಗಳ ಹಿಂದೆ ಆತ್ಮೀಯ ಶ್ರೀ ಎಂ. ರೇಣುಕಾರಾಧ್ಯರ ಜೊತೆ ಬೆಂಗಳೂರಿನಲ್ಲಿರು ಗೀತಾಂಜಲಿ ಗ್ರಾಫಿಕ್ ಮುದ್ರಣಾಲಯಕ್ಕೆ ಹೋಗಿದ್ದ ಸಂದರ್ಭ. ಅಲ್ಲಿ ವಿದ್ಯಾರ್ಥಿ ಬಂಧು ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಭೇಟಿಯಾಗಿದ್ದರು. "ಸಾರ್, ಕನಕಪುರ ಶ್ರೀ ದೇಗುಲ ಮಠದ ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ರಜತಮಹೋತ್ಸವ ಸಮಾರಂಭದಲ್ಲಿ ಬಿಡುಗಡೆಯಾಗಲಿರುವ **'ದೇಗುಲ ಸಂಪದ'** ನೆನಹಿನ ಸಂಚಿಕೆಗೆ ನಿಮ್ಮಿಂದ ಲೇಖನ ಬರಲೇ ಇಲ್ಲವಲ್ಲ" ಎಂದು ಕೇಳಿದರು. **'ತುಂಬಾ ತಡವಾಯಿತಲ್ಲ'** ಎಂದುಕೊಂಡು ಸುಮ್ಮನಾದೆ ಎಂದೆ. 'ಇಲ್ಲ ಸಾರ್, ಈಗಲಾದರು ಕಳಿಸಿ' ಎಂದರು. ಆಯಿತು ಪ್ರಯತ್ನಿಸುತ್ತೇನೆ. ಆ ಗುರುಗಳ ಆಶೀರ್ವಾದವೇ ಲೇಖನ ಬರೆಸಬೇಕು ಎಂದು ಹೇಳಿಬಂದೆ. ಅತ್ತ ಗಮನಿಸಲಾಗಲಿಲ್ಲ. ಆದರೆ ನಿನ್ನೆ ರಾತ್ರಿ (30.3.2004) ದೂರವಾಣಿ ಮೂಲಕ ಶ್ರೀ ಸಿದ್ಧಗಂಗಪ್ಪನವರನ್ನು ಬೇರೊಂದು ವಿಚಾರಕ್ಕೆ (ಅದೂ ಸಹ ಇಂತಹುದೇ ಆದದ್ದು, ಪರಮಪೂಜ್ಯ ಶ್ರೀ ಸಿದ್ಧಗಂಗಾಶ್ರೀಗಳ ಅಮೃತ ಮಹೋತ್ಸವ ಸಮಾರಂಭದಲ್ಲಿ ಬಿಡುಗಡೆ ಯಾಗಲಿರುವ ಗ್ರಂಥಕ್ಕೆ ಸಂಬಧಿಸಿದ್ದು) ಸಂಪರ್ಕಿಸಿದಾಗ ಅವರಿಂದ ಬಂದ ಪ್ರತಿಕ್ರಿಯೆ 'ಸಾರ್, ಲೇಖನ ಸಿದ್ಧವಾಯಿತಾ, ಕಳಿಸಿ ಬೇಗ' ಎಂಬುದಾಗಿತ್ತು. ನಾಚಿಕೆಯಾಯಿತು. ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ತಲೆತುಂಬಾ ವಿಚಾರಗಳು ಏನು ಬರೆಯಲಿ? ಯಾವುದನ್ನು ಆರಿಸಿಕೊಳ್ಳಲಿ? ಮುಂತಾಗಿ. ಅಂತೂ ಶ್ರೀಗಳವರ ಕೃಪೆಯೇ ಬರೆಯುವಂತೆ ಮಾಡಿತು.

ಶ್ರೀ ಮ.ನಿ.ಪ್ರ.ಸ್ವ. ಶ್ರೀಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಲಿಂಗೈಕ್ಯ ಪರಮಪೂಜ್ಯ ಶ್ರೀಶ್ರೀ ಇಮ್ಮಡಿ ಮಹಾಲಿಂಗಮಹಾಸ್ವಾಮಿಗಳ ಕರಕಮಲ ಸಂಜಾತರು, ಶ್ರೀಸಿದ್ಧಗಂಗಾಮಠದ ಪರಮಪೂಜ್ಯ ಡಾ|| ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸೇವಾ ಕಮ್ಮಟದಲ್ಲಿ ಅರಳಿದವರು. ಈ ಎಲ್ಲ ಪೂಜ್ಯರೂ ಬಸವಾದ್ವೈತ ಸಿದ್ಧಾಂತದ ಅನುಯಾಯಿಗಳು. ಇಷ್ಟಲಿಂಗಪೂಜೆಯನ್ನು ಮಾಡುತ್ತಲೇ ಜಂಗಮ ಲಿಂಗ (ಸಮಾಜ)ವನ್ನು ಕಡೆಗಣಿಸದೆ ಘನಮನ ಸಂಪನ್ನರಾದವರು. ಸಾಮಾಜಿಕ ಪ್ರಜ್ಞೆ ಇಲ್ಲದ ಆಧ್ಯಾತ್ಮಕ್ಕೆ ಬೆಲೆಯಿಲ್ಲ ಎಂಬುದನ್ನು ಸಾಬೀತು ಮಾಡಿದವರು.

"ವಿಜ್ಞಾನ ಮತ್ತು ಆಧ್ಯಾತ್ಮಗಳನ್ನು ಒಂದು ಮಾಡಿಸುವ ಯತ್ನ 21ನೇ ಶತಮಾನದಲ್ಲಿ ಬಿರುಸಿನಿಂದ ಪ್ರಾರಂಭ ವಾಗಿದೆ. ಹೀಗಾಗದಿದ್ದರೆ ಮಾನವ ಕುಲಕ್ಕೆ ಭವಿಷ್ಯವಿಲ್ಲ ಎಂಬ ತೀರ್ಮಾನಕ್ಕೆ ಜೀವಕಾರುಣ್ಯದಿಂದ ಕೂಡಿದ ವಿಜ್ಞಾನಿಗಳು ಮತ್ತು ತತ್ತ್ವಜ್ಞಾನಿಗಳು ವಿಶ್ವದ ಅನೇಕ ಕಡೆಗಳಲ್ಲಿ ಯತ್ನಿಸುತ್ತಿದ್ದಾರೆ. ಆದರೆ ಬಸವಣ್ಣನವರು 850 ವರ್ಷಗಳ ಹಿಂದೆಯೇ ಆಧ್ಯಾತ್ಮಿಕ ಜಗತ್ತಿನ ಸುಜ್ಞಾನ ಮತ್ತು ಭೌತಿಕ ಜಗತ್ತಿನ ವಿಜ್ಞಾನವನ್ನು ಒಂದು ಗೂಡಿಸುವುದರ ಮೂಲಕ ಹೊಸತನ್ನು ಸಾಧಿಸಿದ್ದಾರೆ. ಈ ಸಂಗಮ ತತ್ತ್ವಕ್ಕೆ ಆಧ್ಯಾತ್ಮಿಕ ಭೌತಿಕ ವಾದವೆಂದೂ, ಬಸವಾದ್ವೈತವೆಂದೂ ಕರೆಯ ಬಹುದು. ಆಧ್ಯಾತ್ಮಿಕ ಜಗತ್ತು ಮತ್ತು ಭೌತಿಕ ಜಗತ್ತಿನ ಮಧ್ಯೆ ಅದ್ವೈತ ಸಾಧಿಸುವ ಭೇರುಂಡ ತತ್ತ್ವವೇ ಆಗಿದೆ. ಇದೇ ಬಸವಾದ್ವೈತ. (ರಂಜಾನ್ ದರ್ಗ- ಬಸವಣ್ಣನವರ ದೇವರು, ಪುಟ 45–46)

ಪೂಜ್ಯ ಶ್ರೀಮುಮ್ಮಡಿ ನಿರ್ವಾಣ ಮಹಾಸ್ವಾಮಿ ಗಳವರು ಸಿದ್ಧಗಂಗಾ ಪೂಜ್ಯ ಶ್ರೀಗಳನವರನ್ನೇ ಆದರ್ಶ ವನ್ನಾಗಿಟ್ಟುಕೊಂಡು ನಡೆದಿದ್ದಾರೆ. ಸಿದ್ಧಗಂಗಾ ಶ್ರೀಗಳವರು ನಡೆದಾಡುವ ದೇವರಾಗಿದ್ದರೆ, ದೇವರಿಗೂ ದೇಗುಲಕ್ಕೂ ದೀಪ ದೀಪ್ತಿಯ ಸಂಬಂಧವಿರುವಂತೆ ಉಭಯ ಶ್ರೀಗಳವರಿಗೂ ಬೆಳೆದು ಬಂದಿರುವ ಸದ್ಗುರು ಸಂಬಂಧ ಹಾಲು-ಜೇನು ಸಮಸಮವಾಗಿ ಬೆರೆತಂದಿದೆ.

176, ಹರತೀಶ ಕೃಪ, ಎಸ್.ಐ.ಟಿ. 3ನೇ ಕ್ರಾಸು, ವಿಶ್ವೇಶ್ವರಯ್ಯ ಬಡಾವಣೆ, ತುಮಕೂರು - 572 102

ಶ್ರೀಗಳವರಲ್ಲಿ ಕಾಣುವುದಾದರೂ ಏನು? ಲಿಂಗಪೂಜಾನಿಷ್ಠೆಯೇ? ಸಮಾಜಾಭಿವೃದ್ಧಿ ಸಂಕಲ್ಪವೇ? ಕೊಡಗೈಯ ಉದಾರತನವೇ? ವಿದ್ಯಾರ್ಥಿಗಳ ಕ್ಷೇಮ ಪಾಲನೆಯೇ? ಯಾರು ಕರೆದರೂ ಕೈಗೊಟ್ಟು ಧಾವಿಸುವ ಭಕ್ತರ ಮೇಲಿನ ಪ್ರೀತಿಯೇ? ಮಠಾಧೀಶರೊಡನೆ ಬೆಳೆಸಿಕೊಂಡು ಬಂದಿರುವ ಸಹಜ ಸದ್ಭಾವದ ಸ್ನೇಹವೇ? ದಣಿವರಿಯರಂತೆ ಬಿನ್ನಹ-ಬಿಡುಗಡೆಯ ಶಿವಪೂಜಾ ಕೈಂಕರ್ಯವೇ? ಸಭೆ ಸಮಾರಂಭಗಳಲ್ಲಿ ಸಮಯ ಪ್ರಜ್ಞೆಯರಿತು ನೀಡುವ ಆಶೀರ್ವಚನವೇ? ಕಡುಬಡವರ ಕಷ್ಟ ಸಂಕಷ್ಟಗಳಿಗೆ ಕರುವಿನೆಡೆಗೆ ಧಾವಿಸುವ ಹಸುವಿನಂಥ ಸ್ವಭಾವವೇ? ಶ್ರೀಮಠಕ್ಕೆ ಬಂದ ಭಕ್ತರನ್ನು ತುಂಬು ಹೃದಯದಿಂದ ಉಪಚರಿಸುವ ರೀತಿಯೇ? ಮಠದ ಸಿಬ್ಬಂದಿಯನ್ನು ನಡೆಸಿಕೊಳ್ಳುವ ಮಾತೃಮಮತಾ ಹೃದಯವೇ? ಹಿರಿಯಗುರು ಮಾರ್ಗಾಚಾರ ಶ್ರದ್ಧೆಯೇ? ಕಿರಿಯ ಶ್ರೀಗಳನ್ನು ರೂಪಿಸುತ್ತಿರುವ ವೈಧಾನಿಕತೆಯೇ? ಕೃಷಿ ಕೃತ್ಯ ಕಾಯಕದಲ್ಲಿನ ಆಸಕ್ತಿಯೇ? ವಚನಾಧ್ಯಯನ ಹಂಬಲವೇ? ಎಂಥ ಸನ್ನಿವೇಶದಲ್ಲಿಯೂ ಸಮತೆಯನ್ನು ಕಳೆದುಕೊಳ್ಳದ ಮಾನಸಿಕ ಸಮತೋಲನವೇ? ಸುಪ್ರಸನ್ನ ಭಸ್ಮಭೂಷಿತ ವದನಾರವಿದವೇ? ಮೃದುವಚನ, ಸದುವಿನಯವೇ? ಹಗಲಿರುಳು ದೇಗುಲ ಮಠದ ಅಭಿವೃದ್ಧಿ ಮಾಡುವ ಸಂವಾದವೇ? ವಿದ್ವಾಂಸರೊಡನೆ, ಅನುಭಾವಿಗಳೊಡನೆ ನಡೆಸುವ ಚಿಂತನಮಂಥನವೇ? ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಸಾವಿರಾರು ವಿದ್ಯಾರ್ಥಿಗಳ ಹಿತಚಿಂತನೆಯೇ? ಯಾವುದನ್ನು ಕಾಣುವುದು? ಎಲ್ಲವನ್ನೂ ಕಾಣಬಹುದು ಎಂದರೆ ಎಲ್ಲವನ್ನೂ ಹೇಳಿದಂತಾಗುವುದಿಲ್ಲವೆಂದೇ ತೋರುತ್ತದೆ.

ಶ್ರೀಗಳವರು ಶಿವಯೋಗದ ಮೂಲಕ ಮಾನಸಿ ವ್ಯಾಯಾಮವನ್ನು, ದಾಸೋಹದಿಂದ ಸಾಮಾಜಿಕ ವ್ಯಾಯಾಮವನ್ನು ಮತ್ತು ಕಾಯಕದಿಂದ ದೈಹಿಕ ವ್ಯಾಯಾಮವನ್ನು ಅಳವಡಿಸಿಕೊಂಡಿರುವ ಪೂಜ್ಯ ಸಿದ್ಧಗಂಗಾ ಶ್ರೀಗಳವರ ಸೇವಾದರ್ಶ ಪಥದಲ್ಲಿ ನಡೆದವರಾಗಿದ್ದಾರೆ. ಸಿದ್ಧಗಂಗಾ ಶ್ರೀಗಳವರ ದಿವ್ಯ ಮಾರ್ಗದರ್ಶನವೇ ನಮ್ಮೆಲ್ಲ ಸೇವಾ ಚಟುವಟಿಕೆಗಳಿಗೆ ಶ್ರೀರಕ್ಷೆ ಎಂದು ನಂಬಿ ನಡೆದಿದ್ದಾರೆ. ಮನದಲ್ಲಿ ಗುರು ಮಹಾಲಿಂಗ ಶ್ರೀಗಳ ಸ್ಮರಣೆ ಸದಾ ನಡೆಸಿದ್ದಾರೆ.

ಶ್ರೀ ಸಿದ್ಧಗಂಗಾಮಠದ ಏನೆಲ್ಲಾ ಸೇವಾ ಜೀವನದಲ್ಲಿ ದೇಗುಲ ಶ್ರೀಗಳು ಇದ್ದೇ ಇರುತ್ತಾರೆ. ಪ್ರತಿ ಹುಣ್ಣಿಮೆಯಂದು ಪರಮ ಪೂಜ್ಯರನ್ನು ತಮ್ಮ ಮಠಕ್ಕೆ ಆಮಂತ್ರಿಸುತ್ತಲೇ ಇರುತ್ತಾರೆ. ದರ್ಶನಾಶೀರ್ವಾದಕ್ಕೆ ಮನಸ್ಸಿಗೆ ಬಂದಾಕ್ಷಣ ಬಂದು ಬಿಡುತ್ತಾರೆ. ಗ್ರಾಮಾಂತರ ಬಸವ ಜಯಂತಿ ಯೋಜನೆಯ ಯಶಸ್ಸಿಗೆ ಶ್ರೀಗಳು ನೀಡುತ್ತಿರುವ ಸಹಕಾರ, ಒತ್ತಾಸೆ, ಅಭಿಮಾನ ಅಷ್ಟಿಷ್ಟಲ್ಲ. ಕನಕಪುರ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ, ತಮಿಳುನಾಡಿನ ಗ್ರಾಮಗಳಲ್ಲಿ ಬಸವ ಜಯಂತಿ ಮತ್ತು ನಾಟಕ ಪ್ರದರ್ಶನಗಳಿಗೆ ಅವಕಾಶ ಕಲ್ಪಿಸಿಕೊಡುವಲ್ಲಿ ಸಂತೋಷಿಸುತ್ತಾರೆ. ಹಾಗೆ ಯಾವುದಾದರು ನಾಟಕಗಳು ಗ್ರಾಮಗಳಲ್ಲಿ ಪ್ರದರ್ಶಿತವಾದಾಗ ಮರುದಿನ ಬೆಳಗ್ಗೆ ನಾಟಕದ ಕಲಾವಿದರಿಗೆ, ಸಿಬ್ಬಂದಿವರ್ಗದವರಿಗೆ ಶ್ರೀದೇಗುಲ ಮಠದಲ್ಲಿ ಸ್ನಾನ, ಪೂಜೆ, ಪ್ರಸಾದದ ವ್ಯವಸ್ಥೆಯಾಗುವಂತೆ ನೋಡಿಕೊಳ್ಳುತ್ತಾರೆ. ಖುದ್ದು ಶ್ರೀಗಳವರೇ ನಿಂತು ಪ್ರಸಾದ ನೀಡುತ್ತಾರೆ. ಅದೊಂದು ಭಾಗ್ಯ ಕಲಾವಿದರಿಗೆ, ಅದೇನು ಬಿಸಿ ಬಿಸಿ ಇಡ್ಲಿಗಳು, ಕಾಫಿ, ಟೀ, ಹಾಲಿನ ಸರಬರಾಜು ಹೋಳಿಗೆ ತುಪ್ಪದ ಸಂಭ್ರಮ, ಕಟ್ಟರೆಯಾಗುವ ತನಕ ನೀಡುತ್ತಾರೆ, ನೀಡಿಸಿ ತೃಪ್ತಿ ಪಡೆಯುತ್ತಾರೆ. ನಡುನಡುವೆ ನಗೆಮಾತುಗಳಿಗೆ ಕೊರತೆ ಇರುವುದಿಲ್ಲ. ಶ್ರೀಗಳವರದು ಎಷ್ಟೊಂದು ಅಭಿಮಾನವೆಂದರೆ... ಒಮ್ಮೆ ಹೀಗಾಯಿತು, ನನ್ನ ಮಗನ ಮದುವೆ ದಿನಾಂಕ 17.11.2003ರಂದು ನಡೆಯಿತು. ಅಂದೇ ಕನಕಪುರ ತಾಲ್ಲೂಕಿನ ಕೊಳಗೊಂಡನ ಹಳ್ಳಿಯಲ್ಲಿ ಗ್ರಾಮಾಂತರ ಬಸವ ಜಯಂತಿ ನಾಟಕದ ಪ್ರದರ್ಶನವಿತ್ತು. ಸಿದ್ಧಗಂಗಾ ಪರಮಪೂಜ್ಯರು ದೇಗುಲ ಶ್ರೀಗಳೊಂದಿಗೆ ಸಮಾಲೋಚಿಸಿದರು. ಅಲ್ಲಮ ಪ್ರಭುವಿನ ಪಾತ್ರ ನನ್ನದಾಗಿತ್ತು. ಬೇರೊಬ್ಬರು ಆ ಪಾತ್ರ ನಿರ್ವಹಿಸುವ ವ್ಯವಸ್ಥೆ ಮಾಡಿಕೊಂಡಿರಲಿಲ್ಲ. ಹಾಗಾಗಿ ತುಮಕೂರಿನಲ್ಲಿ ಮಗನ ಮದುವೆ ಮುಹೂರ್ತ ಮುಗಿಸಿಕೊಂಡು ತಮಿಳುನಾಡಿನ ಗಡಿಯಲ್ಲಿರುವ ಕೊಳಗೊಂಡನಹಳ್ಳಿಗೆ ಹೋಗಬೇಕಾಗಿತ್ತು. ದೇಗುಲ ಶ್ರೀಗಳು ಥಟ್ಟನೆ ಅಪ್ಪಣೆ ಕೊಡಿಸಿದರು. ಕನಕಪುರಕ್ಕೆ ರಾತ್ರಿ ಒಂಬತ್ತು ಗಂಟೆಗೆ ಬಂದರೂ ಸಾಕು. ಅಲ್ಲಿಂದ ಶ್ರೀಮಠದ ವಾಹನದಲ್ಲಿ

ಕೊಳಗೊಂಡನಹಳ್ಳಿಗೆ ರಾತ್ರಿ ಹನ್ನೊಂದಕ್ಕಾದರೂ ಬರಬಹುದು. ಆಗಬಹುದೇ? ಎಂದರು. ಎಲ್ಲ ನಿರಾಳವಾಯಿತು. ಶ್ರೀಗಳು ಆದೇಶಿಸಿದಂತೆ ಕನಕಪುರಕ್ಕೆ ಹೋದೆ. ವಾಹನ ಸಿದ್ಧವಾಗಿತ್ತು, ಅಲ್ಲಿಂದ ನಾಟಕ ನಡೆಯುವ ಗ್ರಾಮಕ್ಕೆ ಸಕಾಲಕ್ಕೆ ತಲುಪಿದೆ. ಶ್ರೀಗಳವರಿಗೆ ಇದು ತಮ್ಮ ಮಠದ ಕಾರ್ಯಕ್ರಮ, ಸಿದ್ಧಗಂಗಾ ಮಠದ ಕಾರ್ಯಕ್ರಮವೆಂಬ ಭಿನ್ನ ಭಾವನೆಯೇ ಬರಲಿಲ್ಲ. ಅಂತ ಅನ್ಯೋನ್ಯಭಾವ ಬಾಂಧವ್ಯ ಶ್ರೀಗಳವರದ್ದು.

ಇನ್ನೊಮ್ಮೆ ಶ್ರೀಸಿದ್ಧಗಂಗಾ ಮಠಕ್ಕೆ ಶ್ರೀಗಳವರು ದಯಮಾಡಿಸಿದ್ದಾಗ, "ಏನ್ಸಾರ್, ನಿಮ್ಮ ವಿದ್ಯಾರ್ಥಿಗಳು ಹೇಗೇ? ಅಭ್ಯಾಸದಲ್ಲಿ ಶ್ರದ್ಧೆ ಇದೆಯೇ?" ಎಂದರು. ಯಾರ ಬಗ್ಗೆ ಕೇಳುತ್ತಿದ್ದಾರೆ ಎಂದು ಗೊತ್ತಾಗಲಿಲ್ಲ ನನಗೆ. ತಕ್ಷಣವೇ ಅವರೇ 'ಅದೇ ನಿಮ್ಮರೇಣುಕೇಶ್ ಎಂದರು' ಗೊತ್ತಾಯಿತು. ಶ್ರೀರೇಣುಕೇಶ್ ಸಿದ್ಧಗಂಗಾ ಮಠದಲ್ಲಿದ್ದು ಪರಮಪೂಜ್ಯ ಶ್ರೀಗಳವರ ಸೇವಾವುರಿಯಾಗಿದ್ದುಕೊಂಡು ಬಿ.ಎ. ವ್ಯಾಸಾಂಗ ಮಾಡುತ್ತಿದ್ದರು. ಶ್ರೀದೇಗುಲ ಮಠಕ್ಕೆ ಉತ್ತರಾಧಿಕಾರಿಯಾಗಿ ನಿಯೋಜಿತರಾಗಿದ್ದರು. ವಿರಕ್ತಾಶ್ರಮವನಿನ್ನೂ ಸ್ವೀಕರಿಸಿರಲಿಲ್ಲ. ಆಗಿನಿಂದಲೇ ಪೂಜ್ಯ ಮುಮ್ಮಡಿಯಪ್ಪಗಳು ಶಿಷ್ಯರ ಮೇಲೆ ಕಣ್ಣಿಟ್ಟಿದ್ದರು. ಶ್ರೀಗಳವರಿಗೆ ಹೇಳಿದೆ, ಸಿದ್ಧಗಂಗಾ ಶ್ರೀಗಳವರ ದಿವ್ಯ ಕಮ್ಮಟದಲ್ಲಿ ಟಂಕಿತರಾಗುತ್ತಿದ್ದಾರೆ. ತಮ್ಮ ಆಶೀರ್ವಾದ ನಂದಾದೀಪವಾಗುವುದರಲ್ಲಿ ನನಗೆ ಆತ್ಮವಿಶ್ವಾಸವಿದೆ ಬುದ್ದಿ ಎಂದೆ. ಶ್ರೀಗಳವರ ಎಣಿಕೆಯಂತೆ ಇಂದು ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ದೇಗುಲ ಜ್ಯೋತಿಯಾಗಿ ಬೆಳಗುತ್ತಿದ್ದಾರೆ. ತಮ್ಮ ಪೂಜ್ಯ ಗುರುಗಳ ನಂಬಿಕೆಯನ್ನು ನಿಜಗೊಳಿಸುತ್ತಿದ್ದಾರೆ. ಅವರ ರಜತ ಮಹೋತ್ಸವಕ್ಕಾಗಿ ತ್ರಿಕರಣಶುದ್ಧಿಯಿಂದ ಶ್ರಮಿಸುವಲ್ಲಿ ಆನಂದವನ್ನನು ಭವಿಸುತ್ತಿದ್ದಾರೆ.

ನಾಡು ಶಿವಯೋಗಿಗಳಿಗೆ ಸಂತೋಷ, ಸಂತೃಪ್ತಿಯನ್ನುಂಟು ಮಾಡುವುದರಲ್ಲಿ ಕೃತಾರ್ಥವಾಗುತ್ತದೆ. ಶಕ್ತಿ ಸಮನ್ವಿತವಾಗತ್ತದೆ. ಸಿದ್ಧಗಂಗಾ ಶ್ರೀಗಳವರು ದಾಸೋಹ ಸಾರ್ವಭೌಮರಾದರೆ, ದೇಗುಲ ಶ್ರೀಗಳು ದಾಸೋಹ ತಪಸ್ವಿಗಳೆಂದು ಜನಕೋಟಿ ಭಕ್ತಿಭಾವದಿಂದ ಹಣೆಮಣೆಯುತ್ತಿರುವುದು ಧನ್ಯತೆಗೆ ಹೂವಿಟ್ಟಂತಾಗಿದೆ.

ಶ್ರೀಗಳವರ ರಜತಮಹೋತ್ಸವ ಸಂದರ್ಭದಲ್ಲಿ ಬೆಳಕು ಕಾಣುತ್ತಿರುವ **'ದೇಗುಲ ಸಂಪದ'**ದಲ್ಲಿ ನನ್ನವೂ ನಾಲ್ಕುನುಡಿಗಳಿಗೆ ಅವಕಾಶ ಕಲ್ಪಿಸಿಕೊಟ್ಟ ಸಂಪಾದಕ ಬಂಧುಗಳಿಗೆ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

❑

---

ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ,
ಬೆಳೆದನು ಅಸಂಖ್ಯಾತರ ಕರುಣದೊಳಗೆ,
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ
ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ.
ಇಂತಪ್ಪ ತ್ರಿವಿಧಾಮೃತವನು ದಣಿಯಲೆರೆದು ಸಲಹಿದಿರೆನ್ನ.
ವಿವಾಹವ ಮಾಡಿದಿರಿ, ಸಯವಪ್ಪ ಗಂಡಂಗೆ ಕೊಟ್ಟಿರಿ,
ಕೊಟ್ಟ ಮನೆಗೆ ಕಳುಹಲೆಂದು
ಅಸಂಖ್ಯಾತರೆಲ್ಲರೂ ನೆರೆದು ಬಂದಿರಿ.
ಬಸವಣ್ಣ ಮೆಚ್ಚಲು ಒಗತನವ ಮಾಡುವೆ.
ಚೆನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ತಲೆಗೆ ಹೂ ತಹೆನಲ್ಲದೆ ಹುಲ್ಲ ತಾರೆನು.
ಅವಧರಿಸಿ, ನಿಮ್ಮಡಿಗಳೆಲ್ಲರೂ
ಮರಳಿ ಬಿಜಯಂಗೈವುದು ಶರಣಾರ್ಥಿ.

– ಅಕ್ಕಮಹಾದೇವಿ

# ಮಹಾದಾಸೋಹಿ

– ಕೆ. ಬಸವರಾಜು *

ಶ್ರೀ ಸಿದ್ಧಗಂಗಾ ಕ್ಷೇತ್ರ ಕನ್ನಡ ನಾಡಿನಲ್ಲಿ 'ತ್ರಿವಿಧ ದಾಸೋಹ ಕೇಂದ್ರ'ವೆಂದು ಪ್ರಸಿದ್ಧವಾಗಿದೆ. ಈ ಕ್ಷೇತ್ರದ ಗುರುಪರಂಪರೆ ದಾಸೋಹಕ್ಕೊಂದು ಕ್ರಿಯಾತ್ಮಕವಾದ ಹೊಸ ಭಾಷ್ಯವನ್ನೇ ಬರೆದಿದೆ. ದಾಸಭಾವದಿಂದ ಮಾಡುವ ದಾನವೇ (ದಾಸ್ಯದಾನೇ) ದಾಸೋಹ ಎಂಬ ಅರ್ಥವನ್ನು ನಿತ್ಯಕ್ರಿಯೆಯಲ್ಲಿ ಪ್ರಕಟಮಾಡಿದೆ. ಅನ್ನದಾನ, ವಿದ್ಯಾದಾನ (ಅಧ್ಯಾತ್ಮ ವಿದ್ಯಾ ಮತ್ತು ಲೌಕಿಕ ವಿದ್ಯಾ) ಮತ್ತು ಅಭಯದಾನಗಳೇ ಅಥವಾ ದಾಸೋಹಗಳೇ ತ್ರಿವಿಧ ದಾಸೋಹಗಳು.

*ಅನ್ನದಾಸೋಹ*

ಶ್ರೀ ಸಿದ್ಧಗಂಗಾ ಗುರುಪರಂಪರೆಯಲ್ಲಿ ಅನ್ನ ದಾಸೋಹಕ್ಕೆ **'ಮಹಾದಾಸೋಹ'** ಎಂದು ಹೆಸರು. ಈ ದಾಸೋಹವೇ ಶ್ರೀಮಠದ ಮೂಲನೇಮ ಅಥವಾ ಕಟ್ಟಳೆ. ಈ ಪರಂಪರೆಯ ಶಿವಯೋಗಿಗಳು ತಮ್ಮ ಶಿಷ್ಯರಿಗೆ ಮಾಡುವ ದಾಸೋಹ ವ್ರತ ಬೋಧೆಯಲ್ಲಿ ಇದರ ವಿವರ ಇದೆ.

೧. ಸತ್ಯ ನಿತ್ಯ ಶುದ್ಧ ಕಾಯಕವ ಮಾಡಿ ಲಿಂಗ ಸಂಗಿಯಾಗಿ ದಾಸೋಹ ಮಾಡಬೇಕು.

೨. ಚರಾಚರಕ್ಕೆ ಮಾಡುವ ಸೇವೆಯೆಂದು ಭಾವಿಸಿ ಪ್ರತಿಫಲವನ್ನು ಬಯಸದೇ ಭಕ್ತಿಯಿಂದ ಮಾಡಬೇಕು.

೩. ತನು ಮನ ಭಾವಪರಿಶುದ್ಧರಾಗಿ ಸತ್ಯಶುದ್ಧ ಕಾಯಕವನ್ನು ಮಾಡುವ ಸದ್ಭಕ್ತರಿಂದ ಮಾತ್ರ ದಾಸೋಹಕ್ಕೆ ಬೇಕಾದ ಪಡಿಪದಾರ್ಥಗಳನ್ನು ಸಂಗ್ರಹಿಸಬೇಕು.

೪. ಅನ್ನವೇ ಪ್ರಾಣಶಕ್ತಿಯಾಗಿ ಮನೋಬುದ್ಧಿ ಸಂಸ್ಕಾರಗಳಾಗಿ ಪರಿಣಾಮ ಹೊಂದುವುದರಿಂದ ಅನ್ಯಾಯ ಮಾರ್ಗದಲ್ಲಿ ಸಂಪಾದಿಸುವವರಿಂದ ಧನದ್ರವ್ಯಾದಿಗಳನ್ನು ಸ್ವೀಕರಿಸಬಾರದು.

೫. ಹೀಗೆ ಸಂಗ್ರಹಿಸಿದ ಪಡಿಪದಾರ್ಥಗಳನ್ನು ಪ್ರಸಾದ ಗೊಳಿಸಿ ಹಸಿದು ಬಂದವರು ಯಾರೇ ಆಗಲಿ, ಅವರ ಜಾತಿ ಕುಲ ಗೋತ್ರ ನಾಮ ಸೀಮೆ ವಯೋ ಲಿಂಗ ವಿದ್ಯೆ ಯಾವುದನ್ನು ವಿಚಾರಿಸದೆ ದೈವಕ್ಕೆ ಉಣಬಡಿಸುವೆನೆಂಬ ಭಾವನೆಯಿಂದ ಮಾಡಬೇಕು.

೬. ದಾಸೋಹ ಮಾಡುವಾಗ ಮಾಡಿದೆನೆಂಬ ಮನದಲ್ಲಿ ಸುಳಿಯಕೂಡದು. ನಾನು ದಾಸಮಾತ್ರ, ಉಣ್ಣುವವನೇ ಒಡೆಯನೆಂಬ ಭಾವನೆಯಿಂದ ನೀಡಬೇಕು.

೭. ನಿಚ್ಚ ನಿಚ್ಚಲೂ ದಾಸೋಹ ಮಾಡುವೆನೆಂಬ ಭಾಷೆಗೆ ಕುಂದುಬಾರದಂತೆ ಎಚ್ಚರದಿಂದ ಮಾಡಬೇಕು.

*ಇವೇ ದಾಸೋಹ ಸಪ್ತಸೂತ್ರಗಳು*

ಸಿದ್ಧಗಂಗೆಯ ದಾಸೋಹಕ್ಕೆ ಸಿದ್ಧಗಂಗೆಯಷ್ಟೇ ಇತಿಹಾಸವಿದೆ. ಶ್ರೀ ಗೋಸಲಸಿದ್ಧೇಶ್ವರರು, ಅವರ ಪರಮ ಶಿಷ್ಯರು ಹಾಗೂ ತೋಂಟದ ಶ್ರೀ ಸಿದ್ಧಲಿಂಗೇಶ್ವರರು ಗಣಪರ್ವವನ್ನು ನಡೆಸಿ, ದಾಸೋಹ ಮಾಡಿದ ವಿಷಯವು ಶಾಸನ ಕಾವ್ಯಗಳಿಂದ ತಿಳಿದುಬರುತ್ತದೆ.

*ಸಂಕಲ್ಪ*

ಈ ದಾಸೋಹಕ್ಕೆ ವ್ಯವಸ್ಥಿತವಾದ ಒಂದು ರೂಪ ಬಂದದ್ದು ಶ್ರೀ ಅಟವೀಸ್ವಾಮಿಗಳ ಕಾಲದಲ್ಲಿ. ವಾರದ ದಿನಗಳಲ್ಲಿ ಗಂಗಾಮಾತೆಯ ಪೂಜೆಗಾಗಿ ಬರುತ್ತಿದ್ದ ಭಕ್ತರು ಬಂಡಿಯಲ್ಲಿ ತಂದ ಮೀಸಲು ಪದಾರ್ಥಗಳನ್ನು ಪಾಕಗೊಳಿಸಿ ಪ್ರಸಾದ ಎಡೆಮಾಡಿ ಬಂದ ಇತರ ಜನಕ್ಕೆ ದಾಸೋಹ ಮಾಡುತ್ತಿದ್ದರು. ಅಮ್ಮನವರ ಪೂಜೆಗಾಗಿ ಹಾಗೂ ಸಿದ್ಧಲಿಂಗೇಶ್ವರರ ದರ್ಶನಕ್ಕಾಗಿ ಬರುವ ಭಕ್ತರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಾ ಹೋಯಿತು. ಅದನ್ನು ನೋಡಿ ಶ್ರೀ ಅಟವೀಶ್ವರರ ನಿರ್ಮಲವಾದ ಮನದಲ್ಲಿ ಒಂದು ಸಂಕಲ್ಪ ಮೂಡಿತು.

> *"ದರ್ಶನಾಶೀರ್ವಾದ ಮುಂತಾದ*
> *ಬಯಕೆಯಿಂದೈತಪ್ಪ ಜನಸಮೂಹಕ್ಕೀ*
> *ಕ್ಷೇತ್ರದಲ್ಲಿ ನಿತ್ಯದಾಸೋಹ ನಡೆಯುವುದಾದರೆ*
> *ಬಹುಪರಿಣಾಮವಪ್ಪುದು"*
>
> – ಅಟವೀಶಚರಿತೆ

ಹೀಗೆ ಸಂಕಲ್ಪ ಮಾಡಿ ಶ್ರೀ ಸಿದ್ಧಲಿಂಗೇಶ್ವರರ ಎದುರಿಗೆ ನಿಂತು 'ಎಲೈ **ಭಕ್ತಜನಶರಣ್ಯನೆ ! ನಿನ್ನ ಹೆಸರಿನಲ್ಲಿ ಈ ಶುಭಮುಹೂರ್ತದಲ್ಲಿ ದಾಸೋಹಕ್ಕೆ ಒಲೆ ಹತ್ತಿಸುತ್ತಿದ್ದೇನೆ. ಇಂದು ಒಲೆಗೆ ಹಾಕಿದ ಬೆಂಕಿ ಈ ಕ್ಷೇತ್ರದಲ್ಲಿ ಎಂದೆಂದೂ**

**ಆರದಿರುವಂತೆ ಅನುಗ್ರಹಿಸು'** ಎಂದು ಪ್ರಾರ್ಥಿಸಿ ಪ್ರಾರಂಭಿಸಿದರು. ವಿಷಯ ನಾಡಿನ ತುಂಬ ಹಬ್ಬಿತು. ಭಾವಜ್ಞರಾದ ಭಕ್ತರು ಶ್ರೀಗುರುವಿನ ಸದಾಶಯವನ್ನು ಗ್ರಹಿಸಿದರು. ಈ ದಾಸೋಹ ಕಾರ್ಯದಲ್ಲಿ ನಾನು ಮುಂದು ತಾನು ಮುಂದು ಎಂಬ ಭಾವನೆಯಿಂದ ಮುಂದೆ ಬಂದರು. ಆ ಕಾಲಕ್ಕೊಪ್ಪುವ ದಾಸೋಹ ಮಂಟಪವೊಂದನ್ನು ಬೆಟ್ಟದ ಮೇಲೆ ದೇವಾಲಯದ ಪಕ್ಕದಲ್ಲೇ ಕಟ್ಟಿದರು. ಅದಕ್ಕೆ ಹೊಂದಿಕೊಂಡಂತೆ ಭಕ್ತರು ತಂಗುವುದಕ್ಕಾಗಿ ಅನುಕೂಲವಾದ ಮಂಟಪಗಳು ಕಟ್ಟಲ್ಪಟ್ಟವು.

*ಮನೆತನದ ನಡವಳಿಕೆ*

ಶ್ರೀ ಉದ್ಧಾನ ಶಿವಯೋಗಿಗಳ ಕಾಲದಲ್ಲಿ ಈ ದಾಸೋಹ ದೈವತ್ತ್ವವನ್ನು ಪಡೆಯಿತು. ದಾಸೋಹಕ್ಕಾಗಿ ನೀಡುವುದು ಈ ನಾಡಿನ ಜನತೆಯ ಮನೆತನದ ನಡವಳಿಕೆಯಾಯಿತು. ಈ ನಾಡಿನ ಜನತೆಯು ಬೆಳೆದುದರಲ್ಲಿ **'ಸಿದ್ಧಗಂಗೆಯ ದಾಸೋಹಕ್ಕೆ'** ಎಂದು ಕಣದಲ್ಲಿಯೇ ಮೀಸಲು ತೆಗೆಯುವ ಪದ್ಧತಿ ರೂಢಿಗೆ ಬಂತು. ಹುಣಸೆ, ಮಾವು ಮುಂತಾದ ಫಸಲುಗಳಿಗೆ ರೋಗ ಬಂದರೆ ಸಿದ್ಧಗಂಗಾ ದಾಸೋಹಕ್ಕೆ ಕೊಡುತ್ತೇನೆಂದು ಹರಕೆ ಮಾಡಿ ಕೊಳ್ಳುವ ಭಕ್ತಿ ಬೆಳೆದು ಬಂತು. ಇವೊತ್ತಿಗೂ ಆ ಹರಕೆ, ಪದ್ಧತಿ ಅಥವಾ ನಡವಳಿಕೆ ಮುಂದುವರೆಯುತ್ತಾ ಬಂದಿದೆ. ಮೀಸಲು ತೆಗೆದ ದವಸಧಾನ್ಯರೂಪದ ಹರಕೆಯನ್ನು ಭಕ್ತಿಯಿಂದ ತಲೆಯ ಮೇಲೆ ಹೊತ್ತು ತಂದು ದಾಸೋಹಕ್ಕೆ ಕೊಟ್ಟು ಪ್ರಸಾದ ಸ್ವೀಕರಿಸಿ ಗುರುದರ್ಶನಾಶೀರ್ವಾದಗಳನ್ನು ಪಡೆದು ಹೋಗುತ್ತಾರೆ. ಕೂಲಿಕಾರ್ಮಿಕರು, ವ್ಯಾಪಾರಿಗಳೂ ಮನೆತನದ ಈ ನಡೆವಳಿಕೆಯನ್ನು ನಡೆಸುತ್ತಾರೆ. ಈ ಮನೆತನದ ನಡವಳಿಕೆಯಲ್ಲಿ ಜಾತಿ ಮತ ಪಂಥ ಬಡವ ಬಲ್ಲಿದ ಎಂಬ ಯಾವ ಭೇದವೂ ಇಲ್ಲ. ಹೀಗೆ ಈ ನಾಡಿನ ಜನತೆಯ ಹೃದಯ ಶ್ರೀಮಂತಿಕೆಗೂ ಸಿದ್ಧಗಂಗೆಯ ಮಹಾದಾಸೋಹಕ್ಕೂ ಮಧುರಭಕ್ತಿಯ ಸಂಬಂಧದ ಬೆಸುಗೆಯಿದೆ.

ಶ್ರೀ ಮದುದ್ದಾನ ಶಿವಯೋಗಿಗಳವರ ಕಾಲದಲ್ಲಿ ಈ ದಾಸೋಹ ವ್ಯವಸ್ಥೆ ದಿನೇ ದಿನೇ ದೊಡ್ಡದಾಗುತ್ತಾ ಹೋಯಿತು. ಶ್ರೀ ಅಡವಿಸ್ವಾಮಿಗಳ ಕಾಲದಲ್ಲಿ ಬಂದ ಭಕ್ತರಿಗೆ ಮಾತ್ರ ಇದ್ದ ವ್ಯವಸ್ಥೆ ಈಗ ವಿದ್ಯಾರ್ಥಿಗಳಿಗೆ, ಯಾತ್ರಾರ್ಥಿಗಳಿಗೆ, ಜಾತ್ರೆಗೆ ಬಂದ ಜನಸ್ತೋಮಕ್ಕೆ ವಿಸ್ತಾರಗೊಂಡಿತು. ಹೀಗೆ ಕುಂದುವಡೆಯದಂತೆ ನಡೆದು ಬಂದು 'ನಿತ್ಯಮಹಾ ದಾಸೋಹ' ಎಂಬ ಹೆಸರು ಪಡೆಯಿತು.

ಇಂಥ ಮಹಾದಾಸೋಹದ ವಿಷಯದಲ್ಲಿ ಶರಣರನ್ನು ಕುರಿತು ಭಾಷಣ ಮಾಡುವುದೇ ದಾಸೋಹವೆಂದು ಭ್ರಮಿಸುವ ಕ್ರಿಯಾಶುದ್ಧಿ ದಾಸೋಹ ಸಿದ್ಧಿಯಿಲ್ಲದ ಕೆಲವರು ಸರ್ಕಾರ ನೀಡುವ ಅನುದಾನಕ್ಕೂ ದಾಸೋಹಕ್ಕೂ ಸಂಬಂಧವನ್ನು ಕಲ್ಪಿಸುತ್ತಾರೆ. ಇವರು ಅಯಥಾರ್ಥ ಮತಿಗಳು. ಸಿದ್ಧಗಂಗಾ ಮಠದಲ್ಲಿ ಉಚಿತವಾಗಿ ಅಸನ ವಸತಿ ಸೌಕರ್ಯವನ್ನು ಪಡೆದು ವ್ಯಾಸಂಗ ಮಾಡುತ್ತಿರುವ ೮,೦೦೦ ಕ್ಕೂ ಮಿಕ್ಕ ವಿದ್ಯಾರ್ಥಿಗಳ ಪೈಕಿ ನಿರ್ದಿಷ್ಟ ವಯೋಮಿತಿ ತರಗತಿಯುಳ್ಳ ಇದರ ಪಾದ (೧/೪) ಭಾಗದಷ್ಟು ವಿದ್ಯಾರ್ಥಿಗಳಿಗೆ ಮಾತ್ರ ಸರ್ಕಾರ ಅನುದಾನ ಕೊಡುತ್ತದೆ. ಇದು ಆ ಅನುದಾನಿತ ವಿದ್ಯಾರ್ಥಿಗಳು ಬಳಸುವ ನೀರು ವಿದ್ಯುಚ್ಛಕ್ತಿ ಸಹಸ್ರಾಧಿಕಛಾತ್ರರ ಲಾಲನೆ ಪೋಷಣೆ ಪರಮಪೂಜ್ಯರ ದುಡಿಮೆಯ ದಾಸೋಹದಿಂದಲೇ. ಈ ವ್ಯವಸ್ಥೆಯ ಬಗ್ಗೆ ಅಪಶಬ್ದವೆದ್ದಾಗ ಅನುದಾನವನ್ನು ತಿರಸ್ಕರಿಸಿದ ಪ್ರಸಂಗಗಳೂ ಇಲ್ಲದಿಲ್ಲ. ಇದೆಲ್ಲವೂ ಲೋಕವಿದಿತವೇ. ಹೀಗಿರುವಾಗ ಸಹಿಸದ ಸಂದೇಹ ಪಾತಕಿಗಳು ಆಗೊಮ್ಮೆ ಈಗೊಮ್ಮೆ ಶಂಕಿಸುತ್ತಲೇ ಬಂದಿದ್ದಾರೆ. ಇಂಥವರನ್ನು ಕಂಡು ಕಾಳಿದಾಸನೇ ಹೇಳಿದ್ದಾನೆ.

*'ದ್ವಿಷಂತಿ ಮಂದಾಃ ಚರಿತಂ ಮಹಾತ್ಮನಾಂ'*

*ವಿದ್ಯಾದಾಸೋಹ :*

ಶ್ರೀ ಸಿದ್ಧಗಂಗಾ ಗುರು ಪರಂಪರೆಯ ವಿದ್ಯಾ ದಾಸೋಹ ಎರಡು ವಿಧ. ಒಂದನೆಯದು ಅಧ್ಯಾತ್ಮ ವಿದ್ಯಾ ದಾಸೋಹ, ಎರಡನೆಯದು ಲೌಕಿಕ ವಿದ್ಯಾದಾಸೋಹ.

***"ಯಾ ವಿದ್ಯಾ ಸಾ ವಿಮುಕ್ತಯೆ"*** ಎಂಬಂತೆ ಮೋಕ್ಷಕಾರಣವಾದ ವಿದ್ಯಾದಾಸೋಹಕ್ಕಾಗಿ ಈ ಯೋಜನೆಗಳು ರೂಪಿತವಾಗಿವೆ.

೧. ಅಧ್ಯಾತ್ಮ ವಿದ್ಯೆಯ ಆಗರವಾಗಿರುವ ಸಂಸ್ಕೃತ ಭಾಷೆ ಮತ್ತು ಶಾಸ್ತ್ರವನ್ನು ಕಲಿಸುವುದು.

೨. ವಚನಶಾಸ್ತ್ರ ತರಗತಿಗಳನ್ನು ನಡೆಸುವುದು.

೩. ಸಂಜೆ ಮತ್ತು ಮುಂಜಾನೆ ಸಾಮೂಹಿಕ ಪ್ರಾರ್ಥನೆಯ ನಂತರ ಪರಮಪೂಜ್ಯರಿಂದ ಉಪದೇಶ.

೪. *ಗ್ರಾಮಾಂತರ ಬಸವ ಜಯಂತಿ ಯೋಜನೆ.*

ಇದೊಂದು ವಿಶಿಷ್ಟವಾದ ಯೋಜನೆ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಗ್ರಾಮಾಂತರ ಜನತೆಯ ಅನಿಮಿತ್ತ ಬಂಧುಗಳು. ಈ ವಿಶೇಷಣ ಪರಮ

ಪೂಜ್ಯರಲ್ಲಿ ಸಾರ್ಥಕ್ಕ ಕಂಡಿದೆ. ಏಕೆಂದರೆ – ಈ ಲೋಕದಲ್ಲಿ ಎಲ್ಲರೂ ಪರಸ್ಪರ ನಿಮಿತ್ತಬಂಧುಗಳೇ. ಇವರ ಬಂಧುತ್ವಕ್ಕೆ ರಕ್ತ ಸಂಬಂಧವೋ, ಕೇಳಕೊಡುಗೆಯ ಸಂಬಂಧವೋ, ವ್ಯವಹಾರ ಸಂಬಂಧವೋ, ಸ್ನೇಹ ಸಂಬಂಧವೋ ಹೀಗೆ ಯಾವುದಾದರೊಂದು ನಿಮಿತ್ತ ಇದ್ದೇಯಿರುತ್ತದೆ. ಇವೊತ್ತು ಅನೇಕ ಸ್ವಾಮಿಗಳೂ ಸಹ ಸಂಬಂಧೇತರ ಸಂಬಂಧದಿಂದ ಬಂಧುಗಳಾಗಿರುತ್ತಾರೆ. ಆದರೆ ಸಿದ್ಧಗಂಗಾ ಶ್ರೀಗಳಿಗೆ ಈ ಯಾವ ಲೌಕಿಕ ನಿಮಿತ್ತವೂ ಇಲ್ಲ. ಮಾನವತೆಯ ಮಹಾಮೌಲ್ಯವಾದ ಕಾರುಣ್ಯವೇ ಇಲ್ಲಿ ನಿಮಿತ್ತ. ಆದ್ದರಿಂದಲೇ ಅವರು ಗ್ರಾಮಾಂತರ ಜನತೆಯ ಅನಿಮಿತ್ತ ಬಂಧುಗಳು.

ಇಂಥ ಪರಮಪೂಜ್ಯರು ಜನತೆಯ ಬಳಿಗೇ ಹಳ್ಳಿ ಹಳ್ಳಿಗೆ ಹೋಗಿ ವಿಶ್ವಮಾನವ ಧರ್ಮವೂ, ಮುಕ್ತಿಗೆ ಕಾರಣವೂ ಆದ ಬಸವ ಧರ್ಮವನ್ನು ನಾಟಕ ಪ್ರದರ್ಶನ ಮೂಲಕ ಸಾರುತ್ತಿದ್ದಾರೆ. ಈ ಪಶ್ಚಿಮ ವಯಸ್ಸಿನಲ್ಲಿಯೂ ಪರಮ ಪೂಜ್ಯರಿಗೆ ನಿತ್ಯಲಿಂಗ ಕ್ರಿಯೆಯಾಗಿದೆ. ಕರ್ನಾಟಕ, ಆಂಧ್ರ, ತಮಿಳು ರಾಜ್ಯಗಳ ಏಳು ನೂರಕ್ಕೂ ಹೆಚ್ಚು ಗ್ರಾಮಗಳು ಈ ಯೋಜನೆಯ ಪ್ರಯೋಜನವನ್ನು ಈಗಾಗಲೇ ಪಡೆದು ಕೊಂಡಿವೆ. ಸಾಹಿತ್ಯದನೇಕ ವಿದ್ಯಾರ್ಥಿಗಳು ಮಹಾ ಪ್ರಬಂಧ ಬರೆಯುವಷ್ಟು ವ್ಯಾಪ್ತಿಯನ್ನು ಈ ದಾಸೋಹ ಪಡೆದುಕೊಂಡಿದೆ.

ಶ್ರೀ ಸಿದ್ಧಗಂಗಾ ಮಠದ ಲೌಕಿಕ ವಿದ್ಯಾದಾಸೋಹ ಲೋಕವಿಖ್ಯಾತವಾಗಿದೆ. ಸ್ಥಾಪಿಸಿರುವ ಗ್ರಾಮಾಂತರ ಪ್ರದೇಶಗಳ ಶಾಲೆಗಳಲ್ಲಿ ಸದ್ದುಗದ್ದಲವಿಲ್ಲದೆ ಅಕ್ಷರಕ್ರಾಂತಿ ಸಾಗಿದೆ. ಶ್ರೀಮಠದಲ್ಲಿ ಪ್ರೈಮರಿ ಶಾಲೆಯಿಂದ ಹಿಡಿದು ಇಂಜಿನಿಯರ್ ಕಾಲೇಜಿನವರೆಗೆ ೭೦೦೦ ಮಂದಿ ವಿದ್ಯಾರ್ಥಿಗಳಿಗೆ ಅಶನ ವಸತಿಗಳೊಂದಿಗೆ ಶಿಕ್ಷಣ ದಾಸೋಹವನ್ನು ಮಾಡಲಾಗುತ್ತಿದೆ.

*ಅಭಯದಾಸೋಹ*

ತಾಪತ್ರಯಗಳಲ್ಲಿ ನೊಂದುಬೆಂದು ಬಂದ ಜನತೆಯನ್ನು ಪಾದೋದಕ ಪ್ರಸಾದಗಳನ್ನಿತ್ತು, ವಿಭೂತಿ ರುದ್ರಾಕ್ಷಿಗಳನ್ನು ಧಾರಣೆ ಮಾಡಿ, ಉದ್ಧರಣೆಯನ್ನು ಕಟ್ಟಿ, ನುಡಿಪ್ರಸಾದ, ದೃಷ್ಟಿಪ್ರಸಾದ, ಭಾವಪ್ರಸಾದ, ಸ್ಪರ್ಶಪ್ರಸಾದಗಳಿಂದ ಅನುಗ್ರಹ ಮಾಡುತ್ತಾರೆ. ಹೀಗೆ ಅಭಯ ದಾನವೂ ಸಹ ಒಂದು ವಿಧ ದಾಸೋಹವೇ.

ಶ್ರೀ ಸಿದ್ಧಗಂಗಾ ಕ್ಷೇತ್ರದ 'ನಡವಳಿಕೆಯ' ಒಟ್ಟು ಧ್ವನಿಯಿದು – ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಎಲ್ಲರೂ ಬರುತ್ತಾರೆ. ಬರುವ ಭಕ್ತರಲ್ಲಿ ಜಾತಿ–ಕುಲ–ಮತ–ವರ್ಗ–ವರ್ಣ ಲಿಂಗ ಯಾವ ಭೇದವೂ ಇಲ್ಲ. ಕವಿವಾಣಿಯಲ್ಲಿ ಹೇಳುವುದಾದರೆ – *'ಎಲ್ಲ ನನ್ನವರೆನುವ ಭಾವವೇ ಇಲ್ಲಿ ಕಣ್ತೆರೆದಿದೆ'.* ಶ್ರೀಕ್ಷೇತ್ರಕ್ಕೆ ಎಂಥೆಂತ ಜನ ಬರುತ್ತಾರೆ ಎನ್ನುವುದನ್ನು ವಿಭಾಗ ಮಾಡಿ ಸ್ವಲ್ಪ ಮಟ್ಟಿಗೆ ಪಟ್ಟೀಕರಿಸುವುದಾದರೆ ಶಿವಶರಣರು, ಪುಣ್ಯಚರರು, ರಾಗವಿದೂರರು, ನೀತಿವಂತರು, ನಿಗಮಾಗಮಜ್ಞರು, ಸತ್ಯಶಾಂತರು, ಭೋಗಿಗಳು, ತ್ಯಾಗಿಗಳು, ಯೋಗಿಗಳು, ಗುರುಲಿಂಗ ಜಂಗಮ ಪ್ರೇಮಿಗಳು ಬುದ್ಧಿವಂತರು, ರಾಜಕಾರಣಿಗಳು, ಸಾಹಿತಿಗಳು – ಹೀಗೆ ಇವರದೊಂದು ವರ್ಗ.

ಇನ್ನು ನಾನಾ ಆದಿವ್ಯಾಧಿಗೊಳಗಾದವರು, ನಾನಾ ಗ್ರಹಭೀತಿಗೊಳಗಾದವರು, ನಾನಾ ಚಿಂತೆಗೊಳಗಾದವರು ಹಸಿದವರು, ಸಂತಾನಕ್ಕಾಗಿ ಗಂಗಾಮಾತೆಯನ್ನು ಪೂಜಿಸುವವರು, ದಾಂಪತ್ಯಭಗ್ನರು, ದಾಯಾದಿತನದಲ್ಲಿ ಜಗಳವಾಡಿದವರು, ಬದುಕಿಗೆ ಆಸರೆ ಬೇಡಿ ಬಂದವರು ಮುಂತಾದವರು ಇನ್ನೊಂದು ವರ್ಗ. ಇವರೆಲ್ಲರ ಉದ್ಧರಣೆ ಮಾಡುವುದೇ ಶ್ರೀ ಸಿದ್ಧಗಂಗಾ ಗುರು ಪರಂಪರೆಯ ಕಟ್ಟಳೆ. ಇಂದು ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀಗಳು ಅಹರ್ನಿಶಿ ತಮ್ಮ ಲಿಂಗತಪಸ್ಸಿನ ಫಲವನ್ನು ಧಾರೆಯೆರೆದು ಉದ್ಧರಿಸುತ್ತಿರುವುದು.

ಶ್ರೀಮಂತರನ್ನಲ್ಲ, ರಾಜಕಾರಣಿಗಳನ್ನಲ್ಲ, ಅಧಿಕಾರಿಗಳನ್ನಲ್ಲ, ಅಥವಾ ಸ್ವಜನರನ್ನಲ್ಲ ಸ್ವಜಾತಿಯವರನ್ನಲ್ಲ. ಪರಂತು ಯಾರು ಈ ಸಮಾಜದಲ್ಲಿ ಆರ್ತರಿದ್ದಾರೆಯೋ, ದುಃಖಿತರಿದ್ದಾರೋ, ದೀನ ದಲಿತರಿದ್ದಾರೋ, ದರಿದ್ರರಿದ್ದಾರೋ, ಕೆಳವರ್ಗದವರಿದ್ದಾರೋ, ನೊಂದು ಬೆಂದು ಅಥವಾ ಅಸಹ್ಯಪಟ್ಟ ಈ ಬದುಕನ್ನು ದುರ್ಭರವನ್ನಾಗಿ ಮಾಡಿಕೊಂಡಿದ್ದಾರೆಯೋ ಅಂತಹವರನ್ನು, ಈ ಎಲ್ಲರಿಗೂ ಉದ್ಧಾರವಿದೆ ಶ್ರೀಚರಣದಲ್ಲಿ. ಆದ್ದರಿಂದಲೇ ಕೃತಕೃತ್ಯರಾದ ಜನ ಹೀಗೆಂದು ಭಾವಿಸುತ್ತಾರೆ.

*"ನಿನ್ನ ಚರಣಾಂಬುಜವೇ ಸುರಧೇನುವು*<br>
*ನಿನ್ನ ಪದಾಬ್ಜವೇ ಸುರತರುವೈ*<br>
*ನಿನ್ನ ಅಂಘ್ರಿಯೇ ಚಿಂತಾಮಣಿಯೆನಿಪುದು*<br>
*ಸನ್ನುತ ಭಕ್ತರಿಗಿದು ನಿಜವೈ"*





ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀ ಮ.ನಿ.ಪ್ರ
ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳವರ
ಪಟ್ಟಾಧಿಕಾರದ ರಜತ ಮಹೋತ್ಸವ
ಸಂದರ್ಭ ಸಂಚಿಕೆ

# ದೇಗುಲ ಸಂಪದ

# ದೇಗುಲಮಠ ಸ್ಮರಣ ಸಂಪದ






ಲಿಂಗೈಕ್ಯ ಶ್ರೀ ಆದಿ ನಿರ್ವಾಣ
ಸ್ವಾಮಿಗಳವರ ಗದ್ದುಗೆ



ಲಿಂಗೈಕ್ಯ ಶ್ರೀ ದೇವಲಿಂಗ
ಸ್ವಾಮಿಗಳವರ ಗದ್ದುಗೆ




ಲಿಂಗೈಕ್ಯ ಶ್ರೀ ಇಮ್ಮಡಿ ನಿರ್ವಾಣ
ಸ್ವಾಮಿಗಳವರ ಗದ್ದುಗೆ




ಲಿಂಗೈಕ್ಯ ಶ್ರೀ ಮಹಾಲಿಂಗ
ಸ್ವಾಮಿಗಳವರ ಗದ್ದುಗೆ



ಶ್ರೀ ದೇಗುಲ ಮಠದ ಅಲಂಕೃತ ವೀರಭದ್ರ



ಲಿಂಗೈಕ್ಯ ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳ
ಗದ್ದುಗೆ ಮೇಲಿನ ನೂತನ ಗೋಪುರ



# ಶ್ರೀ ಗುರು ಸನ್ನಿಧಿ



ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳ ಸಾನ್ನಿಧ್ಯದಲ್ಲಿ ಕಿರಿಯ ಗುರುಗಳಾದ
ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು



ಕಾಯಕ ನಿರತ ಪೂಜ್ಯ ಹಿರಿಯ ಗುರು



ಸಂದರ್ಭ : ಶ್ರೀ ಮಹಾಲಿಂಗೇಶ್ವರ ಗದ್ದುಗೆ ಗೋಪುರ ನಿರ್ಮಾಣ ಕಾರ್ಯ ಶಂಕುಸ್ಥಾಪನೆ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಪಾದ ಪೂಜೆಯಲ್ಲಿ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು



ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳ ಸನ್ನಿಧಿಯಲ್ಲಿ ವೀರೇಗೌಡನ ದೊಡ್ಡಿ ಶ್ರೀ ರೇವಣ್ಣನವರು



ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ
ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ
ಮಹಾಸ್ವಾಮಿಗಳವರಿಗೆ ಶ್ರೀ ಶ್ರೀ ಮುಮ್ಮಡಿ
ನಿರ್ವಾಣ ಸ್ವಾಮಿಗಳಿಂದ ಬಿನ್ನವತ್ತಳೆ
ಸಮರ್ಪಣೆ



ಶ್ರೀ ದೇಗುಲ ಮಠದ ಶಾಖಾ ಮಠವಾದ
ಸಾತನೂರಿನ ನಿರ್ವಾಣೇಶ್ವರ ಮಠದ
ನಿರಂಜನ ಚರಪಟ್ಟಾಧಿಕಾರದ ಸಂದರ್ಭದಲ್ಲಿ
ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಡಾ. ಶ್ರೀ ಶ್ರೀ
ಶಿವಕುಮಾರ ಮಹಾಸ್ವಾಮಿಗಳು, ಸುತ್ತೂರು
ಮಠದ ಜಗದ್ಗುರು ವೀರಸಿಂಹಾಸನಾಧೀಶ್ವರ
ಶ್ರೀ ಶ್ರೀ ಶಿವರಾತ್ರೀ ದೇಶಿಕೇಂದ್ರ
ಸ್ವಾಮಿಗಳೊಂದಿಗೆ ಶ್ರೀ ಶ್ರೀ ಮುಮ್ಮಡಿ
ನಿರ್ವಾಣ ಸ್ವಾಮಿಗಳು



ಗದುಗಿನ ಜಗದ್ಗುರು ಡಾ. ಶ್ರೀ ಶ್ರೀ ತೋಂಟದ
ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ
ಸುತ್ತೂರು ಪೀಠದ ಜಗದ್ಗುರು ಶ್ರೀ ಶ್ರೀ
ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳವರ
ಸಾನ್ನಿಧ್ಯದಲ್ಲಿ ನಂಜನಗೂಡು ತಾಲ್ಲೂಕು
ದೇವನೂರಿನ ಶ್ರೀಮನ್ ನಿರಂಜನ
ಗುರುಮಲ್ಲೇಶ್ವರ ಸಂಸ್ಮರಣ ಶತಮಾನೋತ್ಸವ
ಸಮಾರಂಭದ ಉದ್ಘಾಟನೆ ಶ್ರೀ ಶ್ರೀ ಮುಮ್ಮಡಿ
ನಿರ್ವಾಣ ಸ್ವಾಮಿಗಳವರಿಂದ



ಲಿಂಗೈಕ್ಯ ಶ್ರೀ ಗುರು ಬಸವ
ಶಿವಯೋಗಿಗಳ 91 ನೇ ಪುಣ್ಯ
ಸ್ಮರಣೋತ್ಸವ ಸಂದರ್ಭದಲ್ಲಿ
ಬೆಕ್ಕಿನಕಲ್ಮಠದ ಅಧ್ಯಕ್ಷರಾದ ಶ್ರೀ.ಮ.ನಿ.ಪ್ರ.
ಶ್ರೀ ಶ್ರೀ ಮಲ್ಲಿಕಾರ್ಜುನ
ಮುರುಘರಾಜೇಂದ್ರ ಸ್ವಾಮಿಗಳವರಿಂದ
ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳಿಗೆ
ನೆನಪಿನ ಕಾಣಿಕೆ



ಶ್ರೀ ಶ್ರೀ ಮುಮ್ಮಡಿ ನಿರ್ವಾಣ
ಸ್ವಾಮಿಗಳೊಂದಿಗೆ



ಶ್ರೀ ದೇಗುಲ ಮಠದ ಭಕ್ತ ವೃಂದಕ್ಕೆ
ಶ್ರೀ ಗುರುಗಳ ಸಂಗಮ ಸಾನ್ನಿಧ್ಯ



ಚಿತ್ರದುರ್ಗದ ಪೂಜ್ಯ
ಶ್ರೀ ಮುರುಘರಾಜೇಂದ್ರ ಶರಣರೊಡನೆ
ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು

ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ
ಮಹಾಸ್ವಾಮಿಗಳು ಆಗೂ ಅದಿಚುಂಚನಗಿರಿ
ಪೀಠಾಧ್ಯಕ್ಷರಾದ ಜಗದ್ಗುರು
ಶ್ರೀ ಶ್ರೀ ಬಾಲಗಂಗಾಧರನಾಥ
ಸ್ವಾಮಿಗಳವರೊಡನೆ ಉದ್ಘಾಟನಾ
ಕಾರ್ಯಕ್ರಮದಲ್ಲಿ
ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು





ಹಿಂದೂ ಜಾಗರಣ ವೇದಿಕೆಯಲ್ಲಿ
ಉಡುಪಿಯ ಪೇಜಾವರ ಮಠಾಧೀಶರಾದ
ಪೂಜ್ಯ ಶ್ರೀ ಶ್ರೀ ವಿಶ್ವೇಶ್ವರ ತೀರ್ಥರೊಡನೆ
ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು
ಹಾಗೂ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ
ಸ್ವಾಮಿಗಳು



ಶ್ರೀ ಕಬ್ಬಿಣ ಕೋಲೇಶ್ವರ ಗದ್ದುಗೆ ಪ್ರಾರಂಭೋತ್ಸವ ಸಮಾರಂಭದಲ್ಲಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು



ಗುಂಡ್ಲುಪೇಟೆ ತಾಲ್ಲೂಕು ಕಬ್ಬಹಳ್ಳಿಯಲ್ಲಿ ಶ್ರೀ ಗುರುಮಲ್ಲೇಶ್ವರ ಮಠದಲ್ಲಿನ ಉದ್ಘಾಟನಾ ಸಮಾರಂಭದ ಸಂದರ್ಭದಲ್ಲಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಅಡ್ಡಪಲ್ಲಕ್ಕಿ ಉತ್ಸವ.



ಷ.ಬ್ರ. ಶ್ರೀ ಶ್ರೀ ಪಟ್ಟದ ಬಸಪ್ಪ ಸ್ವಾಮಿಗಳವರ ಪ್ರಥಮ ಗಣಾರಾಧನಾ ಮಹೋತ್ಸವದ ಶಿವಾನುಭವ ಗೋಷ್ಠಿಯಲ್ಲಿ ಶ್ರೀ ದೇಗುಲ ಮಠದ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು



ಕನಕಪುರದ ಅಯ್ಯಪ್ಪ ಸ್ವಾಮಿ ದೇಗುಲದ ವಿಮಾನ ಗೋಪುರ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು, ಮರಳೇಗವಿ ಮಠದ, ಅನ್ನದಾನೇಶ್ವರ ಮಠದ ಶ್ರೀ ಶ್ರೀಗಳವರು ಬಿ.ಡಿ.ಸಿ.ಸಿ. ಬ್ಯಾಂಕ್ ಅಧ್ಯಕ್ಷ ಶ್ರೀ ನಾರಾಯಣಗೌಡ, ಪುರಸಭಾಧ್ಯಕ್ಷಣೆ ಶ್ರೀಮತಿ ಸುಲೋಚನ ಸಾವಂತ ಅವರ ಉಪಸ್ಥಿತಿ.

# ಶ್ರೀ ಮಠದ ದೇವ ಕಾರ್ಯಗಳು




ಶ್ರೀ ಶಿವರಾತ್ರೀಶ್ವರ ಭಗವತ್ಪಾದರ
ಜಯಂತಿ ಮಹೋತ್ಸವದಲ್ಲಿ
ಶ್ರೀ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳು




ಶ್ರೀಮನ್ ನಿರಂಜನ
ಗುರುಮಲ್ಲೇಶ್ವರರ ಸಂಸ್ಮರಣ
ಶತಮಾನೋತ್ಸವ ಸಮಾರಂಭದಲ್ಲಿ
ಶ್ರೀ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳು



ಶ್ರೀ ಬಸವೇಶ್ವರ ಸ್ವಾಮಿ ನೂತನ ದೇಗುಲ ಉದ್ಘಾಟನಾ
ಸಂದರ್ಭದಲ್ಲಿ ದೇಗುಲ ಹಿರಿಯ ಗುರುಗಳು.



ದೇವ ಕಾರ್ಯದ ಮೆರವಣಿಗೆಯಲ್ಲಿ
ಶ್ರೀ ದೇಗುಲ ಮಠದ ಹಿರಿಯ ಗುರುಗಳು.



ಶ್ರೀ ನಿರ್ವಾಣೇಶ್ವರ ವಿರಕ್ತಮಠ, ಹೆಬ್ಬಣಿ



ಶ್ರೀ ದೇಗುಲಮಠದಲ್ಲಿ ಮಕರ ಸಂಕ್ರಾತಿಯಂದು
ದನಗಳನ್ನು ಕಿಚ್ಚು ಹಾಯಿಸುವುದು.

# ಶ್ರೀ ಮಠದ ಚಟುವಟಿಕೆಗಳು



ಹಿರಿಯ ಹಾಗೂ ಕಿರಿಯ ಗುರುಗಳ ಸಾನ್ನಿಧ್ಯದಲ್ಲಿ ವಿದ್ಯಾರ್ಥಿಗಳ ಪ್ರಾರ್ಥನಾ ಸಭೆ.



ವಿದ್ಯಾರ್ಥಿಗಳ ನಡುವೆ ಶಿಸ್ತಿನ ಹಿರಿಯ ಶ್ರೀಗಳು



ಶ್ರೀ ದೇಗುಲ ಮಠದ ಪ್ರಸಾದ ಗೃಹದಲ್ಲಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರಿಂದ ವಿದ್ಯಾರ್ಥಿಗಳಿಗೆ ಅನ್ನದಾಸೋಹ



ದಾಸೋಹ ನಿಲಯದಲ್ಲಿ ಪ್ರಸಾದ ಸಿದ್ಧತೆಯ ಕಾರ್ಯದಲ್ಲಿ ವಿದ್ಯಾರ್ಥಿ ಶಿಷ್ಯರ ನಡುವೆ ಹಿರಿಯ ಶ್ರೀಗಳು



ಗೌರಿ ಹಬ್ಬದಲ್ಲಿ ಶಿಷ್ಯರೊಡನೆ ಕೋರಣ್ಯ ಮಾಡುತ್ತಿರುವ ಕಿರಿಯ ಶ್ರೀಗಳಾದ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು.



ಪ್ರಸಾದ ಸಿದ್ಧತೆಯ ಉಸ್ತುವಾರಿಯಲ್ಲಿ
ಪೂಜ್ಯ ಹಿರಿಯ ಶ್ರೀಗಳು



ಕಟ್ಟಡ ನಿರ್ಮಾಣದ ಪ್ರಗತಿಯ
ಉಸ್ತುವಾರಿಯಲ್ಲಿ ಹಿರಿಯ ಶ್ರೀಗಳು



ದೇಗುಲ ಮಠದ ತೋಟಗಳ
ಮೇಲ್ವಿಚಾರಣೆಯಲ್ಲಿ ಹಿರಿಯ ಶ್ರೀಗಳು



ಗೋವು ಪೋಷಣೆಯಲ್ಲಿ ಹಿರಿಯ ಶ್ರೀಗಳ
ಜೀವಪ್ರೇಮ.



ಮಕ್ಕಳ ಮನಸ್ಸು ಗೆದ್ದ ವಾತ್ಸಲ್ಯದ ಹಿರಿಯ
ಶ್ರೀಗಳು



ದೇಗುಲ ಮಠದ ವಿದ್ಯಾರ್ಥಿಗಳು ಮೆದೆ
ಹಾಕುವಲ್ಲಿ ಬತ್ತದ ಉತ್ಸಾಹ



ದೇಗುಲ ಮಠದಲ್ಲಿ ಸಸಿ ನೆಡುವ ಕಾರ್ಯದಲ್ಲಿ
ಹಿರಿಯ ಶ್ರೀಗಳು



ಶ್ರೀಮಠದ ದಾಸೋಹ ಭವನ



ಶ್ರೀಮಠದ ಅತಿಥಿ ಗೃಹ



ನಿರ್ಮಾಣ ಹಂತದಲ್ಲಿನ ಚರಪಟ್ಟಾಧಿಕಾರ ರಜತ
ಮಹೋತ್ಸವ ಸ್ಮಾರಕ ಭವನ



ಶ್ರೀಮಠದ ಸಮುದಾಯ ಭವನ

# ಸಭೆ - ಸನ್ಮಾನ ಕಾರ್ಯಕ್ರಮಗಳು



ಶ್ರೀ ದೇಗುಲ ಮಠದ ಗುರು ಸಾನ್ನಿಧ್ಯದಲ್ಲಿ
ಮೈಸೂರು ಮಹಾರಾಜರಾದ
ಶ್ರೀ ಜಯಚಾಮರಾಜೇಂದ್ರ ಒಡೆಯರು



ಶ್ರೀ ದೇಗುಲ ಮಠಕ್ಕೆ ಶ್ರೀ ಗುರು ಸಂದರ್ಶನಕ್ಕೆ
ಆಗಮಿಸಿದ್ದ ಮಾನ್ಯ ಮಾಜಿ ಪ್ರಧಾನಿ
ಶ್ರೀ ಹೆಚ್.ಡಿ. ದೇವೇಗೌಡರಿಗೆ
ಹಿರಿಯ ಗುರುಗಳಿಂದ ಆಶೀರ್ವಾದ ಸನ್ಮಾನ



ಹಿರಿಯ ಶ್ರೀಗಳಿಂದ ಮಾನ್ಯ
ಮುಖ್ಯಮಂತ್ರಿಗಳಾಗಿದ್ದ
ಶ್ರೀ ಎಸ್.ಎಂ. ಕೃಷ್ಣರವರಿಗೆ ಕೋರಿಕೆ ಪತ್ರ



"ದೇಗುಲ ಸಿರಿ" ನೆನಹಿನ ಸಂಚಿಕೆ ಸಂಪಾದಕರಾದ
ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರಿಗೆ ಸನ್ಮಾನ



ಹಿರಿಯ ಗುರುಗಳಿಂದ ಕರ್ನಾಟಕ
ರಾಜ್ಯದ ಮಾನ್ಯ ಸಚಿವರಾದ
ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ಸನ್ಮಾನ




ಕೇಂದ್ರ ಪ್ರೌಢ ಶಿಕ್ಷಣ ಇಲಾಖೆಯ
ವಿಭಾಗೀಯ ಕಾರ್ಯದರ್ಶಿ
ಸಿ. ನಾಗರಾಜು ಅವರಿಗೆ ದೇಗುಲ ಮಠದ
ಕಿರಿಯ ಶ್ರೀಗಳಿಂದ ಸನ್ಮಾನ. ಚಿತ್ರದಲ್ಲಿ
ಮಠದ ಆಡಳಿತಾಧಿಕಾರಿ
ಶ್ರೀ ಎಸ್.ಪಿ. ಶಿವಶಂಕರ್ ಮತ್ತು
ಶ್ರೀ ಎಂ. ಮಲ್ಲಿಕಾರ್ಜುನಯ್ಯ ಅವರು
ಇದ್ದಾರೆ.




ಹಿರಿಯ ಶ್ರೀಗಳಿಂದ ಬ್ಯಾಂಕ್ ಅಧಿಕಾರಿಗಳಿಗೆ
ಆಶೀರ್ವಾದ ಮನ್ನಣೆ ನೀಡುತ್ತಿರುವುದು



ಕನಕಪುರದ ಪ್ರಪ್ರಥಮ ವಚನ ಸಾಹಿತ್ಯ
ಸಮ್ಮೇಳನ ಹಾಗೂ ಲಿಂಗೈಕ್ಯ ಮಹಾಲಿಂಗ
ಸ್ವಾಮಿಗಳ ಸ್ಮರಣೋತ್ಸವದಲ್ಲಿ ಕಿರಿಯ ಶ್ರೀಗಳ
ಆಶೀರ್ವಚನ



ನಂಜನಗೂಡು ತಾಲ್ಲೂಕು ದೇವನೂರಿನ
ಸಂಸ್ಮರಣ ಸಮಾರಂಭದಲ್ಲಿ ಹಿರಿಯ ಗುರುಗಳ
ಭಾಷಣ. ಸಾನ್ನಿಧ್ಯ : ಸುತ್ತೂರು ಶ್ರೀ ಶ್ರೀ
ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು



ದೇಗುಲ ಮಠದ ವತಿಯಿಂದ ವಿದ್ಯಾರ್ಥಿಗಳಿಗೆ
ಉಚಿತ ಬಟ್ಟೆ ಪುಸ್ತಕ ವಿತರಣೆ ಹಾಗೂ
ಗಣ್ಯರಿಗೆ ಸನ್ಮಾನ



ಪೂರ್ವಾಶ್ರಮ ಜನ್ಮ ನೆಲೆಯಾದ
ಕುರುಬೂರು ಗ್ರಾಮದ ವಿದ್ಯಾದರ್ಶಿನಿ
ಕಾನ್ವೆಂಟ್ ಪೋಷಕರ ದಿನಾಚರಣೆಯಲ್ಲಿ
ಹಿರಿಯ ಶ್ರೀಗಳ ಕೃಪಾಶೀರ್ವಾದ ಸಾನ್ನಿಧ್ಯ



ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳ ಆರಾಧನೆಯಂದು ಶ್ರೀ ಸಾವಂದಯ್ಯ ಅವರು ಪ್ರಕಟಿಸಿದ 2003 ನೇ ವರ್ಷದ ಕಾಲ್ಯೆಂಡರ್‌ನ್ನು ಬಿಡುಗಡೆ ಮಾಡಿದ ಶ್ರೀ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳು ಹಾಗೂ ದೇಗುಲ ಮಠದ ಹಿರಿಯ ಮತ್ತು ಕಿರಿಯ ಶ್ರೀಗಳ ಸಾನ್ನಿಧ್ಯದಲ್ಲಿ ಶ್ರೀ ಕೀರ್ತಿಹಾಸನ್




ಶ್ರೀ ದೇಗುಲ ಮಠದ ಗಣೇಶ ವಿಸರ್ಜನೆ ಹಾಗೂ ಶಿಕ್ಷಕ ದಿನಾಚರಣೆ ಸಂದರ್ಭದಲ್ಲಿ ಶ್ರೀ ಸೋಮಶೇಖರ್, ಶ್ರೀಮತಿ ರೇಣುಕಾದೇವಿ ದಂಪತಿಗಳಿಗೆ ಸನ್ಮಾನ ಆಶೀರ್ವಾದ ಮಾಡುತ್ತಿರುವ ಹಿರಿಯ ಹಾಗೂ ಕಿರಿಯ ಗುರುಗಳು



ಮಠದ ಹಳೆಯ ವಿದ್ಯಾರ್ಥಿಯಾದ ಶ್ರೀ ಯೋಗೀಶ್ ಅವರು ಬಿ.ಡಿ.ಎ.ಸಿ. ಸದ್ಯಸರಾಗಿ ಆಯ್ಕೆಗೊಂಡ ಸಂದರ್ಭದಲ್ಲಿ ಉಭಯ ಗುರುಗಳಿಂದ ಆಶೀರ್ವಾದ



ಕನಕಪುರದಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳಾನಧ್ಯಕ್ಷ ಡಾ. ಎಸ್.ಎಂ. ಭೈರಪ್ಪ, ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷ ಪ್ರೊ. ಎನ್. ಬಸವರಾಧ್ಯರು ಉಭಯ ಗುರುಗಳ ದರ್ಶನಕ್ಕಾಗಿ ಬಂದಿದ್ದ ಸಂದರ್ಭ



ಶ್ರೀಮಠದ ಹಳೆ ವಿದ್ಯಾರ್ಥಿಯಾದ ಮಾಜಿ ಸಚಿವರಾದ ಶ್ರೀ ವಿ. ಸೋಮಣ್ಣನವರಿಗೆ ಮಾನ್ಯ ಎಂ.ವಿ. ರಾಜಶೇಖರನ್ ಅವರ ಸಮ್ಮುಖದಲ್ಲಿ ಉಭಯ ಗುರುಗಳಿಂದ ಸನ್ಮಾನ ಆಶೀರ್ವಾದ



ಮಾಜಿ ಮುಖ್ಯಮಂತ್ರಿ ಮಾನ್ಯ ಜೆ.ಹೆಚ್. ಪಟೇಲ್‌ರಿಗೆ ದೇಗುಲ ಮಠದ ಹಿರಿಯ ಗುರುಗಳಿಂದ ಆಶೀರ್ವಾದ ಸನ್ಮಾನ



ಮೈಸೂರಿನಲ್ಲಿರುವ ದೇಗುಲ ಮಠದ ವತಿಯ ನೂತನ ಶಾಲಾ ಕಟ್ಟಡ

# ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಪೂರ್ವಾಶ್ರಮ ಮತ್ತು ಪೂರ್ವಾಶ್ರಮ ಬಂಧುಗಳ ಛಾಯಾಚಿತ್ರಗಳು



೧೯೬೩ ರಲ್ಲಿ ಕಾಲೇಜ್ ವಿದ್ಯಾರ್ಥಿಯಾಗಿದ್ದಾಗ
ಶ್ರೀ ಶಿವರುದ್ರಸ್ವಾಮಿ - ಪೂರ್ವಾಶ್ರಾಮ ನಾಮಧೇಯ



ಶ್ರೀ ಶ್ರೀಗಳವರ ಪೂರ್ವಾಶ್ರಮದ ಹಿರಿಯ ಸೋದರ
ಶ್ರೀ ಕೆ.ವಿ. ಮರಿಸ್ವಾಮಿ



ಅಕ್ಕ ಶ್ರೀಮತಿ ಗಿರಿಜಮ್ಮನವರು



ಅತ್ತಿಗೆ ಶ್ರೀಮತಿ ಶಿವಮ್ಮನವರು



ಹಿರಿಯ ಸೋದರ ಶ್ರೀ ಕೆ.ವಿ. ಮರಿಸ್ವಾಮಿಯವರ
ಧರ್ಮಪತ್ನಿ ಶ್ರೀಮತಿ ಮರಮ್ಮನವರು



ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರು ವಿರಕ್ತಾಶ್ರಮಕ್ಕೆ ಮುನ್ನ ಕಾರ್ಯನಿರ್ವಹಿಸುತ್ತಿದ್ದ ನಂಜನಗೂಡು ಲ್ಯಾಂಡ್ ಟ್ರಿಬ್ಯೂನಲ್ ಕೋರ್ಟಿನಲ್ಲಿ ನೌಕರರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭ - ನ್ಯಾಯಾಧೀಶರು ಹಾಗೂ ಸಿಬ್ಬಂದಿಯೊಂದಿಗೆ

# ಶ್ರೀದೇಗುಲ ಮಠದ ಇತಿಹಾಸ ಮತ್ತು ಪರಂಪರೆ; ಒಂದು ಪಕ್ಷಿನೋಟ

– ಡಾ. ಎಸ್.ಎಚ್. ಭುವನೇಶ್ವರ *

ಹನ್ನೆರಡನೆಯ ಶತಮಾನದಿಂದೀಚೆಗೆ ಕರ್ನಾಟಕ ಸಂಸ್ಕೃತಿಯ ಮೇಲೆ ಗಾಢವಾದ ಪ್ರಭಾವ ಬೀರಿದ ಧರ್ಮಗಳಲ್ಲಿ ವೀರಶೈವ ಧರ್ಮವು ಪ್ರಮುಖವಾಗಿದೆ. ಕರ್ನಾಟಕದ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ವೈಭವವಾಗಿ ಬೆಳೆದಿದ್ದ ಕಲ್ಯಾಣದಲ್ಲಿ ಮಂತ್ರಿಯಾಗಿ ಕೆಲಸ ನಿರ್ವಹಿಸುತ್ತಾ ಆಧ್ಯಾತ್ಮದ ತುತ್ತತುದಿಯನ್ನೇರಿದ್ದ ಜಗಜ್ಯೋತಿಬಸವೇಶ್ವರರು ಮತ್ತು ಅವರ ಸಮಕಾಲೀನರಾಗಿದ್ದ ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ಅನೇಕ ಶರಣರ ಸೈದ್ಧಾಂತಿಕ ಸಾಕಾರ ರೂಪವೇ ಅನುಭವಮಂಟಪ. ಈ ಅನುಭವ ಮಂಟಪದಲ್ಲಿ ಎಲ್ಲಾ ರೀತಿಯ ಜನರು ಎಲ್ಲಾ ರೀತಿಯ ಚರ್ಚೆಗಳನ್ನು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ನಡೆದ ಒಂದು ಸಾಮಾಜಿಕ ಬದಲಾವಣೆಯಿಂದಾಗಿ ಕಲ್ಯಾಣನಗರ ಕ್ರಾಂತಿಗೆ ಒಳಗಾಗಿ, ಅಲ್ಲಿದ್ದ ಎಲ್ಲಾ ಶರಣಚಿಂತಕರು ಸಿಡಿದು, ಕರ್ನಾಟಕದ ಮೂಲೆ ಮೂಲೆಗೆ ಚದುರಿದರು. ಹೀಗೆ ಹೊರಟ ಶರಣರು ಉತ್ತರಕರ್ನಾಟಕ ಪ್ರದೇಶದಿಂದ ದಕ್ಷಿಣಕರ್ನಾಟಕ ಪ್ರದೇಶಕ್ಕೆ ಗುಂಪು ಗುಂಪಾಗಿ ಬಂದು, ಘೋರವಾದ ಅರಣ್ಯ ಪ್ರದೇಶವನ್ನು ತಮ್ಮ ತಪೋಕೇಂದ್ರವನ್ನಾಗಿಸಿಕೊಂಡರು. ಕಲ್ಯಾಣದಲ್ಲಿ ಸ್ಥಾಪಿಸಿದ ಶೂನ್ಯಸಿಂಹಾಸನದ ಅಧಿಪತಿಯಾಗಿದ್ದ ಅಲ್ಲಮಪ್ರಭುಗಳ ಪರಂಪರೆಯಲ್ಲಿ ಬಂದ ಐದನೇ ಪಟ್ಟದ ಆದಿಗಣೇಶ್ವರರು ತಲಕಾಡು ಕಾವೇರಿ ತೀರದ ಮಾಲಂಗಿ ಸಮೀಪದ ಪ್ರಭುದೇವರ ಬೆಟ್ಟಕ್ಕೆ ಬಂದು ನೆಲೆಸಿದರು. ಆರನೇ ಪಟ್ಟದ ನಿರ್ವಾಣಯುಗಣೇಶ್ವರರು ಮಲೆಮಹಾದೇಶ್ವರರಾಗಿ ಮಲೆಮಹದೇಶ್ವರ ಬೆಟ್ಟದಲ್ಲಿ ನೆಲೆಸಿದರು. ಈ ಪರಂಪರೆಯ ಏಳನೆಯ ಪಟ್ಟದ ನಿರಂಜನ ಗಣೇಶ್ವರರು ತಮ್ಮ ಗಣ ಸಮೂಹದಲ್ಲಿದ್ದ ನೂರೊಂದು ವಿರಕ್ತರೊಡನೆ ದೇಶಸಂಚಾರಮಾಡುತ್ತಾ ಶಿವಮತವನ್ನು ಪ್ರಸ್ತುತ ಪಡಿಸುತ್ತಾ ಭಕ್ತಮಹೇಶ್ವರರಿಗೆ ಷಟ್‌ಸ್ಥಲ ಜ್ಞಾನೋಪದೇಶ ಮಾಡುತ್ತಾ ಹೊರಟು ಘೋರಾರಣ್ಯದಿಂದ ಕೂಡಿದ ಪೂರ್ವಘಟ್ಟದ ಪರ್ವತ ಪ್ರದೇಶದಲ್ಲಿ ನೆಲೆಸಿದರು. ಇವರ ಶಿಷ್ಯರಾದ ಜ್ಞಾನಾನಂದಸ್ವಾಮಿಗಳು ಈ ಪ್ರದೇಶದಲ್ಲಿಯೇ ಇದ್ದು ಬಯಲಾದರು. ನಂತರ ಇವರ ಶಿಷ್ಯರಾದ ಆತ್ಮಗಣನಾಥರು ತಮ್ಮ ನೂರೊಂದು ವಿರಕ್ತ ಸಮೂಹದೊಡನೆ ಪ್ರಸರಿಸಿ ಅನೇಕ ಮಠಗಳನ್ನು ಸ್ಥಾಪಿಸಿದರು. ಈ ವಿರಕ್ತದಲ್ಲಿ ಕೆಲವರು ಕಾವೇರಿ, ಅರ್ಕಾವತಿ ನದಿಗಳ ತೀರದ ಅರಣ್ಯಗಳಲ್ಲಿ ನೆಲೆಸಿ ಷಟ್‌ಸ್ಥಲ ಜ್ಞಾನೋಪದೇಶ, ಶಿವಯೋಗ ನಿಷ್ಠೆಯಲ್ಲಿ ನಿರತರಾದರು. ಇಂತಹ ಕ್ಷೇತ್ರಗಳಲ್ಲಿ ಕಾವೇರಿ, ಅರ್ಕಾವತಿ ಸಂಗಮದ ಹತ್ತಿರದ ಮಡಿವಾಳ ಮತ್ತು ಅರ್ಕಾವತಿ ಬಲದಂಡೆಯ ಕಾಣಿಕಾರನ ಹಳ್ಳಿಗಳು ಪ್ರಖ್ಯಾತವಾದವು.

ಪ್ರಭುದೇವ ಪರಂಪರೆಯವರಾದ ನಿರಂಜನ ಸ್ವಾಮಿಗಳ ಗಣಸಮೂಹದ ನೂರೊಂದು ವಿರಕ್ತಮೂರ್ತಿಗಳಲ್ಲಿ ಒಬ್ಬರಾದ ನಿರ್ವಾಣಮಹಾಶಿವಯೋಗಿಗಳು ನೆಲೆಸಿದ ಅರ್ಕಾವತಿ ತೀರದ ಕಾಣಿಕಾರನಹಳ್ಳಿಯ ಕ್ಷೇತ್ರವು ಬೆಟ್ಟಗುಡ್ಡಗಳ ದಟ್ಟ ಅರಣ್ಯ ಪ್ರದೇಶವಾಗಿತ್ತು. ಆದ್ಯ ಶ್ರೀ ನಿರ್ವಾಣಮಹಾಸ್ವಾಮಿಗಳವರು ಪೂರ್ವದ ಬಿಳಿಕಲ್ಲು ಬೆಟ್ಟ, ಪಶ್ಚಿಮದ ಬಾಣಂತಿಮಾರಮ್ಮನಬೆಟ್ಟ, ದಕ್ಷಿಣದ ಸಿದ್ದೇಶ್ವರಬೆಟ್ಟ, ಉತ್ತರದ ಗಂಗಾಧರೇಶ್ವರಬೆಟ್ಟ. ಈ ನಾಲ್ಕು ಬೆಟ್ಟಗಳ ಮಧ್ಯದಲ್ಲಿ ಅರ್ಕಾವತಿಯ ಬಲದಂಡೆಯ ಸಮತಲ ಪ್ರದೇಶದಲ್ಲಿ ನೆಲೆಸಿದರು. ಅದು ಪಾವನ ಕ್ಷೇತ್ರವಾಯಿತು. ಆದ್ಯಶ್ರೀನಿರ್ವಾಣ ಮಹಾಸ್ವಾಮಿಗಳು ಮಹಾನ್ ತಪಸ್ವಿಗಳು, ಮಹಿಮಾಪುರುಷರೂ ಆಗಿದ್ದು, ನಾಡಿನಜನತೆ ಅವರನ್ನು ಸಾಕ್ಷಾತ್ ದೇವರೆಂದೇ ಭಾವಿಸಿ ಗೌರವಿಸುತ್ತಿದ್ದುದರಿಂದ ಶ್ರೀಮಠ ಶ್ರೀ ನಿರ್ವಾಣದೇವರ ಮಠವೆಂದೇ ಪ್ರಸಿದ್ಧವಾಗಿ, ಮುಂದಿನಮಹಾಪುರುಷರಿಗೆ ತಪೋಭೂಮಿಯಾಗಿ, ಸಾಧನಾ ಕ್ಷೇತ್ರವಾಯಿತು.

೧೩ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಕಾಣಿಕಾರನಹಳ್ಳಿಯಾಗಿದ್ದು, ೧೮ನೇ ಶತಮಾನದಿಂದ ೨೦ನೇ ಶತಮಾನದ ಪೂರ್ವಾರ್ಧದವರೆಗೆ ಕಾನ್‌ಕಾನ್ ಹಳ್ಳಿಯಾಗಿ, ಸ್ವಾತಂತ್ರ್ಯ ಬಂದ ನಂತರ 'ಕನಕಪುರ' ವೆಂದು ಹೆಸರಾಯಿತು. ಭಾರತದಲ್ಲೇ ಅತ್ಯಂತ ದೊಡ್ಡ ಲೋಕಸಭಾಕ್ಷೇತ್ರವೆಂದು ಹೆಗ್ಗಳಿಕೆ

* ಕನ್ನಡ ಪ್ರಾಧ್ಯಾಪಕ, ರೂರಲ್ ಕಾಲೇಜು, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಹೊಂದಿರುವ ಇದು ಕರ್ನಾಟಕದಲ್ಲೇ ಅತ್ಯಂತ ಎರಡನೇಯ ದೊಡ್ಡ ತಾಲ್ಲೂಕಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಂಟು ತಾಲ್ಲೂಕುಗಳಲ್ಲೊಂದಾದ ಇದು ಬೆಂಗಳೂರಿನಿಂದ ೫೫ ಕಿ.ಮೀ. ದೂರದಲ್ಲಿ ಅರ್ಕಾವತಿಯ ಬಲದಂಡೆಯಲ್ಲಿದೆ. ಈ ಕನಕಪುರದ ಉತ್ತರದ ಹೆಬ್ಬಾಗಿಲಿನ ಬೆಂಗಳೂರಿನ ರಸ್ತೆಯಿಂದ ಪೂರ್ವಾಭಿಮುಖವಾಗಿ ನಡೆದರೆ ಅರ್ಕಾವತಿ ನದಿಯ ದಂಡೆಯಲ್ಲಿರುವ ಆಶ್ರಮವೇ **'ಶ್ರೀದೇಗುಲಮಠ'**. ಈ ಮಠವು ೧೫ನೇ ಶತಮಾನದಲ್ಲಿ ಪ್ರಾರಂಭವಾಗಿ ಕರ್ನಾಟಕದ ಒಂದು ಪುಣ್ಯಕ್ಷೇತ್ರವಾಗಿದೆ. ಈ ಪರಂಪರೆ ಅತ್ಯಂತ ಮಹತ್ವದ್ದು. ಶರಣಪರಂಪರೆಯು ಬಿತ್ತಿಹೋದ ಮೌಲ್ಯಗಳ ಜೀವಂತ ಸಾಕ್ಷಿಯಾಗಿದೆ. ಶ್ರೀಮಠದ ಗುರುಪರಂಪರೆಯವರು ಮಠದ ಶ್ರೇಯೋಭಿವೃದ್ಧಿಗಾಗಿ, ಒಬ್ಬೊಬ್ಬರು ಒಂದೊಂದು ಆಧಾರಸ್ಥಂಭವಾಗಿ ಒಂದು ಭವ್ಯವಾದ ದೇವಾಲಯವನ್ನು ಕಟ್ಟಿ ನಿಲ್ಲಿಸಿದ್ದಾರೆ. ಅದು ಇಂದಿನ ಆಧುನಿಕತೆಗೆ ಅನುಗುಣವಾಗಿ ಬೆಳೆಯುತ್ತಾ, ತಪಸ್ವಿಗಳನೇಕರ ತಾಣವಾಗಿದೆ. ಕನಕಪುರ ಹಿಂದುಳಿದ ತಾಲ್ಲೂಕಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿದ್ದ ಶಿಕ್ಷಣದ ಬಗೆಗಿನ ಕಾಳಜಿ, ಇತ್ತೀಚಿನ ದಿನಗಳಲ್ಲಿ ಫಲನೀಡತೊಡಗಿದೆ. ಇಂದು ಶ್ರೀಮಠ ಗುರುವಿಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನ ಎಂಬ ತ್ರಿವಿಧದಾಸೋಹದ ಮಹಾಮನೆಯಾಗಿದೆ.

ಶ್ರೀದೇಗುಲ ಮಠದಲ್ಲಿ ದೊಡ್ಡಮಠ, ಚಿಕ್ಕಮಠ ಅಥವಾ ಗವಿಮಠ ಎಂಬ ವಿಭಾಗಗಳಿದ್ದು ಇಂದು ಎರಡೂ ಒಂದೇ ಮಠವಾಗಿ ಶ್ರೀದೇಗುಲಮಠವಾಗಿದೆ. ಇದುವರೆಗೂ ಶ್ರೀ ಮಠವು ಗುರು ಪರಂಪರೆಯಲ್ಲಿ ಒಟ್ಟು ಹದಿನಾಲ್ಕು ಸ್ವಾಮಿಗಳನ್ನು ಹೊಂದಿದ್ದು, ಪ್ರಬುದ್ಧಮಾನಕ್ಕೆ ಬೆಳೆದು ನಿಂತಿದೆ. ಮೂಲ ಪುರುಷ ಆದ್ಯ ಶ್ರೀ ನಿರ್ವಾಣಮಹಾಸ್ವಾಮಿಗಳಿಂದ ಹಿಡಿದು, ಇಂದಿನ ಮುಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳವರೆಗೆ ಎಲ್ಲರೂ ಒಂದೊಂದು ಅನರ್ಘ್ಯರತ್ನಗಳಾಗಿದ್ದಾರೆ. ಅವರೆಲ್ಲರ ಸಾಧನೆಯ ಫಲವೇ ಇಂದಿನ 'ಶ್ರೀದೇಗುಲಮಠ'.

### ಆದ್ಯ ಶ್ರೀ ನಿರ್ವಾಣಮಹಾಸ್ವಾಮಿಗಳು

ಅಲ್ಲಮಪ್ರಭು ಪರಂಪರೆಯ ಆದ್ಯ ಶ್ರೀನಿರ್ವಾಣ ಮಹಾಶಿವಯೋಗಿಗಳೇ ಶ್ರೀದೇಗುಲ ಮಠದ ಮೂಲಪುರುಷರು. ಅಣಿಮಾಡಿ ಅಷ್ಟಸಿದ್ದಿಗಳನ್ನು ಸಾಧಿಸಿ, ತನ್ನ ಜೊತೆಯಲ್ಲಿಯೇ ತನ್ನಂತೆ ಹಲವರನ್ನು ಸಾಧಕರನ್ನಾಗಿಸಿದರು. ಪರಮವೈರಾಗ್ಯಮೂರ್ತಿಗಳಾಗಿದ್ದ ಪೂಜ್ಯರು ಪೂಜಾಧ್ಯಾನಾಸಕ್ತರಾಗಿರುತ್ತಾ ಸದಾಶಿವಯೋಗ ನಿರತರಾಗಿದ್ದರು. ಅವರು ನೆಲೆಸಿದ ಕ್ಷೇತ್ರ ಸುಕ್ಷೇತ್ರವೆನಿಸಿತು. ಶಿವನ ಸಾಕಾರಮೂರ್ತಿಯಂತಿದ್ದ ಪೂಜ್ಯರನ್ನು ನೋಡಲು ಭಕ್ತಸಮೂಹವೇ ಬಂದು ಸೇರುತ್ತಿತ್ತು. ಈ ಕಾರಣದಿಂದಲೇ ಈ ಕ್ಷೇತ್ರಕ್ಕೆ ದೇಗುಲಮಠ ಎಂದರೆ ದೇವರಿರುವ ದೇವಸ್ಥಾನ ಎಂಬ ಅರ್ಥದಲ್ಲಿ ಪ್ರಸಿದ್ಧಿಯನ್ನು ಪಡೆದು, ಮುಂದೆ ಅದೇ ಹೆಸರು ಶಾಶ್ವತವಾಯಿತು. ಶ್ರೀಗಳವರು ಭಕ್ತರ ಮನೋಭಾವದಲ್ಲಿ ಹಲವಾರು ನಿದರ್ಶನಗಳ ಮೂಲಕ ತಮ್ಮ ವ್ಯಕ್ತಿತ್ವವನ್ನು ಚಿರಸ್ಥಾಯಿಗೊಳಿಸಿದ್ದಾರೆ.

ಆದ್ಯ ಶ್ರೀ ನಿರ್ವಾಣಮಹಾಸ್ವಾಮಿಗಳು ಕೇವಲ ಮಠಕ್ಕೆ ಮಾತ್ರ ಸೀಮಿತವಾಗಿರದೆ, ಶಿವನಲ್ಲಿ ಅವಿನಾಭೂತವಾಗಿರುವ ಶಿವೆಯ ನಿಜದ ನಿಲುವನ್ನು ಗುರುಮುಖದಿಂದ ಅರಿತು ಆರಾಧಿಸಬೇಕೇಂಬುದೇ ಅವರ ಮನದಾಸೆಯಾಗಿತ್ತು. ಆದ್ದರಿಂದ ವಿರುಪಸಂದ್ರ, ಕುರುಪೇಟೆ, ಮಳಗಾಳು ಮತ್ತು ಕನಕಪುರಗಳಲ್ಲಿ ಗುಡಿಕಟ್ಟಿ ನಾಲ್ವರು ಶಕ್ತಿಯರನ್ನು ಸಂಕೇತ ಸಂಸ್ಮಾರಣಾ ರೂಪದಿಂದ ಇಂದಿಗೂ ಪೂಜಿಸಲು ಕಾರಣೀಭೂತ ರಾಗಿದ್ದಾರೆ. ಪ್ರತಿವರ್ಷ ನಡೆಸುವ 'ಕೊಂಡ'ದ ಸಂದರ್ಭದಲ್ಲಿ ಈ ದೇವತೆಯರಿಗೆ ಮಠದಿಂದ ಸೋಗಿಲು ತುಂಬುವ, ತೀರ್ಥಕೊಡುವ ಪದ್ಧತಿ, ದೇವತೆಗಳನ್ನು ಮಠಕ್ಕೆ ಬಂದಾಗ ಸ್ವಲ್ಪ ದೂರದವರೆಗೆ ಹೋಗಿ ಆ ದೇವತೆಗಳು ಸ್ವಾಮಿಗಳು ಕಳುಹಿಸಿಕೊಡುವ ಪದ್ಧತಿ, ಇಂದಿಗೂ ರೂಢಿಯಲ್ಲಿರುವುದನ್ನು ಕಾಣಬಹುದು. ಶ್ರೀಯವರು ೧೨೦ ವರ್ಷಗಳ ಕಾಲ ಬಾಳಿ ಲಿಂಗೈಕ್ಯರಾದರು. ಅವರ ಮೂಲಗದ್ದುಗೆಯು ಶ್ರೀಮಠದಲ್ಲಿದೆ.

### *ಶ್ರೀ ದೇವಲಿಂಗ ಮಹಾಸ್ವಾಮಿಗಳು*

ಅಲ್ಲಮಪ್ರಭು ಪರಂಪರೆಯಲ್ಲಿಯೇ ಬಂದು, ಆದ್ಯ ಶ್ರೀ ನಿರ್ವಾಣಸ್ವಾಮಿಗಳ ಸೇವೆಯಲ್ಲಿದ್ದು, ಗುರುವಿನ ಅನುಗ್ರಹ ಪಡೆದು, ಪ್ರತ್ಯೇಕ ಆಶ್ರಮವೊಂದನ್ನು ಸ್ಥಾಪಿಸಿದರು. ಅದೇ ಚಿಕ್ಕಮಠ. ಆ ಮಠದ ಪಕ್ಕದಲ್ಲಿದ್ದ ಸ್ಮಶಾನದಲ್ಲಿ ಖನನ ಮತ್ತು ದಹನ ಕ್ರಿಯೆ ನಡೆಯುವಾಗ ಶಿರಸ್ಸು ಸಿಡಿಯುವ ಶಬ್ದವಾಗುತ್ತಿತ್ತು. ಪೂಜಾನುಷ್ಠಾನದ ಶಾಂತಿಗೆ ಧಕ್ಕೆ ಬರುತ್ತದೆ ಎಂದು ದಹನದ ಕಾಲದಲ್ಲಿ ಶಿರೋಭೇದನ ಶಬ್ದವಾಗದಂತೆ ಅಪ್ಪಣೆ ಮಾಡಿದರು. ಅದು ಇಂದಿಗೂ ಮಠದ ಆವರಣದಲ್ಲಿ ಆಗದಿರುವುದನ್ನು ಕಾಣಬಹುದು. ಇವರ ಗದ್ದುಗೆ ಚಿಕ್ಕಮಠದಲ್ಲಿದೆ.

### *ಶ್ರೀ ನಾಗಲಿಂಗ ಮಹಾಸ್ವಾಮಿಗಳು*

ಶ್ರೀ ನಾಗಲಿಂಗಮಹಾಸ್ವಾಮಿಗಳು ಶ್ರೀ ದೇವಲಿಂಗ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ಚಿಕ್ಕಮಠದ ಉತ್ತರಾಧಿಕಾರಿಯಾದರು. ಶಿವಧರ್ಮನಿಷ್ಠೆಯುಳ್ಳವರಾಗಿದ್ದ ಇವರು ವಿನಯ, ವಿಶಾಲದೃಷ್ಟಿ ತ್ರಿಕಾಲ ಪೂಜಾಸಕ್ತರಾದ

ಭಕ್ತಾದಿಗಳಿಗೆ ದರ್ಶನಾಶೀರ್ವಾದ ನೀಡುತ್ತಾ ಬಂದವರು. ಇವರ ಗದ್ದುಗೆ ಚಿಕ್ಕಮಠದಲ್ಲಿದೆ.

### *ಶ್ರೀ ನಂಜಯ್ಯ ಮಹಾಸ್ವಾಮಿಗಳು*

ಆದ್ಯಶ್ರೀ ನಿರ್ವಾಣಮಹಾಸ್ವಾಮಿಗಳ ನಂತರ ಶ್ರೀ ನಂಜಯ್ಯ ಸ್ವಾಮಿಗಳು ವೀರವೈರಾಗ್ಯ ಮೂರ್ತಿಗಳಾಗಿದ್ದು, ಶಾಸ್ತ್ರಪಾಂಡಿತ್ಯವನ್ನು ಗಳಿಸಿದ್ದರು. ಹಿಂದಿನ ಶ್ರೀಗಳಂತೆಯೇ ಶ್ರೀಮಠವನ್ನು ಅಭಿವೃದ್ಧಿಯ ಕಡೆಗೆ ಕೊಂಡೊಯ್ದರು.

### *ಶ್ರೀ ಮಹಾಲಿಂಗಸ್ವಾಮಿಗಳು*

ಶ್ರೀ ಮಹಾಲಿಂಗಸ್ವಾಮಿಗಳಿಗೆ ಶ್ರೀಮಠದ ಜೊತೆಗೆ ಶ್ರೀ ದೇವಲಿಂಗ ಸ್ವಾಮಿಗಳು ಸ್ಥಾಪಿಸಿದ ಚಿಕ್ಕಮಠದ ಜವಬ್ದಾರಿಯು ಬಂದಿತು. ಕಲ್ಯಾಣದ ವಚನಾನುಭವಗಳನ್ನು ಭಜನೆ, ಅನುಭವ ಗೋಷ್ಠಿಗಳಿಂದ ಭಕ್ತರ ಮನಸ್ಸನ್ನು ಗೆದ್ದು, ಶಿವತತ್ತ್ವ ವಿಚಾರಗಳನ್ನು ಪ್ರಚುರಪಡಿಸಿದರು. ಶ್ರೀಯವರ ಗದ್ದುಗೆಯು ಶ್ರೀಮಠದಲ್ಲಿದೆ.

### *ಶ್ರೀ ಹುಚ್ಚಪ್ಪ ಮಹಾಸ್ವಾಮಿಗಳು*

ಶ್ರೀ ಹುಚ್ಚಪ್ಪಸ್ವಾಮಿಗಳಿಂದ ಶ್ರೀಮಠದಲ್ಲಿ ಹಲವಾರು ಪವಾಡ ಸದೃಶವಾದ ನಿದರ್ಶನಗಳು ಬೆಳಕಿಗೆ ಬಂದಿವೆ. ಶ್ರೀದೇಗುಲಮಠದ ಗುರುಪರಂಪರೆಯ ಪ್ರಭಾವವು ನಾಡಿನ ಎಲ್ಲೆಡೆಯೂ ಹಬ್ಬಿತ್ತು. ಈ ಕ್ಷೇತ್ರದ ಮಹಿಮೆ ಮೈಸೂರು ರಾಜಮನೆತನದವರನ್ನು ಆಕರ್ಷಿಸಿತು. ದೊಡ್ಡ ದೇವರಾಜ ಒಡೆಯರ್ ಆಳ್ವಿಕೆಯ ಸಂಧರ್ಭದಲ್ಲಿ ಅವರ ದಳವಾಯಿ ಯಾಗಿದ್ದ ದಳವಾಯಿ ಕೊಮಾರಯ್ಯನ ತಾಯಿ ತಿಮ್ಮಮ್ಮಣ್ಣಿ ಯವರು ಶ್ರೀದೇಗುಲಮಠಕ್ಕೆ ಬಂದು, ಶ್ರೀದೇಗುಲ ದರ್ಶನಾ ಶೀರ್ವಾದವನ್ನು ಪಡೆದು, ಮಠವನ್ನು ಕಟ್ಟಿಸಿಕೊಟ್ಟು ಭೂಸ್ವಾಸ್ಥೆ ಯನ್ನು ದಾನಮಾಡಿದರು. ಹೀಗೆ ಮಠದ ಕೀರ್ತಿಯನ್ನು ರಾಜರ ಮಟ್ಟಕ್ಕೇರಿಸಿ ಲಿಂಗೈಕ್ಯರಾದ ಅವರ ಗದ್ದುಗೆ ಶ್ರೀಮಠದಲ್ಲಿಯೇ ಇದೆ.

### *ಶ್ರೀ ಮರುಳಸಿದ್ಧ ಮಹಾಸ್ವಾಮಿಗಳು*

ಶ್ರೀಗಳು ಅಧಿಕಾರವಹಿಸಿಕೊಂಡ ಕೆಲವು ವರ್ಷಗಳಲ್ಲೇ ಮೂಲಾನಕ್ಷತ್ರದ ಮಳೆ ಸುರಿದು ಅರ್ಕಾವತಿಯಲ್ಲಿ ಪೂರ್ಣಪ್ರವಾಹವುಂಟಾಗಿ ಚಿಕ್ಕಮಠ, ದೊಡ್ಡಮಠಗಳು ಕೊಚ್ಚಿಹೋದವು. ಈ ಅನಾಹುತದಿಂದ ದೇಗುಲಮಠದಲ್ಲಿದ್ದ ತಾಳೆಯೋಲೆ ಗ್ರಂಥಗಳು, ಅಪೂರ್ವವಸ್ತುಗಳು ಪ್ರವಾಹಕ್ಕೆ ಒಳಗಾಗಿ ನಾಶವಾಯಿತು. ಈ ವಿಚಾರ ಮೈಸೂರಿನ ಅರಸು ಮನೆತನದವರಿಗೆ ತಿಳಿದು, ಈ ಕ್ಷೇತ್ರಕ್ಕೆ ಬಂದು ೨೮ನೇ ಏಪ್ರಿಲ್ ೧೬೭೨ ರಂದು ಕೊಚ್ಚಿ ಹೋಗಿದ್ದ ಮಠಗಳೆರಡನ್ನು ಪುನರ್ ನಿರ್ಮಾಣ ಮಾಡಿಸಿ ದೇಗುಲಮಠಕ್ಕೆ ಮತ್ತೆ ಕೆಲವು ಎಕರೆ ಭೂಮಿಯನ್ನು ದಾನ ಮಾಡಿದರು. ಈ ವಿಚಾರ ಮಠದ ಆವರಣದಲ್ಲಿರುವ ಶಾಸನದಲ್ಲಿ ನಮೂದಿಸಲಾಗಿದೆ.

### *ಶ್ರೀ ಚನ್ನಬಸವ ಮಹಾಸ್ವಾಮಿಗಳು*

ಶ್ರೀ ಚನ್ನಬಸವ ಸ್ವಾಮಿಗಳು ಕನಕಪುರದ ಬಳಿ ಇರುವ ಅರಳಾಳು ಗ್ರಾಮದವರು. ಇವರು ಮಠದ ಸುತ್ತಲೂ ಇದ್ದ ಮಠದ ಮಾನ್ಯಭೂಮಿಯನ್ನು ರೂಢಿಸುವ ಸಲುವಾಗಿ ರೈತ ವರ್ಗದವರಿಗೆ ಹಂಚಿಕೊಟ್ಟರು. ಈ ಹಿಂದೆ ಇದ್ದ ಚಿಕ್ಕಮಠದ ಜವಾಬ್ದಾರಿಯನ್ನು ಅರಳಾಳಿನವರೇ ಆದ ಮತ್ತೊಬ್ಬ ವಟುವನ್ನು ಆರಿಸಿ, ಅವರಿಗೆ ಆಶ್ರಮಾಧಿಕಾರವನ್ನು ವಹಿಸಿಕೊಟ್ಟರು.

### *ಇಮ್ಮಡಿ ಶ್ರೀ ಮರುಳಸಿದ್ಧ ಮಹಾಸ್ವಾಮಿಗಳು*

ಇಮ್ಮಡಿ ಶ್ರೀ ಮರುಳಸಿದ್ಧ ಸ್ವಾಮಿಗಳು ಶಿವ ಪೂಜಾನಿಷ್ಠರು, ಸಾಮಾಜಿಕ ಸಮಸ್ಯೆಗಳನ್ನು ದಕ್ಷತೆಯಿಂದ ಇತ್ಯರ್ಥಪಡಿಸುತ್ತಿದ್ದರು. ಶಿಥಿಲವಾಗುತ್ತಿದ್ದ ಮಠದ ಕಟ್ಟಡಗಳನ್ನು ಪುನರುಜ್ಜೀವನಗೊಳಿಸಿದರು. ಚನ್ನಬಸವ ಸ್ವಾಮಿಗಳು ಮುಪ್ಪಿನವರಾದ್ದರಿಂದ ದೊಡ್ಡಮಠಕ್ಕೆ ರಾಮನಗರದ ಐಜೂರಿನ ಶ್ರೀ ಸಾವಂದಪ್ಪನವರ ಕಿರಿಯ ಪುತ್ರರಾದ ಶ್ರೀ ಬಸಪ್ಪದೇವರನ್ನು ಉತ್ತರಾಧಿಕಾರಿಗಳನ್ನಾಗಿ ಆರಿಸಿದರು. ಜೊತೆಗೆ ಚಿಕ್ಕಮಠಕ್ಕೆ ಅರಳಾಳು ಗ್ರಾಮದ ಶ್ರೀ ಕಾಳಪ್ಪನವರನ್ನು ಉತ್ತರಾಧಿಕಾರಿ ಗಳನ್ನಾಗಿ ಆರಿಸಲಾಯಿತು.

### *ಇಮ್ಮಡಿ ಶ್ರೀ ನಿರ್ವಾಣ ಮಹಾಸ್ವಾಮಿಗಳ ಮತ್ತು ಇಮ್ಮಡಿ ಶ್ರೀ ಹುಚ್ಚಪ್ಪ ಮಹಾಸ್ವಾಮಿಗಳು*

ಶ್ರೀ ಬಸಪ್ಪ ದೇವರಿಗೆ ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳೆಂದೂ, ಶ್ರೀ ಕಾಳಪ್ಪನವರಿಗೆ ಇಮ್ಮಡಿ ಶ್ರೀ ಹುಚ್ಚಪ್ಪ ಸ್ವಾಮಿಗಳೆಂದು ನಾಮಾಂಕಿತವಾಯಿತು. ನೂತನ ಶ್ರೀಗಳು ದೇಹವನ್ನು ಆತ್ಮವನ್ನೂ ಶಿವಸ್ವರೂಪಿ ಗುರುಲಿಂಗ ಜಂಗಮಕ್ಕೆ ಸಮರ್ಪಣೆ ಮಾಡಿ, ಆ ಮೂಲಕ ಸಮಾಜದ ಏಳಿಗೆಯನ್ನು ಮಾಡಿದರು. ಹಿರಿಯ ಗುರುಗಳ ಆದೇಶದಂತೆ ನಡೆದುಕೊಂಡರು. ಶ್ರೀ ಚನ್ನಬಸವ ಸ್ವಾಮಿಗಳು ೧೯೧೦ ರಲ್ಲಿ ಲಿಂಗೈಕ್ಯರಾದರು. ನಂತರ ಶ್ರೀ ಹುಚ್ಚಪ್ಪಸ್ವಾಮಿಗಳು ಲಿಂಗೈಕ್ಯರಾದರು. ೧೯೨೪ ರಲ್ಲಿ ಇಮ್ಮಡಿ ಶ್ರೀ ಮರುಳಸಿದ್ಧಸ್ವಾಮಿಗಳು ಲಿಂಗೈಕ್ಯರಾದರು. ನಂತರ ಎರಡೂ ಮಠಗಳ ಜವಾಬ್ದಾರಿ ಶ್ರೀ ನಿರ್ವಾಣ ಮಹಾಸ್ವಾಮಿಗಳಿಗೆ ಬಂದಿತು. ನಡೆನುಡಿಯೊಂದಾಗಿದ್ದ ಶ್ರೀಯವರು ಮುಗ್ಧಸ್ವಭಾವದ ಮಿತಭಾಷಿಗಳಾಗಿದ್ದರು. ಇವರು ತಮ್ಮ ಜೀವಿತ ಕಾಲದಲ್ಲಿಯೇ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವ ಆಲೋಚನೆ

ಮಾಡಿದರು. ಅದರಂತೆ ಸಿದ್ಧಗಂಗಾಕ್ಷೇತ್ರದ ಶ್ರೀ ಉದ್ದಾನ ಶಿವಯೋಗಿಗಳ ಸೂಚನೆಯಂತೆ ತುಮಕೂರು ತಾಲ್ಲೂಕಿನ ಕೆಂಬಳಲು ಗ್ರಾಮದ ಕಾಳಪ್ಪ ಎಂಬ ವಟುವನ್ನು ೧೯೩೯ ರ ಫೆಬ್ರವರಿಯಲ್ಲಿ ಉತ್ತರಾಧಿಕಾರಿಯನ್ನಾಗಿ ಇಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳು ಎಂಬ ನಾಮಾಂಕಿತದಿಂದ ನೇಮಿಸಲಾಯ್ತು. ೩೦-೧-೧೯೭೨ ರಂದು ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳು ಲಿಂಗೈಕ್ಯರಾದರು.

*ಇಮ್ಮಡಿ ಶ್ರೀ ಮಹಾಲಿಂಗ ಮಹಾಸ್ವಾಮಿಗಳು*

ಶ್ರೀಗಳವರು ಬಹಳ ಚುರುಕುಬುದ್ಧಿಯುಳ್ಳ ಒಳ್ಳೆಯ ಮಾತುಗಾರರು ಹಾಗೂ ಹಾಸ್ಯಪ್ರಿಯರು. ಇವರು ಭೂಮಿಯ ವ್ಯವಸಾಯದಿಂದ ಆತ್ಮ ವ್ಯವಸಾಯದವರೆಗೂ ಸಿದ್ಧಹಸ್ತರು. ಶ್ರೀಮಠದ ಆಶ್ರಯದಲ್ಲಿ "ಶ್ರೀ ನಿರ್ವಾಣಸ್ವಾಮಿ ಕೃಪಾ ವಿದ್ಯಾಪೀಠ" ಸ್ಥಾಪಿಸಿ, ಆ ಮೂಲಕ ವಿವಿಧ ಸ್ಥಳದಲ್ಲಿ ಅನೇಕ ಪ್ರೌಢಶಾಲೆಗಳನ್ನು ತೆರೆಯುವ ಮೂಲಕ ಗ್ರಾಮೀಣ ವಿದ್ಯಾರ್ಥಿಗಳ ಶೈಕ್ಷಣಿಕ ವಿಕಾಸಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟರು. ಸಾವಿರಾರು ವಿದ್ಯಾರ್ಥಿಗಳಿಗೆ ಆಶನ ಮತ್ತು ವಸತಿಯನ್ನು ಕಲ್ಪಿಸಿ ಅವರ ಬೌದ್ಧಿಕ ವಿಕಾಸಕ್ಕೆ ಅವಕಾಶ ಕಲ್ಪಿಸಿಕೊಡುವುದರ ಜೊತೆಗೆ ಉತ್ತಮ ನಾಗರಿಕರನ್ನು ನಿರ್ಮಾಣ ಮಾಡುವ ಕೆಲಸವನ್ನು ಮಾಡಿದರು. ಶಿವಾನುಭವ ಗೋಷ್ಠಿಗಳು, ಶರಣ ತತ್ತ್ವಚಿಂತನಾ ಕಾರ್ಯಕ್ರಮಗಳು, ಉಪನ್ಯಾಸಗಳ ಮೂಲಕ ಧರ್ಮಪ್ರಚಾರ ಕಾರ್ಯವನ್ನು ಮಾಡುತ್ತಾ ಭಕ್ತ ಸಮುದಾಯದ ಆಧ್ಯಾತ್ಮಿಕ ವಿಕಾಸಕ್ಕೂ ಕಾರಣೀಭೂತರಾದವರು.

*ಮುಮ್ಮಡಿ ಶ್ರೀ ನಿರ್ವಾಣ ಮಹಾಸ್ವಾಮಿಗಳು*

ಮುಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳು ಪೂರ್ವಾಶ್ರಮದಲ್ಲಿ ಟಿ.ನರಸೀಪುರ ತಾಲ್ಲೂಕಿನ ಕುರುಬೂರು ಗ್ರಾಮದ ಶ್ರೀ ವೀರಭದ್ರಪ್ಪ ಮತ್ತು ಶ್ರೀಮತಿ ತಾಯಮ್ಮನವರ ಗರ್ಭದಲ್ಲಿ ಜನಿಸಿದ ಶಿವರುದ್ರ ಸ್ವಾಮಿಗಳು ಎನಿಸಿದ್ದರು. ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಸೂಚನೆಯ ಮೇರೆಗೆ ಮತ್ತು ಇಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳ ದೂರದೃಷ್ಟಿಯ ಫಲವಾಗಿ ಮುಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳು ಎಂಬ ಅಭಿಧಾನ ದೊಂದಿಗೆ ಶ್ರೀ ದೇಗುಲಮಠದ ಉತ್ತರಾಧಿಕಾರಿಯಾದರು. ಸಮಾಜದಲ್ಲಿನ ದೀನದಲಿತರ ಬಗೆಗೆ ಅಪಾರ ಕಾಳಜಿಯನ್ನು ಹೊಂದಿರುವ ಶ್ರೀಗಳು ಅಂಥವರ ಅಭಿವೃದ್ಧಿಗಾಗಿ ಹಮ್ಮಿಕೊಂಡ ಕಾರ್ಯಯೋಜನೆಗಳು ಹಲವು. ಇಮ್ಮಡಿ ಶ್ರೀ ಮಹಾಲಿಂಗ ಸ್ವಾಮಿಗಳು ಸ್ಥಾಪಿಸಿದ್ದ ಶಿಕ್ಷಣ ಸಂಸ್ಥೆಗಳ ಜೊತೆಗೆ, ಹೊಸ ಹೊಸ ವಿವಿಧ ಸಂಸ್ಥೆಗಳನ್ನು, ವಿಭಾಗಗಳನ್ನು ಸ್ಥಾಪಿಸುವುದರ ಮೂಲಕ ವಿಸ್ತಾರಗೊಳಿಸಿ ಬೆಳೆಸಿದ್ದಾರೆ. ಶ್ರೀಯವರು ಖುಷ್ಕಿ ಭೂಮಿಯನ್ನು ನೀರಾವರಿಗೆ ಒಳಪಡಿಸಿ ಉತ್ತಮವಾದ ವಾಣಿಜ್ಯ ಬೆಳೆಗಳಾದ ಅರಿಶಿಣ, ಬಾಳೆ, ಕಬ್ಬು, ಬೆಳೆಗಳನ್ನು ಬೆಳೆದು, ಸಮಾಜಕ್ಕೆ ಕೃಷಿಕ್ಷೇತ್ರದ ಪ್ರಯೋಗಶೀಲತೆಯನ್ನು ಜೀವಂತವಾಗಿಸಿದ್ದಾರೆ. ಆಧುನಿಕ ಕೃಷಿಪದ್ಧತಿಯನ್ನು ಅಳವಡಿಸಿ ಅತ್ಯುತ್ಕೃಷ್ಟವಾದ ಬೆಳೆಗಳನ್ನು ತೆಗೆದಿರುವುದೇ ನಿದರ್ಶನವಾಗಿದೆ. ನಿತ್ಯವೂ ಮಠಕ್ಕೆ ಬರುವ ನೂರಾರು ಭಕ್ತಾದಿಗಳಿಗೆ ದಾಸೋಹ ಮಾಡುವುದರ ಜೊತೆಗೆ, ವಿಶೇಷ ಶರಣತತ್ತ್ವ ಚಿಂತನಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಭಕ್ತಸಮೂಹಕ್ಕೆ ಮಾನಸಿಕ ಮತ್ತು ಆಧ್ಯಾತ್ಮಿಕ ವಿಕಾಸಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ.

*ಮುಮ್ಮಡಿ ಶ್ರೀ ಮಹಾಲಿಂಗ ಮಹಾಸ್ವಾಮಿಗಳು*

ತುಮಕೂರು ಜಿಲ್ಲೆಯ ಕೆಂಬಳಲು ಗ್ರಾಮದ ಶ್ರೀ ವಿಶ್ವನಾಥ್ ಮತ್ತು ಶ್ರೀಮತಿ ರೇಣುಕಮ್ಮನವರ ಪುಣ್ಯಗರ್ಭದಲ್ಲಿ ಜನಿಸಿದ ಶ್ರೀ ರೇಣುಕೇಶ್‌ರವರು ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಆಶೀರ್ವಾದ ಮತ್ತು ಮಾರ್ಗದರ್ಶನ, ಮುಮ್ಮಡಿ ಶ್ರೀ ನಿರ್ವಾಣಸ್ವಾಮಿಗಳವರ ಕೃಪಾದೃಷ್ಟಿಯಿಂದ ೨೩-೩-೧೯೮೮ ರಂದು ಮುಮ್ಮಡಿ ಶ್ರೀ ಮಹಾಲಿಂಗ ಸ್ವಾಮಿಗಳು ಎಂಬ ನಾಮಾಂಕಿತದಿಂದ ಉತ್ತರಾಧಿಕಾರಿಯಾಗಿ ನೇಮಕವಾದರು. ಗುರುವಿಗೆ ತಕ್ಕ ಶಿಷ್ಯರಾಗಿರುವ ಶ್ರೀಗಳು ಕ್ರಿಯಾಶೀಲ ಮನೋಭಾವವುಳ್ಳ ಚಿಂತಕರು ಹಾಗೂ ಶಿಕ್ಷಣದ ಬಗ್ಗೆ ಅತ್ಯಂತ ಕಳಕಳಿಯುಳ್ಳವರಾಗಿದ್ದಾರೆ. ಕಾಕತಾಳೀಯ ವೆಂಬಂತೆ ಇಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳು ಮುಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳ ಚಿಂತನೆಗಳು ಒಂದೇ ಆಗಿದ್ದು, ಸ್ವಾಮೀಜಿಯವರ ಹೆಸರಿಗೆ ತಕ್ಕಂತೆಯಲ್ಲದೇ, ವ್ಯಕ್ತಿತ್ವದಂತೆಯೇ ಇರುವುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಗುರುಗಳಾದ ಮುಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳ ಸಲಹೆ, ಸೂಚನೆಗಳೊಂದಿಗೆ ಶ್ರೀಮಠದ ಅಭಿವೃದ್ಧಿಗಾಗಿ ದುಡಿಯುತ್ತಿದ್ದಾರೆ. ಇತ್ತೀಚೆಗೆ ಶ್ರೀಮಠದಲ್ಲಿ ಹೊಸ ಹೊಸ ಬದಲಾವಣೆಗಳು ಸಾಕ್ಷೀಭೂತ ವಾಗಿವೆ. ಶ್ರೀ ದೇಗುಲಮಠವನ್ನು ದೇಶ ವಿದೇಶಗಳ ಮಟ್ಟಕ್ಕೆ ಬೆಳೆಸಬೇಕೆಂಬ ಅವರ ಆಲೋಚನೆಗಳು ಫಲಪ್ರದವಾಗಬೇಕಿದೆ. ಗುರುಗಳೆಲ್ಲರ ಕಾರುಣ್ಯದಿಂದ ಸ್ವಾಮೀಜಿಯವರ ತ್ವರಿತವಾದ ಆಲೋಚನೆಗಳು ಸಮಾಜದ ಎಲ್ಲರ ಬಗೆಗೆ ಇರುವ ಕಳಕಳಿಗಳು ಯಶಸ್ವಿಯಾಗುವುದರಲ್ಲಿ ಯಾವುದೇ ಅನುಮಾನಗಳಿಲ್ಲ. ಏಳು ಶತಮಾನಗಳಿಂದಲೂ ಗುರು ಪರಂಪರೆಯವರ ಧ್ಯಾನ, ಸಾಧನೆ ಸ್ವಾಮೀಜಿಯವರ ಮೇಲಿದೆ. ಹಾಗೆಯೇ ಶ್ರೀ ದೇಗುಲಮಠದ ಮೇಲಿದೆ.



# ಶ್ರೀ ದೇಗುಲ ಮಠದ ಆಸರೆ-ಪ್ರಸಾದ-ಪ್ರಣವದಲ್ಲಿ ಅರಳಿದವರು

– ಎಂ.ಜಿ. ನಾಗರಾಜ್ *



ಕನಕಪುರ ದೇಗುಲ ಮಠದ ಗುರು ಶಿಷ್ಯ ಸಂಬಂಧ

ಶತ ಶತಮಾನದ ಹಿಂದೆ ಕಾಣಿಕಾರನಹಳ್ಳಿ ಎನಿಸಿದ್ದ ಕನಕಪುರದ ಪರಿಸರ ಕುಗ್ರಾಮಗಳ ಸುತ್ತುವರಿ. ಈ ಪರಿಸರದ ಜನತೆಯ ಸಿರಿಭಕ್ತಿಯನ್ನು ಕಂಡವರು ಪರಮ ಪೂಜ್ಯರಾದ ಶ್ರೀ ಶ್ರೀ ಆದಿ ನಿರ್ವಾಣ ಶಿವಯೋಗಿ ಮಹಾಸ್ವಾಮಿಗಳು: ವಿಶೇಷತಃ ವಿರುಪಸಂದ್ರ ಕುರುಪೇಟೆ, ಮಳುಗಾಳು ಕಾನಕಾನಹಳ್ಳಿಯ ಜನತೆಯದು ಈ ಮಠಕ್ಕೆ ಮಿಸಲು ಭಕ್ತಿ . ಬಹುಶಃ ಈ ಗ್ರಾಮಗಳ ದೇಗುಲ ದೇವಿಯರಿಗೆ ಸೋಗಲು ತುಂಬಿ ತೀರ್ಥಕೊಡುವ ಸಂಪ್ರದಾಯ ಹಾಗೂ ಅಸ್ತುಲದೇವ ಪ್ರತಿಷ್ಠ ಮಠದ ಸ್ವಾಮಿಗಳ ಆಶೀರ್ವಾದ ಕಾರಣ ಹೆಸರುಗೊಂಡಿರುವ ಬಹುಶಃ ಸಂಗಮೇಶ್ವರ ದೇಗುಲವಿದ್ದ ಕಾರಣ ಬಂದ ಹೆಸರಾದ ಶ್ರೀ ದೇಗುಲ ಮಠದ ಸ್ಥಾಪಕರು ಅಲ್ಲಮಪ್ರಭು ಸಂಪ್ರದಾಯವನ್ನು ಪ್ರಸರಿಸಿದವರು. ಕಾಣಿಕಾರನಹಳ್ಳಿಯ ಸುತ್ತಲ ಹಳ್ಳಿಗಳ ಜನರನ್ನು ಮೈದಡವಿ ಮಠದ ಜನಹಿತ ಮಣಿಹವಿಟ್ಟವರು. ಆ ಪರಂಪರೆಯಲ್ಲಿ ವಿಕಸಿಸಿರುವ ಸದ್ಯದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾ ಸ್ವಾಮಿಗಳವರು ಹಾಗು ಶ್ರೀ ಶ್ರಿ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರೆಗೆ ೧೪ ಶ್ರೀ ಗುರುಗಳ ಕೃಪಾಶೀರ್ವಾದಗಳು ಆಸರೆ ಪ್ರಸಾದ ಪ್ರಣವ ರೂಪದಲ್ಲಿ ಜಾತ್ಯಾತೀತವಾಗಿ ಒದಗಿಬಂದಿರುವುದು ವರ್ತಮಾನದಲ್ಲಿಯೂ ಸಾಕ್ಷಿಯಾಗಿದೆ. ಇದಕ್ಕಾಗಿ ಶ್ರೀದೇಗುಲಮಠದ ಕೃಪೆಯಲ್ಲಿ ಬದುಕನ್ನು ಅರಳಿಸಿಕೊಂಡವರಲ್ಲಿ ಕೆಲವರನ್ನು ಕಂಡು ಕೇಳಿದಾಗ ಕೆಲವರು ಸಭೆಯಲ್ಲಿ ಮಾತಾನಾಡಿದಾಗ ಅವರ ಸಂವೇದನೆಗಳು ಒಳಗಿನಿಂದ ಉಕ್ಕಿ ಬಂದವು. ಭಕ್ತಿಯಿಂದ, ಅಂತರಾಳದಿಂದ ವಾಸ್ತವ ನೆಲಗಟ್ಟಿನಿಂದ ಬಂದ ಅವರ ಭಾವನೆಗಳನ್ನು ಈ ಮುಂದಿನಂತೆ ನಿರೂಪಿಸಲಾಗಿದೆ.

ಬೇರೆ ಗ್ರಾಮಗಳಿಂದ, ದೂರದ ಊರುಗಳಿಂದ ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಪ್ರಸಾದಕ್ಕಾಗಿ, ವಸತಿಗಾಗಿ, ವಿದ್ಯೆಗಾಗಿ ಗುರುಗಳಲ್ಲಿ ಬಿನ್ನಹವಿಟ್ಟು ಶ್ರೀ ದೇಗುಲ ಮಠಕ್ಕೆ ಸೇರಿಸಿದ್ದುಂಟು. ಇದಕ್ಕಿಂತ ಮಿಗಿಲಾಗಿ ಗುರುಗಳೇ ಕುಗ್ರಾಮಗಳಿಗೆ ಹೋಗಿ ಮಕ್ಕಳನ್ನು ಕರೆತಂದು ಅನ್ನವಿಟ್ಟು, ಅರಿವು ಕೊಟ್ಟು, ಬೆಳೆಸಿದ್ದೇ ಹೆಚ್ಚು. ಅವರಲ್ಲಿ ಅನೇಕರು ದೇಶವಿದೇಶಗಳಲ್ಲಿ ಹೋಗಿ ಉನ್ನತಾಧಿಕಾರಿಗಳಾಗಿ ಇಂದಿಗೂ ಮಠವನ್ನು ಸ್ಮರಿಸುವುದುಂಟು. ಇನ್ನು ಕೆಲವರು ಮಠದ ನೆರೆಗ್ರಾಮಗಳಲ್ಲಿ, ಮಠದ ಬಳಿಯಲ್ಲಿ ಇದ್ದು ಇಂದು ಸೇವೆ ಸಲ್ಲಿಸುತ್ತಿರುವುದುಂಟು. ಕಾರಣ ಅವರ ಬದುಕಿನ ನೆಳಲನ್ನು ಶ್ರೀ ದೇಗುಲಮಠ ಕೊಟ್ಟದ್ದೆ ಆಗಿದೆ. ಶ್ರಿಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘವು ಇಂದಿಗೂ ಕ್ರಿಯಾಶೀಲವಾಗಿದೆ. ೧೨-೧-೨೦೦೩ ರ ಸಭೆಯಲ್ಲಿ ನಾನು ಭೇಟಿ ಮಾಡಿದ ಹಳೆಯ ವಿದ್ಯಾರ್ಥಿಗಳು ಅನುಭವಗಳನ್ನು ಮುಂದಿಟ್ಟರು.

ಶ್ರೀ ಅತ್ತಿಹಳ್ಳಿ ಟಿ. ದಾಸೇಗೌಡರ, ಕಮರ್ಷಿಯಲ್ ಟ್ಯಾಕ್ಸ್ ಇಲಾಖೆಯ ಡೆಪ್ಯೂಟಿ ಕಮೀಷನರ್, ಶ್ರೀ ದೇಗುಲಮಠದಲ್ಲಿ ಓದಿದವರು. ಮೊದಲ ಬೆಂಚಿನ ವಿದ್ಯಾರ್ಥಿಯಾಗಿದ್ದವರು. ತಮ್ಮ ವಿದ್ಯಾರ್ಥಿ ಜೀವನವನ್ನು ಸ್ಮರಿಸುತ್ತ, ಮಠದ ಜಮೀನಿನಲ್ಲಿ ಸ್ವಂತ ಬೇಸಾಯ ಮಾಡಿ ಗುರುಗಳು ಅದರ ಉತ್ಪನ್ನದಿಂದ ವಿದ್ಯಾರ್ಥಿಗಳಿಗೆ ಅನ್ನ ದಾಸೋಹ ನಡೆಸುತ್ತಾ ನಮ್ಮ ಓದಿಗೆ ಕ್ರಿಯಾತ್ಮಕ ನೆಲೆಯಲ್ಲಿ ಅನುಕೂಲ ಮಾಡಿದರು. ಸ್ಥಳೀಯ ಸಂಪನ್ಮೂಲದ ಕೊರತೆಯ ನಡುವೆಯೂ ವಿಶ್ವಾಸದ ಸೊಡರಿನ

* ಅನರ್ಘ್ಯ ಶ್ರೀ ಜ.ಚ.ನಿ. ಕೃಪ, ೨೨೧, ೬೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦ ೦೧೦

ಬೆಳಕನ್ನು ನಮಗೆ ತೋರಿ ಬೆಳೆಸಿದರು. ಹಿಂದೆ ನಮ್ಮ ಹಳ್ಳಿಯಿಂದ ಕನಕಪುರಕ್ಕೆ ಬರಲು ಬಸ್ ಸೌಕರ್ಯವಿರಲಿಲ್ಲ, ಇಂದಿನ ಸೌಲಭ್ಯಗಳು ನಾವು ಓದುವಾಗ ಶ್ರೀಮಠಕ್ಕೆ ಇರಲಿಲ್ಲ. ಅಂಥ ಸನ್ನಿವೇಶದಲ್ಲಿ ಶ್ರೀಮಠವು ಪರಿಶ್ರಮ ವಹಿಸಿ ನಮ್ಮ ಓದಿಗೆ ಅನುಕೂಲ ಕಲ್ಪಿಸಿದ ಕಾರಣ **'ದೇಹದಂಡಿಸಿ, ಮನ ಬಳಸಿ ಸಮಾಜಕ್ಕೆ ಸೇವೆ ಸಲ್ಲಿಸಿ'** ಎಂಬ ಈ ಮಠದ ಗುರುವಾಕ್ಯ ಆಚರಣೆಯಲ್ಲಿದ್ದ ಕಾರಣ ಇಂದು ನಾನು ಗಳಿಸಿರುವ ಗೌರವ, ಪದವಿ ಒದಗಿದೆ. ಈ ಮಠವು ಮುನೀರ್ ಎಂಬ ಮುಸ್ಲಿಂ ವಿದ್ಯಾರ್ಥಿಗೂ ಆಸರೆ ನೀಡಿತ್ತು. ಆತನೂ ಈಗ ಅಧಿಕಾರಿ. ಯಾರೂ ನನ್ನನ್ನೂ ಕೇಳದಿದ್ದಾಗ ಈ ಮಠ ನನ್ನನ್ನು ಕೈ ಹಿಡಿದೆತ್ತಿತ್ತು. ಮುಂದೆ ಓದಲು ಮೈಸೂರು ಜೆ.ಎಸ್.ಎಸ್. ಕಾಲೇಜಿಗೆ ಕಳುಹಿಸಿ ನೆರವಾಯಿತು. ೧೯೭೭ ರಲ್ಲಿ ಎಂ.ಎಸ್ಸಿ., ೧೯೮೫ ರಲ್ಲಿ ಕೆ.ಎ.ಎಸ್ ಮಾಡಲು ಮಠದ ಆಶೀರ್ವಾದ ನನ್ನ ಮೇಲಿತ್ತು. ಓದು ಹಾಗು ಯಾವುದೇ ಸಾಂಸ್ಕೃತಿಕ ಕಾರ್ಯಕ್ರಮ ಚರ್ಚಾಸ್ಪರ್ಧೆಯಲ್ಲಿ ನಾನು ಮುಂದಿರಲು ಮಠದ ಶಿಸ್ತೇ ಕಾರಣ. ಈಗ ೧೭೦೦ಕ್ಕೂ ಮೀರಿ ವಿಧ್ಯಾರ್ಥಿಗಳಿಗೆ ವಸತಿ ಸೌಲಭ್ಯ ಒದಗಿಸಲಾಗಿದೆ. ಅನಾಥ ಮಕ್ಕಳನ್ನು ದತ್ತು ತೆಗೆದುಕೊಂಡು ಸಲುಹಲಾಗುತ್ತಿದೆ. ಇದರಿಂದ ಶ್ರಿಮಠದ ಭಕ್ತರಲ್ಲಿ ಸಲಹುವ ಶಕ್ತಿ ಇದ್ದವರು ಹಾಗೆ ದತ್ತು ತೆಗೆದುಕೊಳ್ಳಲು ಪ್ರೇರಣೆ ನೀಡಿದಂತಾಗಿದೆ. ಮತ್ತಷ್ಟು ಅಂದರೆ ಸುಮಾರು ೮೦ ಕೊಠಡಿಗಳನ್ನು ಭಕ್ತರು ಕಟ್ಟಿಸಲು ವಾಗ್ದಾನವೂ ಆಗಿದೆ. ಅದು ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು ಪಟ್ಟಾಧಿಕಾರದ ರಜತೋತ್ಸವದ ಹೊತ್ತಿಗೆ ಇದು ಸಾಧಿತವಾದೀತು ಎಂಬ ಅಭಿಪ್ರಾಯ ಶ್ರೀ ದಾಸೇಗೌಡದಾಗಿತ್ತು.

ಇದೇ ರೀತಿ ತಮ್ಮ ಬದುಕನ್ನು ಹಸನುಗೊಳಿಸಿದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ಪಟ್ಟಾಧಿಕಾರ ರಜತೋತ್ಸವವನ್ನು ಭಕ್ತಿ ಪೂರ್ವಕವಾಗಿ ಆಚರಿಸಬೇಕೆಂದು ಶ್ರೀ ಹಿರೇಮಠ, ವಿಜ್ಞಾನಿ ಶ್ರೀ ಬಸವರಾಜು ಹಾಗು ಮಾನ್ಯ ಮಾಜಿ ಸಚಿವರೂ, ಶಾಸಕರೂ ಆದ ಶ್ರೀ ವಿ. ಸೋಮಣ್ಣನವರು ತಮ್ಮ ಭಾವನೆಗಳನ್ನು ವ್ಯಕ್ತ ಮಾಡಿದರು.

ಶ್ರೀ ವಿ. ಸೋಮಣ್ಣನವರು ಮುಂದುವರಿದು, ಈಗ ೪೦ ವರ್ಷಗಳ ಹಿಂದೆ ಮಠದ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಶ್ರೀಗಳವರು ಅಂತೇ ಶಿಷ್ಯರಲ್ಲಿ, ವಿದ್ಯಾರ್ಥಿಗಳಲ್ಲಿ ಸ್ಫೂರ್ತಿ ತುಂಬಿದರು. ಹಳೆ ವಿದ್ಯಾರ್ಥಿಗಳು, ಹಾಗು ಶಿಷ್ಯರು ಮಠಕ್ಕೆ ಆಸ್ತಿ ಅಲ್ಲವೆ! ನಮ್ಮೆಲ್ಲರ ಋಣ ಶ್ರೀ ಮಠಕ್ಕೆ ಸಂದಾಯ ವಾಗಬೇಕು ಎಂದರು.

ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳವರು ಸಮಾಜದಲ್ಲಿ ಗಳಿಸಿರುವ ಭಕ್ತಿ ಗೌರವಗಳಿಗೆ ಕಾರಣ ಅವರು ಮಾಡಿರುವ ಮಣಿಹವೇ ಕಾರಣ; ಸೇವೆಯೇ ಕಾರಣ. ಅವರ ನುಡಿಯೆಲ್ಲ ಅನುಭಾವದ ನುಡಿ. ಹಳೆಯ ವಿದ್ಯಾರ್ಥಿಗಳು ಮಠದ ಯಾವುದೇ ಕಾರ್ಯಗಳಿಗೆ ಮೂಲಾಧಾರವಾಗುವಂತೆ ಮಾಡಿರುವ ವರ್ಚಸ್ವಿ ಶ್ರೀ ಗುರು ವ್ಯಕ್ತಿತ್ವ ಅವರದು. ಅವರ ಜೊತೆಗೆ ಹೆಜ್ಜೆ ಇಡುತ್ತಿರುವವರು ಕಿರಿಯಸ್ವಾಮಿಗಳಾದ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು, ಮಠದ ಪ್ರಗತಿಗಾಗಿ ಶ್ರಮಿಸುತ್ತಿದ್ದಾರೆ ಎಂಬ ಅಭಿಪ್ರಾಯಗಳನ್ನಿಟ್ಟವರು ಶ್ರೀ ಮಲ್ಲವೀರಯ್ಯ ಅವರು.

ಶ್ರೀ ರೇವಣ್ಣನವರು ಮಾತನಾಡುತ್ತ, ಸೇವೆಯ ಸರ್ವಜನಹಿತಕಾರಿಯಾಗಿ ಸಲ್ಲಬೇಕು. ಯಾರೇ ಪುಣ್ಯ ಪುರುಷರು ಮಾಡಿದ ಸೇವೆ ನಮಗೆ ಪವಿತ್ರವೆ. ಹೀಗಾಗಿ ಶ್ರೀ ದೇಗುಲ ಮಠದ ಪೂಜ್ಯ ಶ್ರೀಗಳವರು ಸರ್ವಜನಹಿತ ಚಿಂತಕರಾಗಿ ನಡೆಸಿರುವ ಸಾಮಾಜಿಕ ಸೇವೆ, ವಿದ್ಯಾ ದಾನ, ಕಾಯಕ-ದಾಸೋಹದ ಕಾರಣವೆ ಮಠವು ಈ ಮಟ್ಟಕ್ಕೆ ಏರಲು ಕಾರಣವಾಗಿದೆ. ಬೆಂಗಳೂರಿನಲ್ಲಿ ಶ್ರೀಮಠದ ಒಂದು ಸಮುದಾಯ ಭವನ ನಿರ್ಮಾಣವಾಗಲು ನಮ್ಮೆಲ್ಲರ ತನುಮನಧನ ಸೇವೆ ಸಂದಾಯವಾಗಬೇಕು ಎಂಬ ಸಲಹೆಯೊಡನೆ ನುಡಿ ಇಟ್ಟರು.

ಇಂಡಿಯನ್ ಟೆಲಿಫೋನ್ಸ್‌ನ ನಿವೃತ್ತ ಉದ್ಯೋಗಿ ಶ್ರೀ ಟಿ.ಕೆ. ಹೊನ್ನಪ್ಪ (೭೧) ಅವರು: ಕನಕಪುರದಲ್ಲಿ ೧೯೪೫ ರಲ್ಲಿ ಮಾಧ್ಯಮಿಕ ಶಾಲೆಯಲ್ಲಿ ೩೫ ಜನ ಹುಡುಗರು ಸುತ್ತಮುತ್ತಲ ಗ್ರಾಮಗಳಿಂದ ಬಂದು ಓದುತ್ತಿದ್ದರು. ಅದು ಸರ್ಕಾರಿ ಶಾಲೆ ಹಾಗಾಗಿ ಆ ಮಕ್ಕಳಿಗೆ ಮಠದಲ್ಲಿ ವಸತಿ ಕಲ್ಪಿಸಲಾಯಿತು. ನಂತರ ಮಠದ ವಸತಿ ಶಾಲೆಯು ಆರಂಭವಾಯಿತು. ಇಮ್ಮಡಿ ನಿರ್ವಾಣ ಸ್ವಾಮಿಗಳ ಕಾಲಕ್ಕೆ ನೀರಾವರಿ ೧೮ ಎಕರೆ ಮಠಕ್ಕೆ ಇತ್ತು. ರಾಗಿ, ಭತ್ತ ಬೆಳೆಯುತ್ತಿದ್ದರು. ಊಟಕ್ಕೆ ಮುದ್ದೆ, ಅನ್ನ ಮಜ್ಜಿಗೆ ನೀಡಲಾಗುತ್ತಿತ್ತು. ಕೃಷಿ ಕೆಲಸ ಕಾರ್ಯಗಳಲ್ಲಿ ವಿದ್ಯಾರ್ಥಿಗಳು ಹಾಗು ಗುರುಗಳು ಪಾಲ್ಗೊಂಡು ಕಾಯಕದ ಮಹತ್ವವು ಅಂತರ್ಗತವಾಗುವ ಸನ್ನಿವೇಶ ನಿರ್ಮಾಣವಾಗಿತ್ತು. ಸ್ವಾಮಿಗಳು ಹಳ್ಳಿಗಳಲ್ಲಿ ಭಕ್ತರ ಮನೆಗೆ ಪೂಜೆಗೆ ಹೋದಾಗ ಅಲ್ಲಿಂದ ಬಡಮಕ್ಕಳನ್ನು ಮಠಕ್ಕೆ ಕರೆತಂದು ವಿದ್ಯೆಯ ಕಲಿಕೆಗೆ ವ್ಯವಸ್ಥೆ ಮಾಡುತ್ತಿದ್ದರು.

ಕನಕಪುರದಲ್ಲಿ ೧೯೩೭ರಲ್ಲಿ ದಯಾನಂದ ವಿದ್ಯಾರ್ಥಿ ನಿಲಯವೂ ಆರಂಭವಾಗಿತ್ತು. ಅಲ್ಲಿಯೂ ಹಾಸ್ಟೆಲ್ ವ್ಯವಸ್ಥೆ

ಇದ್ದರೂ ಅದು ಶುಲ್ಕಾಧಾರಿತವಾಗಿತ್ತು. ಅದೇ ಮಠದ ವಸತಿ ನಿಲಯದಲ್ಲಿ ಉಚಿತ ಪ್ರವೇಶವಿತ್ತು. ೧೯೪೦ ರಲ್ಲಿ ಮುಂಚೆ ವೀರಶೈವ ವಿದ್ಯಾರ್ಥಿಗಳು ಮಾತ್ರ ಈ ವಸತಿ ನಿಲಯದಲ್ಲಿದ್ದರು. ೧೯೪೦ ರಿಂದ ಎಲ್ಲ ಜನಾಂಗದ ವಿದ್ಯಾರ್ಥಿಗಳಿಗೆ (ಗೌಡ, ಮರಾಠಿ, ಕುಂಬಾರ, ಅಕ್ಕಸಾಲಿಗ, ಬೋವಿ, ನಾಯಿಂದ, ಮುಸ್ಲಿಂ ಇತ್ಯಾದಿ ಜನಾಂಗದವರೂ ಸೇರಿ) ಉಚಿತ ವಸತಿ ಶಾಲೆಯಲ್ಲಿ ಅವಕಾಶವನ್ನು ಕಲ್ಪಿಸಲಾಯಿತು. ಪಂಕ್ತಿ ಭೇದವಿಲ್ಲದೆ ಈ ಎಲ್ಲರಿಗೂ ದಾಸೋಹ ನಡೆಯುತ್ತಿತ್ತು. ಹೀಗೆ ತಯಾರಾದ ವಿದ್ಯಾರ್ಥಿಗಳಲ್ಲಿ, ಅನೇಕರಿಗೆ ಕಾಲೇಜಿನಲ್ಲಿ ಫೀಸು ಕಟ್ಟಲು ಮಠವು ನೆರವಾಗಿತ್ತು. ಹೀಗಾಗಿ ಹೆಚ್ಚಿಗೆ ಓದಲು ಸಾಧ್ಯವಾಗಿ, ಅವರಲ್ಲಿ ಅನೇಕರು, ಆರ್.ಎಂ.ಎಸ್. ನಲ್ಲಿ ಅಧಿಕಾರಿಗಳಾಗಿ (ಶ್ರೀಮುನಿಸ್ವಾಮಿ); ಮೈಕೋ ಕಂಪನಿಯಲ್ಲಿ ಅಧಿಕಾರಿಗಳಾಗಿ, ಪೋಲೀಸ್ ಸಬ್ ಇನ್ಸ್‌ಪೆಕ್ಟರ್‌ಗಳಾಗಿ (ಶ್ರೀವೆಂಕಟಾಚಲಯ್ಯ, ಶ್ರೀ ತಿಮ್ಮಾಚಾರ್) ತಮ್ಮ ವೃತ್ತಿ ಜೀವನದಲ್ಲಿ ಯಶಸ್ಸು ಕಂಡವರಾಗಿದ್ದಾರೆ.

ಮಾನ್ಯ ಕೇಂದ್ರ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರೂ ಕೂಡ ೧೯೪೩ ರಲ್ಲಿ ಹೈಸ್ಕೂಲ್ ವಿದ್ಯಾರ್ಥಿಯಾಗಿ ಶ್ರೀ ಮಠದ ಕೃಪೆಗೆ ಪಾತ್ರರಾದವರೆ. ಅವರ ಮನೆಯಲ್ಲಿ ನಿರ್ವಾಣ ಸ್ವಾಮಿಗಳ ಛಾಯಾ ಚಿತ್ರವಿದ್ದು ವರ್ಷಕ್ಕೊಮ್ಮೆ ಬಂದು ಮಠದಲ್ಲಿ ಪೂಜೆ ನಡೆಸುತ್ತಾರೆ.

**ಸಂಸ್ಕೃತ** – ವೇದ ಪಾಠಶಾಲೆ, ಪದವಿಪೂರ್ವಕಾಲೇಜು ಕೈಗಾರಿಕಾ ತರಬೇತಿ ಶಾಲೆ, ಅನಾಥಾಲಯ ಹಾಗು ವಿವಿಧ ಶಿಕ್ಷಣ ಸಂಸ್ಥೆಗಳನ್ನು ಶ್ರೀದೇಗುಲ ಮಠವು ನಡೆಸಿಕೊಂಡು ಬಂದಿರುವಲ್ಲಿ, ಪರಂಪರೆ ಹಾಗು ಪ್ರಗತಿಯನ್ನು ಸಮನ್ವಯವಾಗಿ ರೂಪಿಸಿಕೊಂಡಿರುವುದು ವರ್ತಮಾನದ ವಿಶಿಷ್ಟ ಮಾದರಿಯಾಗಿದೆ. ೪೦ ವರ್ಷಗಳ ಹಿಂದಿನ ಸ್ಥಿತಿಗೂ, ಇಂದಿಗೂ ಆಗಿರುವ ಪ್ರಗತಿಯನ್ನು ಹೋಲಿಸಿದರೆ ನಾಲ್ಕುಪಟ್ಟು ಹಿಗ್ಗಿರುವುದು ಕಾಣುತ್ತದೆ. ೧೯೭೭ ರಲ್ಲಿ ಮಠಾಧಿಕಾರವನ್ನು ಪಡೆದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರು ಹೆಣ್ಣು ಮಕ್ಕಳಿಗೆ ಹೊಲಿಗೆ ತರಬೇತಿ ಸಂಸ್ಥೆಯನ್ನು ಸ್ಥಾಪಿಸುದುದಲ್ಲದೆ. ಅನಾಥಾಲಯದಲ್ಲಿ ದಲಿತ ಮಕ್ಕಳನ್ನು ಪೋಷಿಸಿದರು. ಬೇರೆ ಬೇರೆ ಗ್ರಾಮೀಣ ಪ್ರದೇಶಗಳಲ್ಲಿ ಹೈಸ್ಕೂಲ್ ಕಾಲೇಜುಗಳನ್ನು ಸ್ಥಾಪಿಸಿದಾಗ ಅಲ್ಲಲ್ಲಿ ವಿದ್ಯಾರ್ಥಿಗಳಿಗೆ ಪೋಷಕರನ್ನೂ ಒದಗಿಸಿಕೊಟ್ಟರು. ಬಾಲಕಾರ್ಮಿಕರನ್ನು ಮಠದಲ್ಲಿಟ್ಟುಕೊಂಡು ಪೋಷಿಸಿ ವಿದ್ಯಾವಂತರನ್ನಾಗಿ ಮಾಡಿದರು – ಹಿಂದಿನ ಹಿರಿಯ ಸ್ವಾಮಿಗಳ ಪೂರ್ಣ ಬೆಂಬಲ ಆಶೀರ್ವಾದಗಳ ಕಾರಣ ಇವರ ಹೊಸ ಯೋಜನೆಗಳಿಗೆ ಅನುಕೂಲವಾಯಿತು. ಇಡೀ ಕರ್ನಾಟಕದಲ್ಲಿ ಶ್ರೀ ದೇಗುಲ ಮಠವು ಪ್ರಸಿದ್ಧಿಗೊಂಡಿತು. ಭಕ್ತರು ಹಾಗು ಸ್ವಾಮಿಗಳ ನಡುವೆ ಸಂಪರ್ಕ ಸುಮಧುರವಾಗಿ ದ್ವಿಗುಣಗೊಂಡಿತು. ಇಂಥ ಸಂಪರ್ಕ, ಸಹಕಾರಗಳಿಂದ ಮಠ ಬೆಳೆಯ ಅನುಕೂಲವಾಗುತ್ತದೆ. ಇಲ್ಲವಾದರೆ ಅವರ ಪಾಡಿಗೆ ಅವರು ನಮ್ಮ ಪಾಡಿಗೆ ನಾವು ಆಗಿ ಬಿಡುತ್ತೇವೆ. ನಮ್ಮ ಈ ಮಠದ ಗುರುಗಳು ಎಂದೂ ಭಕ್ತರನ್ನು ಬಾವಣಿಸಿದವರಾಗಿ ಸದ್ಗುರು ಕೃಪೆಯನ್ನು ತೋರಿದ್ದಾರೆ, ಎಂದೆಲ್ಲ ತಮ್ಮ ಅಭಿಪ್ರಾಯವನ್ನು ಮುಂದಿಟ್ಟರು.

ಕೃಷಿ ಇಲಾಖೆಯ ನಿವೃತ್ತ ಅಧಿಕಾರಿಗಳಾದ ಶ್ರೀ ಬಿ. ಸೋಮಶೇಖರಯ್ಯ (೬೧) ಅವರ ಸ್ವಂತ ಸ್ಥಳ ಇಗ್ಗಲೂರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಮಳವಳ್ಳಿ ತಾ॥ ಕೊತ್ತನ ಹಳ್ಳಿಯಲ್ಲಿ ಮುಗಿಸಿ ಬೇವೂರು ಕೊಳಗೆರೆಯಲ್ಲಿ ಮಾಧ್ಯಮಿಕ ಹಂತ ದಾಟಿ ೧೯೫೩ರಲ್ಲಿ ಕನಕಪುರ ದೇಗುಲ ಮಠದಲ್ಲಿ ಓದಿದ ವಿದ್ಯಾರ್ಥಿ ಎಂದು ಮುಂದಿನ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಸಿದ್ಧಗಂಗಾ ಮಠದಲ್ಲಿ ಅವಕಾಶ ದೊರಕಿತು. ಮನೆಯಲ್ಲಿ ಸುಖವಾಗಿ ಬೆಳೆದು ಬಂದಿದ್ದ ಅವರಿಗೆ ಮಠದಲ್ಲಿಯ ಓದು ಶಿಸ್ತನ್ನು ಕಲಿಸಿಕೊಟ್ಟಿತ್ತು. ಕನಕಪುರ ದೇಗುಲ ಮಠದಲ್ಲಿ ವರ್ಷಾಕಾಲ ಗದ್ದುಗೆ ಪೂಜೆಯಲ್ಲಿ ನಿರತನಾಗಿದ್ದೆ. ಓದುವ ಸಮಯದಲ್ಲಿ ಓದಿ ಪೂಜೆಗೆ ಹೆಚ್ಚು ವೇಳೆ ಮೀಸಲಾಗಿಟ್ಟಿದ್ದೆ. ಹೀಗಾಗಿ ಬೆಳಗ್ಗೆ ಬೇಗದ್ದು ಕೆಲಸ ಕಾರ್ಯಗಳನ್ನು ಮುಗಿಸಿ, ಪೂಜಾಕಾರ್ಯ, ಅಭ್ಯಾಸ, ಇತ್ಯಾದಿಗಳನ್ನು ಶಿಸ್ತು ಬದ್ಧವಾಗಿ ಕಲಿತದ್ದು ನನ್ನ ಜೀವನದಲ್ಲೂ ಆ ಶಿಸ್ತು ಬಂದಿದೆ. ಸುಗಮ ಬದುಕು ಸಾಗಿಸಿದ್ದೇನೆ ಎಂದೆಲ್ಲ ತಮ್ಮ ಅನುಭವಗಳನ್ನು ಹಂಚಿಕೊಂಡರು.

ಚಿಕ್ಕ ಮುದವಾಡಿಯ ಶ್ರೀ ಲಕ್ಷಣ್ ನಾಯಕ್ ಎಂ.ಎ. ಇತಿಹಾಸ ಮಾಡಿದರು ಕೆನರಾ ಬ್ಯಾಂಕನಲ್ಲಿ ಉದ್ಯೋಗದಲ್ಲಿದ್ದಾರೆ. ಪ್ರೌಢ ಶಾಲಾ ವಿದ್ಯಾಭ್ಯಾಸಕ್ಕೆ ಮನೆಯ ಪರಿಸ್ಥಿತಿ ಅನುಕೂಲವಾಗಿರಲಿಲ್ಲ. ಆಗ ಶ್ರೀ ದೇಗುಲ ಮಠವು ನನಗೆ ಆಸರೆ ಕೊಟ್ಟು ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿತು. ಎಲ್ಲರ ಜೊತೆ ನನಗೂ ಸಹ ಭೋಜನ ಕೊಟ್ಟು ಸಮುದಾಯ ಸೌಹಾರ್ದ ಭಾವ ಮೂಡಿಸಿತ್ತು. ಎಲ್ಲ ವಿದ್ಯಾರ್ಥಿಗಳ ಜೊತೆ ಕೃಷಿ ಕೆಲಸದಲ್ಲಿ ನಾನು ಪಾಲ್ಗೊಳ್ಳುತ್ತಿದ್ದೆ. ನನ್ನ ಬದುಕಿನಲ್ಲಿ ಇದರಿಂದ ಸಮಾಜಸೇವೆ ಮಾಡಲು ಪ್ರೇರಣೆ ಒದಗಿತು: ಅಂಥ ಭಾಗ್ಯವನ್ನು ಶ್ರೀಮಠವು ತಂದುಕೊಟ್ಟಿತು. ರಾಷ್ಟ್ರಮಟ್ಟದ ಪ್ರಶಸ್ತಿಯೂ ನನ್ನ ಬ್ಯಾಂಕಿನ ಸೇವೆಯಲ್ಲಿ ಒದಗಿತು, ಎಂದೆಲ್ಲ ತಮ್ಮ ಬದುಕು ನಡೆದು ಬಂದ ಹಾದಿಯನ್ನು ನೆನೆಸಿದ್ದಾರೆ.

ಕಬ್ಬಾಳು ಗ್ರಾಮದ ಶ್ರೀ ಬಿ. ಬಸವರಾಜು ಅವರು (೬೦) ವಿಶ್ರಾಂತ ಪೋಲೀಸ್ ಸಬ್‌ಇನ್ಸ್‌ಪೆಕ್ಟರ್, ೧೯೬೪ ರಲ್ಲಿ ದೇಗುಲ ಮಠದ ಪ್ರೌಢ ಶಾಲೆಗೆ ಸೇರಿ ಊಟ ವಸತಿ ಪಡೆದು ವಿದ್ಯೆಯನ್ನು ಗಳಿಸಿದರು. ಅವರ ಬದುಕಿನ ಶಿಸ್ತು ರೂಪುಗೊಂಡದ್ದು ಕನಕಪುರ ದೇಗುಲ ಮಠದಲ್ಲಿಯೇ. ಬೆಳ್ಳಗ್ಗೆ ೪–೫ ಗಂಟೆಗೆ ಎದ್ದು ಪ್ರಾತಃರ್ವಿಧಿ ಮುಗಿಸಿ ಸ್ನಾನ, ನಂತರ ಬಿಲ್ವಪತ್ರೆ ಹೂ ಸಂಗ್ರಹ. ಗಂಟೆ, ಪಾತ್ರೆ ಶುದ್ಧಮಾಡಿ ಶ್ರೀಗಂಧ, ದೀಪ ಇತ್ಯಾದಿಗಳನ್ನು ಗದ್ದುಗೆ ಪೂಜೆಗೆ ಸ್ವಾಮಿಗಳು ಬರುವ ಹೊತ್ತಿಗೆ ಅಣಿಮಾಡಬೇಕಿತ್ತು. ಬೆಳಗಿನ ಪೂಜೆಯ ನಂತರ ವೇದ ಕಲಿಕೆ ಇರುತ್ತಿತ್ತು. ಮಠಕ್ಕೆ ಭಕ್ತಾದಿಗಳು ಬರುತ್ತಿದ್ದಾಗ ಪರಿಚಯವಾಗಿ ಮಾನವ ಸಂಪರ್ಕದ ಬಗೆಯೂ ತಿಳಿಯುತ್ತಿತ್ತು. ಮಠದಲ್ಲಿ ಬಡಮಕ್ಕಳಿಗೆ ಬೋಧೆ ನಡೆಯುತ್ತಿತ್ತು. ಮನೆಗಳಿಂದಲೂ ಈ ಬೋಧೆಗೆ ಮಕ್ಕಳೂ ಬರುತ್ತಿದ್ದರು. ಇಲ್ಲಿ ಗದ್ದೆ ಕೆಲಸದಲ್ಲಿ ನಾವೆಲ್ಲ ಪಾಲ್ಗೊಳ್ಳುತ್ತಿದ್ದೆವು. ಅಡುಗೆ ಕೆಲಸದಲಿಯೂ ನೆರವಾಗುತ್ತಿದ್ದೆವು. ಇಂಥ ಹಿನ್ನಲೆಯಲ್ಲಿ ಬೆಳೆದ ನಾನು ಸೇರಿದ ಉದ್ಯೋಗದಲ್ಲಿ ನಿಷ್ಠೆಯಿಂದ ನೀತಿ ನಿಯಮಗಳನ್ನು ಪಾಲಿಸಿದೆ. ಅದರಿಂದ 'Best Property Recoverer' ಎಂಬ ಪ್ರಶಸ್ತಿಯು ಇಲಾಖೆಯಿಂದ ನನಗೆ ದೊರೆಯಿತು. ನನ್ನ ವಿಶ್ರಾಂತಿ ಜೀವನದಲ್ಲಿ ಮಠದ ಸೇವೆಯ ಸ್ಮರಣೆಗಳು ನನಗೆ ಬರುತ್ತಿರುವಲ್ಲಿ ಇಂದಿಗೂ ಅದರ ಸಂಪರ್ಕದಲ್ಲಿದ್ದೇನೆ ಎಂದು ತಮ್ಮ ಅನುಭವಗಳ ಮೆಲುಕನ್ನು ಶ್ರೀ ಬಸವರಾಜು ಅವರು ಮಂಡಿಸಿದರು.

ವೀರೇಗೌಡನ ದೊಡ್ಡಿಯ ಶ್ರೀ ವೈ. ಸೋಮಶೇಖರ್ ಅವರು ೧೯೬೦ರಲ್ಲಿ ದೇಗುಲ ಮಠದ ಸಂಪರ್ಕಕ್ಕೆ ಬಂದವರು. ಐ ಟಿ ಐ ತರಬೇತಿ ಸಂಸ್ಥೆಯಲ್ಲಿ ತಾಂತ್ರಿಕ ಸಹಾಯಕರಾಗಿ ಸೇವೆ ಸಲ್ಲಿಸಿದರು. ಹುಟ್ಟೂರು ವೀರೇಗೌಡನ ದೊಡ್ಡಿಯಲ್ಲಿ ಪ್ರಾಥಮಿಕ ಶಾಲೆ ಮಾತ್ರ. ಮುಂದಿನ ಓದಿಗೆ ಶಾಲೆ ಇರಲಿಲ್ಲ. ಮಾಗಡಿಯಲ್ಲಿ ಶಾಲೆಗಳಿದ್ದರೂ ಬಸ್ ಸೌಕರ್ಯ ಸಮಯಕ್ಕೆ ಇರಲಿಲ್ಲ. ಶಿವಗಂಗೆ, ಸಿದ್ದಗಂಗೆಗೂ ನಮ್ಮೂರಿನಿಂದ ದೂರವೆನಿಸಿ ಬಸ್ ಸೌಲಭ್ಯ ಸಾಲದಾಗಿತ್ತು. ಹೀಗಾಗಿ ದೇಗುಲ ಮಠದಲ್ಲಿ ಊಟ ವಸತಿಗೆ ಅನುಕೂಲವಾಗಿ ಇಲ್ಲಿಯೇ ಓದು ಸಾಗಿತು. ಜೊತೆಗೆ ಶ್ರೀ ಶ್ರೀ ಮಹಲಿಂಗ ಸ್ವಾಮಿಗಳು (ಇಮ್ಮಡಿ) ಪೂಜೆಗೆ, ದವಸ ಸಂಗ್ರಹಕ್ಕೆ ಯಾವುದೇ ಗ್ರಾಮಕ್ಕೆ ಕಲ್ನಡಿಗೆಯಲ್ಲಿ ಹೊರಟಾಗ ನಾವೆಲ್ಲ ಹೋಗುತ್ತಿದ್ದೆವು. ಊರಿನ ಯಾವುದೇ ಜನವಿರಲಿ, ಮುಖ್ಯಸ್ಥರೊಡನೆ ಬಂದು ರಾಗಿ ಭತ್ತವನ್ನು ದಾಸೋಹಕ್ಕೆಂದು ಕೊಡುತ್ತಿದ್ದರು. ಗುರು ಹಾಗು ಭಕ್ತರ ಸಂಬಂದ ಚೆನ್ನಾಗಿತ್ತು. ಮಠದ ಹೊಲ, ಗದ್ದೆಯ ಕೆಲಸಕ್ಕೆ ಭಕ್ತರೂ ಸೇವೆ ಎಂದು ಬರುತ್ತಿದ್ದರು. ಈಗ ನಾನು ನಿವೃತ್ತನಾಗಿದ್ದರೂ ಮಠದ ಸೇವೆ ಎಂದರೆ ಸಂತೋಷದಿಂದ ಬಂದು ಮಾಡುವ ಮನಸ್ಸಾಗುತ್ತದೆ ಎಂದು ಶ್ರೀ ಸೋಮಶೇಖರ್ ಅವರು ತಮ್ಮ ಸೇವಾಕಾಂಕ್ಷೆಯನ್ನು ವ್ಯಕ್ತಪಡಿಸಿದರು.

ಶ್ರೀ ಆರ್. ಮಹಾಲಿಂಗಪ್ಪ (೩೩) ಎಪಿಎಂಸಿ ಯಲ್ಲಿ ಅಕ್ಕಿ ವ್ಯವಹಾರದಾರರು. ಬನ್ನಿಮುಕೊಡ್ಲು ಗ್ರಾಮದವರು. ೧೯೭೮–೮೪ರ ಅವಧಿಯಲ್ಲಿ ದೇಗುಲ ಮಠದಲ್ಲಿ ಓದಿದ್ದರು. ಸಂಜೆಯ ವೇಳೆ ಬಂದು ಒಂದು ವರ್ಷ ಶಿವಾನುಭವ ತರಬೇತಿಯನ್ನು ಪಡೆದವರು. ಉಪಾಧ್ಯಾಯರಾಗಿದ್ದ ಪಿ.ವಿ. ಶಿವರುದ್ರಯ್ಯ, ವೀರಯ್ಯ ಅವರ ಪ್ರೀತಿ ವಾತ್ಸಲ್ಯಗಳನ್ನು ಸ್ಮರಿಸಿದರು. ಮನೆಮಕ್ಕಳಂತೆ ಗುರುಗಳು ನೋಡಿಕೊಂಡರು. ಹೀಗಾಗಿ ಮನೆ ಬೇರೆ, ಮಠ ಬೇರೆ ಅಂತ ಅನ್ನಿಸಲಿಲ್ಲ. ರಜೇಲಿ ಕೂಡ ಈ ಕಾರಣ ಮಠದಲ್ಲಿಯೇ ಜೊತೆಯವರೊಡನೆ ಇದ್ದು ಬಿಡುತ್ತಿದ್ದೆ.

ಸ್ವಾಮಿಗಳದು ಬರಿ ಪೂಜೆ ಎನಿಸದೆ, ಆತ್ಮೀಯ ಭಕ್ತಿ ಪ್ರಸಾರ ಎಂದು ನಮಗನ್ನಿಸುತ್ತಿತ್ತು. ಎಂಟು – ಹತ್ತು ಜನರನ್ನು ಆಯ್ದು ಆಸಕ್ತಿ ಇದ್ದವರಿಗೆ, ಪೂಜಾ ತರಬೇತಿಯನ್ನು ನೀಡುತ್ತಿದ್ದರು. ಇದರಿಂದ ಓದಿನ ಜೊತೆಗೆ ಸಂಸ್ಕಾರವೂ ಬೆಳೆಯಿತು. ಇಂದಿಗೂ ನಾವು ಬೆಳೆದು ಹೋದ ಮನೆ ಈ ದೇಗುಲ ಮಠ ಎಂದು ಅನಿಸುತ್ತದೆ. ಹಳ್ಳಿಗೆ ತಂದೆ ತಾಯಿಗಳನ್ನು ನೋಡಲು ಬಂದಾಗ ಮಠಕ್ಕೆ ಬಂದು ಗುರುದರ್ಶನ ಮಾಡಿ ಹೋದರೇನೆ ನನಗೆ ಸಮಾಧಾನ, ತೃಪ್ತಿ ಎಂದು ತಮ್ಮ ಅಂತರಂಗವನ್ನು ಮುಂದಿಟ್ಟರು.

ಮುಖ್ಯೋಪಾಧ್ಯಾರಾಗಿ ಸೇವೆ ಸಲ್ಲಿಸಿದ ಶ್ರೀ ಎನ್. ಮಹದೇವಪ್ಪನವರು: ದೇಗುಲ ಮಠದ ಶಾಲಾ ವಿದ್ಯಾರ್ಥಿಗಳು ಭಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಬೇಸಾಯದಲ್ಲಿ ಬೇಜಾರಿಲ್ಲದೆ ಪಾಲ್ಗೊಳ್ಳುತ್ತಿದ್ದರು. ಅಗತ್ಯ ಬಿದ್ದಾಗ ಸ್ವಾಮಿಗಳು ಕರೆಕಳುಹಿಸಿದಾಗ ಶಿವನಹಳ್ಳಿಯಿಂದಲೂ ಜನ ಬಂದು ಕೃಷಿ ಸೇವೆ ಸಲ್ಲಿಸಿ ಹೋಗುತ್ತಿದ್ದರು. ಮಠದ ಕಟ್ಟಡ ಕಟ್ಟುವಲ್ಲಿ ನೆರವಾದರು.

ಶ್ರೀ ಕರಿಯಪ್ಪನವರು ಸ್ಥಾಪಿಸಿದ ಮುನಿಸಿಪಲ್ ಹೈಸ್ಕೂಲ್ ಕನಕಪುರದಲ್ಲಿತ್ತು. ಆ ಶಾಲೆಯೊಡನೆಯೂ ಮಠದ ಶಾಲೆಗೆ ಸೌಹಾರ್ದ ಸಂಬಂಧ ಇತ್ತು. ಪರೀಕ್ಷಾ ಫಲಿತಾಂಶಗಲ್ಲಿ ಮಾತ್ರ ಆರೋಗ್ಯಕರ ಸ್ಪರ್ಧೆ ಇತ್ತು. ಮಠದ ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ಮುಸ್ಲಿಮ್ ವಿದ್ಯಾರ್ಥಿಗಳೂ ಓದಲು

ಬರುತ್ತಿದ್ದರು. ಸೇವಾ ಮನೋಭಾವನೆಯನ್ನು ಶಾಲೆಯು ಎಲ್ಲರಲ್ಲೂ ಬೆಳೆಸಿತ್ತು ಎಂಬ ಅಭಿಪ್ರಾಯ ಶ್ರೀ ಮಹದೇವಪ್ಪನವರದು.

ಮಳವಳ್ಳಿ ತಾ. ಚಂದಹಳ್ಳಿಯ ಶ್ರೀ ಹೆಚ್.ಪಿ. ಮಾದಪ್ಪ (೬೬) ಅವರ ಓದಿನ ಸಮಯದಲ್ಲಿ ಮನೆಯಲ್ಲಿ ಅನಾನುಕೂಲ ಪರಿಸ್ಥಿತಿ. ೧೯೫೨ ರಲ್ಲಿ ಕನಕಪುರಕ್ಕೆ ಬಂದು ಮುನಿಸಿಪಲ್ ಹೈಸ್ಕೂಲ್ ಸೇರಿದರಂತೆ ಊಟ ವಸತಿಗೆ ಶ್ರೀ ದೇಗುಲ ಮಠವೆ ಆಯಿತು. ಈ ಮಠವೆ ಮನೆಯಾಗಿ ಅವರಿಗೆ ಕಾಣುವಷ್ಟು ಆತ್ಮೀಯವಾಗಿತ್ತು. ರೈತರ ಮಕ್ಕಳಿಗಂತು ಮೂಲ ಶೈಕ್ಷಣಿಕ ವಸತಿ ಕೇಂದ್ರವಾಗಿ ಈ ಮಠವಿತ್ತು. ಮಠದ ವತಿಯಿಂದ ಶಿಕ್ಷಣ ಸಂಸ್ಥೆಗಳು ಆರಂಭಗೊಂಡಾಗ ಶಿಕ್ಷಕರು ಹಾಗು ವಿದ್ಯಾರ್ಥಿಗಳು ಮನವಿಟ್ಟು ಶ್ರಮದಾನ ಮಾಡಿದರು. ಮಠ ಬೆಳೆದರೆ ನಮ್ಮ ಭವಿಷ್ಯ ಬೆಳೆದು ಉಜ್ವಲ ಆಗುತ್ತದೆ ಎಂಬ ಧನ್ಯತಾ ಭಾವದಿಂದ ಅವರೆಲ್ಲರಲ್ಲಿತ್ತು. ಎಂದೆಲ್ಲ ಶ್ರೀ ಮಾದಪ್ಪನವರ ಭಾವನೆಗಳು ನನ್ನ ಪ್ರಶ್ನೆಗೆ ಉಕ್ಕಿ ಬಂದುವು. ಹೀಗೆಯೇ ಶ್ರೀ ಎಸ್.ಎನ್. ಸುಗಂಧರಾಜ್ ಬಿ.ಎಸ್.ಬಿ.ಇ ಪದವೀಧರ, ಶ್ರೀ ಮಠದ ಕೃಪೆಯಿಂದ ಬದುಕಿನ ಗುರಿಯನ್ನು ಸಾಧಿಸಿದೆ ಎಂದಿದ್ದಾರೆ.

ಶ್ರೀ ಎಸ್. ಶಿವನಂಜಯ್ಯ (೭೭) ಹೆಗ್ಗಡದೇವನಕೋಟೆ ತಾ. ಕೋಲಗಾಲ – ಯಾದಾಪುರದವರು. ಮನೆಯಲ್ಲಿ ಅನಾನುಕೂಲವಾಗಿದ್ದು ೮ನೇ ತರಗತಿ ಓದುವಲ್ಲಿ ಕಷ್ಟವಾಗಲು ಶ್ರೀದೇಗುಲ ಮಠದ ಕೃಪೆಯಿಂದ ಓದಿಗೆ ಅನುಕೂಲವಾಯಿತು ಎಂದಿದ್ದಾರೆ.

ಹೆಗ್ಗಡದೇವನ ಕೋಟೆ ತಾ. ನಲ್ಲಿ ಮಾಧ್ಯಮಿಕ ಶಾಲೆಗಳಿದ್ದುವು. ಸಂಚಾರ ಸೌಲಭ್ಯ ಇರಲಿಲ್ಲ. ಮೈಸೂರಿಗೆ ಓದಲಿಕ್ಕೆ ಹೋದರೆ ಮಕ್ಕಳು ಕೆಡ್ತಾರೆ ಅನ್ನುವ ಭಾವನೆ ಮನೆಯಲ್ಲಿತ್ತು. ಆಗ ಶ್ರೀದೇಗುಲ ಮಠದಲ್ಲಿ ಓದಿದ್ದ ಸರ್ವೆಯರ್ ಶ್ರೀ ಜಿ.ಮಾದೇಗೌಡರು, ಕಾಣೆಕಾರನಹಳ್ಳಿ ಮಠ ಇದೆ ಸೇರಿಸ್ತೀನಿ ಬರ್ತೀಯ ಅಂದ್ರು. ತಂದೆ ತಾಯಿನ ಕೇಳಿ ಬರ್ತೀನಿ ಎಂದೆ. ಮನೆಯಲ್ಲಿ ಸಮ್ಮತಿ ಸಿಕ್ಕಿತು. ಶ್ರೀ ಮಾದೇಗೌಡರು ಗುರುಗಳ ಬಳಿ ಬಂದು ಕೇಳಿಕೊಂಡರು. ಮಠದಲ್ಲಿ ಅವಕಾಶ ಸಿಕ್ಕಿ ಓದುವಂತಾಯಿತು. ಗುರುಕೃಪೆಗೆ ಒಳಗಾದೆ. ಜೊತೆಗೆ ಶ್ರೀ ಹೆಚ್.ಡಿ. ಸೋಮಶೇಖರ ಶರ್ಮ ಎಂಬ ಗಣಿತಶಾಸ್ತ್ರದ ಗುರುಗಳ ಪರಿಚಯವೂ ಲಭ್ಯವಾಯಿತು. ಅವರು ಬಡ ವಿದ್ಯಾರ್ಥಿಗಳಿಗೆ ಬಹಳ ನೆರವಾಗುತ್ತಿದ್ದರು. ಮಠದಲ್ಲಿದ್ದು ಸ್ವಾಮಿಗಳ ಪೂಜೆ ಪುನಸ್ಕಾರಕ್ಕೆ ನೆರವಾಗುತ್ತಿದ್ದರು. ಸ್ವಾಮಿಗಳು ನನ್ನನ್ನು ಮಠದ ಹುಡುಗರ ಮೇಲ್ವಿಚಾರಕನಾಗಿ ಇರಿಸಿದರು. ಹೀಗಿರಲು ಎಸ್ಸೆಸ್ಸೆಲ್ಸಿ ಮುಗೀತು. ಶರ್ಮ ಗುರುಗಳು ಮುಂದೆ ಓದಲು ಒತ್ತಾಯ ಮಾಡಿದರು. ಕೆಲಸಕ್ಕೆ ಸೇರಿ ಓದಬೇಕು ಎಂಬ ಮನಸ್ಸು ಇತ್ತು. ಮುಂದೆ ಓದಿ ಕೆಲಸಕ್ಕೆ ಸೇರಿದೆ. ಮಠದ ವಾತಾವರಣದಲ್ಲಿ ಬೆಳೆದು ಸಮಯಪ್ರಜ್ಞೆ, ಕರ್ತವ್ಯ ಪ್ರಜ್ಞೆ ನನ್ನ ಬದುಕಿನಲ್ಲಿಯೂ ನಡೆದು ಬಂತು. ನನ್ನ ಮಗನೂ ಈ ಮಠದಲ್ಲಿ ಸೇರಿ ಓದಿ ವಿದ್ಯಾವಂತನಾದ. ಒಂದು ರೀತಿಯಲ್ಲಿ ಮಠದ ಪರಂಪರೆಯಲ್ಲಿ ನಮ್ಮ ಬಾಳು ಹಸವಾಯಿತು ಎಂದು ಆಭಾರ ನೆನೆದರು ಶ್ರೀ ಶಿವನಂಜಯ್ಯ.

ಮಳವಳ್ಳಿ ತಾ. ಗೌಡಗೆರೆಯ ಶ್ರೀ ವಿ. ಮಹದೇವಯ್ಯ (೫೪). ಬಿ.ಎಸ್ಸಿ, ಬಿ.ಎಲ್ ಮಾಡಿ ಕನಕಪುರದಲ್ಲಿ ಲಾಯರ್ ಆಗಿ ವೃತ್ತಿಜೀವನ ನಡೆಸುತ್ತಿರುವ ಅವರು ದೇಗುಲ ಮಠಕ್ಕೆ ಇಮ್ಮಡಿ ಮಹಾಲಿಂಗಸ್ವಾಮಿಗಳ ಕಾಲದಲ್ಲಿ ಗುರುಕೃಪೆಗೆ ಒಳಗಾಗಿ ಸೇರಿದವರು. ಇವರಿಗೆ ಹಳೆಮಠದಲ್ಲಿ ಊಟ ವಸತಿ ಒದಗಿತ್ತು. ಸ್ವಾಮಿಗಳು ಪಿ.ಯು.ಸಿ.ಗೆ ಸೇರಲು ಶುಲ್ಕ ಕಟ್ಟಿದರು. ಮೊದಲ ಮಠ ಚಿಕ್ಕಮಠವಾಗಿದ್ದು ಇಂದಿನ ಸಭಾಂಗಣದ ಬದಿಗಿತ್ತು. ಅಲ್ಲಿ ಮಲಗಲು ಚಾಪೆ. ಮಹಾಲಿಂಗಸ್ವಾಮಿಗಳವರೂ ಅಲ್ಲಿಯೇ ಪವಡಿಸುತ್ತಿದ್ದರು. (ಆಗ ಚಿಕ್ಕ ಮಠದ ಹತ್ತಿರ ಒಂದು ಹಳೆ ದೇವಸ್ಥಾನ ಸಂಗಮೇಶ್ವರ ದೇಗುಲವಿತ್ತು.) ಸ್ವಾಮಿಗಳು ಪೂಜೆ ಮಾಡಿ. ನಾವು ಮಲಗಿದ್ದ ಕಡೆ ಬರುವಲ್ಲಿ, ನಾವು ಎದ್ದು ಅಡ್ಡ ಬಿದ್ದು, ನಮ್ಮ ಕಾರ್ಯಗಳಿಗೆ ಸಾಗುತ್ತಿದ್ದೆವು. ನಮ್ಮ ಜೊತೆಯಲ್ಲಿ ಚಿಕ್ಕಣ್ಣ ಎಂಬ ಗೌಡ ಜನಾಂಗದ ಹುಡುಗನು ಇದ್ದ. ೬ ತಿಂಗಳು ಮಾತ್ರ ಅವನು ನಮ್ಮ ಜೊತೆಗಿದ್ದ. ಸ್ವಾಮಿಗಳು ಅವನನ್ನು ಕರೆದುಕೊಂಡು ಹೋಗಿ ಜೆ.ಎಸ್.ಎಸ್. ವಿದ್ಯಾಸಂಸ್ಥೆಯಲ್ಲಿ ಡಿಗ್ರಿ ತರಗತಿಗೆ ಸೇರಲು ನೆರವಾದರು. ಅವನಲ್ಲಿ ಫೀಸ್ ಕಟ್ಟಲು ದುಡ್ಡಿರಲಿಲ್ಲ. ಸ್ವಾಮಿಗಳು ತಮ್ಮ **ಉಂಗುರ ಮಾರಿ ಫೀಸು ತುಂಬಿದರು.** ಆಂಥ ಗುರು ಕರುಣೆಯನ್ನು, ಇಂದೂ ನಾವು ನೆನೆಯಬೇಕು. ೧೯೭೪ರ ಸಮಯದಲ್ಲಿ ಚಿಕ್ಕಣ್ಣನ ಅಣ್ಣನ ಮಗನಾದ ಬೋರೇಗೌಡನೂ ಬಂದಾಗ ಸ್ವಾಮಿಗಳು ನೆರವು ನೀಡಿದರು. ಅವನು ಡಿಗ್ರಿ ಮಾಡಿದ, ಬಿ.ಎಡ್ ವರೆಗೂ ಓದಿದ.

ಹೀಗೇಯೇ ಕೂಲಿಮಾಡಿ ಎಸ್ಸೆಸ್ಸೆಲ್ಸಿಗೆ ಒಂದೊಂದು ಸಬ್ಜೆಕ್ಟ್ ಪಾಸುಮಾಡಿಕೊಂಡು ಒಂದು ೧೯೬೯ರಲ್ಲಿ ಪರೀಕ್ಷೆ ಪೂರ್ತಿ ಮಾಡಿ, ಮುಂದೆ ಫೀಸು ಕಟ್ಟಲಾಗದೆ ಓದು ಕೈಬಿಟ್ಟಿದ್ದ ಶ್ರೀ ಬಸವಯ್ಯನಂಥರಿಗೆ ಸ್ವಾಮಿಗಳು ಮುಂದೆ ಓದಲು ನೆರವಾದರು. ಅಂಗವಿಕಲನಾಗಿದ್ದ ನಾಗರಾಜ್ ಎಂಬ ವಿದ್ಯಾರ್ಥಿಗೆ ಸಹಾಯುವಮಾಡಿ ಡಿಗ್ರಿ ಪರೀಕ್ಷೆ ಓದಲು (ಮಂಡ್ಯದಲ್ಲಿ) ನೆರವಾದರು. ನನ್ನ ಮಗ ಎಸ್ಸೆಸ್ಸೆಲ್ಸಿಯಲ್ಲಿ

# ಹಳೆ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳಿಂದ ಗುರು ಗೌರವ



ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ರಜತ ಮಹೋತ್ಸವ ಪೂರ್ವಭಾವಿ ಸಭೆ. ಚಿತ್ರದಲ್ಲಿ ಮಾನ್ಯ ಶ್ರೀ ಎಂ.ವಿ. ರಾಜಶೇಖರನ್, ರಾಮನಗರದ ಮಾಜಿ ಪುರಸಭಾಧ್ಯಕ್ಷ ಶ್ರೀ ಸೈಯದ್ ಜಮಾಲುಲ್ಲಾ, ದಾನಿ ಶ್ರೀ ಶಿವಪ್ಪ ಶೆಟ್ಟರು ಸೇರಿದಂತೆ ಅನೇಕ ಗಣ್ಯರಿದ್ದಾರೆ



ದೇಗುಲಮಠದ ಗುರುಗಳ ಸಮ್ಮುಖದಲ್ಲಿ ಹಳೆ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಮಾವೇಶದಲ್ಲಿ ಲಯನ್ ಶ್ರೀ ಎಂ. ಮಲ್ಲಿಕಾರ್ಜುನಯ್ಯನವರು ಮಾತನಾಡುತ್ತಿರುವುದು



ಪಟ್ಟಾಧಿಕಾರದ ರಜತ ಮಹೋತ್ಸವ ಸಮಾರಂಭದ ಸಮಾಲೋಚನಾ ಸಭೆಯಲ್ಲಿ ಶ್ರೀ ಶ್ರೀಗಳವರ ಸಮ್ಮುಖದಲ್ಲಿ ಹಳೆ ವಿದ್ಯಾರ್ಥಿಗಳಾದ ಭೂಮಿ ದಾನಿ ಶ್ರೀ ಹೆಚ್.ವಿ. ಗುರುಮಲ್ಲಪ್ಪ, ಶ್ರೀ ಟಿ.ಕೆ. ಹೊನ್ನಪ್ಪ ಮುಂತಾದವರು



ಸಾಂಸ್ಕೃತಿಕ ವಿದೇಶ ಪ್ರವಾಸವನ್ನು ಯಶಸ್ವಿಯಾಗಿ ಮುಗಿಸಿಕೊಂಡು ಬಂದ ಹಿರಿಯ ಗುರುಗಳಿಗೆ ಹಳೆ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳಾದ ಮಾನ್ಯ ಶ್ರೀ ಡಿ.ಕೆ. ಶಿವಕುಮಾರ್, ಶ್ರೀ ವಿ. ಸೋಮಣ್ಣ ಮುಂತಾದವರು ಸಿದ್ಧಗಂಗಾ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಅಭಿನಂದನೆ ಸಲ್ಲಿಸುತ್ತಿರುವುದು



ಹಳೆ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಮೂಹ

ತೇರ್ಗಡೆಯಾಗದೆ ಮಂಕಾಗಿ ಮನೆಯಲ್ಲಿ ಮಲಗಿದ್ದಾಗ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು, ಕರೆಸಿ ಬುದ್ದಿವಾದ ಹೇಳಿದರು. ಮಠದ ಕಡೆ ಬಂದು ತಿರುಗಾಡು. ಮಠದಲ್ಲಿ ಇದ್ದುಕೊಂಡು ಓದು ಎಂದು ಅನುಕೂಲ ಮಾಡಿಕೊಟ್ಟರು. ದೀಪದ ಬೆಳಕು ನೋಡು, ಎಲ್ಲ ಕಡೆ ಬೆಳಕು ಹರಡುತ್ತದೆ. ಹಾಗೆಯೇ ಓದು ಅನ್ನುವ, ಬೆಳಕಿನಲ್ಲಿ ಸಾಗು ಎಂದರು. ಮಗ ಎಚ್ಚೆತ್ತ. ಶ್ರದ್ದೆಯಿಂದ ಓದಿ ಎಸ್ಸೆಸ್ಸೆಲ್ಸಿ, ಪಿಯುಸಿಯನ್ನೂ ಮುಗಿಸಿದ.

**ಲೋಕ**ವಾಣಿ ದಿನಪತ್ರಿಕೆಯ ಸಂಪಾದಕರಾಗಿ, ಸೇವೆ ಸಲ್ಲಿಸಿ, ಈಗ ಭಾನುವಾರ ವಾರಪತ್ರಿಕೆ ಹಾಗು ಕನ್ನಡ ಸಾಹಿತ್ಯ ಪರಿಷತ್ತಿನ ಇಂದಿನ ಮಾಸಿಕ ಪತ್ರಿಕೆಯ ಪ್ರಧಾನ ಸಂಪಾದಕರಾದ ಶ್ರೀ ಮಹದೇವ ಪ್ರಕಾಶ್ ಅವರನ್ನು ಸಂಪರ್ಕಿಸಿದಾಗ ತಿಳಿದದ್ದು: ಅವರು ಕನಕಪುರ ತಾ. ಬೇವಿನಕೊಪ್ಪ ಗ್ರಾಮದವರು. ನೆರೆಯ ಕೃಷ್ಣಯ್ಯನ ದೊಡ್ಡಿ ವಿಶ್ವೋದಯ ಪ್ರೌಢಶಾಲೆಯಲ್ಲಿ ೯ನೇ ಇಯತ್ತೆಯವರೆಗೆ ವಿದ್ಯಾರ್ಥಿ. ಕನಕಪುರ ತಾಲ್ಲೂಕು ಶಿಕ್ಷಣದಲ್ಲಿ ಅಗ್ರಸ್ಥಾನದಲ್ಲಿದೆ. ಆದರೆ ಆದಾಯದ ದೃಷ್ಟಿಯಿಂದ ರಾಜ್ಯದ ೧೭೫ ತಾಲ್ಲೂಕುಗಳಲ್ಲಿ ೧೭೪ನೇ ಸ್ಥಾನ ಅದರದು. ಇಂದಿಗೂ ತಲಾ ವಾರ್ಷಿಕ ಆದಾಯ ೪೫೩೪ ರೂ. ಮಾಸಿಕಾದಾಯ ಸರಾಸರಿ ೩೧೧ರೂ, ದಿನದ ಆದಾಯ ಸರಾಸರಿ ೧೫ರೂ, ನಂಜುಡಪ್ಪ ವರದಿಯಲ್ಲಿ ಸೂಚಿತ ಸಮೀಕ್ಷೆ ಇದು. ಇನ್ನು ೧೯೬೦ರ ಹಿಂದಿನ ಸಮಯದ ಬಗ್ಗೆ ನಾನು ಹೇಳುವುದು! ಅಂದು 'ಬರ' ದ ಸಮಯ. ಅಂದ್ರೆ 'ರಣಬರ' ಅಂತಾರಲ್ಲ ಅದೇ.

ನಮ್ಮ ಮನೆಯಲ್ಲಿ ಬಡತನ ಜೊತೆಗೆ 'ಬರ' ಬಂತಲ್ಲ. ಆಗ ನಮ್ಮ ತಂದೆಯವರು ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳನ್ನು ಕುದುರೆಯ ಮೇಲೆ ಶಿವನಹಳ್ಳಿಗೆ ಹೋಗಿ ಬರುತ್ತಿದ್ದಾಗ ಭೇಟಿ ಮಾಡಿ ನನ್ನ ಬಗ್ಗೆ ಕೃಪೆ ಮಾಡಲು ಕೇಳಿಕೊಂಡರು. ಮಠಕ್ಕೆ ಸೇರಿಸಿ ಎಂದು ಸ್ವಾಮಿಗಳು ಆದೇಶವಾಯಿತು. ಆದರೆ ಪರೀಕ್ಷಗೆ ಶುಲ್ಕ ಕಟ್ಟಲು ಹಣವಿರಲಿಲ್ಲ, ಆಗ ಶ್ರೀ ಇಮ್ಮಡಿ ಮಹಾಲಿಂಗಸ್ವಾಮಿಗಳೇ ಅರವತ್ತು ರೂಗಳನ್ನು ಸ್ವಂತ ಕೈಯಿಂದ ಕೊಟ್ಟು, ಎಲ್ಲ ಖರ್ಚುಗಳ ಹೊಣೆ ಹೊತ್ತರು. ಮಠಕ್ಕೆ ಬಂದ್ದಾಗ ಮನೆಯವರ ಭಯ ಹೋಗಿ, ನನ್ನ ಕಟ್ಟು ಬಿಚ್ಚಿದಂತಾಯಿತು. ಪೋಲಿ ಬಿದ್ದು ಫೇಲಾದೆ. ಆದರೆ ಮತ್ತೆ ಮಠಕ್ಕೆ ಬಂದು ನಿಂತು ಓದಿ ಪಾಸಾದೆ. ಆನಂತರ ಶ್ರೀ ಮಹಾಲಿಂಗಸ್ವಾಮಿಗಳು ಮುಂದಿನ ಪಿಯುಸಿ ಓದು ಇಲ್ಲಿ ಬೇಡ. ಪೋಲಿ ಬೀಳ್ತಾನೆ. ಬೆಂಗಳೂರಿನಲ್ಲಿ ಓದಿಸಿ ಎಂದು ದೂರದೃಷ್ಟಿಯಿಟ್ಟು ಹೇಳಿದರು. ಬೆಂಗಳೂರಿನ ಸರ್ಪಭೂಷಣ ಮಠಕ್ಕೆ ಹೋಗಿ ಸೇರಲು ಪತ್ರವನ್ನು ಆಶೀರ್ವದಿಸಿಕೊಟ್ಟರು. ನನ್ನ ಮುಂದಿನ ಓದಿಗೆ, ಭವಿಷ್ಯತ್ತಿನ ಬದುಕಿಗೆ ಮುನ್ನೋಟವಿಟ್ಟು ನೋಡಿಕೊಂಡರು.

ನನ್ನ ನೆನಪಿಗೆ ಬರುವ ಇನ್ನೊಂದು ಸಂಧರ್ಭ: ಶ್ರೀದೇಗುಲ ಮಠದಲ್ಲಿದ್ದಾಗ ಗದ್ದೆಗೆ ಹೋಗಿ ನಾಟಿ ಹಾಕುತ್ತಿದ್ದೆವು. ನಾನು ನಾಟಿ ಹಾಕುವಲ್ಲಿ ಮೈಯೆಲ್ಲ ಕೆಸರಾಗಿ ಹೋಯಿತು. ಆದರೆ ಸೋಪುಹಾಕಿ, ಮೈ ತೊಳೆದುಕೊಳ್ಳಲು, ಕಾಸಿರಲಿಲ್ಲ. ಹಾಗೆಯೇ ನಿಂತಿದ್ದೆ. ಶ್ರೀ ಮಹಲಿಂಗಸ್ವಾಮಿಗಳು ನನ್ನ ಸ್ಥಿತಿ ಗಮನಿಸಿದರು. ಹತ್ತಿರ ಕರೆದರು. ಜೇಬಿನಿಂದ ಆ ಕಾಲಕ್ಕೆ ೫ರೂ ಕೊಟ್ಟು, ಶುದ್ಧ ಮಡಿ ಮಾಡಿಕೊಂಡು ಬಾ ಎಂದರು. ಅಂದಿನ ಅರ್ಕಾವತಿ ತುಂಬಿ ಹರಿಯುತ್ತಿತ್ತು. ಮನಸಾರೆ ಸ್ನಾನಮಾಡಿ ಬಂದೆ. ಕುರಿ ಮಂದೆಯ ಪ್ರತಿಕುರಿಯ ಗತಿ ಸ್ಥಿತಿಯನ್ನು ಗಮನಿಸುವ ಕುರುಬನ ಪ್ರೀತಿಯಂತೆ, ನಮ್ಮ ಕಷ್ಟಗಳನ್ನು ಗಮನಿಸುವ ಮಾನವೀಯ ಹೃದಯದ ಗುರು ಶ್ರೀ ಮಹಾಲಿಂಗಸ್ವಾಮಿಗಳಾಗಿದ್ದರು. ಹಾಗೆಯೇ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು ನನ್ನ ಮೇಲೆ ಪ್ರಭಾವ ಬೀರಿದ ಸ್ವಾಮಿಗಳಾಗಿದ್ದಾರೆ, ಎಂದೆಲ್ಲ ಶ್ರೀ ಮಹದೇವ ಪ್ರಕಾಶ್ ತಮ್ಮ ಮೇಲಾದ ಶ್ರೀದೇಗುಲಮಠದ ಪ್ರಬಾವ ಸಂಹಿತೆಯನ್ನು ತೆರೆದಿಟ್ಟರು.

**ದೇಹ ದಂಡಿಸಿ, ಮನಬಳಸಿ ಸೇವೆ ಸಲ್ಲಿಸಿ** ಎಂಬ ಗುರುವಾಕ್ಯ ದೇಗುಲ ಮಠದಿಂದ ಉಕ್ಕಿ ಬಂದದ್ದು. ಇಂಥ ಶ್ರೀದೇಗುಲ ಮಠದಲ್ಲಿ ಓದಿ ವಸತಿ ಪ್ರಸಾದ ಪಡೆದು ತಮ್ಮ ಬದುಕನ್ನು ರೂಪಿಸಿಕೊಂಡವರು, ಶುಭಗೊಳಿಸಿಕೊಂಡವವರು ಅಸಂಖ್ಯಾತರಿದ್ದಾರೆ. ಜಾತಿ ಭೇದವಿಲ್ಲದೆ ಅರಿವಿನ ಹಸಾದ, ತುತ್ತಿನ ಹಸಾದ, ಸೂರಿನ ಹಸಾದ ಪಡೆದಿದ್ದಾರೆ. ಹಾಗೆ ಪಡೆದು ಮರೆತವರಿಲ್ಲ. ನೆನೆನೆದು ಇಂದಿಗೂ ಭಾವನೆಯಿಂದ ಕೃತಜ್ಞತೆ ಅರ್ಪಿಸುತ್ತಾರೆ. ಋಣಿಗಳು ಎನ್ನುತ್ತಾರೆ. 'ಬೆಳೆದು ಹೋದ ಮನೆ' ಎಂದು ಭಾವಿಸುತ್ತಿದ್ದಾರೆ. ಕಲಿಕೆಯ ತಾಣಕ್ಕೆ ನೆತ್ತಿಯ ನೆಳಲಿಗೆ ತುತ್ತಿನ ಪ್ರಸಾದಕ್ಕೆ ಅರಿವಿನ ಪ್ರಣವಕ್ಕೆ ಬೀಡಾದ ಕನಕಪುರದ ಶ್ರೀ ದೇಗುಲ ಮಠ, ಅದನ್ನೆಲ್ಲಾ ಸವಿದುಹೋದವರ, ಸವಿದು ಹೋಗುವವರ ತಲೆಬೀಡಾಗಿ, ನೆಲಬೀಡಾಗಿ ಕಂಗೊಳಿಸುತ್ತಿರುವುದು ವರ್ತಮಾನದ ಸೌಭಾಗ್ಯ, ಭವಿಷ್ಯತಿಗೊಂದು ಮಾದರಿ.

ಸದ್ಯ ಮಂಡಿಸಿರುವುದು, ನಾನು ಸಂಪರ್ಕಿಸಲು ಸಾಧ್ಯವಾದ ಕೆಲವರ ಅನುಭವಗಳನ್ನಷ್ಟೆ. ಇಂಥ ಅನೇಕರ ಅನುಭವಗಳು ವೈವಿಧ್ಯ ಪೂರ್ಣವಾಗಿರಲೂ ಬಹುದು. ಸದ್ಯಕ್ಕೆ ನಾನು ಸೆರೆಹಿಡಿದಿರುವುದು ಒಂದು ಪ್ರಾತಿನಿಧಿಕ ಚಾಚು ಮಾತ್ರ.

❑

# ದೇಗುಲಮಠ

– ಡಾ. ಕೆ.ವಿ. ಚಂದ್ರಣ್ಣಗೌಡ *

ಅರ್ಕಾವತಿಯ ದಡದ ತೀರದಲ್ಲಿ; ತೆಂಗು, ಕಂಗು, ಮಾವು, ನಿಂಬೆ, ದಾಳಿಂಬೆ – ಮುಂತಾದ ವನಸಿರಿಯ ನಡುವೆ ರಾಜಾಜಿಸುತ್ತಿರುವ ದೇಗುಲವೇ ನಮ್ಮೀ ದೇಗುಲ ಮಠ. ಜ್ಞಾನ ದಾಸೋಹ, ಅನ್ನ ದಾಸೋಹಕ್ಕೆ ಹೆಸರಾದ ಮಠ; ನಮ್ಮ ಪರಂಪರೆಯ ಗುರುಕುಲವ ದರ್ಶಿಸುವ ದರ್ಪಣ.

ಬೆಂಗಳೂರು ಗ್ರಾಮಾಂತರ ಜಿಲ್ಲೆಗೊಂದು ಕೀರ್ತಿ ಕಳಸದಂತಿರುವ ನಮ್ಮೀ ಮಠ; ಕನಕಪುರದ ಹೃದಯದಂತಿದೆ. ವಿದ್ಯಾರ್ಜನೆ ಮಾಡುವ ವಿದ್ಯಾರ್ಥಿಗಳಿಗೆ ಮಾತೃ–ಪಿತೃ–ಗುರುವಾಗಿ ತನ್ನ ತೆರೆದ ಹೃದಯದಿಂದ ಸ್ವಾಗತಿಸುತ್ತದೆ. ಧರ್ಮ–ಜಾತಿ ಬೇಧಗಳೆಣಿಸದೆ, ಮನುಷ್ಯರನ್ನು ಮನುಷ್ಯರನ್ನಾಗಿ ಕಾಣುವ, ಪ್ರೀತಿಸುವ–ಅಕ್ಕರೆಯ ಮಮವತೆಯ ಜ್ಞಾನ ಸಿಂಚನ ಕೇಂದ್ರವಾಗಿದೆ. ಇಲ್ಲಿ ನನಗೂ ದೇಗುಲ ಮಠಕ್ಕೂ ಇರುವ ಆತ್ಮೀಯ ಸಂಬಂಧವನ್ನು ತೆರೆದಿಡಲೇ ಬೇಕಾಗಿದೆ.

ರಾಜಧಾನಿ ಬೆಂಗಳೂರಿನವನೆ ಆದ ನಾನು, ಬೆಂಗಳೂರಿನಲ್ಲೇ ಎಸ್.ಎಸ್.ಎಲ್.ಸಿ. ಮುಗಿಸಿ; ನನ್ನ ಬಂಧು–ಬಾಂಧವರ ಮಕ್ಕಳೆಲ್ಲಾ ಕನಕಪುರ ರೂರಲ್ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸ ಮಾಡುತ್ತಿದ್ದ ಕಾರಣ, ನನಗೂ ಆಸೆಯುಂಟಾಗಿ ಪಿ.ಯು.ಸಿ.ಗಾಗಿ ರೂರಲ್ ಕಾಲೇಜು ಸೇರಿದೆ. ಪೂಜ್ಯ ಕರಿಯಪ್ಪನವರು ಕನಕಪುರದ ಶಿಲ್ಪಿ; ಅಂತೆಯೇ ರೂರಲ್ ಕಾಲೇಜು ನಿರ್ಮಾತೃ. ಇತ್ತ ದೇಗುಲ ಮಠದ ಪರಮಪೂಜ್ಯ ಸ್ವಾಮಿಗಳು ಅಕ್ಷರ ದಾಸೋಹ ನೀಡಿ; ಕನಕಪುರದ ಗ್ರಾಮಾಂತರ ಜನ–ಮನದಲ್ಲಿ ಮನೆ ಮಾತಾಗಿದ್ದರು. ನಾನು ನಿಮಗೆ ಹೇಳುತ್ತಿರುವ ಮಾತು ೧೯೭೨–೭೩ರ ವಿಚಾರ. ಒಂದೆಡೆ ದೇಗುಲ ಮಠ; ಮತ್ತೊಂದೆಡೆ ರೂರಲ್ ಕಾಲೇಜು – ಹೀಗೆ ಇವೆರಡು ಕನಕಪುರದ ಕಣ್ಣುಗಳಾಗಿದ್ದು; ಅಂದಿನ ಕಾನಕಾನಹಳ್ಳಿ – ಕನಕಪುರವಾಗಲು ಸಾಧ್ಯತೆ ಮಾಡಿಕೊಟ್ಟಿವೆ.

ಕನಕಪುರದ ಮುಖ್ಯ ರಸ್ತೆಯಲ್ಲಿರುವ ಕಡ್ಲೇಪುರಿ ಅಂಗಡಿ ಶೆಟ್ಟರ ಮನೆಯಲ್ಲಿ ನಾನು ಮತ್ತು ನನ್ನ ದೊಡ್ಡಮ್ಮನ ಮಗನಾದ, ಇಂದು ವೃಷಭಾವತಿ ಹೈಸ್ಕೂಲಿನಲ್ಲಿ ಮೇಸ್ಟ್ರಾಗಿರುವ ಕೆ.ಪಿ. ಕೃಷ್ಣಪ್ಪ – ಒಂದು ರೂಮ್ ಬಾಡಿಗೆ ತೆಗೆದುಕೊಂಡು, ಅಡಿಗೆ ಮಾಡಿಕೊಳ್ಳುತ್ತಾ – ಕಾಲೇಜಿಗೆ ಹೋಗುತ್ತಿದ್ದೆವು. ಇಲ್ಲಿ ಕಡ್ಲೇಪುರಿ ಶೆಟ್ಟರ ಮನೆಯೊಡತಿಯನ್ನು ನೆನೆಯದಿದ್ದರೆ ತಪ್ಪು ಮಾಡಿದಂತಾಗುತ್ತದೆ. ಅವರ ಕೈ ಅಡುಗೆ, ಸಾಂಬಾರ್ – ಇವುಗಳು ನನ್ನ ಜೀವನದಲ್ಲಿಯೇ ಮರೆಯಲಾಗದವು. ಇದರ ನಡುವೆ ರೂಮಿನಲ್ಲಿ ಅಡುಗೆ ಮಾಡಲಾಗದ ದಿವಸ ನಾನೆಲ್ಲಿಗೆ ಹೋಗುವುದು. ಉಚಿತ ಊಟ ಹಾಕುವ ಕಡೆಗೆ ! ಅಂದು ಉಚಿತ ಊಟವಾಗುತ್ತಿದ್ದ ಪರಮ ಪವಿತ್ರ ತಾಣ ನಮ್ಮೀ ದೇಗುಲ ಮಠ.

ಕಾಲೇಜಿನವರಿಗೆ ಊಟ ಹಾಕುವುದಿಲ್ಲವಂತೆ ! ಎಂಬ ಮಾತಿನ ನಡುವೆ, ನಾನು ಮತ್ತು ನನ್ನ ಗೆಳೆಯರು ತುಂಬು ಮುತುವರ್ಜಿಯಿಂದ ಬ್ಯಾಗುಗಳಲ್ಲಿ ತಟ್ಟೆಗಳನ್ನಾಕಿಕೊಂಡು ಮಠದ ಎಡೆಗೆ ದೌಡಾಯಿಸಿದೋ ! ಅಂದಿನ ಪರಮಪೂಜ್ಯ ಸ್ವಾಮಿಜಿಗಳನ್ನು ಕಂಡು; 'ಸ್ವಾಮಿ, ನಾವು ಕಾಲೇಜಿನಲ್ಲಿ ಪ್ರಥಮ ಪಿ.ಯು.ಸಿ. ಓದುತ್ತಿದ್ದೇವೆ. ನಾವುಗಳು ಬಡವರು. ತಮ್ಮ ಮಠದಲ್ಲಿ ನಮಗೆ ಆಗಿಂದ್ದಾಗ್ಯೆ ಊಟ ಹಾಕುವ ವ್ಯವಸ್ಥೆ ಮಾಡಿ' ಎಂದು ವಿನಂತಿಸಿಕೊಂಡೆವು. ಆಗ ಸ್ವಾಮೀಜಿ 'ನೀವು ಕಾಲೇಜಿನ ಹುಡುಗರು, ತೀಟೆ ಮಾಡುತ್ತೀರಿ, ನೀವು ಯಾವುದೇ ಗಲಾಟೆ ಮಾಡುವುದಿಲ್ಲವೆಂದು ನನಗೆ ಮಾತು ಕೊಟ್ಟರೆ; ಉಳಿದಂತೆ ನಿಮಗೆ ಆಗಿಂದಾಗ್ಯೆ ಊಟ ಹಾಕುವ ವ್ಯವಸ್ಥೆ ಮಾಡಲು ತಿಳಿಸುತ್ತೇನೆ' ಎಂದರು. ಗಲಾಟೆ ಮಾಡುವುದಿಲ್ಲವೆಂದು ವಚನ ಕೊಟ್ಟು – ಸ್ವಾಮೀಜಿ ಅವರ ಪಾದಾರವಿಂದಗಳಿಗೆ ವಂದಿಸಿದೆವು. ರೂಮುಗಳಲ್ಲಿ ಅಡಿಗೆ ಮಾಡಿಕೊಳ್ಳದ ದಿವಸ; ಹಬ್ಬ–ಹರಿ ದಿವಸಗಳಲ್ಲಿ; ಸಭೆ–ಸಮಾರಂಭಗಳ ದಿವಸಗಳಲ್ಲಿ – ಪ್ರಸಾದ ಸ್ವೀಕರಿಸಲು ನಾವು ತಪ್ಪಿಸಿಕೊಂಡದ್ದೇ ಇಲ್ಲ.

ಸ್ವಾಮೀಜಿ – ಅವರ ನೇತೃತ್ವದಲ್ಲಿ ಹೈಸ್ಕೂಲ್ ವಿದ್ಯಾರ್ಥಿಗಳು ಮತ್ತು ನಾವು ಹಲವಾರು ಬಾರಿ – ತೋಟಗಳಲ್ಲಿ – ತೋಟಗಾರಿಕೆ ಕೆಲಸ ಮಾಡಿದ್ದುಂಟು. ಬಾಳೆ, ತೆಂಗು, ಕಂಗು, ಮಾವು, ನಿಂಬೆ, ದಾಳಿಂಬೆ, ಸೀಬೆ – ಹೀಗೆ ಹಲವಾರು ಗಿಡಗಳ ನಡುವೆ – ಹುಲ್ಲು ಕೀಳುವುದು, ನೀರು ಕಟ್ಟುವುದು ಮುಂತಾದ

* ೧೧೨, ಚಂದ್ರೋದಯ, ೨ನೆ 'ಎ', ಕಾವೇರಿ ರಸ್ತೆ, ಸರ್. ಎಂ.ವಿ. ಮೆನ್, ಗಿರಿನಗರ, ಬೆಂಗಳೂರು–೫೬೦ ೦೮೫

ಕೆಲಸ ಮಾಡಿದ್ದೇವೆ. ಹಣ್ಣು ಗಿಡಗಳಿಂದ ಹಣ್ಣು ಕಿತ್ತು; ಕಣ್ಣು ತಪ್ಪಿಸಿ ತಿಂದಿದ್ದೇವೆ. ಸಭೆ–ಸಮಾರಂಭ–ಭಜನೆ–ದಾಸೋಹ – ಮುಂತಾದವುಗಳಲ್ಲಿ ಓಡಾಡಿದ್ದೇವೆ. ದೇಗುಲ ಮಠವೇ ನಮ್ಮದೆಂದು ಕುಣಿದಾಡಿದ್ದೇವೆ. ಇವನ್ನೆಲ್ಲಾ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನೋಡಿ – ಒಳ ಒಳಗೆ ಸಂತೋಷಿಸುತ್ತಿದ್ದ ಅಂದಿನ ಸ್ವಾಮೀಜಿಯವರ ಬಗೆಗೆ ನಾವು ಸದಾ ಕೃತಜ್ಞರಾಗಿದ್ದೇವೆ. ಇಂದು ನಾವು ಬೆಳೆದು – ನಡೆದು ಬಂದ ದಾರಿಯ ಎಡೆಗೆ ಮತ್ತೆ ಗಮನಹರಿಸಿದಾಗ ನಮ್ಮೀ ದೇಗುಲಮಠ ನನ್ನ ಬದುಕಲ್ಲಿ ಒಂದು ಮೈಲಿಗಲ್ಲೇ ಸರಿ. ವನಸಿರಿಯ ನಡುವೆ ವಿರಾಜಮಾನವಾಗಿರುವ ನಮ್ಮೀ ಜ್ಞಾನದೇಗುಲ – ಅನ್ನದೇಗುಲ – ಪರಂಪರೆಯ ಪ್ರತೀಕವೇ ಹೌದು.

ಕನಕಪುರದಲ್ಲಿ ಅಖಿಲ ಭಾರತ ೬೭ನೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆದು – ಕರ್ನಾಟಕದ ಇತಿಹಾಸದಲ್ಲಿ ಇನ್ನೆಂದೂ ಮರೆಯಲಾಗದ ವಿಚಾರವಾಗಿದೆ. ಕನಕಪುರದ ಅಜಾತ ಶತ್ರುವೆಂದೇ ಖ್ಯಾತಿ ಪಡೆದಿರುವ ಕರ್ನಾಟಕ ಸರ್ಕಾರದ ಸಚಿವರಾದ ಆದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಈ ಸಮ್ಮೇಳನದ ಯಶಸ್ವಿ ರೂವಾರಿಯಾಗಿದ್ದಾರೆ. ಇವರು ನಮ್ಮೀ ಮಠದ ಪರಮ ಶಿಷ್ಯರೂ ಹಾಗೂ ಕಿಂಕರರಾಗಿ ಸೇವೆ ಸಲ್ಲಿಸುತ್ತಲೇ ಬಂದಿದ್ದಾರೆ. ಅಂದಿನ ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಲ್ಲೇಗೌಡ ಬೆಸಗರಹಳ್ಳಿ ಅವರು ಕೂಡ ಈ ಮಠದ ಪರಮ ಭಕ್ತರು ಹಾಗೂ ಉತ್ತಮ ಸೇವಾ ಶಿಕ್ಷಕರಾಗಿ ದುಡಿಯುತ್ತಿದ್ದಾರೆ. ಇವೆಲ್ಲವೂ ಯೋಗಾ–ಯೋಗವೆಂಬಂತೆ ಶ್ರೀಮಠದ ಕೃಪೆಯಿಂದ ನಡೆದು ಬಂದಿವೆ. ಒಂದು ಕಡೆ ಮಠದಲ್ಲಿ ಅನ್ನದಾಸೋಹ ಮತ್ತು ಜ್ಞಾನ ದಾಸೋಹ ಪಡೆದು ನಾನು ಇದೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಯಾಗಿ ಕೆಲಸ ಮಾಡುವ ಸುಯೋಗ ಲಭಿಸಿದ್ದು ಕೂಡ ದೇಗುಲ ಮಠದಿಂದ ದೊರೆತ ಭಾಗ್ಯವಲ್ಲದೆ ಮತ್ತೇನು ? ನಡೆದಾಡುವ ನಿಘಂಟು; ಮಠದ ಭಕ್ತರೂ ಆದ ಶ್ರೀ ಎಸ್. ಬಸವಾರಾಧ್ಯರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದದ್ದು ಮತ್ತೊಂದು – ಮಠದಿಂದ ದೊರೆತ ಪುಣ್ಯವೇ ಸರಿ.

ದೇಗುಲ ಮಠ – ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿರುವ ವ್ಯಕ್ತಿ–ಶಕ್ತಿ–ಸಂಸ್ಥೆಗಳನ್ನೇ ಸೃಷ್ಟಿಸಿದೆ ಎಂಬುದಕ್ಕೆ ಈ ಮೇಲಿನ ವಿಚಾರವೇ ಸಾಕ್ಷಿಯಾಗಿದೆ. ಪರಮಾತ್ಮ ಸ್ವರೂಪಿಯಾದ ದೇಗುಲಮಠ ಮನುಕುಲದ – ಮಾನವೀಯತೆಯ ಪ್ರತೀಕವಾಗಿದೆ.

❑

## ಶ್ರೀಕ್ಷೇತ್ರ

ಪೂರ್ವ ದಿಗಂತದಿ ನೆಲೆಗೊಂಡಿಹುದು
ಪುಣ್ಯಕ್ಷೇತ್ರ ಶ್ರೀ ದೇಗುಲಮಠ;
ಜ್ಞಾನ ದಾಸೋಹದ ನೆಲೆಯಾಗಿಹುದು
ಸರ್ವ ಜನಾಂಗದ ಹೂ ತೋಟ;

ಸೂರ್ಯೋದಯದ ಮಂಗಳಕರಧ್ವನಿ
ಅರ್ಕಾವತಿ ದಂಡೆಯೆ ನಿನ್ನ ಮನಿ
ತೆಂಗಿನ ಮರಗಳ ತಂಪಾದ ತೋಪು
ನಿಸರ್ಗ ರಮಣೀಯ ಮನದ ಕಂಪು

ಸರ್ವ ಋತುವಿನಲೂ ಭಕ್ತರ ವೃಂದ
ಉದರ ತುಂಬುವ ಮಠದ ಪ್ರಸಾದ
ದಿನ ದಿನದಿ ಬೆಳೆಯುತಲಿಹುದು
ಕೈ ಬೀಸಿ ಕರೆಯುವ ಕ್ಷೇತ್ರವಿದು

ಮುಮ್ಮಡಿ ನಿರ್ವಾಣ ಸ್ವಾಮಿಗಳ ಶ್ರಮದಿಂದ
ಹೆಸರು ಗಳಿಸಿಹುದು ಭಕ್ತರಿಂದ
ಮಹಾಲಿಂಗ ಸ್ವಾಮಿಗಳ ಕೃಪೆಯಿಂದ
ಭಕ್ತ ಸಮೂಹದ ಬಲದಿಂದ

ಕನ್ನಡ ನಾಡಿನ ಪುಣ್ಯ ಭುವಿಯಲಿ
ಮೆರೆಯುತಲಿಹುದು ಶ್ರೀ ದೇಗುಲವು;
ಧಾವಿಸಿ ಬರುವ ಭಕ್ತರ ವೃಂದ
ಕಳೆಯುತಲಿಹುದು ತಾಮಸವು;

ಬಸವ ತತ್ತ್ವವು ಸಾಕಾರಗೊಂಡಿದೆ
ಕಾಯಕ ನಿಷ್ಠೆಯ ಈ ನೆಲೆ;
ನಿತ್ಯಾಭಿಷೇಕವು ನಡೆದಿದೆ ಇಲ್ಲಿ
ಸ್ವಾಮಿ ಗದ್ದುಗೆಯೊಂದು ಶಿಲ್ಪಕಲೆ;

– ಕೂ.ಗಿ. ಗಿರಿಯಪ್ಪ

# ಶ್ರೀ ಎಂ.ವಿ. ರಾಜಶೇಖರನ್ : ಶ್ರೀ ದೇಗುಲ ಮಠದ ಆಶೀರ್ವಾದ ಹಾರೈಕೆಯಲ್ಲಿ ಅರಳಿದ ವ್ಯಕ್ತಿತ್ವ

– ಎನ್. ಬಸವರಾಧ್ಯ *



ಕರ್ನಾಟಕ ಕಂಡ ಅಪರೂಪದ ರಾಜಕಾರಣಿಗಳಲ್ಲಿ ಶ್ರೀ ಎಂ.ವಿ. ರಾಜಶೇಖರನ್ ಅವರು ಪ್ರಮುಖರು, ಪ್ರಸಿದ್ಧರು. ರಾಜ್ಯದ ಮತ್ತು ರಾಷ್ಟ್ರದ ರಾಜಕಾರಣದಲ್ಲಿ ಅವರು ನಿರ್ವಹಿಸಿದ ಪಾತ್ರಗಳು ಬಹುಮುಖವಾದುವು. ವಿದ್ಯಾರ್ಥಿದೆಸೆಯಿಂದ ಅವರನ್ನು ಅತ್ಯಂತ ಸನಿಹದಿಂದ ಕಂಡ ನಾನು ಅವರು ನಡೆದ ಬಂದ ದಾರಿಯನ್ನು ಅವರು ಮಾಡಿರುವ ಮಹತ್ತರ ಕಾರ್ಯಗಳನ್ನು ದಾಖಲಿಸುವುದು ಅತ್ಯಂತ ಸಂತೋಷದ ಮತ್ತು ಹೆಮ್ಮೆಯ ವಿಷಯವಾಗಿದೆ.

ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ನಾವು ವ್ಯಾಸಂಗ ಮಾಡುತ್ತಿದ್ದ ದಿನಗಳು ಸುವರ್ಣಾಕ್ಷರಗಳಿಂದ ಲಿಖಿತಗೊಳ್ಳಬೇಕಾದುವು. ನಾನು ಮತ್ತು ನನ್ನ ಮಿತ್ರರಾದ ಶ್ರೀ ರಾಜಶೇಖರನ್ ಅವರು ವ್ಯಾಸಂಗ ಮಾಡಿದ ಅವಧಿಯಲ್ಲಿದ್ದ ಶ್ರೇಷ್ಠ ವಿದ್ವಾಂಸರೂ ಪ್ರಕಾಂಡ ಪಂಡಿತರೂ ತಮ್ಮ ವಿದ್ಯಾಗುರುಗಳಾಗಿದ್ದುದು, ನಮ್ಮ ಪೂರ್ವಪುಣ್ಯದ ವಿಶೇಷವೆಂದೇ ಭಾವಿಸುತ್ತೇನೆ. ಸದಾ ಚಿಂತನ ಚಿಲುಮೆ ಯಾಗಿದ್ದ ನನ್ನ ಪ್ರಿಯಮಿತ್ರರು ವಿದ್ಯಾರ್ಥಿದೆಸೆಯಲ್ಲೇ ತಮ್ಮ ಅಸಾಧಾರಣ ಕರ್ತೃತ್ವಶಕ್ತಿಯನ್ನು ನಿರಂತರ ಕಾರ್ಯಶ್ರದ್ಧೆ ಯನ್ನೂ ಪ್ರದರ್ಶಿಸಿ ಅಂದಿನ ಎಲ್ಲಾ ವಿದ್ಯಾರ್ಥಿ ಸಮೂಹಕ್ಕೂ ಅಚ್ಚುಮೆಚ್ಚಿನವರಾಗಿದ್ದರು.

ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿ ಮುಗಿಸಿದ ಶ್ರೀಯುತರು ದೆಹಲಿ ವಿಶ್ವವಿದ್ಯಾನಿಲಯ ದಿಂದ ಕಾನೂನು ಶಿಕ್ಷಣ ಪದವಿಯನ್ನು ಪಡೆದರು. ಆದಾದ ಮೇಲೆ ಅಮೆರಿಕಾ ಯುಎಸ್‌ವಿಯು ವಿಶ್ವವಿದ್ಯಾನಿಲಯ ಗಳಿಂದ ಕೃಷಿ ವಿಜ್ಞಾನಕ್ಕೆ ಸಂಬಂಧಿಸಿದ ತರಬೇತಿಯನ್ನು ಪಡೆದರು. ಅಪಾರ ಲೋಕಾನುಭವವನ್ನು ಪಡೆದರು. ಕೃಷಿ, ಗ್ರಾಮೀಣಾಭಿವೃದ್ಧಿ, ಯುವಶಕ್ತಿ, ಶಿಕ್ಷಣ, ನೀರಾವರಿ, ಮಾನವ ಸಂಪನ್ಮೂಲ ಸದ್ಬಳಕೆ, ಪರಿಸರ - ಇವೇ ಮೊದಲಾದ ವಿಷಯಗಳಲ್ಲಿ ಅಪಾರ ಆಸಕ್ತಿಯನ್ನು ತಳೆದು ದೇಶವಿದೇಶಗಳ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸಿ ಅಪಾರ ಕೀರ್ತಿಯನ್ನು ಗಳಿಸಿದರು.

ವಿದ್ಯಾರ್ಥಿ ದೆಸೆಯಿಂದಲೇ ಅಪಾರ ದೇಶಪ್ರೇಮವನ್ನು ರೂಢಿಸಿಕೊಂಡಿದ್ದ ರಾಜಶೇಖರನ್ ಅವರು ವಿದ್ಯಾರ್ಥಿ ಕಾಂಗ್ರೆಸ್ಸಿನ ಸಕ್ರಿಯ ಸದಸ್ಯರಾಗಿ, ಕನಕಪುರ ತಾಲ್ಲೂಕಿನ ವಿದ್ಯಾರ್ಥಿ ಕಾಂಗ್ರೆಸ್ ಕಾರ್ಯದರ್ಶಿಯಾಗಿ, ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾಗಿ, ಮದರಾಸಿಗೆ ಬಂದಿದ್ದ ಮಹಾತ್ಮಗಾಂಧಿಯವರನ್ನೂ ಭೇಟಿಮಾಡಿದ್ದರು.

ದೆಹಲಿ ವಿದ್ಯಾರ್ಥಿ-ಕಾಂಗ್ರೆಸ್‌ನ ಅಧ್ಯಕ್ಷರಾಗಿ, ಬೆಂಗಳೂರು ಮೈಸೂರು ಮೊದಲಾದ ನಗರ-ಪ್ರದೇಶಗಳ ಕಾಂಗ್ರೆಸ್ ಸಮಿತಿಗಳ ಸದಸ್ಯರಾಗಿ ಸಂಚಾಲಕರಾಗಿ ಕಾರ್ಯನಿರ್ವಹಿಸಿದರು. ತರುವಾಯ ಕರ್ನಾಟಕ ಪ್ರದೇಶ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಗಳಾಗಿ, ಉಪಾಧ್ಯಕ್ಷ ರಾಗಿ ಮಹತ್ತರವಾದ ಸೇವೆ ಸಲ್ಲಿಸಿದರು. ಕನಕಪುರ ಪಾರ್ಲಿಮೆಂಟಿನ ಮತಕ್ಷೇತ್ರದಿಂದ ಲೋಕಸಭೆಗೆ ಆಯ್ಕೆ ಯಾದರು. ಆಮೇಲೆ ಕರ್ನಾಟಕ ವಿಧಾನಪರಿಷತ್ತಿನ ಸದಸ್ಯರಾಗಿ ಚುನಾಯಿತರಾದರು.

ರಾಜ್ಯ ಮತ್ತು ರಾಜಕೀಯ ಕ್ಷೇತ್ರಗಳಿಗೆ ರಾಜಶೇಖರನ್ ಅವರು ಸಲ್ಲಿಸಿರುವ ಸೇವೆ ಅಪಾರ ವಾದುದು, ಅನುಪಮವಾದುದು. ಶ್ರೀಯುತರು ರಾಜ್ಯವನ್ನೂ ರಾಷ್ಟ್ರವನ್ನೂ ಪ್ರತಿನಿಧಿಸಿ ವಿಶ್ವದ ಹಲವಾರು ದೇಶಗಳಿಗೆ

* ನಂ. 743, 12ನೆಯ ಮುಖ್ಯರಸ್ತೆ, ಮೂರನೆಯ ಬ್ಲಾಕ್, ಬೆಂಗಳೂರು - 560010. ದೂರವಾಣಿ : 3380605

080 882945



ಶ್ರೀ ದೇಗುಲಮಠದ ಹಳೆ ವಿದ್ಯಾರ್ಥಿಗಳು, ಕೇಂದ್ರ ಸಚಿವರೂ ಆದ ಶ್ರೀ ಎಂ.ವಿ. ರಾಜಶೇಖರನ್‌ರವರಿಗೆ ಹಿರಿಯ ಮತ್ತು ಕಿರಿಯ ಶ್ರೀ ಶ್ರೀಗಳವರಿಂದ ಮಾಲಾಶೀರ್ವಾದ (ಕೂರಬೂರು ಶ್ರೀ ನಿರ್ವಾಣಸ್ವಾಮಿ ಪ್ರೌಢಶಾಲಾ ಕಟ್ಟಡದ ಭೂಮಿ ಪೂಜೆಯ ಕಾರ್ಯಕ್ರಮದ ಸಂದರ್ಭ)

ಭೇಟಿಕೊಟ್ಟಿದ್ದಾರೆ. ಯೋಜನಾ ತಂಡಗಳನ್ನು ದೇಶ ವಿದೇಶಗಳಿಗೆ ಕೊಂಡೊಯ್ದು ಬಂದಿದ್ದಾರೆ. ಬಹುಶಃ ವಿಶ್ವದ ಎಲ್ಲ ರಾಷ್ಟ್ರಗಳನ್ನೂ ಸಂದರ್ಶಿಸಿ ಭಾರತೀಯ ಸಂಸ್ಕೃತಿಯನ್ನು ಸಾರಿ ಬಂದವರಲ್ಲಿ ರಾಜಶೇಖರನ್ ಅವರು ಅಗ್ರಗಣ್ಯರಾಗಿದ್ದಾರೆ.

ಕರ್ನಾಟಕದಲ್ಲಿ ರೈತ ಸಂಘಟನೆ, ಕೃಷಿಕ ಸಮಾಜ ಸ್ಥಾಪನೆ, ಯುವಜನ ಸೇವಾ ಇಲಾಖೆ ಪ್ರಾರಂಭ, ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆಂೞೇ ಮೊದಲಾದ ಸಂಘ ಸಂಸ್ಥೆಗಳನ್ನು ಸ್ಥಾಪಿಸಲು ಕಾರಣಕರ್ತರಾದವರು ರಾಜಶೇಖರನ್ ಅವರು. ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಒಂದು ಅಂತರರಾಷ್ಟ್ರೀಯ ತರಬೇತಿ ಸಂಸ್ಥೆ. ಈ ಸಂಸ್ಥೆಯಲ್ಲಿ ಏಷ್ಯಾಖಂಡದ ಎಲ್ಲ ದೇಶಗಳ ಪ್ರತಿನಿಧಿಗಳೂ ಇದ್ದಾರೆ. ಸುಮಾರು ಇಪ್ಪತ್ತೈದು ವರ್ಷಗಳಿಂದ ರಾಜಶೇಖರನ್ ಅವರ ನೇತೃತ್ವದಲ್ಲಿ ಕಾರ್ಯ ನಿರ್ವಹಿಸುತ್ತಿದೆ.

ಕರ್ನಾಟಕ ಕಂಡ ಅಪರೂಪದ ರಾಜಕಾರಣಿಗಳಲ್ಲಿ ರಾಜಶೇಖರನ್ ಅವರು ಅಗ್ರಗಣ್ಯರು. ತಮ್ಮ ಇಡೀ ಜೀವನವನ್ನು ಈ ನಾಡಿನ ಸರ್ವತೋಮುಖವಾದ ಅಭಿವೃದ್ಧಿ ಕಾರ್ಯಗಳಿಗೇ ಮೀಸಲಾಗಿರಿಸಿದವರು. ಒಬ್ಬ ನಿಷ್ಕಾಮಕರ್ಮಿ. ಜನ ಸೇವೆಯೇ ಜನಾರ್ದನನ ಸೇವೆ ಎಂಬ ವೇದವಾಕ್ಯವನ್ನು ಚಾಚೂತಪ್ಪದೆ ಪರಿಪಾಲಿಸಿದವರು. ಶ್ರೀಯುತರ ಸರಳಜೀವನ, ಅವರ ನಯವಿನಯ, ಸಂಪನ್ನತೆ, ಸಜ್ಜನಿಕೆ, ಪರಮ ಪ್ರಾಮಾಣಿಕತೆ, ಪರೋಪಕಾರ ಬುದ್ಧಿ, ಸರ್ವರಿಗೂ ಸದಾಕಾಲ ಆದರ್ಶಪ್ರಾಯವಾಗಿರಲಿ. ಇಂತಹ ಸದ್ಗುಣಗಳ ಗಣಿ, ಮೇರುಸದೃಶ ವ್ಯಕ್ತಿತ್ವದ ರಾಜಶೇಖರನ್ ಅವರು ಭಾರತ ಸರ್ಕಾರದ ಯೋಜನಾ ಸಚಿವರಾಗಿರುವುದು ಕನ್ನಡಿಗರು ಹೆಮ್ಮೆಪಡಬೇಕಾದ ಸಂಗತಿಯಾಗಿದೆ.

❑

# ಮಹಾದಾನಿ ಶ್ರೀ ಹೆಚ್.ಬಿ. ಗುರುಮಲ್ಲಪ್ಪನವರು

– ಟಿ.ಆರ್. ಮಹಾದೇವಯ್ಯ

ತನಗೆ, ತನ್ನ ಮಡದಿ ಮಕ್ಕಳಿಗಾಗಿ ಮಾತ್ರ ಕುದಿಯುವ ಮನುಷ್ಯ ಸ್ವಾರ್ಥ ಕೇಂದ್ರಿತ, ಅವನು ಸದಾ ತಾನುಂಟೋ ಮುರು ಲೋಕವುಂಟೋ ಎಂದು ಮೆರೆಯುತ್ತಾನೆ. ತನ್ನ ಸಹಜೀವಿಗಳ ಬಗ್ಗೆ, ತಾನು ವಾಸಿಸುವ ಸಮಾಜದ ಬಗ್ಗೆ, ದೇಶದ ಬಗ್ಗೆ ಎಂದೂ ಚಿಂತಿಸುವುದಿಲ್ಲ. ಅಂಥವರದು ಮಾನವತೆಯ ಸ್ಪರ್ಶವೇ ಇಲ್ಲದ ಬರಡು ಜೀವನ. ಅಂಥವರು ಹುಟ್ಟಿದ್ದು, ಇದ್ದದ್ದು ಮತ್ತು ಹೋದದ್ದು ಗೊತ್ತಾಗುವುದೇ ಇಲ್ಲ. ಆದರೆ ಕೆಲವು ಅಪರೂಪದವರಿರುತ್ತಾರೆ. ಅವರು ಸ್ವಾರ್ಥಕ್ಕಿಂತ ಪರಾರ್ಥವನ್ನೇ ಸದಾ ಚಿಂತಿಸುತ್ತಾರೆ. ಬೇರೆಯವರ ಸುಖ–ಸಂತೋಷ–ನೆಮ್ಮದಿಗಳಲ್ಲಿ ತನ್ನ ಹರ್ಷವನ್ನು ಕಾಣುತ್ತಾರೆ. ಸದಾ ಅವರಿಗೆ ತನ್ನ ಸಹಜೀವಿಗಳ ಚಿಂತೆ, ತಾನು ವಾಸಿಸುವ ಸಮಾಜದ ಬಗ್ಗೆ ಕಾಳಜಿ. ತಾನು ಸಂಪಾದಿಸಿದ್ದದಲ್ಲಿ ಕೆಲವು ಭಾಗವನ್ನು ಬಡವರ, ದೀನ ದಲಿತರಿಗಾಗಿ ತೆಗೆದಿಡುತ್ತಾರೆ. ಯಾರಿಗೂ ಗೊತ್ತಾಗದಂತೆ ದಾನ ಧರ್ಮ ಮಾಡುತ್ತಾರೆ. ಇಂಥವರಿರುವುದರಿಂದಲೇ ಮಾನವತೆಗೆ ನೆಲೆ–ಬೆಲೆ ಇದೆ; ಧರ್ಮವಿನ್ನೂ ಉಸಿರಾಡುತ್ತಿದೆ. ಇಂಥವರ ಸಂತಾನ ಸಾಸಿರವಾಗಲಿ.

ಶ್ರೀ ದೇಗುಲಮಠದ ಹಿರಿಯ ವಿದ್ಯಾರ್ಥಿಯೂ, ಉದಾರಚರಿತರೂ ಆದ ಶ್ರೀ ಹೆಚ್.ಬಿ. ಗುರುಮಲ್ಲಪ್ಪನವರು ಅಂಥ ಒಬ್ಬ ಅಪರೂಪದ ವ್ಯಕ್ತಿ. ಗುರುವಿನಲ್ಲಿ ಭಕ್ತಿ, ಸಮಾಜದ ಏಳಿಗೆಯ ಬಗ್ಗೆ ಆಸಕ್ತಿ, ಧರ್ಮದಲ್ಲಿ ನಿಷ್ಠೆ, ದಾಸೋಹ ಭಾವಗಳಿಂದ ಅವರು ಸೇವಾನಿರತರಾಗಿದ್ದಾರೆ. ಶ್ರೀ ಗುರು ಮಲ್ಲಪ್ಪನವರು ಮಳವಳ್ಳಿ ತಾಲ್ಲೋಕು ಹಬ್ಬಣಿ ಗ್ರಾಮದ ಶರಣ ದಂಪತಿಗಳಾದ ಶ್ರೀ ಹೆಚ್.ಎಸ್. ಭೋಗಪ್ಪ ಮತ್ತು ಶ್ರೀಮತಿ ನಂಜಮ್ಮನವರಿಗೆ ೨೨–೦೫–೧೯೫೪ ರಂದು ಜನಿಸಿದರು. ಏಳು ಗಂಡು, ಎರಡು ಹೆಣ್ಣು ಮಕ್ಕಳಿದ್ದ ತುಂಬು ಕುಟುಂಬವದು.



ಮಕ್ಕಳೊಂದಿಗೆ ದಾನಿಗಳಾದ ಶ್ರೀ ಹೆಚ್.ವಿ. ಗುರುಮಲ್ಲಪ್ಪ, ಶ್ರೀಮತಿ ಸಿ. ಮಂಜುಳಾ ಮತ್ತು ಮಕ್ಕಳಾದ ಜಿ. ಕುಮಾರಸ್ವಾಮಿ, ಕು. ಪೂಜಾ

* ಸದಸ್ಯರು, ರಾಜ್ಯಭಾಷಾ ಆಯೋಗ, ಕಾವೇರಿ ಭವನ, ಬೆಂಗಳೂರು–೫೬೦ ೦೦೯



**ದಾನಿಗಳಾದ ಶ್ರೀ ಹೆಚ್.ವಿ. ಗುರುಮಲ್ಲಪ್ಪನವರು ತಮ್ಮ ತಂದೆ ತಾಯಿಯವರ ಸ್ಮರಣಾರ್ಥ ಹೆಬ್ಬಣಿಗೆಯಲ್ಲಿ ನಿರ್ಮಿಸಿದ ಶ್ರೀ ನಿರ್ವಾಣೇಶ್ವರ ವಿರಕ್ತಮಠ**

ಅವರಲ್ಲಿ ಕೊನೆಯ ಮಗನಾಗಿ ಗುರುಮಲ್ಲಪ್ಪ ಜನಿಸಿದರು. ಊರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ, ದೇಗುಲಮಠದ ಶ್ರೀ ನಿರ್ವಾಣೇಶ್ವರ ಸ್ವಾಮಿ ವಸತಿ ಪ್ರೌಢಶಾಲೆಯನ್ನು ಸೇರಿದ ಗುರುಮಲ್ಲಪ್ಪ ಎಸ್.ಎಸ್.ಎಲ್.ಸಿ. ಪಾಸು ಮಾಡಿದರು. ದೇಗುಲಮಠದ ವಾತಾವರಣ, ಪೂಜ್ಯರ ಸಾನ್ನಿಧ್ಯ, ಶಾಲೆಯಲ್ಲಿ ಗುರುಗಳ ಮಾರ್ಗದರ್ಶನ ಅವರ ವ್ಯಕ್ತಿತ್ವವನ್ನು ರೂಪಿಸಿದವು. ಮುಂದೆ ಅವರು ಮುನಿಸಿಪಲ್ ಜೂನಿಯರ್ ಕಾಲೇಜಿನಲ್ಲಿ ಇಂಟರ್ ತರಗತಿಗೆ ಸೇರಿದರು. ಆದರೆ ಓದು ಮುಂದುವರಿಸಲಾಗಲಿಲ್ಲ. ಕೆಲಸ ಹುಡುಕಲು ೧೯೭೦ ರಲ್ಲಿ ಬೆಂಗಳೂರಿಗೆ ಬಂದರು. ವ್ಯರ್ಥ ಅಲೆದಾಟ; ಕೆಲಸ ಸಿಕ್ಕಲಿಲ್ಲ. ಅವರು ಧೃತಿಗೆಡದೆ ಸ್ವಂತ ವ್ಯವಹಾರ ಮಾಡಲು ನಿರ್ಧರಿಸಿ ನರಸಿಂಹರಾಜ ಕಾಲೋನಿಯಲ್ಲಿ ಬಸವೇಶ್ವರ ವೇಸ್ಟ್ ಪೇಪರ್ ಮಾರ್ಟ್ ತೆಗೆದರು. ಆ ಸಂದರ್ಭದಲ್ಲಿ ಅದೇ ಕಾಲೋನಿಯ ರಾಮಕೃಷ್ಣಪ್ಪನವರು ನೀಡಿದ ಸಹಕಾರವನ್ನು ಅವರು ಇಂದಿಗೂ ನೆನೆಯುತ್ತಾರೆ. ಕೆಲಸದಲ್ಲಿ ಶ್ರದ್ಧೆ, ತನ್ನ ಕಾಲ ಮೇಲೆ ತಾನು ನಿಲ್ಲಬೇಕೆಂಬ ಛಲ ಅವರನ್ನು ಮುನ್ನಡೆಸಿದವು. ೧೯೭೨ ರಲ್ಲಿ ಅವರ ಮದುವೆಯಾಯಿತು. ಗುರುಮಲ್ಲಪ್ಪನವರ ಕೈಹಿಡಿದ ಸಾಧ್ವಿ ಬೆಂಗಳೂರಿನ ಲಕ್ಷ್ಮೀಪುರದ ಚನ್ನವೀರಯ್ಯನವರ ಮಗಳು ಶ್ರೀಮತಿ ಸಿ. ಮಂಜುಳಾ. ಅವರದು ಶಿವನೂ ಒಪ್ಪುವಂಥ ಆದರ್ಶ ದಾಂಪತ್ಯ; ಹಿತಮಿತ ಕುಟುಂಬ. ಆರತಿಗೊಬ್ಬ ಮಗಳು ಜಿ. ಪೂಜಾ, ಕೀರ್ತಿಗೊಬ್ಬ ಮಗ ಜಿ. ಕುಮಾರಸ್ವಾಮಿ. ಆದರೆ ಅಪಾರ ಬಂಧುಗಳು, ಮಿತ್ರರು, ಆತ್ಮೀಯ ಬಳಗ !

ಶ್ರೀ ಗುರುಮಲ್ಲಪ್ಪನವರದು ಕಾಯಕ ನಿಷ್ಠ ಬದುಕು. ವ್ಯವಹಾರ ವಿಚಕ್ಷಣೆಯಿಂದ ಪ್ರಾಮಾಣಿಕ ದುಡಿಮೆಯಿಂದ ಜೀವನದಲ್ಲಿ ಮುನ್ನಡೆ ಸಾಧಿಸಿದರು. ಅವರು ಕಷ್ಟ ಜೀವಿಯಾದ್ದರಿಂದ ಇನ್ನೊಬ್ಬರ ನೋವನ್ನು ಅರ್ಥಮಾಡಿ ಕೊಂಡರು. ಕಷ್ಟದಲ್ಲಿರುವವರಿಗೆ ಕೈಲಾದ ಸಹಾಯ ಮಾಡಲು ಮುಂದಾದರು. ಬಡ ಬಗ್ಗರಿಗೆ, ಮಠ ಮಾನ್ಯಗಳಿಗೆ ಅವರು ಉದಾರವಾಗಿ ದಾನ ಮಾಡಿದ್ದಾರೆ. ಇವಾವುದನ್ನೂ ಅವರು ತೋರಿಸಿಕೊಳ್ಳುವುದಿಲ್ಲ. ಶರಣ ಸಂಸ್ಕೃತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುವ ಅವರದು ಅಂಥ ಸಜ್ಜನಿಕೆ.

ಅವರು ಅನೇಕ ಸಂಘಟನೆಗಳ ಸಂಪರ್ಕ ಪಡೆಸಿಕೊಂಡು ಸಮಾಜಮುಖಿಯಾದ ಸೇವಾ ಚಟುವಟಿಕೆಗಳಲ್ಲಿ ತೊಡಗಿಸಿ ಕೊಂಡಿದ್ದಾರೆ. ೧೯೯೬ ರಲ್ಲಿ ಆರಂಭವಾದ ಬಸವ ಸಂಗಮದ ಅಧ್ಯಕ್ಷರಾಗಿ ಅನೇಕ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಕ್ರಮಗಳನ್ನು, ಸಾಮೂಹಿಕ ವಿವಾಹಗಳನ್ನು ನಡೆಸುತ್ತಾ ಬಂದಿದ್ದಾರೆ. ಶರಣ ಸಾಹಿತ್ಯ ಪರಿಷತ್ತಿನ ಬಸವನಗುಡಿ ಘಟಕದ



ದಾನಿಗಳಾದ ಶ್ರೀ ಹೆಚ್.ವಿ. ಗುರುಮಲ್ಲಪ್ಪನವರು ಆರು ಎಕರೆ ಭೂಮಿಯನ್ನು ದೇಗುಲಮಠದ ಶ್ರೀಗಳಿಗೆ ಮಳವಳ್ಳಿ ಸಬ್‌ರಿಜಿಸ್ಟ್ರಾರ್ ಕಛೇರಿಯಲ್ಲಿ ದಾನ ಮಾಡುತ್ತಿರುವುದು

ಅಧ್ಯಕ್ಷರಾಗಿ ಶರಣ ಸಂದೇಶ ಪ್ರಸಾರದಲ್ಲಿ ಶ್ರಮಿಸುತ್ತಿದ್ದಾರೆ. ಸಾಹಿತಿಗಳು, ಕಲಾವಿದರನ್ನು ಕಂಡರೆ ಅವರಿಗೆ ವಿಶೇಷ ಆದರ. ಅವರನ್ನು ಗೌರವಿಸುವುದರಲ್ಲಿ ಹೆಚ್ಚಿನ ಆನಂದವನ್ನು ಕಾಣುತ್ತಾರೆ. ಅದರಂತೆ ಸೌಹಾರ್ದ ಸಂಘ, ಶರಣ ಬಸವೇಶ್ವರ ಪತ್ತಿನ ಸಹಕಾರ ಸಂಘಗಳಲ್ಲೂ ಅವರ ಸೇವೆ ಸಲ್ಲುತ್ತಿದೆ.

ತನ್ನದು ಯಾವುದೂ ಇಲ್ಲ, ಎಲ್ಲಾ ಶಿವನಸೊಮ್ಮು ಎಂಬ ವಿಶಾಲಭಾವನೆ ಅವರದು. ಅಂತೆಯೇ ಮಾನವ ಸೇವೆಯಲ್ಲಿ ಕೃತಕೃತ್ಯತೆಯನ್ನು ಕಾಣುತ್ತಿದ್ದಾರೆ. ತಮ್ಮ ಜನ್ಮಸ್ಥಳ ಹೆಬ್ಬಣಿಯಲ್ಲಿ ಗ್ರಾಮಸ್ಥರ ಅಭಿಪ್ರಾಯದಂತೆ ತಮ್ಮ ತಂದೆ-ತಾಯಿಗಳ ಹೆಸರಿನಲ್ಲಿ ಶ್ರೀ ನಿರ್ವಾಣೇಶ್ವರ ವಿರಕ್ತಮಠವೊಂದನ್ನು ಸ್ಥಾಪಿಸಿ, ಅದು ಸಾರೋದ್ಧಾರವಾಗಿ ನಡೆದುಕೊಂಡು ಹೋಗಲು ಸ್ಥಿರ ಹಾಗೂ ಚರ ಆಸ್ತಿಯನ್ನು ಬಿಟ್ಟಿದ್ದಾರೆ. ಈಗ ಅಲ್ಲಿ ತೆಂಗಿನ ಮತ್ತು ಮಾವಿನ ತೋಟಗಳನ್ನು ಬೆಳಸಲಾಗಿದ್ದು, ಉತ್ತಮ ಫಲ ಬರುತ್ತಿದೆ. ಆ ಮಠವು ಶ್ರೀ ದೇಗುಲಮಠದ ಶಾಖಾ ಮಠವಾಗಿ ಕಾರ್ಯನಿರ್ವಹಿಸುತ್ತಿದೆ. ಈ ಮಠಕ್ಕೆ ಹೊಂದಿಕೊಂಡಂತೆ ವೃದ್ಧಾಶ್ರಮ, ಅನಾಥಾಲಯ, ಗೋಶಾಲೆ, ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸುವ ಯೋಜನೆ ಹಾಕಿಕೊಂಡಿದ್ದಾರೆ. ಶ್ರೀ ಗುರುಮಲ್ಲಪ್ಪನವರು ಗೋದಾನ, ವಸ್ತ್ರದಾನ, ಭೂದಾನ, ಅನ್ನದಾನ, ಸುವರ್ಣದಾನಗಳೆಂಬ ಪಂಚದಾನಗಳನ್ನು ಮಾಡಿ ಅನುಪಮ ದಾನಿಯೆನಿಸಿಕೊಂಡಿದ್ದಾರೆ.

ಇದೀಗ ಶ್ರೀ ದೇಗುಲಮಠದ ಪುಣ್ಯಮೂರ್ತಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳ ಪಟ್ಟಾಧಿಕಾರದ ರಜತ ಮಹೋತ್ಸವ ಸಂದರ್ಭದಲ್ಲಿ ಅವರಿಗೆ ಅರ್ಪಿಸುವ 'ನಿರ್ವಾಣಶ್ರೀ' ಅಭಿನಂದನ ಸಂಪುಟದ ಪ್ರಕಟನೆಯ ಹೊಣೆ ಹೊತ್ತು ಗ್ರಂಥ ದಾನಿಗಳೂ ಆಗಿದ್ದಾರೆ. ಅವರ ಈ ಜ್ಞಾನ ದಾಸೋಹ ಶ್ಲಾಘನೀಯವಾದುದು. ಮಾನ್ಯಶ್ರೀ ಹೆಚ್.ಬಿ. ಗುರುಮಲ್ಲಪ್ಪ ಹಾಗೂ ಶ್ರೀಮತಿ ಸಿ. ಮಂಜುಳಾ ಅವರು ಮತ್ತು ಕುಟುಂಬ ವರ್ಗಕ್ಕೆ ದೇಗುಲಮಠದ ಗುರುಪರಂಪರೆಯು ಕೃಪಾಶೀರ್ವಾದ ವಿರಲೆಂದು ಹಾರೈಸುತ್ತೇವೆ.

❑

---

ಕೃತಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಡಿದು ಬುದ್ಧಿಯ
ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ.
ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬೈದು ಬುದ್ಧಿಯ
ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ.
ದ್ವಾಪರಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ
ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ.
ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ
ಕಲಿಸಿದರೆ, ಆಗಲಿ ಮಹಾಪ್ರಸಾದವೆಂದೆನಯ್ಯ.
ಗುಹೇಶ್ವರ, ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ
ನಾ ಬೆರಗಾದೆನು.

– ಅಲ್ಲಮಪ್ರಭು



ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀ ಮ.ನಿ.ಪ್ರ
ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳವರ
ಪಟ್ಟಾಧಿಕಾರದ ರಜತ ಮಹೋತ್ಸವ
ಸಂದರ್ಭ ಸಂಚಿಕೆ

# ದೇಗುಲ ಸಂಪದ

# ಸಾಹಿತ್ಯ-ಶಾಸ್ತ್ರ-ಕ್ಷೇತ್ರೀಯ ಸಂಪದ



# ಸಾಹಿತ್ಯ ಕ್ಷೇತ್ರಕ್ಕೆ ವೀರಶೈವರ ಕೊಡುಗೆ

– ಡಾ. ಸಾ.ಶಿ. ಮರುಳಯ್ಯ *

ವೀರಶೈವದ ಸಾಹಿತ್ಯಕ ಸೇವೆಗೆ ಎರಡು ತೋಳುಗಳು: ಒಂದು ವಿಶ್ವ ಸಾಹಿತ್ಯಕ್ಕೆ ಮೀಸಲು, ಮತ್ತೊಂದು ಕನ್ನಡ ಸಾಹಿತ್ಯಕ್ಕೆ. ತನ್ನದೇ ಆದ ವಚನ ರಚನೆಯ ಮೂಲಕ ವಿಶ್ವ ಸಾಹಿತ್ಯಕ್ಕೆ, ದೇಶೀ ದೀಕ್ಷೆಯನ್ನೀವ ಮೂಲಕ ಕನ್ನಡಕ್ಕೆ; ಅದಕ್ಕಿತ್ತ ಕೊಡುಗೆ ಅಪೂರ್ವ, ಇದಕ್ಕಿತ್ತ ಕಾಣಿಕೆ ಅಮೋಘ. ವಚನ ವಿನ್ಯಾಸ ವಿಶ್ವ ಸಾಹಿತ್ಯದಲ್ಲೇ ವಿನೂತನವಾದದ್ದು. ಬೈಬಲ್ ಸಹಾ ಆಗಲಿ, ಮೂಸಿಮ್ಸ್ ಆಗಲಿ, ಸಂಸ್ಕೃತದ ಛಂದೋಗಂಧಿಯಾಗಲಿ, ಆಳ್ವಾರರ ಆಲಾಪನೆಯಾಗಲಿ ಯಾವುದೂ ಇದಕ್ಕೆ ಸದೃಶ ಸಮಾನ ಸಾಹಿತ್ಯ ರೂಪವಲ್ಲ. ಇದು ಹಾಡಿದರೆ ಪದ್ಯ, ಓದಿದರೆ ಗದ್ಯ. ಪದ್ಯದಂತೆ ಛಂದಸ್ಸಿನ ನಿರ್ಬಂಧವಿಲ್ಲ, ಗದ್ಯದಂತೆ ಲಂಗುಲಗಾಮಿಲ್ಲದ ಸ್ವಾಚ್ಛಂದ್ಯವಿಲ್ಲ. ಪದ್ಯದಲ್ಲಿ ಕವಿಯ ಭಾವ ಹರಳುಗೊಳ್ಳಬಹುದು (Crytallise); ಆಗಬೇಕು. ಆದರೆ ಛಂದದ ಬಂಧವಲ್ಲ ಅದು ಬಂಧಿತ: ಅಲ್ಲಿ ಭಾವದ ಕಾವು ಉಸಿರುಕಟ್ಟುವ ಸಂಭವವೇ ಹೆಚ್ಚು. ಗದ್ಯದಲ್ಲಾದರೂ ಅನಿಯತ ಲಯಗತಿಯಿಂದಾಗಿ ಭಾವ ಹಿಂಜಿದರಳೆಯಾಗಿ, ಸಪ್ಪಲು ನೂಲಾಗಬಹುದು. ಭಾವದಲ್ಲಿ ಬಿಗುಹು ಕಾಣದೆ ಗದ್ಯಗಂಧಿ (Prosaic) ಎನಿಸಲೂಬಹುದು. ಈ ಎರಡೂ ಅತಿರೇಕಗಳ ನಡುವೆ ಒಂದು ಸುವರ್ಣಮಾಧ್ಯಮದ ಅಗತ್ಯತೆಯ ಅರಿವಾಯಿತು ಹನ್ನೆರಡನೆಯ ಶತಮಾನದ ವಚನಕಾರರಿಗೆ. ಅದರಿಂದಾಗಿ ಅಂದಿನ ತುರ್ತಿಗೆ ತಲೆಬಾಗಿ ಕಾವ್ಯ ರೂಪವೊಂದನ್ನು ಸಿದ್ಧಪಡಿಸಿಕೊಂಡರು, ಅದು '**ವಚನ**'ವೆಂದು ಪ್ರಸಿದ್ಧಿಪಡೆಯಿತು. ಆದರೆ ವಚನಾವತಾರಕ್ಕೆ ನೂತನ ಸಾಹಿತ್ಯ ನಿರ್ಮಾಣದ ಅನಿವಾರ್ಯತೆಯಾಗಲಿ ಅಥವಾ ಯಾವುದೇ ಕಾವ್ಯ ಸಂಪ್ರದಾಯವನ್ನು ಮುರಿದು, ಹೊಸದೊಂದನ್ನು ಸಂಸ್ಥಾಪಿಸುವ ಉದ್ದೇಶವಾಗಲಿ ಇರಲಿಲ್ಲ. ಮುಖ್ಯವಾಗಿ ಹಿಂದಿನಿಂದಲೂ ಸೊಂಪಾಗಿ ಬೆಳೆದು ಬಂದಿದ್ದ ಚಂಪೂರೂಪದ '**ಮಾರ್ಗಸಾಹಿತ್ಯ**'ವನ್ನು ಧಿಕ್ಕರಿಸಿ, ಹೊಸ ವಿಧಾನದ ಕಡೆಗೆ ಸಾಹಿತ್ಯ ಚಿಂತಕರ ಗಮನ ಸೆಳೆಯುವ ಉದ್ದೇಶ ಅದಕ್ಕಿರಲಿಲ್ಲ. ಸಾಹಿತ್ಯಿಕ ಕ್ರಾಂತಿಯನ್ನೆಬ್ಬಿಸಬೇಕು, ರಾಜಮಹಾರಾಜರನ್ನು ಮೆಚ್ಚಿಸಬೇಕು, ಪಂಡಿತೋತ್ತಮರ ಮುಂದೆ ಮುಂಡಿಸಿ, ಅವರನ್ನು ಖಂಡಿಸಬೇಕು, ಬಿರುದು ಬಾವಲಿಗಳನ್ನು ಗಿಟ್ಟಿಸಬೇಕು ಎಂಬ ಯಾವುದೇ ಭಾವನೆ ಅದಕ್ಕಿರಲಿಲ್ಲ. ಅಂದಿನ ಸಾಮಾಜಿಕ ಧಾರ್ಮಿಕ ಅಸಮಾನತೆಯನ್ನು ತೊಡೆದುಹಾಕಿ ಸರ್ವಸಮಾನತೆಯನ್ನೇರ್ಪಡಿಸಬೇಕು ಎಂಬ ಘನೋದ್ದೇಶ ವೊಂದೇ ವಚನಕಾರರ ಕಣ್ಮುಂದಿನ ಕನಸಾಗಿತ್ತು. ಅದಕ್ಕಾಗಿ ಶತಮಾನಗಳಿಂದಲೂ ತುಳಿತಕ್ಕೆ ಶೋಷಣೆಗೆ ಸಿಕ್ಕು ತತ್ತರಿಸಿದ್ದ ದಲಿತವರ್ಗದ ಏಳಿಗೆ ಮತ್ತು ಹೆಣ್ಣಿಗೆ ಮಾನ್ಯತೆ ದೊರಕಿಸಿಕೊಡುವುದು ಅವರ ಗುರಿಯಾಗಿತ್ತು. ಆ ಅನಿವಾರ್ಯತೆಯ ಸಾಮಾಜಿಕ ತುರ್ತಾಗಿ ಹುಟ್ಟಿಕೊಂಡಿತು ವಚನ. ಅಲ್ಲದೆ ವಚನಕಾರರಾಗಲಿ, ಅವರ ಅನುಯಾಯಿ ವರ್ಗದವರಾಗಲಿ ಯಾರೂ ಘಟಿಕಾಸ್ಥಾನಗಳಿಂದ ಹೊರಬಂದವರಲ್ಲ. ಅನೇಕರು ನಿರಕ್ಷರ ಕುಕ್ಷಿಗಳು. ಆದರೆ ಬಸವಾದಿ ಪ್ರಮಥರ ಪ್ರಭಾವದಿಂದ ಅನುಭವ, ಅನುಭಾವಗಳನ್ನು ತಮ್ಮಲ್ಲಿ ರೂಢಿಸಿಕೊಂಡವರು, ರೂಪಿಸಿಕೊಂಡವರು ಕೂಡ. ಅವರು ತಮ್ಮಲ್ಲಿ ಮಿಡಿದ ಭಾವಗಳನ್ನು ವಚನ ಮಾಧ್ಯಮದಲ್ಲಿ ನುಡಿದವರು. ಕಸುವುಳ್ಳ ಆಡುನುಡಿಯ ಬನಿಯನ್ನು ಬಳಸಿಕೊಳ್ಳುವ ಯತ್ನದಲ್ಲಿ ಅವರ ಅಭಿವ್ಯಕ್ತಿ ಯಶಸ್ವಿಯಾಯಿತು. ಭಾವ ಭಾಷೆ ಬಂಧಗಳ ಮಧುರ ಬಾಂಧವ್ಯದ ಹೆಪ್ಪು ಒಡೆಯದಂತೆ ಎಚ್ಚರವಹಿಸಿದರು. ಅವರು ಬಳಸಿದ್ದು ಒಂದರ್ಥದಲ್ಲಿ ಮುಕ್ತಛಂದಸ್ಸನ್ನೇ. ಆದರೆ ಅವರು ವಹಿಸಿದ ಸ್ವಾತಂತ್ರ್ಯ ಸ್ವೇಚ್ಛಾಚಾರವಾಗಿರಲಿಲ್ಲ. ತುಂಬಾ ಭಾವಪೂರ್ಣ, ಅರ್ಥಪೂರ್ಣ ಪರಿಪೂರ್ಣ ಪೋಷಕವಾಗಿತ್ತು. ಅಂದಿನ ಸಾಮಾಜಿಕ ಸಮಸ್ಯೆಗಳನ್ನು ಒಂದು ಆಂದೋಲನವಾಗಿ ಸ್ವೀಕರಿಸಿ ಹೋರಾಡಿದ ಕೀರ್ತಿ ವಚನಕಾರರಿಗೆ ಸಲ್ಲುತ್ತದೆ. ಇದು ವಿಶ್ವೇತಿಹಾಸದಲ್ಲಿ ಮೊದಲನೆಯದು. ಅನ್ಯರಾಷ್ಟ್ರಗಳಲ್ಲಿ ಮನುಷ್ಯ ಮನುಷ್ಯನನ್ನು ಮಾರುಕಟ್ಟೆಯ ಅಟ್ಟಣತೆಯ ಮೇಲೆ ನಿಲ್ಲಿಸಿ ಹರಾಜು ಹಾಕುತ್ತಿದ್ದ ಕಾಲದಲ್ಲಿ ಮಾನವೀಯತೆಯ ಮಹಾಪಾಠವನ್ನು ಸಾಹಿತ್ಯದ ಮೂಲಕ ಕಲಿಸಿದ ಯಶಸ್ಸು ವಚನಕಾರರದು.

ಈ ದಿಸೆಯಲ್ಲಿ ವಚನ ಸಾಹಿತ್ಯದ ಕೊಡುಗೆ ಅಪೂರ್ವ ಎಂದದ್ದು. ಸ್ಥೂಲವಾಗಿ ಹೇಳುವುದಾದರೆ ಗ್ರೀಸ್‌ಟ್ರಾಜಿಡಿ

* ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ರಾಗಿಣಿ, ನಂ. ೩, ಸರ್ವೀಸ್ ರಸ್ತೆ, ಆರ್.ಪಿ.ಸಿ. ಲೇ ಔಟ್, ಬೆಂಗಳೂರು – ೪೦.

ಕೊಟ್ಟರೆ, ಚೀನ ಕುಶಲಕಲೆಯನ್ನು, ರಷ್ಯಾ ಕಾದಂಬರಿಯನ್ನು, ಉತ್ತರ ಅಮೇರಿಕ ಸಣ್ಣಕಥಾ ಸ್ವರೂಪವನ್ನ, ಜರ್ಮನಿ ಹೊಸ ಶೋಧನಾ ವಿಧಾನವನ್ನ, ಫ್ರಾನ್ಸ್ ಅಪೆರಾವನ್ನ, ಇಂಗ್ಲೆಂಡ್ ವಿಮರ್ಶಾಮಾರ್ಗವನ್ನು, ಭಾರತ ಕಾವ್ಯಮೀಮಾಂಸೆಯನ್ನ, ಕರ್ನಾಟಕ ವಚನ ಸಾಹಿತ್ಯವನ್ನ ಕೊಟ್ಟಿದೆ. ಮೊದಲೇ ಹೇಳಿದಂತೆ ವಚನ ವಿನ್ಯಾಸ ವಿಶ್ವ ಸಾಹಿತ್ಯದಲ್ಲೇ ವಿನೂತವಾದದ್ದು, ಸದೃಶ ಸಾಹಿತ್ಯವನ್ನು ನಾವು ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ಈ ದೃಷ್ಟಿಯಲ್ಲಿ ಪ್ರಪಂಚದಲ್ಲಿ ಯಾರೂ ಕೊಡದುದನ್ನು ಕನ್ನಡ ವೀರಶೈವ ತನ್ನ ವಚನವಾಙ್ಮಯ ಮೂಲಕ ವಿಶ್ವಸಾಹಿತ್ಯಕ್ಕೆ ತನ್ನ ಕಾಣಿಕೆ ನೀಡಿತು. ಹೀಗೆಂದು ಹೇಳಿಕೊಳ್ಳವಲ್ಲಿ ಕನ್ನಡಿಗರಿಗೆ ಹೆಮ್ಮೆಯಿದೆ.

ವೀರಶೈವ ಕನ್ನಡಕಿತ್ತ ಸಾಹಿತ್ಯ ಕ್ರಾಂತಿಕಾರಕ ಸಾಹಿತ್ಯ. ಮೌಢ್ಯವನ್ನು ದೂರಮಾಡಿ, ವೈಚಾರಿಕ ನೆಲೆಯಲ್ಲಿ ಚಿಂತನೆ ಹರಿಯುವಂತೆ ಮಾಡುವ ಸ್ತುತ್ಯ ಪ್ರಯತ್ನ ಅದರದು. ತನ್ಮೂಲಕ ಅದುವರೆಗೆ ಬೆಳೆದು ಬಂದಿದ್ದ ಸಾಹಿತ್ಯದ ಬದುಕನ್ನೇ ಬದಲಿಸಿಬಿಟ್ಟಿತು. ಕಾವ್ಯವಸ್ತುವಿನ ಆಯ್ಕೆಯಲ್ಲಿ, ಛಂದಃ ಸ್ವರೂಪದ ಮಾರ್ಪಾಟಿನಲ್ಲಿ, ಅಭಿವ್ಯಕ್ತಿ ಧೋರಣೆಯಲ್ಲಿ ಸಾಂಪ್ರಾದಾಯಿಕ ಸಾಹಿತ್ಯ ಸ್ವರೂಪಕ್ಕೆ ಕಾಯಕಲ್ಪ ಮಾಡಿ, ಅದು ಹೊಸ ಹುರುಪು ಉತ್ಸಾಹಗಳಿಂದ ಪ್ರಗತಿ ಪಥದತ್ತ ಸಾಗುವಂತೆ ಅನುವು ಮಾಡಿಕೊಟ್ಟಿತು. ಆದರೆ ಬದಲಾವಣೆಯ ಭರದಲ್ಲಿ ಸಂಪ್ರದಾಯವನ್ನು (Convention)ತಿರಸ್ಕರಿಸಿತೇ ಹೊರತು ಪರಂಪರೆಯನ್ನು (Tradition) ಮುರಿಯಲಿಲ್ಲ. ಕನ್ನಡ, ಸಂಸ್ಕೃತಿ, ಆತ್ಮೋನ್ನತಿ, ಮಾನವತೆ, ಮೌಲಿಕಬದುಕು ಮೊದಲಾದವುಗಳನ್ನು ಜೋಪಾನಮಾಡಿ, ಜೀವನ ಕಲೆಯ ಶ್ರೇಷ್ಠತೆಯನ್ನು ಎತ್ತಿಹಿಡಿಯಿತು. ಪರಿಣಾಮವಾಗಿ ಕನ್ನಡ ಸಾಹಿತ್ಯ ಹೊಸದಾಯಿತು. ಹುಲುಸಾಯಿತು, ನಿಚ್ಚಹಸಿರಾಯಿತು ಕೂಡ.

ಕನ್ನಡ ವೀರಶೈವ ಸಾಹಿತ್ಯ ಚರಿತ್ರೆ ಆರಂಭವಾಗುವುದೇ ಹನ್ನೊಂದನೆಯ ಶತಮಾನದಿಂದ. ಕೊಂಡುಗುಳಿ ಕೇಶಿರಾಶಿ ಆ ಯುಗದ ಉಪಲಬ್ಧಕವಿ. ಅವನು ಕೆಲವು ಧಾರ್ಮಿಕ ಪರಿಭಾಷಾಕೃತಿಗಳನ್ನು ಕಂದ ಪದ್ಯದಲ್ಲಿ ರಚಿಸಿದ್ದಾರೆ. ಅದೇ ಯುಗದಲ್ಲಿ ವಚನ ರಚನೆಯೂ ಕಣ್ತೆರೆದದ್ದುಂಟು. ಅದು ವಚನದ ಉಗಮಕಾಲವಾದರೆ, ಹನ್ನೆರಡನೆಯ ಶತಮಾನ ಅದರ ಉಚ್ಛ್ರಾಯಕಾಲ. ಅಂದಿನ ವಚನದ ಸಾಹಿತ್ಯದ ಮೂಲಧಾತು ಸಾಮಾಜಿಕ ಕ್ರಾಂತಿ. ಹಿಂದೆಯೇ ಹೇಳಿದಂತೆ ಸಾಹಿತ್ಯದ ಸುಧಾರಣೆ ಅದರ ಕಾಳಜಿಯಾಗಿರಲಿಲ್ಲ. ಅದರೂ ಅದು ವಿಶ್ವವಿನೂತನ ಸಾಹಿತ್ಯನಿರ್ಮಿತಿ ಆಯಿತು. ಸಾಹಿತ್ಯಕ್ಕೆಂತೋ ಸಂಗೀತಕ್ಕೂ ಸಹವಚನಕಾರರು ಜನ್ಮದಾತರಾದರು. ರಾಗ-ತಾನ-ಪಲ್ಲವಿಗಳಿಂದ ಕೂಡಿದ ಕರ್ನಾಟಕದ್ದೇ ಆದ ಒಂದು ಶಾಸ್ತ್ರೀಯ ಸಂಗೀತ ಪದ್ಧತಿಗೆ ಪೀಠಿಕೆ ಹಾಕಿದರು. ಅದು 'ಬತ್ತೀಸರಾಗ'ದ 'ಸ್ವರವಚನ' ರೂಪು ತಾಳಿತು. ಹೆಚ್ಚು ಕಡಿಮೆ ೧೨ನೇಯ ಶತಮಾನದ ಎಲ್ಲ ವಚನಕಾರ, ವಚನಕಾರ್ತಿಯರೂ ತಮ್ಮ ವಚನಗಳ ಜೊತೆಯಲ್ಲಿ ಸ್ವರವಚನಗಳನ್ನು ರಚಿಸಿದರು. ಮುಂದೆ ಬಂದ ವೀರಶೈವ. ವೀರಶೈವೇತರ ಅನುಭಾವಿಗಳು, ಸಂತರು ಈ ಧಾಟಿಯನ್ನು ತಮ್ಮ ಕೈವಲ್ಯ ಸಾಹಿತ್ಯದ ಸಮರ್ಥ ಸಾಧನವನ್ನಾಗಿ ಮಾಡಿಕೊಂಡರು. ಕೆಲಕಾಲದ ನಂತರ ಕನ್ನಡನಾಡಿನಲ್ಲಿ ತುಂಬು ಪ್ರಾಚುರ್ಯ ಪಡೆದ ಹರಿದಾಸ ಸಾಹಿತ್ಯ-ಮುಖ್ಯವಾಗಿ, ಕೀರ್ತನೆ, ಉಗಾಭೋಗ, ಸುಳಾದಿಗಳಿಗೂ ಇದು ಮೂಲ ಪ್ರೇರಕಶಕ್ತಿಯಾಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಪುರಂದರದಾಸರು ಇದನ್ನು ವೈಜ್ಞಾನಿಕವಾಗಿ ಶಾಸ್ತ್ರೀಯ ಶಿಸ್ತಿನಲ್ಲಿಟ್ಟು ಅನೇಕ ರಾಗರಾಗಿಣಿಗಳನ್ನು ಬಿಡಿಸಿ, 'ಕರ್ನಾಟಕ ಸಂಗೀತ ಪದ್ಧತಿ'ಯ ಪ್ರತಿಷ್ಠಾಪನಾಚಾರ್ಯರಾದರು. ತೆಲುಗಿನ ಜಗದ್ವಿಖ್ಯಾತ ಗಾಯಕ ತ್ಯಾಗರಾಜರಿಗೆ ಅಪ್ರತ್ಯಕ್ಷ ಗುರುವಾದರು, ಅನ್ನಮಾಚಾರ್ಯಗಳಿಗೆ ಪ್ರತ್ಯಕ್ಷ್ಯ ಗುರುವಾದರು. ಆ ಮೂಲಕ 'ಕರ್ನಾಟಕ ಸಂಗೀತ ಪದ್ಧತಿ' ಸುಭದ್ರವೂ ಅತ್ಯಂತ ಗೌರವ ಯುತವೂ ಆದ ಸ್ಥಾನ ಪಡೆಯಿತು. ಇದಕ್ಕೆ ಮೂಲಕಾರಣರು ವಚನಕಾರರು, ಅವರಿತ್ತ ಸ್ವರವಚನಗಳು.

ಪ್ರಾಚೀನ ಕನ್ನಡ ಛಂದಸ್ಸೆಂದರೆ ಸಂಸ್ಕೃತ, ಪ್ರಾಕೃತ ಮತ್ತು ಕೆಲವು ದೇಸೀ ರೂಪಗಳ ಮಿಸಳಬಾಜಿ! ಅದಕ್ಕೆ ಅದರದೇ ಆದ ಛಂದಸ್ಸಿರಲಿಲ್ಲ. ಮಾರ್ಗಕವಿಗಳು ಸಂಸ್ಕೃತದ ಅಕ್ಷರಗಣ ಘಟಿತ ಮಾರುದ್ದದ ಸಮಾಸಪದ ಸಂಯೋಜಿತ ವೃತ್ತಗಳು ಹಾಗೂ ಮಾತ್ರಾಗಣ ವಿನ್ಯಾಸದ ಪ್ರಾಕೃತದ ಕಂದ ಪದ್ಯಗಳ ಅನುಕರಣೆ ಅವುಗಳ ಮಧ್ಯೆ ಅಲ್ಲಿ ಇಲ್ಲಿ ವೈವಿಧ್ಯಕ್ಕಾಗಿ ಬಳಕೆಯಾಗುತ್ತಿದ್ದ ಅಂಶಗಣಗಳಿಂದ ಕೂಡಿದ ಕನ್ನಡ ದೇಸೀಯ ಛಂದಸ್ಸುಗಳಾದ ತ್ರಿಪದಿ, ಷಟ್ಪದಿ, ಅಕ್ಕರ, ಪ್ರಿರಿಯಕ್ಕರ, ಅಪರೂಪಕ್ಕೊಂದು ರಗಳೆ ಪದ್ಯಗಳ ನಡುವಣ ಕೊಂಡಿಯಂತಿದ್ದ ಗದ್ಯ. ಈ ಲಕ್ಷಣದ ಚಂಪು ಚಾಲ್ತಿಯಲ್ಲಿತ್ತು. ದೇಸೀಯ ಛಂದಸ್ಸುಗಳು ಸಂಸ್ಕೃತ ಪ್ರಾಕೃತ ರಚನೆಗಳ ನಡುವೆ ಊಟದಲ್ಲಿನ ಉಪ್ಪಿನಕಾಯಿ ಯಾಗಿದ್ದವು. ಆ ಬಗೆಯ ರಚನೆಗೆ ಇತಿಶ್ರೀ ಹಾಡಿ, ದೇಸೀ ಛಂದಸ್ಸುಗಳ ಕೈಗೆ ಕಾವ್ಯದ ಒಡೆತನ ಕೊಟ್ಟರು. ಅಂಶ ಗಣಗಳಿಂದ ಕೂಡಿದ್ದ ತ್ರಿಪದಿ ಮತ್ತು ಷಟ್ಪದಿಗಳನ್ನು ಮಾತ್ರಾಗಣ ರೂಪಿಗಳಾಗಿ ಮಾರ್ಪಡಿಸಿದರು. ಅಕ್ಷರ, ಪ್ರಿರಿಯಕ್ಕರ ಮೊದಲಾದವು ಬದಲಾಗದಿದ್ದರೂ ಶುದ್ಧ ದೇಸೀ ಛಂದಸ್ಸಾದ

ರಗಳೆ ಬಹುಶಃ ವಚನಾಕಾರರಿಂದಲೇ ಪರಿವರ್ತನೆಯ ಸಂಸ್ಕಾರ ಮತ್ತು ತ್ರಿವಿಧಿ ರೂಪಧಾರಣ ಮಾಡಿದ್ದಿರಬಹುದು ಎಂಬ ಗುಮಾನಿ ಸುಳ್ಳಲ್ಲದಿರಬಹುದು. ಕನ್ನಡ ಛಂದಸ್ಸಿನ ಗಾಯಿತ್ರಿ ತ್ರಿಪದಿ ವಚನಕಾರರ ಅನಂತರದಲ್ಲಿ ಬಂದ ಸಾಂಗತ್ಯಕ್ಕೂ ಮೂಲ ತಾಯಿಬೇರಾಗಿರಬಹುದು. ತ್ರಿಪದಿ ಕುಗ್ಗಿ ಏಳೆಯಾದರೆ, ಹಿಗ್ಗಿ ಸಾಂಗತ್ಯವಾಯಿತು ಎಂಬುದು ನನ್ನ ಅನಿಸಿಕೆ. ಇವೆಲ್ಲಕ್ಕೂ ವಚನಕಾರರಿಂದಲೇ ಮೂಲ ಪ್ರೇರಣೆ ದೊರೆತಿದ್ದಿರಬಹುದು. ಅವರಿತ್ತ ಸಂಗೀತ ಕೊಡುಗೆ ಹಾಡುಗಬ್ಬವಾದ ಸಾಂಗತ್ಯ ಸೃಷ್ಟಿಗೆ ಮೂಲ ಮಾತೃಕೆಯಾಗಿದ್ದಿರ ಬಹುದು ಎಂಬ ಊಹೆ ಕುರುಡಲ್ಲ.

ಹೀಗೆ ೧೨ನೆಯ ಶತಮಾನದ ವೀರಶೈವ ವಚನಕಾರರು ವಿಶ್ವಸಾಹಿತ್ಯ ಕ್ಷೇತ್ರಕ್ಕೆ 'ವಚನಪ್ರಕಾರ'ವನ್ನು ಕೊಡುಗೆಯಾಗಿ ಕೊಟ್ಟಂತೆ, ಭಾರತೀಯ ಸಂಗೀತ ಕ್ಷೇತ್ರಕ್ಕೆ ಕೈವಲ್ಯಾಂಶಭೂಷಿತ ಸ್ವರವಚನವಿತ್ತಂತೆ, ಕನ್ನಡ ಛಂದಸ್ಸಿಗೊಂದು ಹೊಸ ಆಯಾಮವಿತ್ತರು. ತನ್ಮೂಲಕ ಕನ್ನಡ ಸಾಹಿತ್ಯ ಶ್ರೀಮಂತಿಕೆಗೆ ಕಾರಣರಾದರು.

ಕನ್ನಡ ಸಾಹಿತ್ಯ ಜೀವನದಲ್ಲಿ ಬಹುದೊಡ್ಡ ಬದಲಾವಣೆಗಳನ್ನು ಕಾಣುವುದು ೧೩ನೆಯ ಶತಮಾನದಲ್ಲಿ. ಅಂದು ಕನ್ನಡ ಸಾಹಿತ್ಯ, 'ಮಾರ್ಗ'ವನ್ನು ತ್ಯಜಿಸಿ, ದೇಸಿಯ ಕಡೆಗೆ ವಾಲಿತು. ಒಲಿಯಿತು. ಅದರಿಂದಾಗಿ ಅದೊಂದು ಕ್ರಾಂತಿಯುಗವಾಗಿ ಪರಿಣಮಿಸಿತು. ಹರಿಹರ ರಾಘವಾಂಕರು ಸಾಂಪ್ರದಾಯಿಕ ಸಾಹಿತ್ಯ ರಚನೆಗೆ ಕೊಡಲಿ ಪೆಟ್ಟು ಕೊಟ್ಟು ದೇಸೀ ಛಂದಸ್ಸುಗಳಾದ ರಗಳೆ, ಷಟ್ಪದಿಗಳನ್ನು ಚಲಾವಣೆಗೆ ತಂದರು. ಹರಿಹರ ಚಂಪುವಿನಲ್ಲಿ ಗಿರಿಜಾಕಲ್ಯಾಣ ರಚಿಸಿದರೂ ಆ ಛಂದಸ್ಸು ತನಗೆ, ತನ್ನವರಿಗೆ ಸೂಕ್ತವಾದುದಲ್ಲವೆಂದರಿತು ರಗಳೆಯನ್ನಾಶ್ರಯಿಸಿ, ನೂರಾರು ರಗಳೆಗಳನ್ನು ಬರೆದ. ಮೂರು, ನಾಲ್ಕು ಮತ್ತು ಐದು ಮಾತ್ರೆಗಳ ಗಣವಿನ್ಯಾಸಗಳು ಅನುಕ್ರಮವಾಗಿ ಉತ್ಸಾಹ, ಮಂದಾನಿಲ, ಲಲಿತರಗಳೆನಿಸಿದವು. ಇವುಗಳ ಆಗಮನದಿಂದಾಗಿ ಕನ್ನಡ ಕಾವ್ಯವಾಹಿನಿಗೆ ಹೊಸ ನೀರು ಹರಿದು ಬಂತು.

ಆವರೆಗೆ ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯವಿರಲಿಲ್ಲ. ರಾಮಾಯಣ, ಮಹಾಭಾರತ, ಜೈನಪುರಾಣ, ಭಾಗವತ, ಬೃಹತ್ಕಥೆ ಮೊದಲಾದವುಗಳಿಂದಲೇ ವಸ್ತುವನ್ನಾಯ್ದುಕೊಳ್ಳಬೇಕಿತ್ತು. ಅವೆಲ್ಲವುಗಳ ಕಥಾನಕಗಳಂತೂ ಸವೆದ ನಾಣ್ಯಗಳಾಗಿದ್ದವು. ಇಂತಹ ನಿಂತ ನೀರನ್ನು ಹೊರಹಾಕಿದ ಹರಿಹರ. ಇಂದ್ರ ಚಂದ್ರ ನರೇಂದ್ರರ ಕಥೆಗಳನ್ನಾಶ್ರಯಿಸದೆ ಶ್ರೀ ಸಾಮಾನ್ಯನ ಬದುಕಿಗೆ ಹತ್ತಿರವಿರುವ ಕುಂಬಾರ, ಚಮ್ಮಾರ, ಅಂಬಿಗ, ಬೆಸ್ತ, ಬೇಡ ಮೊದಲಾದವರ ಬದುಕನ್ನು ವಸ್ತುವನ್ನಾಗಿಸಿಕೊಂಡ. ಆವರೆಗೆ ಅಂಥವರ ಜೀವನವನ್ನಾಧರಿಸಿ ಕಾವ್ಯರಚನೆ ಮಾಡಿದ್ದೇ ಇಲ್ಲ. ಅವನಿಟ್ಟ ಮತ್ತೊಂದು ಮಹತ್ವದ ಹೆಜ್ಜೆಯೆಂದರೆ ತನ್ನ ಹಿರಿಯ ಸಮಕಾಲೀನರಾದ ಬಸವಣ್ಣ, ಅಲ್ಲಮ, ಅಕ್ಕ ಮೊದಲಾದವರ ಜೀವನೇತಿಹಾಸವನ್ನು ಕುರಿತು ಬರೆದದ್ದು. ಸಾಮಾನ್ಯವಾಗಿ ಎಡ್ವರ್ಡ್ ಬುಲ್ಲೊ ಹೇಳುವ ಮಾನಸಿಕ ದೂರ ಅಥವಾ ನಿಸ್ಸಂಗತ್ಯ (Psychical distance)ಸಿದ್ಧಾಂತ ಕೇವಲ ಕಾವ್ಯಾನಂದ ಸಂದರ್ಭದಲ್ಲಿ ಸಹೃದಯನಿಗಷ್ಟೇ ಮೀಸಲಲ್ಲ, ಕವಿಗೂ ಅವನ ಕಾವ್ಯ ರಚನೆಯ ಸಂದರ್ಭದಲ್ಲಿ ಅವನಾಯುವ ವಸ್ತುವಿಗೆ ಅನ್ವಯವಾಗುತ್ತದೆ. ಕವಿ ಕೈಗೆತ್ತಿಕೊಂಡ ವಸ್ತು ಎಷ್ಟೆಷ್ಟು ದೂರವಾದರೆ ಅವನಿಗೆ ಅಷ್ಟಷ್ಟು ಅಭಿವ್ಯಕ್ತಿ ಸ್ವಾತಂತ್ರ್ಯ ಸಿಗುತ್ತದೆ. ಅದರ ಮೇಲೆ ತನ್ನ ಕಲ್ಪನೆಯ ಕುದುರೆ ಹಾರಿಸಬಹುದು, ಪಾತ್ರಪೋಷಣೆಗೆ, ಸಂವಿಧಾನಕ್ಕೆ ಬೇಕಾಗುವ ಹಲವು ಹತ್ತೆಂಟು ಕಾವ್ಯಪ್ರತಿಮೆಯನ್ನು (Poetic images) ಸೃಷ್ಟಿಸಬಹುದು. ಆದರೆ ಅಪಾಯ ಹೆಚ್ಚು. ಅವನು ಏನು ಹೇಳಿದರೂ ಇತಿಹಾಸವೇ ಆಗುತ್ತೆ, ಪ್ರತಿಮಾರೂಪಿ ಕಾವ್ಯವಾಗುವುದಿಲ್ಲ. ವಸ್ತುವಾಗಲು ಕಾಲದ ವ್ಯಾಪ್ತಿಬೇಕು. ಬಸವಾದಿಗಳ ಬದುಕು ತನಗೆ ತುಂಬಾ ಹತ್ತಿರವಿದ್ದರೂ ಹರಿಹರ ಆ ಕುರಿತು ಮಹಾಕಾವ್ಯವನ್ನೇ ಬರೆದ. ಪೌರಾಣಿಕ ಕಲ್ಪನೆಯ ಅಮೃತಸಿಂಚನದಿಂದ ಪಾತ್ರಗಳನ್ನು ಕೈಲಾಸದಿಂದ ಅವತರಿಸುವಂತೆ ಮಾಡಿ, ಅವುಗಳಲ್ಲಿ ಭಕ್ತಿ, ಶಕ್ತಿ, ಮಾನವೀಯತೆ ಮೊದಲಾದ ಸದ್ಗುಣದ ತಿರುವು ತುಂಬಿದ. ಅವನ ಕಾವ್ಯ ಗಾತ್ರದಲ್ಲಿ ಕಿರಿದಾದರೂ ಪಾತ್ರದಲ್ಲಿ ಹಿರಿದಾಯಿತು. ಇದರಿಂದಾಗಿ ರಾಜ ಮಹಾರಾಜರುಗಳ ಆಸ್ಥಾನದಲ್ಲಿ ರತ್ನಖಚಿತವಾದ ಸಿಂಹಾಸನದ ಮೇಲೆ, ವಜ್ರವೈಡೂರ್ಯಗಳಿಂದ ನಿರ್ಮಿತವಾದ ಕಿರೀಟ ಧರಿಸಿ, ಪಟ್ಟೆಪೀತಾಂಬರ ಧಾರಿಣಿಯಾಗಿ ಮಂಡಿಸಿದ್ದ ಕನ್ನಡ ಸಾಹಿತ್ಯ ಸರಸ್ವತಿ, ಸಾಮಾನ್ಯ ಉಡುಗೆ ತೊಡುಗೆಗಳೊಂದಿಗೆ ಶ್ರೀ ಸಾಮಾನ್ಯನ ಗುಡಿಸಲಲ್ಲಿ ಅಡ್ಡಾಡ ತೊಡಗಿದಳು.

ಸಂಸ್ಕೃತ ಭೂಯಿಷ್ಠವಾದ ಶೈಲಿ ಕರಗಿ, ಹನಿತುಂಬಿದ ಕನ್ನಡದ ಸರಳ ಶೈಲಿ ಉಸಿರಾಡಿತು. ಅಗ್ರಾಹ್ಯ, ಅನೂಹ್ಯ ಗುಣ ಚಮತ್ಕಾರ ಯುಕ್ತ ಅಲಂಕಾರಗಳು ಮಾಯವಾಗಿ ದಿನನಿತ್ಯದ ವಸ್ತು ಪ್ರಾಣಿಗಳೇ ಅವುಗಳ ಶೀಲಸ್ವಭಾವಗಳೇ ರೂಪಕ ಮೊದಲಾದುವಾದವು. ಕಡ್ಡಾಯದ ಅಷ್ಟಾದಶವರ್ಣನೆ ಅನಿವಾರ್ಯವೂ ಅಲ್ಲ, ಅಗತ್ಯವೂ ಇಲ್ಲ ಎನಿಸಿ ಮಹಾಕಾವ್ಯದಲ್ಲಿ ತನ್ನ ಸ್ಥಾನ ಕಳೆದುಕೊಂಡಿತು. ಹೀಗಾಗಿ ಹರಿಹರನ ಗದ್ಯಕ್ಕೆ

ಅತ್ಯಂತ ಮಹತ್ವದ ಸ್ಥಾನವಿದೆ, ಕನ್ನಡದಲ್ಲಿ. ಅವನ ಗದ್ಯದಲ್ಲಿ ಪದ್ಯದ ಓಘವಿದೆ. ಸೌಂದರ್ಯವಿದೆ. ಸರಳ, ಸಂಕೀರ್ಣ ವಾಕ್ಯಗಳಲ್ಲೂ ಲಾಲಿತ್ಯ ಬೆಡಗುಗಳು ಒಡನಾಡುತ್ತವೆ. ಅಂತಹ ಗದ್ಯ ಆವರೆಗೆ ಕನ್ನಡದಲ್ಲಿ ಬಂದದ್ದೇ ಇಲ್ಲ.

ಹರಿಹರನ ಕಾಲಾನಂತರ ಬಹಳ ಶತಮಾನಗಳವರೆಗೆ ಮೈಮುದುಡಿ ಮಲಗಿದ್ದ ರಗಳೆ ಇಪ್ಪತ್ತನೆಯ ಶತಮಾನದಲ್ಲಿ ಮತ್ತೆ ಮೈಕೊಡವಿಕೊಂಡು ಮೇಲೆದ್ದಿತು. ಅದು ಸರಳ ರಗಳೆಯಾಗಿ, ಮುಕ್ತ ಛಂದಸ್ಸಾಗಿ, ಮಹಾಛಂದಸ್ಸಾಗಿ, ಸಂಕೀರ್ಣ. ಛಂದಸ್ಸಾಗಿ, ಭವ್ಯ ಛಂದಸ್ಸಾಗಿ, ರಾಗಿಣಿ ಛಂದಸ್ಸಾಗಿ ಅನೇಕ ರೂಪುಧಾರಣ ಮಾಡಿಕೊಂಡು ಅಭಿವ್ಯಕ್ತವಾಯಿತು. ಮಹಾಕಾವ್ಯ ರಚನೆಗೆ ಅದರಂತಹ ಸಮರ್ಥ ಮಾಧ್ಯಮ ಬೇರೊಂದಿಲ್ಲ ಎಂಬಂತಾಯಿತು. ಇಂಗ್ಲೀಷ್‌ನ Blank verseಗೆ ಹೆಗಲೆಣೆಯಾಗಿ ನಿಂತ ಏಕೈಕ ಛಂದಸ್ಸು ತಾನಾಯಿತು. ಈ ಯಶಸ್ಸು ಕ್ರಾಂತಿ ಹರಿಹರನಿಗೆ ಸಲ್ಲುತ್ತದೆ.

ಹರಿಹರನ ಶಿಷ್ಯನೂ ಸೋದರಳಿಯನೂ ಆದ ರಾಘವಂಕ ಮತ್ತೊರ್ವ 'ಕಾಂತ' ಕವಿ. ಹರಿಶ್ಚಂದ್ರ್ಯ ಕಾವ್ಯವನ್ನು ಹೊರತುಪಡಿಸಿ, ವೀರಶೈವ ಪಂಚಕಗಳ ವಸ್ತುವಾಯ್ಕೆಯಲ್ಲಿ ಹರಿಹರನ ನಿರ್ದೇಶನಕ್ಕೆ ಬಹುಶಃ ಬದ್ಧನಾಗಿದ್ದರೂ, ಛಂದಸ್ಸಿನ ದುಡಿಮೆಯಲ್ಲಿ ರಾಘವಾಂಕ ತನ್ನ ಗುರುವಿನ ನೆರಳಾಗಲಿಲ್ಲ; ತನ್ನದಾದ ಷಟ್ಪದಿಯ ಹಾದಿ ತುಳಿದ, ಷಟ್ಪದಿ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದಿಗೆ ಭಾಜನನಾದ ಚಂಪುವನ್ನು ತ್ಯಜಿಸಿದರೂ ಕಥಾತ್ಮಕವೆನಿಸಿದ ಷಟ್ಪದಿಯನ್ನು ಸಂವಹನ ಸಾಧನವನ್ನಾಗಿ ಮಾಡಿಕೊಂಡ. ಅವನಿತ್ತ ಷಟ್ಪದಿ ಹಾದಿಯಲ್ಲಿ ವಿಶ್ವಕವಿ ಕುಮಾರವ್ಯಾಸ, ಚಾಮರಸ, ಲಕ್ಷೀಶ, ವಿರೂಪಾಕ್ಷ ಪಂಡಿತ ಭಾಸ್ಕರ ಮೊದಲಾದ ಶ್ರೇಷ್ಠಕವಿಗಳನ್ನು ಕನ್ನಡ ಕಾವ್ಯ ಕಂಡಿತು.

ದೃಶ್ಯಕಾವ್ಯಕ್ಕೂ (ನಾಟಕ) ವೀರಶೈವದ ಸೇವೆ ಸಂದಿದೆ. ಕಾವ್ಯದಲ್ಲಿ ನಾಟಕೀಯತೆಯನ್ನು ಮೆರೆದವರಲ್ಲಿ ರಾಘವಾಂಕ ಎರಡನೇಯವನಾದರೂ ವೀರಶೈವ ಕವಿಗಳಲ್ಲಿ ಮೊದಲಿಗೆ ಹತ್ತನೆಯ ಶತಮಾನದಲ್ಲಿ ರನ್ನ ತನ್ನ ಗದಾಯುದ್ಧ ಅಥವಾ ಸಾಹಸ ಭೀಮವಿಜಯ ಚಂಪೂಕಾವ್ಯದಲ್ಲಿ, ಈ ಪ್ರಯೋಗ ಮಾಡಿ ಯಶಸ್ವಿಯಾಗಿದ್ದ. ರಾಘವಾಂಕನು ವಿಪುಲವಾಗಿ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ, ಕ್ವಚಿತ್ತಾಗಿ ಬಂದ ಕೃತಿಗಳಲ್ಲಿ ನಾಟಕೀಯತೆಯನ್ನು ಮೆರೆದಿದ್ದಾನೆ. ವಿಚಾರ ಸಂಘರ್ಷ, ಸಂಭಾಷಣೆಯ ಸ್ವಾರಸ್ಯ, ಸಂವಾದದ ಚಮತ್ಕಾರಗಳಿಂದಾಗಿ ಅವನ ಹರಿಶ್ಚಂದ್ರ ಕಾವ್ಯ ಶ್ರೇಷ್ಠಮಟ್ಟದ ಕಾವ್ಯನಾಟಕವೇ ಆಗಿದೆ. ಎಲ್ಲಿ ಪಂಪ ಸೋತನೊ ಅಲ್ಲಿ ರನ್ನ ಗೆದ್ದಿದ್ದಾನೆ, ಎಲ್ಲಿ ಹರಿಹರ ಸೋತನೊ ಅಲ್ಲಿ ರಾಘವಾಂಕ ಗೆದ್ದಿದ್ದಾನೆ ಎಂಬ ಮಾತು ಇವರಿಬ್ಬರ ನಾಟಕೀಯ ಗುಣಕ್ಕೆ ಒಪ್ಪುವಂಥದ್ದು. ಇಂಥದೇ ನಾಟ್ಯಶಿಲ್ಪ ೧೫ನೆಯ ಶತಮಾನದ ಶಿವಗಣ ಪ್ರಸಾದಿ ಮಹಾದೇವಯ್ಯನಿಂದ ಮತ್ತೆ ಮೆರೆದಿದೆ. ಅವನ **'ಶೂನ್ಯ ಸಂಪಾದನೆ'** ವಚನಗಳ ಸಂಕಲನ ಅಲ್ಲ, ಅದೊಂದು ಸಂವಾದ ವೇದಿಕೆ, ಅನುಭಾವದ ಕೈಪಿಡಿ. ಹನ್ನೆರಡನೆಯ ಶತಮಾನದಲ್ಲಿ ವಚನಗಳನ್ನು ಆರೋಡನ ಮಾಡಿ, ಅನುಭಾವಕ್ಕೆ ಸೀಮಿತವಾದ ವಚನಗಳನ್ನು ಹೆಕ್ಕಿ ತೆಗೆದು. ಅವುಗಳಿಗೆ ಸಂಭಾಷಣೆಯ ಸೌಷ್ಠವವನ್ನೂ ದೃಶ್ಯ ಸಂವಿಧಾನದ ಚೌಕಟ್ಟನ್ನು ದಯಪಾಲಿಸಿದ್ದಾನೆ ಶಿವಗಣ ಪ್ರಸಾದಿ. ವಿಶ್ವಸಾಹಿತ್ಯದಲ್ಲಿ ಇಂತಹ ಸಂಭಾಷಣಾ ರೂಪಿವೈಚಾರಿಕ ರಚನೆಯೆಂದರೆ ಪ್ಲೋಟೋವಿನ ಸಿಂಪೋಜಿಯಂ ಕನ್ನಡದ ಮೂಲ ಛಂದಸ್ಸು ತ್ರಿಪದಿ. ಇದು ಅಂಶಗಣದಿಂದ ಮಾತ್ರಾಗಣಕ್ಕೆ ಪಕ್ಷಾಂತರ ಮಾಡಿದ್ದು ಅಕ್ಕಮಹಾದೇವಿಯ ಹಸ್ತದಲ್ಲಿ. ಈ ಮಾತ್ರಾಗಣರೂಪಿ ತ್ರಿಪದಿಯನ್ನು ತುಂಬಾ ಚೆನ್ನಾಗಿ ಬಳಸಿಕೊಂಡು, ಅದಕ್ಕೊಂದು ಉತ್ತಮ ಚಾಲನೆ ಕೊಟ್ಟವನು ೧೬ನೆಯ ಶತಮಾನದ ವೀರಶೈವ ಕವಿ ಸರ್ವಜ್ಞ.ಮುಕ್ತಕ ರಚನೆಗಷ್ಟೇ ಮೀಸಲಿದ್ದ ತ್ರಿಪದಿ ೨೦ನೆಯ ಶತಮಾನದ ಕವಿಯತ್ರಿ ಜಯದೇವಿ ತಾಯಿ ಲಿಗಾಡೆಯವರ ಪ್ರಯತ್ನದಿಂದಾಗಿ ಮಹಾಕಾವ್ಯ ರಚನೆಗೂ ಅರ್ಹತೆ ಪಡೆಯಿತು.

ಇದೇ ಸರಿಸುಮಾರಿನಲ್ಲಿ ಯಳಂದೂರು ಷಡಕ್ಷರದೇವ ಬರುತ್ತಾನೆ. ಇವನು ಚಂಪುವಿನ ಪುನರುತ್ಥಾನಕ್ಕೆ ಕಾರಣನಾದದ್ದಷ್ಟೇ ಅಲ್ಲ, ಅದರ ಸೀಮಾಪುರುಷನೂ ತಾನಾಗುತ್ತನೆ. ಸವ್ಯಸಾಚಿಯಾದ ಅವನಿಂದ ಕನ್ನಡ ಕಾವ್ಯ ಮತ್ತೆ ಶ್ರೀಮಂತವಾಯಿತು? ಪ್ರೌಢವಾಯಿತು. ಅವನಂತಹ ಪ್ರಕಾಂಡಪಂಡಿತ ಕನ್ನಡ ಸಂಸ್ಕೃತ ಭಾಷಾ ಕವಿಗಳಲ್ಲಿ ಸಿಕ್ಕುವುದು ದುರ್ಲಭ. ಷಡಕ್ಷರಿಯಂತಹ ಪ್ರೌಢ ಕವಿಯನ್ನು ಕೊಟ್ಟ ಅಗ್ಗಳಿಕೆ ವೀರಶೈವದ್ದು.

ಹೀಗೆಲ್ಲ ವಿಶ್ವಸಾಹಿತ್ಯಕ್ಕೆ ಅಪೂರ್ವಕೊಡುಗೆಯಿತ್ತು ಕನ್ನಡ ಕಾವ್ಯ ಕಣಜವನ್ನು ತುಂಬಿದ ವೀರಶೈವದ ಸಾಹಿತ್ಯ ಸಿದ್ಧಿಗಳನ್ನು ಅವಲೋಕಿಸುವಲ್ಲಿ ಮಾತು ಮೂಕವಾಗುತ್ತದೆ.

❑

# ಶರಣರ ವೈಚಾರಿಕತೆ

– ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

ಶರಣರು ಎನ್ನುವ ಶಬ್ದವೇ ಕ್ರಾಂತಿಕಾರಕವಾದುದು. ಬಸವಣ್ಣನವರು **'ಅರಿದರೆ ಶರಣ, ಮರೆದರೆ ಮಾನವ'** ಎಂದು ಹೇಳಿದಾಗ ಶರಣನಾಗುವುದಕ್ಕೆ ಅಗತ್ಯವಾದದ್ದು ಅರಿವು ಎಂದರು. ಆ **'ಅರುವು'** ಬೌದ್ಧಿಕವಾದುದಲ್ಲ, ಆಗುವಂಥದ್ದು; ಅನುಭವಕ್ಕೆ ಬಂದಂಥದ್ದು. ಆದ್ದರಿಂದಲೇ ಅವರು ಅರಿದರೆ ಶರಣನಾಗುತ್ತಾನೆ ಎಂದರು.

ಶರಣನಾಗುವುದು ಎಂದರೆ ಮುಗಿಯಿತು, ಅಲ್ಲಿ ಗಂಡು ಹೆಣ್ಣಿನ ಭೇದವಿಲ್ಲ; ಜಾತಿ–ಮತಗಳ ಗೋಜಲಿಲ್ಲ; ಅಷ್ಟೇ ಅಲ್ಲ ಅಸಮಾನತೆಯೆಂಬುದೇ ಅಲ್ಲಿಲ್ಲ; ಅರಿತವರಲ್ಲಿ ಕಿರಿಯರು ಹಿರಿಯರುಂಟೇನು ? ಗಂಡು ಹೆಣ್ಣಿನ ಭೇದವುಂಟೇನು ?

ಅಂಥ ಶರಣ ಶರಣತ್ವಕ್ಕೆ ಅರ್ಹನಾದದ್ದು ತನ್ನ ಆಚಾರದಿಂದ. ಯಾವ ಧರ್ಮ ಆಚರಣೆಗೆ ಸಾಧ್ಯವಾಗುವುದಿಲ್ಲವೋ ಅದು ಧರ್ಮ ಹೇಗಾದೀತು ? ಆದ್ದರಿಂದಲೇ ಹನ್ನೆರಡನೆಯ ಶತಮಾನದ ಶರಣರು ಆಚಾರದ ನೆಲೆಗಟ್ಟಿನ ಮೇಲೆ ಬದುಕಿನ ಮೌಲ್ಯಗಳನ್ನು ಕಂಡರು; ಕಾಣಿಸಿದರು. ಅವರಿಗೆ ಆಚಾರವೇ ಸ್ವರ್ಗವಾಗಿತ್ತು. ಅನಾಚಾರವೇ ನರಕವಾಗಿತ್ತು – ಅದಕ್ಕಿಂತ ಮುಖ್ಯವಾದ್ದೆಂದರೆ ಅಲ್ಲಮ ಪ್ರಭುಗಳು ಕಲ್ಯಾಣದ ಕ್ರಾಂತಿಯನ್ನು ಪ್ರಣತಿಯ ರೂಪಕದಲ್ಲಿ ವರ್ಣಿಸುವಾಗ ಆ ದೀಪಕ್ಕೆ ಬತ್ತಿಯಾದದ್ದು ಆಚಾರ ಎಂದರು. ಇಂಥ ಅರಿವು ಆಚಾರಗಳ ನೆಲೆಯಿಂದ ಹೊರಟವರು ಶರಣರು.

ಶರಣರು ಈ ನೆಲದ ಬದುಕನ್ನು ಮಹತ್ತರವಾದ ಸವಾಲಾಗಿ ಸ್ವೀಕರಿಸಿದರು. ಆದ್ದರಿಂದಲೇ ಅವರು ಅದರ ಮೌಲ್ಯಗಳನ್ನು ಹುಡುಕಲು ವಚನ ಮಾಧ್ಯಮವನ್ನು ಸಹಜವಾಗಿಯೇ ಸ್ವೀಕರಿಸಿದರು. ಆಶ್ಚರ್ಯವೆಂದರೆ ಆದಿ ವಚನಕಾರನಾದ ಜೇಡರ ದಾಸಿಮಯ್ಯನ ವಚನಗಳಲ್ಲಿ ಎಲ್ಲೂ **'ವಚನ'** ಶಬ್ದವೇ ಇಲ್ಲ. ಅಲ್ಲಿ ಆತ ಶರಣರ ಮಾತುಗಳನ್ನು **'ಮೃಡಭಕ್ತರ ನುಡಿಗಡಣ'** ಎನ್ನುತ್ತಾನೆ. ಇಲ್ಲವೆ ಶರಣರ ಸೂಳ್ನುಡಿ ಎನ್ನುತ್ತಾನೆ. ಮೃಡಭಕ್ತರ ನುಡಿಗಡಣ ಎನ್ನುವಾಗ ಅದನ್ನು ಕಡುದರ್ಪವೇರಿದ ಒಡಲೆಂಬ ಬಂಡಿಗೆ ಕಡೆಗೋಲು ಎಂದು ಸೂಚಿಸಿ ಅದರ ಧಾರ್ಮಿಕ ವಲಯವನ್ನು ಧ್ವನಿಸುವನು. ಸೂಳ್ನುಡಿ ಎಂದಾಗ ಶರಣರು ಸರದಿಯ ಮೇಲೆ ಆಡಿದ – ಅಂದರೆ ಅರಿತವರು ತಮ್ಮ ಅನುಭವಗಳನ್ನು ಪರಸ್ಪರ ಒರೆಗೆ ಹಚ್ಚಿಕೊಳ್ಳುವ ಒಂದು ಕ್ರಮದ ಮಾತು ಎಂದು ಸೂಚಿಸುವಂತಿದೆ. ಈ ಮಾತನ್ನು ಇನ್ನಷ್ಟು ಆಳವಾಗಿ ಪರಿಶೀಲಿಸಿದರೆ ಶರಣರು ಒಟ್ಟಿಗೆ ಕುಳಿತು ನಡೆಸಿದ ವಾಗ್ವಾದದ ತಿರುಳು ಇದಾಗಿರಬಹುದೆನಿಸುತ್ತದೆ. **'ವಾದೇ ವಾದೇ ಜಾಯತೇ ಜ್ಞಾನ ಬೋಧಃ'** ಎಂಬ ಮಾತೊಂದಿದೆ. ಆದರೆ ಶರಣರಲ್ಲಿ ಹಾಗಲ್ಲ; ಜ್ಞಾನಬೋಧರು ವಾಗ್ವಾದದಿಂದ ಮೌಲ್ಯಗಳನ್ನು ಹುಡುಕಿದರು; ಕಂಡರು; ಹರಳುಗಟ್ಟಿಸಿದರು ಎಂದು ಅರ್ಥವಾಗುತ್ತದೆ. ಆದ್ದರಿಂದ ಜೇಡರ ದಾಸಿಮಯ್ಯ ಆನೆಯನ್ನು ಒಲ್ಲೆನೆನ್ನುತ್ತಾನೆ, ಹಿರಿದಪ್ಪ ರಾಜ್ಯವನ್ನು ಬೇಡವೆನ್ನುತ್ತಾನೆ. ಐಶ್ವರ್ಯವನ್ನು ನಿರಾಕರಿಸುತ್ತಾನೆ. ಆದರೆ ಶರಣರ ಸೂಳ್ನುಡಿಗಳು ದೊರೆತರೆ ರಾಮನಾಥನನ್ನೆ ಮಾರಿಬಿಡುತ್ತೇನೆನ್ನುತ್ತಾನೆ. ಶರಣರ ಸೂಳ್ನುಡಿಗಳ ಮಹತ್ವ ಅದು.

ಬಹುಶಃ ಈ ಸೂಳ್ನುಡಿಗಳು ಅನುಭವ ಮಂಟಪದ ಸಂಭಾಷಣೆಗಳು ಆಗಿರಬಹುದೆ ? ಹೌದೆಂದು ಸಾಧಿಸುವುದಕ್ಕೆ ಆಧಾರಗಳು ಸಾಲವು; ಇಲ್ಲವೆನ್ನಲು ಕೂಡ ಆಧಾರಗಳು ಇಲ್ಲ.

ಬಹುಶಃ ಈ ಸೂಳ್ನುಡಿಗಳು ಹಾಗೂ ಶೂನ್ಯ ಸಂಪಾದನೆಯ ಉತ್ತರ–ಪ್ರತ್ಯುತ್ತರ ಕ್ರಮದ ಪ್ರಸಂಗ ರೂಪಗಳ ಮಧ್ಯದ ಕೊಂಡಿ ಎಲ್ಲೋ ಇತಿಹಾಸದ ಕಗ್ಗತ್ತಲಲ್ಲಿ ಕಳೆದು ಹೋಗಿದೆ.

ಆದರೆ ಶರಣರ ವೈಚಾರಿಕತೆಯನ್ನು ಕಾಣಲು ಸಂಶೋಧನೆಯನ್ನೇನು ಮಾಡಬೇಕಿಲ್ಲ. ಏಕೆಂದರೆ ವಚನ ಸಾಹಿತ್ಯದ ಅಪಾರ ರಾಶಿಯಲ್ಲಿ ಎಲ್ಲಿ ಕೈಯಿಟ್ಟರೂ ಅವರ ವೈಚಾರಿಕತೆಯ ಹೊಳಹು ಮಿಂಚುತ್ತಿರುತ್ತದೆ.

ಶರಣ ಧರ್ಮದ ತಿರುಳನ್ನು ಹೇಳುವಾಗ ಪಂಚಾಚಾರಗಳನ್ನೂ, ಅಷ್ಟಾವರಣಗಳನ್ನೂ ಪ್ರಮುಖವಾದುವುಗಳೆಂದು ಹೇಳುವುದುಂಟು. ಅದರಲ್ಲಿ ಅಷ್ಟಾವರಣಗಳು ಎಂದರೆ ಜೀವದ ಸುತ್ತ ಕಟ್ಟಿಕೊಟ್ಟ ಎಂಟು ಸುತ್ತಿನ ರಕ್ಷಣೆಯ ಕೋಟೆಯಿದ್ದಂತೆ. ಆಶ್ಚರ್ಯವೆಂದರೆ ಈ ಎಂಟು ಮಹತ್ವದ ವಿಚಾರಗಳಲ್ಲಿ ಶರಣರು ವಿಶೇಷವಾಗಿ

* 'ಲಲಿತ ಕೃಪೆ', ೨೦೩, ೭ನೇ ಎ ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ, ೨ನೇ ಹಂತ, ಬೆಂಗಳೂರು–೪೦

ಚರ್ಚಿಸುವುದು ಗುರುಲಿಂಗ ಜಂಗಮಗಳನ್ನು. ಅಂದರೆ ಎಂಟು ಧಾರ್ಮಿಕ ವಿಧಾನಗಳನ್ನು ಹೇಳಿದರೂ ಅವುಗಳನ್ನು ಆದ್ಯತೆಯ ದೃಷ್ಟಿಯಿಂದ ಪಟ್ಟಿ ಮಾಡುವ ಮೊದಲು ಮೂರು ಅಂಶಗಳನ್ನು ಕುರಿತು ವಚನ ಸಾಹಿತ್ಯದ ತುಂಬ ವಿಶೇಷವಾಗಿ ಚರ್ಚೆ ನಡೆದಿದೆ. ಈ ಚರ್ಚೆ ಎನ್ನುವುದು ಶೂನ್ಯ ಸಂಪಾದನೆಗಳಲ್ಲಿಯೂ ಮುಂದುವರಿದಿದೆ. ಉದಾಹರಣೆಗೆ ಶರಣ ಧರ್ಮದ ಲಾಂಛನದಂತಿರುವ ಲಿಂಗ ವಿಚಾರವನ್ನೆ ಸ್ಥೂಲವಾಗಿ ಗಮನಿಸೋಣ.

ಶಿವ ಸಂಕೇತವಾದ ಇಷ್ಟಲಿಂಗವನ್ನು ಗುರು ದೀಕ್ಷೆ ಕೊಟ್ಟು ಭಕ್ತನಿಗೆ ನೀಡುತ್ತಾನೆ. ಆಗ ಅದು ಇಷ್ಟಲಿಂಗವಾಗುತ್ತದೆ. ಅಂಥ ಇಷ್ಟಲಿಂಗ ನಷ್ಟವಾದರೆ ವಾತುಲಾಗಮದಲ್ಲಿ ಪ್ರಾಣಹತ್ಯೆ ಮಾಡಿಕೊಳ್ಳಬೇಕೆಂದಿರುವ ವಿಚಾರವನ್ನು ಷಟ್‌ಸ್ಥಲ ಬ್ರಹ್ಮಿ ಚೆನ್ನಬಸವಣ್ಣ ಒಪ್ಪುವುದಿಲ್ಲ.

*ಅಂಗದ ಮೇಲಣ ಲಿಂಗ ಹಿಂಗಿತ್ತೆಂದು*
*ಆತ್ಮ ಘಾತವ ಮಾಡಬೇಕೆಂಬ ಅಜ್ಞಾನಿಗಳು*
*ಅಂಗವಾವುದು ಲಿಂಗವಾವುದೆಂದವರೆತ್ತ ಬಲ್ಲರು ?*
*ಅಂಗವೆ ಆತ್ಮ, ಲಿಂಗವೆ ಸಂವಿತ್ತು,*
*ಎರಡರ ಸಂಬಂಧ ಸಂಚ ತಿಳಿಯದೆ ಲಿಂಗ ಹಿಂಗಿತ್ತೆಂಬವರಿಗೆ*
*ಪ್ರಾಣಲಿಂಗನಾಸ್ತಿ, ಪ್ರಸಾದವಲ್ಲಿಯದೋ*
*ಕೂಡಲ ಚೆನ್ನಸಂಗಮದೇವಾ.*

ಮೇಲಿನ ವಚನ ಅತ್ಯಂತ ಸ್ಪಷ್ಟವಾಗಿ ಅಂಗ–ಲಿಂಗಗಳ ಸಂಬಂಧವನ್ನು ತಿಳಿಸುತ್ತದೆ. ಇಷ್ಟೇ ಅಲ್ಲ, ಈ ಚರ್ಚೆ ಇನ್ನೂ ಮುಂದುವರಿದಿದೆ. ಜೇಡರ ದಾಸಿಮಯ್ಯನ ಈ ವಚನವನ್ನು ನೋಡಿ.

*ಮೆಳೆಯ ಮೇಲಣ ಕಲ್ಲು ಜಗದೆರೆಯನಾಗಬಲ್ಲುದೆ ?*
*ಮೆಳೆಶಿವಭಕ್ತನಾಗಬಲ್ಲುದೆ ?*
*ನಿಮ್ಮ ತನು ಮನ ಧನವನರಿಯದಿದ್ದಡೆ*
*ಸದುಭಕ್ತರಹರೆ ? ರಾಮನಾಥ.*

ಮೇಲಿನ ವಚನದಿಂದಲೇ ಸ್ಫೂರ್ತಿಗೊಂಡಂತಿದೆ ಪ್ರಭುಗಳ ಈ ವಚನ :

*ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು ಹಸಿವು ಹೋಹುದೆ ? ಅಂಗದ ಮೇಲೆ ಲಿಂಗಸ್ವಾಯತವಾದರೇನು ಭಕ್ತನಾಗಬಲ್ಲವೆ ? ಇಟ್ಟಕಲ್ಲು ಮೆಳೆಯ ಮೇಲೆ ಸಿಕ್ಕಿದೊಡೆ ಆ ಕಲ್ಲು ಲಿಂಗವೆ ? ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ? ಇಂತಪ್ಪವರ ಕಂಡೊಡೆ ನಾನು ನಾಚುವೆನಯ್ಯಾ ಗುಹೇಶ್ವರ.*

ಅಲ್ಲಮಪ್ರಭುಗಳ ವಚನ ಜೇಡರ ದಾಸಿಮಯ್ಯನಿಂದ ಸ್ಫೂರ್ತಿ ಪಡೆದಿದೆ ಎಂಬುದು ನಿಜ. ಆದರೆ ಪ್ರಭು ಮೂಲದ ಆಶಯವನ್ನು ಇನ್ನಷ್ಟು ಇಲ್ಲಿ ವಿಸ್ತರಿಸಿ ವಿಶದಗೊಳಿಸಿದ್ದಾರೆ. ಗುರು–ಲಿಂಗ ಜಂಗಮರೆಲ್ಲರ ಚರ್ಚೆಯನ್ನು ಇಲ್ಲಿ ಸೂಕ್ಷ್ಮವಾಗಿ ನಡೆಸಿದ್ದಾರೆ.

ಇದರ ವಿಸ್ತ್ರುತವಾದ ಚರ್ಚೆ ಚಿಕ್ಕಮಗಳೂರಿನಲ್ಲಿ ನಡೆದ ಅಖಿಲ ಭಾರತ ಮೂರನೆಯ ಶರಣ ಸಾಹಿತ್ಯ ಸಮ್ಮೇಳನದ ಗೋಷ್ಠಿಯ ನನ್ನ ಅಧ್ಯಕ್ಷ ಭಾಷಣದಲ್ಲಿದೆಯೆಂದು ಸೂಚಿಸ ಬಯಸುತ್ತೇನೆ.

ಹೊಟ್ಟೆಯ ಮೇಲೆ ಕಟ್ಟೋಗರ ಮೊಟ್ಟೆ ಕಟ್ಟಿಕೊಂಡರೆ ಹಸಿವು ಹಿಂಗೀತೆ ? ಅದನ್ನು ತಿಂದು ಅರಗಿಸಿಕೊಂಡಲ್ಲಿ ಮಾತ್ರ ಅದು ಸಾಧ್ಯವಾದೀತು. ಹಾಗೆಯೇ ಲಿಂಗವನ್ನು ಧರಿಸಿದ ಮಾತ್ರಕ್ಕೆ ಲಿಂಗಧಾರಿ ಆಗಲಿಲ್ಲ – ಲಿಂಗದ ಮಹತ್ವವನ್ನು ಅರಿತವನಿಗೆ ಮಾತ್ರ ಅದು ಇಷ್ಟಲಿಂಗವಾಗುತ್ತದೆ. ಇಲ್ಲದಿದ್ದರೆ ಮೆಳೆಯ ಮಧ್ಯೆ ಒಂದು ಕಲ್ಲು ಸಿಕ್ಕಿಕೊಂಡಂತೆ. ಈ ಲಿಂಗವೂ ಕೇವಲ ಒಂದು ಕಲ್ಲಾಗುತ್ತದೆ, ಆತ ಮೆಳೆಗಿಂತ ಕೀಳಾಗುತ್ತಾನೆ ಅಲ್ಲವೆ ? ಅಂಥ ನಿರರ್ಥಕವಾದ ಲಿಂಗವನ್ನು ದೀಕ್ಷೆಯ ಮೂಲಕ ಕೊಟ್ಟವನು ಖಂಡಿತ ಗುರು ಆಗಲಾರ. ಆತ ನೀಡಿದ ದೀಕ್ಷೆಯಿಂದ ಅದು ಇಷ್ಟಲಿಂಗವಾಗಬೇಕಿತ್ತು. ಹಾಗಾಗಲಿಲ್ಲವೆಂದರೆ ಅವನು ಗುರು ಕೂಡ ಅಲ್ಲ ಎಂದು ಪ್ರಭುದೇವರು ನಿರ್ದೇಶಿಸಿರುತ್ತಾರೆ.

ಈ ಚರ್ಚೆ ಇನ್ನೂ ಮುಂದುವರಿಯುತ್ತದೆ. ಲಿಂಗವನ್ನು ಕೊಟ್ಟ ಗುರು ಸತ್ತರೆ ನೀನು ಸಾಯುತ್ತೀಯೇನು ಎಂದೂ ಪ್ರಶ್ನೆ ಮೂಡುತ್ತದೆ. ಹಾಗೆಯೇ ಲಿಂಗವು ಛಿದ್ರವಾದರೆ ಬೇರೊಂದು ದೀಕ್ಷೆಯಿಂದ ಲಿಂಗವನ್ನು ಕಟ್ಟಿಕೊಂಡು ಪೂಜಿಸಬೇಕೆನ್ನುತ್ತಿದೆ ಆ ಧರ್ಮ. ಗುರು ಗೌರವಸ್ಥನಲ್ಲದಿದ್ದರೆ ಅಂಥವನಿಂದ ದೀಕ್ಷೆ ಮಾಡಿಸಿಕೊಳ್ಳಬಾರದೆಂದೂ ಸೂಚಿಸುತ್ತದೆ. ಇಷ್ಟೆಲ್ಲ ಆದ ಮೇಲೆ ನಾವು ಈ ಚರ್ಚೆಯ ಒಂದು ಘಟ್ಟವಾದ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆಯನ್ನು ಕೈಗೆತ್ತಿಕೊಂಡರೆ ಆಶ್ಚರ್ಯವಾಗುತ್ತದೆ.

ಕಲ್ಯಾಣದ ಬಸವಣ್ಣನವರ ಮನೆಗೆ ಸಿದ್ಧರಾಮನನ್ನು ಕರೆತಂದು ಪ್ರಭು ಆ ಮನೆಯನ್ನು ಪ್ರವೇಶಿಸುತ್ತಿರುವಾಗ ಸಿದ್ಧರಾಮನಿಗೆ ಲಿಂಗದೀಕ್ಷೆಯಾಗಿಲ್ಲ ಎಂಬ ಆಕ್ಷೇಪ ಚನ್ನಬಸವಣ್ಣನಿಂದ ಬರುತ್ತದೆ. ಆಗ ಪ್ರಭು ಸಿದ್ಧರಾಮನಂಥ ಶಿವರೂಪಿಗೆ ಲಿಂಗದ ಅವಶ್ಯಕತೆಯಿದೆಯೆ ಎಂದು ವಿವರಿಸಿದಾಗ ಚೆನ್ನಬಸವಣ್ಣ ತಾನು ಅದನ್ನು ಒಪ್ಪಿ *'ಅಂಗಕ್ಕೆ ಲಿಂಗವೆಂದಲ್ಲದೆ, ಲಿಂಗಕ್ಕೆ ಲಿಂಗವೆಂದೇನು ಹೇಳಾ'* ಎಂದು ಅಭಿಮಾನದಿಂದ ಉದ್ಗರಿಸುತ್ತಾನೆ. ಲಿಂಗಸ್ವರೂಪವೇ ಆದವನಿಗೆ ಪ್ರತ್ಯೇಕ ಲಿಂಗದ ಅಗತ್ಯವಿದೆಯೇ ಎಂದು ಸಿದ್ಧರಾಮನನ್ನು ಕುರಿತು ಷಟ್‌ಸ್ಥಲ

ಚಕ್ರವರ್ತಿ ಚೆನ್ನಬಸವಣ್ಣನೇ ಘೋಷಿಸುವುದನ್ನು ಕುರಿತು ಷಟ್‌ಸ್ಥಲ ಅಷ್ಟಾವರಣಗಳಲ್ಲಿ ಒಂದಾದ ಲಿಂಗದ ಅಗತ್ಯವನ್ನು ಹೀಗೆ ಮೀರುವ ನಿಲುವು - ಸಾಧ್ಯವಾಗಿರುವುದು ವೈಚಾರಿಕತೆ ಯಿಂದಲ್ಲದೆ ಮತ್ತಾವುದರಿಂದ ?

ಇದಕ್ಕಿಂತ ಸ್ವಾರಸ್ಯವಾದುದ್ದು, ಗುರು ಲಿಂಗ ಜಂಗಮಗಳನ್ನು ಶರಣ ಧರ್ಮದ ಮೂರು ಶಿಖರಗಳೆಂದು ಗುರುತಿಸಲಾಗುತ್ತಿದ್ದು ಅಷ್ಟಾವರಣಗಳಲ್ಲಿ ಈ ಮೂರರ ಪಾತ್ರವನ್ನದು ಧ್ವನಿಸುತ್ತಿರುವುದು ಈ ಮೂರನ್ನೂ ಗೆಲ್ಲುವ ಮಹಾಮಂತ್ರಸೂತ್ರವಾಗಿ ಕಾಯಕದ ಹಾಗೂ ದಾಸೋಹದ ಮಹಿಮೆಯನ್ನು ಅವರು ಗುರುವೆನಿಸಿಕೊಂಡರು.

*ಕಾಯಕದಲ್ಲಿ ನಿರತನಾದಡೆ*
*ಗುರುದರುಶನವಾದಡೂ ಮರೆಯಬೇಕು*
*ಲಿಂಗಪೂಜೆಯಾದಡೂ ಮರೆಯಬೇಕು*
*ಜಂಗಮ ಮುಂದಿರ್ದಡೂ ಹಂಗು ಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ !*
*ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು.*

ಆಯ್ದಕ್ಕಿ ಮಾರಯ್ಯನ ಈ ಮೇಲಣ ವಚನ ಶರಣರ ವೈಚಾರಿಕತೆಯ ನಿರ್ಭೀತ ಸ್ಪಷ್ಟ ದೃಷ್ಟಿಯನ್ನು ವಿಶದಪಡಿಸುತ್ತದೆ. ಕಾಯಕದಲ್ಲಿ ನಿರತನಾದರೆ ಯಾವ, ಗುರುಲಿಂಗ ಜಂಗಮಗಳು ಅಷ್ಟಾವರಣದ ಪ್ರಧಾನ ಮೂರು ಮಹತ್ವದ ಅಂಶಗಳಾಗಿವೆಯೋ ಅವುಗಳನ್ನು ಮೀರಿ ಶರಣ ನಿಲ್ಲಬಹುದೆನ್ನುವ ವಿಚಾರ ಶರಣರ ವೈಚಾರಿಕತೆಗೆ ಸ್ಪಷ್ಟ ಉದಾಹರಣೆಯಾಗಿದೆ.

ಶರಣರು ಮೂಢನಂಬಿಕೆಗಳನ್ನು ತಮ್ಮ ವೈಚಾರಿಕತೆ ಯಿಂದ ಖಂಡಿಸಿದವರು, ರಾಹುಕಾಲ ಗುಳಿಕಕಾಲಗಳೆಂದು ಶಕುನವನ್ನು ನೋಡುತ್ತೇವೆಂದು ನಂಬಿದವರನ್ನು ಮೂಢ ನಂಬಿಕೆಯಿಂದ ಹಾಳಾಗುವರೆಂದು ವಿಡಂಬಿಸಿದರು. ಆಷಾಢ ಭೂತಿತನದ ಗುರುಜಂಗಮರ ಆಚರಣೆಗಳನ್ನು ದಿಟ್ಟವಾಗಿ ಖಂಡಿಸಿದರು. ಉಣ್ಣದ ಲಿಂಗಕ್ಕೆ ಬೋನವಿಡುವ ಉಂಬ ಜಂಗಮನನ್ನು ದೂರ ಅಟ್ಟುವ ಡಂಬಾಚರಣೆಯನ್ನು ದಿಟ್ಟವಾಗಿ ಅಲ್ಲಗಳೆದರು. ಅವರ ವೈಚಾರಿಕತೆ ಎಷ್ಟು ಪ್ರಖರವಾದದ್ದೆಂದರೆ ಅಲ್ಲಮಪ್ರಭುಗಳು ಶಿವಾನುಭವ ಬೋಧೆ ಮಾಡುತ್ತಿದ್ದಾಗ ಆ ಅನುಭಾವದ ಆನಂದದಲ್ಲಿ ಮುಳುಗಿಹೋಗಿ ತನ್ನ ಕರ್ತವ್ಯವನ್ನೇ ಮರೆತ ಆಯ್ದಕ್ಕಿ ಮಾರಯ್ಯನನ್ನು ಆತನ ಮಡದಿ ತುಂಬಿದ ಅನುಭವ ಮಂಟಪದಲ್ಲಿ ಬಂದು ಎಚ್ಚರಿಸುವ ಮತ್ತು ಕಾಯಕ ಮುಖಿಯಾಗಿ ಮಾಡುವ ಸಂದರ್ಭ ಅಪರೂಪವಾದದ್ದು.

ಅನುಭಾವವನ್ನೂ ಅಮಲಾಗಿ ಮಾಡಿಕೊಂಡಿದ್ದ ಗಂಡ ಆಯ್ದಕ್ಕಿ ಮಾರಯ್ಯನನ್ನು, ತುಂಬಿದ ಅನುಭವ ಮಂಟಪದ ಅನುಭಾವಗೋಷ್ಠಿಯಲ್ಲಿ ಲಕ್ಕಮ್ಮ ಬಂದು ಎಬ್ಬಿಸುತ್ತಾಳೆ. ಕಾಯಕ ನಿಂದಿತ್ತು ಹೋಗಯ್ಯ ಎನ್ನ ಆಳ್ದನೆ ಎಂದು. ಎಚ್ಚೆತ್ತವನಂತೆ ಹೊರಟ ಮಾರಯ್ಯ ಮತ್ತೆ ತನ್ನ ಕಾಯಕ ಮಾಡದೆ (ತನುವನ್ನು ಬಳಲಿಸದೆ) ಬಸವಣ್ಣನವರ ಮಹಾಮನೆಯಲ್ಲಿ ರಾಶಿ ಹಾಕಿದ್ದ ಅಕ್ಕಿಯನ್ನು ತುಂಬಿಕೊಂಡು ಬಂದಾಗ ಈಸಕ್ಕಿಯಾಸೆ ನಿನಗೇಕಯ್ಯ ? ಆಸೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಎಂದು ಛೇಡಿಸಿದಳು.

ಮೇಲಿನ ಸಂದರ್ಭ ಹೆಂಡತಿ ಗಂಡನನ್ನು ಎಚ್ಚರಿಸಿ ಧರ್ಮ ಮಾರ್ಗದಲ್ಲಿ ನಡೆಯುವಂತೆ ಮಾಡುವ ಆದರ್ಶ ವೈಚಾರಿಕತೆಯನ್ನು ಧ್ವನಿಸುತ್ತದೆ. ಅಷ್ಟೇ ಅಲ್ಲ, ಕಾಯಕಮಾಡಿ ತೃಪ್ತಿ ಪಡೆದುದಾಯಿತು. ಇನ್ನು ಕೈಲಾಸಕ್ಕೆ ಹೋಗಿ ಬಿಡಬಹುದಲ್ಲವೆ ಎಂದು ಮೋಳಿಗೆಯ ಮಾರಯ್ಯ ತನ್ನ ಮಡದಿಯನ್ನು ಪ್ರಶ್ನಿಸಿದಾಗ ಆಕೆ ಹೇಳಿದ್ದೇನು ? ಇಲ್ಲಿ ಕರ್ಮ ಅಲ್ಲಿ ನಿಷ್ಕರ್ಮವೆ ? ಅಲ್ಲಿ, ಇಲ್ಲಿ ಎಂಬ ಉಭಯವೇಕೆ ? ಇಲ್ಲೇ ಕೈಲಾಸ ವೈಕುಂಠಗಳೆಲ್ಲ ಎಂಬುದನ್ನು ಸ್ಪಷ್ಟಪಡಿಸಿದ ಮಹಾದೇವಿಯ ಮಾತುಗಳು ಕೇವಲ ವೈಚಾರಿಕತೆಯ ಪರಾಕಾಷ್ಠೆಯನ್ನೇ ಅಲ್ಲದೆ ಅನುಭಾವದ ಎತ್ತರವನ್ನು ಧ್ವನಿಸುತ್ತದೆ.

ಶರಣರ ವೈಚಾರಿಕತೆ ಶುಷ್ಕವಾದಿಗಳ ಪೊಳ್ಳು ವಿಚಾರಗಳ ಮುಳ್ಳುಹಂದಿಯಾಟವಲ್ಲ; ಬೆಳಕನ್ನು ಅರಸುವ ಮತ್ತು ಕಾಣುವ ಹಾಗೆ ಕಂಡದನ್ನು ಇತರರಿಗೂ ಕಾಣಿಸುವ ಮತ್ತೆ ಕತ್ತಲನ್ನು ಗೆದ್ದು ಬೆಳಕನ್ನು ಸೇರುವ ಬೆಳಕಾಗುವ ಕ್ರಿಯೆಯಾಗಿದೆ. ಆದ್ದರಿಂದಲೇ ಅವರಿಗೆ ಅರಿವು ಆಚಾರವಾಗಿತ್ತು. ಆಚಾರ-ವಿಚಾರದ ಬೆಳಕಿನಿಂದ ದೀಪ್ತವಾಗಿತ್ತು. ಆದ್ದರಿಂದಲೇ ಆ ಅನುಭಾವ ಮಂಟಪದಲ್ಲಿ ಅಲ್ಲಮ ಮೊದಲಾಗಿ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮೋಳಿಗೆ ಮಾರಯ್ಯ, ಮಹಾದೇವಿ, ಆಯ್ದಕ್ಕಿ ಮಾರಯ್ಯ, ಲಕ್ಕಮ್ಮ, ಮೇದರ ಕೇತಯ್ಯ, ಡೋಹರ ಕಕ್ಕಯ್ಯ, ಸಕಲೇಶ ಮಾದರಸ, ಉರಿಲಿಂಗಪೆದ್ದಿ, ಕೋಲ ಶಾಂತಯ್ಯ, ಶಿವಲೆಂಕ ಮಂಚಣ್ಣ, ನೀಲಮ್ಮ, ವೀರಗೊಲ್ಲಾಳ, ಗಜೇಶ ಮಾಸಣಯ್ಯ, ಗುಪ್ತಮಂಚಣ್ಣ, ಮೇದರ ಕೇತಯ್ಯ ಮೊದಲಾದ ಶರಣರು ಜಾತಿ ಮತಗಳ ಭೇದವಿಲ್ಲದೆ ಗಂಡು-ಹೆಣ್ಣು ಎಂಬ ಭೇದವಿಲ್ಲದೆ, ಅರಸಾಳೆಂಬ ತರತಮ ಭಾವವಿಲ್ಲದೆ ಸಮಾನ ವೇದಿಕೆಯಲ್ಲಿ ಮಾನವ ಘನತೆಯಿಂದ ಬದುಕುವ ದಿವ್ಯ ವಾತಾವರಣ ಇತ್ತು.

ಅಂಥ ಅರಿವಿನಿಂದ ದೀಪ್ತವಾದ್ದರಿಂದ ಆ ವೈಚಾರಿಕತೆ ಮಾತನ್ನು ಜ್ಯೋತಿರ್ಲಿಂಗವಾಗಿಸಿತ್ತು ಎನ್ನಬಹುದು.

(ಕೃಪೆ : ದೇಗುಲ ಸಿರಿ) ❑

# ಶಿವನಾಗಮಯ್ಯ

– ಪ್ರೊ. ಎನ್. ಬಸವರಾಧ್ಯ *

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಸಾಮಾಜಿಕ ಆರ್ಥಿಕ ಕ್ರಾಂತಿ ಜನತೆಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದ ಸಂಗತಿ ಸರ್ವಶ್ರುತವಾದುದು. ಈ ಕ್ರಾಂತಿಯ ಮೂಲಪುರುಷರು ಬಸವಣ್ಣನವರು ಎಂಬುದು ಎಲ್ಲರಿಗೂ ತಿಳಿದ ವಿಷಯ. ಬಸವಣ್ಣನವರ ನೇತೃತ್ವದಲ್ಲಿ ಸಮಾವೇಶಗೊಂಡ ಭಕ್ತ ಸಮೂಹದಲ್ಲಿ ವಿವಿಧ ವ್ಯಕ್ತಿಯ ವಿವಿಧ ಧರ್ಮದ ವ್ಯಕ್ತಿಗಳು ಸೇರ್ಪಡೆಯಾಗಿದ್ದುದು ಸರಿಯಷ್ಟೆ. ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗಿದ್ದ ಜನತೆಯನ್ನು ಮೇಲೆತ್ತಿ ಅವರ ಆತ್ಮೋದ್ಧಾರ ಮಾರ್ಗವನ್ನು ತೋರಿಸುವುದೇ ಬಸವಣ್ಣನವರ ಮುಖ್ಯಧ್ಯೇಯ ವಾಗಿತ್ತು. ದೀನದಲಿತೋದ್ಧಾರವೇ ಅವರ ಜೀವಿತದ ಮುಖ್ಯ ದೃಷ್ಟಿಯಾಗಿತ್ತು ಎಂಬುದು ನಿರ್ವಿವಾದ.

ದಲಿತ ಎಂದರೆ ಹಿಂದುಳಿದವರು, ದಮನಕ್ಕೆ ಒಳಗಾದವನು, ಶೋಷಿತನಾದವನು, ಆರ್ಥಿಕವಾಗಿ ಸಾಮಾಜಿಕವಾಗಿ ಕೆಳಮಟ್ಟದವನು ಎಂದು ಅರ್ಥ. ಹನ್ನೆರಡನೆಯ ಶತಮಾನದಲ್ಲಿ ಜಾತಿಮತಗಳ ಪ್ರಭಾವ ಬಹಳವಾಗಿತ್ತು. ಜಾತಿಯಿಂದ ಕೀಳಾದವರು ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗಿದ್ದರು. ಮೇಲು ಕೀಳೆಂಬ ಭಾವನೆ ತಾನೇ ತಾನಾಗಿತ್ತು. ಈ ಅಸಮಾನತೆಯನ್ನು ಹೋಗಲಾಡಿಸಿ ಸರ್ವರಿಗೂ ಸಮಾನ ಸೌಲಭ್ಯಗಳನ್ನು ದೊರಕಿಸಿಕೊಟ್ಟವರು ಬಸವಣ್ಣನವರು. ಅವರ ಹಲವಾರು ವಚನಗಳು ಇದನ್ನೇ ಪ್ರತಿಪಾದಿಸುತ್ತಿವೆ :

*ಹಾವು ತಿಂದವರ ನುಡಿಸಬಹುದು,*
*ಗರ ಹೊಡೆದವರ ನುಡಿಸಬಹುದು;*
*ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ!*
*ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರು*
*ಕೂಡಲಸಂಗಮದೇವಾ !*

*(ಬ.ಸ.ವ. ೧೩೨)*

*ಕುದುರೆ ಸತ್ತಿಗೆಯವರ ಕಂಡರೆ ಹೊರಳಿಬಿದ್ದು ಕಾಲ ಹಿಡಿದವರು*
*ಬಡಭಕ್ತರ ಬಂದರೆ ಎಡೆಯಿಲ್ಲ ಅತ್ತ ಸನ್ನಿ ಎಂಬರು*
*ಎನ್ನೊಡೆಯ ಕೂಡಲಸಂಗಯ್ಯನವರ ತಡೆಗೆಡಹಿ*
*ಮೂಗಕೊಯ್ಯದೆ ಮಾಣ್ಬನೆ ?*

*(ಬ.ಷ.ವ. ೪೧೩)*

ಬಡವ ಶ್ರೀಮಂತರ ಅಂತರ ಕುರಿತು ಅವರು ಹಾಡಿದ ವಚನಗಳು ಇವು. ಇನ್ನು ಜಾತಿ ಕುಲ ಪಂಥಗಳ ಬಗೆಗೆ ಅವರ ಒಲವು ಇಂತಿದೆ :

*ಅಪ್ಪನು ಡೋಹಾರ ಕಕ್ಕಯ್ಯನಾಗಿ,*
*ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ ?*
*ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಯ*
*ಸದ್ಗುಣವ ನಾನರಿರಿವೆನೆನಯ್ಯಾ*
*ಕಷ್ಟಜಾತಿಯ ಜನ್ಮದಲ್ಲಿ ಜನಿಸಿದೆ.*
*ಎನಗಿದು ವಿಧಿಯೆ ಕೂಡಲಸಂಗಮದೇವಾ ?*

*(ಬ.ಷ.ವ. ೩೪೨)*

*ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ*
*ಹೊರೆಯ ಹೊರಿಸದಿರಯ್ಯ*
*ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ*
*ದಾಸಯ್ಯ ಶಿವದಾನವನೆರೆಯ ನೋಡಯ್ಯಾ*
*ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ, ಉನ್ನತ ಮಹಿಮಾ*
*ಕೂಡಲಸಂಗಮದೇವಾ ಶಿವಧೋ ಶಿವಧೋ !*

*(ಬ.ಷ.ವ. ೩೪೩)*

*ಅಪ್ಪನು ನಮ್ಮ ಮಾದರ ಚೆನ್ನಯ್ಯ,*
*ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,*
*ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ,*
*ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ;*
*ಎನ್ನನೇತಕ್ಕರಿಯಿರಿ ಕೂಡಲ ಸಂಗಯ್ಯಾ ?*

*(ಬ.ಷ.ವ. ೩೪೮)*

* ಮಾಜಿ ಅಧ್ಯಕ್ಷರು ಕನ್ನಡ ಸಾಹಿತ್ಯ ಸಾಹಿತ್ಯ ಪರಿಷತ್ತು, ೭೪೩, ೧೨ನೇ ಮುಖ್ಯರಸ್ತೆ, ಮೂರನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು – ೧೦.

*ಭಕ್ತಿಯಿಲ್ಲದ ಬಡವ ನಾನಯ್ಯಾ:*
*ಕಕ್ಕಯ್ಯನ ಮನೆಯಲು ಬೇಡಿದೆ*
*ಚನ್ನಯ್ಯನ ಮನೆಯಲು ಬೇಡಿದೆ*
*ದಾಸಯ್ಯನ ಮನೆಯಲೂ ಬೇಡಿದೆ*
*ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದರೆ*
*ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ !*

*(ಬ.ಷ.ವ. ೩೪೯)*

*ಹಿರಿಯಯ್ಯ ಶ್ವಪಚಯ್ಯ,*
*ಕಿರಿಯಯ್ಯ ಡೋಹಾರ ಕಕ್ಕಯ್ಯ*
*ಅಯ್ಯಗಳಯ್ಯನು ನಮ್ಮ ಮಾದರ ಚೆನ್ನಯ್ಯನು*
*ಕೂಡಲ ಸಂಗಮದೇವಾ*
*ನಿಮ್ಮ ಶರಣರೊಲಿದೆನ್ನ ಸಲಹುವರಾಗಿ.*

*(ಬ.ಷ.ವ. ೩೫೦)*

*ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದನುಂಬವನ ಕುಲವೇನೋ?*
*ದೇವ ನೀನೊಲಿದವನ, ಸ್ವಾಮಿ ನೀ ಹಿಡಿದವನ ಕುಲವೇನೊ?*
*ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ ನಿಮ್ಮಿಂದಧಿಕ,*
*ಕೂಡಲಸಂಗಮದೇವಾ !*

*(ಬ.ಷ.ವ. ೭೩೧)*

*ನೆಲನೊಂದೆ ಹೊಲಗೇರಿ ಶಿವಾಲಯಕೆ,*
*ಜಲವೊಂದೆ ಶೌಚಾಚಮನಕ್ಕೆ,*
*ಕುಲವೊಂದೆ ತನ್ನ ತಾನರಿದವಂಗೆ,*
*ಫಲವೊಂದೆ ಷಡುದರುಶನಮುಕ್ತಿಗೆ*
*ನಿಲವೊಂದೆ ಕೂಡಲಸಂಗಮದೇವಾ,*
*ನಿಮ್ಮನರಿದವಂಗೆ.*

*(ಬ.ಷ.ವ. ೮೨೮)*

ಬಸವಣ್ಣನವರು ಈ ಕ್ರಾಂತಿಕಾರಕ ಮನೋಭಾವದಿಂದ ದಿಟ್ಟನಿಲುವಿನಿಂದ ದಲಿತೋದಯವನ್ನು ಸಾಧಿಸಿದರು. ಈ ದಲಿತ ಶ್ರೇಣಿಗೆ ಸೇರಿದವರಲ್ಲಿ ಪ್ರಸ್ತುತ ಶಿವನಾಗಮಯ್ಯನೂ ಒಬ್ಬನಾಗಿದ್ದಾನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಿವನಾಗಮಯ್ಯನ ಕತೆ ಹರಿಹರನ ಬಸವರಾಜ ದೇವರ ರಗಳೆ (ಸು. ೧೨೦೦), ಭೀಮಕವಿಯ ಬಸವ ಪುರಾಣ (ಕ್ರಿ.ಶ. ೧೩೬೯), ವಿರಕ್ತ ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರ ಪುರಾಣ (ಸು. ೧೬೧೬), ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ (ಕ್ರಿ.ಶ. ೧೬೭೨), ಉತ್ತರದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ (ಕ್ರಿ.ಶ. ೧೬೭೯) ಮೊದಲಾದ ಪ್ರಾಚೀನ ಗ್ರಂಥಗಳಲ್ಲೂ, ಡಾ॥ ಫ.ಗು. ಹಳಕಟ್ಟಿ ಅವರ ಶಿವಶರಣರ ಚರಿತ್ರೆಗಳು, ಅಮರಗಣಾಧೀಶ್ವರರ ಚರಿತ್ರೆಯಲ್ಲೂ ಕಂಡುಬರುತ್ತದೆ. ಆದರೆ ಶಿವನಾಗಮಯ್ಯನಿಗೆ ಸಂಬಂಧಿಸಿದ ಇತಿವೃತ್ತಗಳು ಮಾತ್ರ ಈ ಯಾವ ಕಾವ್ಯಗಳಲ್ಲೂ ಉಲ್ಲೇಖವಾಗಿಲ್ಲ. ಶಿವನಾಗಮಯ್ಯ ಎಲ್ಲಿಯವನು ? ಈತನ ತಂದೆ ತಾಯಿಗಳು ಯಾರು ? ಈತನ ವೃತ್ತಿ ಯಾವುದು ? ಈತನ ಕುಲ ಯಾವುದು ? ಎಂಬ ವಿಷಯಗಳು ಎಲ್ಲಿಯೂ ನಿರೂಪಿತವಾಗಿಲ್ಲ. ಬಸವಣ್ಣನವರೇನೋ ಶಿವನಾಗಮಯ್ಯನನ್ನು ಅತ್ಯಂತ ಗೌರವಭಾವದಿಂದ ಕಾಣುತ್ತಿದ್ದರೆಂದು ಪ್ರಾಚೀನ ಕಾವ್ಯಗಳಲ್ಲಿ ಉಕ್ತವಾಗಿರುವುದು ಸರಿಯಷ್ಟೆ. ಆದರೆ ಒಂದು ಅತ್ಯಂತ ಸೋಜಿಗದ ಸಂಗತಿ ಎಂದರೆ ಬಸವಣ್ಣನವರ ವಚನಗಳಲ್ಲಿ ಶಿವನಾಗಮಯ್ಯನ ಪ್ರಸ್ತಾಪವೇ ಇಲ್ಲ. ಇದಕ್ಕೆ ಕಾರಣವಾದರೂ ಏನು ?

ಭೀಮಕವಿಯ ಬಸವ ಪುರಾಣದಲ್ಲಿ ಶಿವನಾಗಮಯ್ಯನ ಪ್ರಕರಣ ದೀರ್ಘವಾಗಿಯೇ ಬಂದಿದೆ. ಆದರೆ ಈತ ಕಥೆಯ ಮಧ್ಯೆ ಹಲವಾರು ಶಿವಶರಣ ಶಿವಶರಣೆಯರ ಪ್ರಸಂಗಗಳನ್ನು ಪೋಣಿಸಿದ್ದಾನೆ. ಪ್ರಕೃತ ಬಸವ ಪುರಾಣದಲ್ಲಿ ಬಂದಿರುವ ಶಿವನಾಗಮಯ್ಯನ ಕಥೆಯ ಸಾರಸರ್ವಸ್ವವನ್ನು ಇಲ್ಲಿ ನಿರೂಪಿಸಲಾಗಿದೆ.

ಸದ್ಭಕ್ತಿ ಸದ್ಗುಣಯುಕ್ತನಾದ ಶಿವನಾಗಮಯ್ಯನು ಬಸವಣ್ಣನಿಂದ ನಮಸ್ಕಾರ ಮಾಡಿಸಿಕೊಂಡು ಸೇವೆಯನ್ನು ಕೈಕೊಳ್ಳುತ್ತ ಸುಖದಿಂದಿದ್ದನು. ಇದನ್ನು ಕಂಡ ಬ್ರಾಹ್ಮಣರು ಅಸಹ್ಯಪಟ್ಟುಕೊಂಡು ಬಿಜ್ಜಳನಿಗೆ "ಎಲೈ ರಾಜನೆ, ಬಸವಣ್ಣನು ವಿಪ್ರಾಚಾರವನ್ನು ಬಿಟ್ಟು ಶಿವನಾಗಮಯ್ಯನನ್ನು 'ಹಿರಿಯಭಕ್ತರು ಹಿರಿಯಭಕ್ತರು' ಎಂದು ಗೌರವಿಸಿ ಅವರ ಪಾದಗಳಿಗೆ ನಮಸ್ಕರಿಸುತ್ತಿದ್ದಾನೆ. ಅವರು ಉಂಡು ಮಿಕ್ಕದ್ದನ್ನು ತಾನು ಸೇವಿಸುತ್ತಿದ್ದಾನೆ. ಶಿವನಾಗಮಯ್ಯನನ್ನು ಹಾಡಿ ಹೊಗಳಿ ಊರಲ್ಲೆಲ್ಲಾ ಮೆರವಣಿಗೆ ಮಾಡಿಸಿಕೊಂಡು ಬರುತ್ತಿದ್ದಾನೆ. ನಮ್ಮನ್ನು ಆತನು ಗಣನೆಗೇ ತೆಗೆದುಕೊಂಡಿಲ್ಲ. ಈ ಕಲ್ಯಾಣ ನಗರಿಯೆಲ್ಲ ಹೊಲಸಾಗಿ ಹೋಯಿತು. ವರ್ಣಾಶ್ರಮಗಳೆಲ್ಲ ಕೆಟ್ಟು ಹೋದವು. ನೀತಿಗಳೆಲ್ಲ ನಿರ್ನಾಮವಾದುವು. ಧರ್ಮ ಕುಂಠಿತವಾಯಿತು. ಯಜ್ಞಾದಿ ಕರ್ಮಗಳೆಲ್ಲ ನಿಂತುಹೋದವು.

ದೇಶದಲ್ಲಿಯ ಈ ಪಾಪಗಳೆಲ್ಲ ರಾಜನಿಗೆ ಹತ್ತಿಕೊಳ್ಳುತ್ತವೆ. ಇವನ್ನು ಪರಿಹರಿಸದಿದ್ದರೆ ರಾಜನ ಪಾಪಗಳೆಲ್ಲ ಪುರೋಹಿತರಿಗೆ ಹೇರಿಕೊಳ್ಳುತ್ತವೆ. ರಾಜೋಗತಧರ್ಮ ಎಂಬುದನ್ನು ನೀವು ಬಲ್ಲಿರಲ್ಲವೆ ? ನಾವು ಇರುವ ವಿಷಯವನ್ನು ನಿಮಗೆ ಅರಿಕೆ ಮಾಡಿಕೊಂಡಿದ್ದೇವೆ" ಎಂದು ಹೇಳಿದರು. ಅದನ್ನು ಕೇಳಿ ಕೋಪಗೊಂಡ ಬಿಜ್ಜಳ ಬಸವಣ್ಣನನ್ನು ಕೂಡಲೇ ಕರೆತರುವಂತೆ ಆಜ್ಞಾಪಿಸಿದನು.

ಶಿವನಾಗಮಯ್ಯನನ್ನು ಪಲ್ಲಕ್ಕಿಯ ಮೇಲೆ ಕೂರಿಸಿ ಕೊಂಡು ಬರುತ್ತಿದ್ದುದನ್ನು ವಿಪ್ರರು ನೋಡಿದರು. ಆ ದೃಶ್ಯವನ್ನು ನೋಡುವಂತೆ ರಾಜನಿಗೂ ಹೇಳುವರು. ಹೇಗಾದರೂ ಆಗಲಿ ಅರಮನೆಯೊಳಕ್ಕೆ ಮಾತ್ರ ಅವರನ್ನು ಬಿಡಬಾರದು ಎಂದು ಎಚ್ಚರಿಸುವರು. ಶಿವನಾಗಮಯ್ಯನನ್ನು ಹೊತ್ತ ಪಲ್ಲಕ್ಕಿ ಅರಮನೆಯ ಬಳಿಗೆ ಬರುತ್ತಲೇ ಅವರನ್ನು ಒಳಗೆ ಬರಲೀಸದೆ ಅಡ್ಡಿಮಾಡಲು ಬಸವಣ್ಣ ತನ್ನ ಉತ್ತರೀಯವನ್ನು ಹಾಸಿ ಶಿವನಾಗಮಯ್ಯನನ್ನು ಅಲ್ಲಿಯೇ ಕುಳ್ಳಿರಿಸಿ ತಾನೊಬ್ಬನೇ ಓಲಗಕ್ಕೆ ಹೋಗಿ ತನ್ನನ್ನು ಕರೆಸಿದುದಕ್ಕೆ ಕಾರಣವೇನೆಂದು ರಾಜನ್ನು ಕೇಳುವನು. ಕಲುಷಿತನಾನಾದ ಬಿಜ್ಜಳ "ಎಲೈ ಬಸವಣ್ಣ ಅಷ್ಟಾದಶಕುಲಾಚಾರ ಪದ್ಧತಿಗಳನ್ನೆಲ್ಲ ನೀನು ಹೀಗೆ ಕೆಡಿಸಬಹುದೆ? ಹೊಲೆಗಲಸಿ ಕುಳಸಂಕರವನ್ನುಂಟುಮಾಡಿ ಕಲ್ಯಾಣವನ್ನು ಈ ರೀತಿ ಹಾಳುಮಾಡುಬಹುದೆ ? ನೀನಾದರೋ ಪರಮಶಿವಭಕ್ತ. ನೀನೇ ನೀತಿ ನಿಯಮಗಳನ್ನು ಅತಿಗಳೆದರೆ ರಾಜ್ಯದಲ್ಲಿ ಮಳೆಬೆಳೆಗಳಾಗುತ್ತವೆಯೆ ? ಇನ್ನು ಮೇಲಾದರೂ ಇಂತಹ ಕಾರ್ಯಗಳನ್ನು ಮಾಡಬೇಡ" ಎಂದು ಬುದ್ಧಿವಾದವನ್ನು ಹೇಳಿದನು. ಅದನ್ನು ಕೇಳಿದ ಬಸವಣ್ಣ :

*ಪುಣ್ಯಹೀನನ ಕೈಯಲ್ಲಿದ್ದ ಹಿ । ರಣ್ಯವೊಡ್ಡಾಗಿಪ್ಪ ಪಿರಿಯೊಳ*
*ಗಣ್ಯ ಶಿವನಾಕೃತಿಯೊಳಿಹ ಭಕ್ತನು ಭವಿಯ ಕಣ್ಗೆ*
*ಗಣ್ಯ ಮಾನಸನಾಗಿ ತೋರ್ಪನು । ಗಣ್ಯನೇ ಅಂತಾಗಿ ಶರಣ*
*ಶ್ರೇಣ್ಯನುನ್ನತ ಮಹಿಮೆಯು ಭಾವಿಸುವೊಡರಿಯಳ್ಗೆ ॥*

*(ಬ.ಪು. ೫೫–೨೧)*

*ಸುರನದಿಗೆ ಪಳ್ಳಂಗಳೆಣೆಯೇ । ಸುರಗಿರಿಗೆ ಬೆಟ್ಟಂಗಳೆಣೆಯೇ*
*ಸರಿಯೆ ಸುರಧೇನುಗೆ ಪಶುಗಳಹಿಪತಿಗಹಿಗಳೆಣೆಯೆ*
*ಹರನೊಡನೆ ಮೇಣಿತರ ದಿವಿಜರು ।*
*ಸರಿಯಹರೆ ಶಿವನಾಗಮಯ್ಯಗೆ*
*ದುರುಳ ಭೂಸುರರೀ ಧರೆಯೊಳೆಣೆಯಲ್ಲದಂತೆನಲು ॥*

*(ಬ.ಪು. ೫೫–೨೩)*

ಎಂದು ಬಡಗಿ ಮಾಚಲದೇವಿ, ಶ್ರೀಪತಿಪಂಡಿತ, ಹಾವಿನಹಾಳ ಕಲ್ಲಿದೇವ, ಬಿಬ್ಬಿ ಬಾಚಯ್ಯ, ಮಾದರ ಧೂಳಯ್ಯ, ಸಾಮವೇದಿ, ಉದ್ಭಟ, ಡೋಹರ ಕಕ್ಕಯ್ಯ, ಕೆಂಭಾವಿ ಭೋಗಯ್ಯ, ಗುಡ್ಡವ್ವೆ ಮೊದಲಾದ ಶರಣ ಶರಣೆಯರ ಕಥೆಗಳನ್ನು ನಿರೂಪಿಸುವನು. ಕಮಲವು ನೀರಿನಲ್ಲಿ ಹುಟ್ಟಿದರೂ ಅದು ಪೂಜಾರ್ಹ ವಾಗಲಿಲ್ಲವೆ ? ಕಟ್ಟಿಗೆಯಲ್ಲಿ ಹುಟ್ಟಿದ ಬೆಂಕಿ ಸರ್ವರಿಗೂ ಪಾವನವಾಗಲಿಲ್ಲವೆ ? ಇದೇ ರೀತಿ ಅಂತ್ಯಜನಾದರೂ ಶಿವಭಕ್ತನಾದ ಮೇಲೆ ಉತ್ತಮನಾಗಲಿಲ್ಲವೆ? ಬ್ರಾಹ್ಮಣಗುರುವಾದ ವ್ಯಾಸ ಕಬ್ಬಿಗನಲ್ಲವೆ ? ವಸಿಷ್ಠನು ಊರ್ವಶಿಯ ಮಗನಲ್ಲವೆ ? ಮಾತಂಗಋಷಿ ಮಾತಂಗಿಯ ಮಗನಲ್ಲವೆ ? ಇವರೆಲ್ಲರೂ ಹೀನಕುಲದಲ್ಲಿ ಹುಟ್ಟಿದರೂ ಶಿವಾರ್ಚನೆಯಿಂದ ಪಾವನರೆನಿಸಿ ಕೊಂಡು ವಿಖ್ಯಾತಿ ಹೊಂದಲಿಲ್ಲವೆ ? ಎಂದು ಉತ್ತರಿಸಿದರು. ಇದನ್ನೆಲ್ಲಾ ಕೇಳಿದ ರಾಜ ಸಾವಧಾನದಿಂದ "ಈ ಕಥೆಯನ್ನು ಹೇಳಿ ಏನು ಪ್ರಯೋಜನ ? ಭಕ್ತರನ್ನು ಚಿವುಟಿದರೆ ಅವರ ದೇಹದಿಂದ ಹಾಲು ಸುರಿಯುತ್ತದೆಯೇ ? ಬೇರೆಯವರನ್ನು ಚಿವುಟಿದರೆ ರಕ್ತ ಸುರಿಯುತ್ತದೆಯೇ ?" ಎಂದು ಪ್ರಶ್ನಿಸುವನು. ಮತಿಹೀನರಾದ ರಾಜರ ಕೂಡ ವಾದಿಸುವುದು ಕಷ್ಟಕರ. ಹಾಗೆಯೇ, **'ಆನು ಕೊಲ್ಲೆನು ನೇಣು ಕೊಂದಿತು'** ಎಂದು ಹೇಳುವ ಬ್ರಾಹ್ಮಣರೊಡನೆ ನುಡಿವುದೂ ದೋಷಕರವಾದುದು. ಆದುದರಿಂದ ಶಿವನಾಗಮಯ್ಯನ ತನುವಿನಲ್ಲಿ ಹಾಲನ್ನು ತೋರಿಸಬೇಕು ಎಂದು ಪ್ರತಿಜ್ಞೆಮಾಡಿದ ಬಸವಣ್ಣ ರಾಜನೊಡನೆ ಪಂಥವನ್ನು ಕಟ್ಟುವನು. ಅದರಂತೆ ಶಿವನಾಗಮಯ್ಯನನ್ನು ಕರೆಸಿ ಬಸವಣ್ಣ ಅತನಿಗೆ ನಮಸ್ಕರಿಸಿ ಒಂದು ಶಸ್ತ್ರದಿಂದ ಆತನ ಕರಸ್ಥಲವನ್ನು ಮೆಲ್ಲಗೆ ಒತ್ತಲು ಹಾಲು ಧಾರಕಾರವಾಗಿ ಹರಿಯಿತು. ಅಲ್ಲಿ ನೆರೆದಿದ್ದ ಜನಸಮೂಹವೆಲ್ಲ ಜಯಕಾರ ಮಾಡಿತು. ಬಿಜ್ಜಳ ಈ ಅದ್ಭುತವನ್ನು ನೋಡಿ ಶಿವನಾಗ ಮಯ್ಯನಿಗೆ ವಂದಿಸಿದನು. ಬಸವಣ್ಣ ಶಿವನಾಗಮಯ್ಯನನ್ನು ಪಲ್ಲಕ್ಕಿಯ ಮೇಲೆ ಕೂಡಿಸಿಕೊಂಡು ತನ್ನ ಮನೆಗೆ ಕರೆತಂದು ಸತ್ಕರಿಸಿ ಎಂದಿನಂತೆ ಸಂತೋಷದಿಂದಿದ್ದನು.

ಈ ಮೇಲಿನ ಕಥೆ ಕೇವಲ ನಿಮಿತ್ತ ಮಾತ್ರವಾದುದು. ಶಿವನಾಗಮಯ್ಯನ ಹಿರಿಮೆ ಗರಿಮೆ ಪ್ರತಿಷ್ಠೆಗಳ ಪ್ರದರ್ಶನಕ್ಕಾಗಿ ಸೃಷ್ಟಿಗೊಂಡದ್ದು. ಶಿವನಾಗಮಯ್ಯನ ಮಹತ್ವವನ್ನು ಅರಿತುಕೊಳ್ಳದ ಮಂದಮತಿಗಳಿಗಾಗಿ ನಿರೂಪಿತವಾದುದು. ಇದರ ಸತ್ಯಾಸತ್ಯತೆ ಎಂತಾದರೂ ಇರಲಿ. ಹೀನಕುಲದಲ್ಲಿ ಜನಿಸಿದ ಶಿವನಾಗಮಯ್ಯ ಶ್ರೇಷ್ಠ ಶಿವಭಕ್ತನಾಗಿ ಹಿರಿಯ

ಅನುಭಾವಿಯಾಗಿ ಬಸವಣ್ಣನವರಿಂದ ಗೌರವಿಸಲ್ಪಟ್ಟನೆಂಬುದೇ ಇದರ ಅಂತರಾರ್ಥ. ಶಿವನಾಗಮಯ್ಯ ವಚನಗಳನ್ನು ಬರೆದಂತೆಯೂ ಪ್ರತೀತಿ ಇದೆ. ಸದ್ಯದಲ್ಲಿ ಈತನ ಎರಡು ವಚನಗಳು ಮಾತ್ರ ದೊರಕಿದೆ :

*ಅಂಗದ ಮೇಲೆ ಲಿಂಗವಿದ್ದ ಬಳಿಕ ಅಂಗಹೀನರ ಬೆರಸಲಾಗದು.*
*ಅಂಗದ ಮೇಲೆ ಲಿಂಗವಿದ್ದ ಬಳಿಕ*
*ಲಿಂಗ ಮುಂತಾಗಿ ಎಲ್ಲ ಕ್ರೀಗಳನ್ನು*
*ಗಮಿಸಬೇಕಲ್ಲದೆ ಅಂಗ ಮುಂತಾಗಿ ಗಮಿಸಲಾಗದು.*
*ಲಿಂಗಸಂಬಂಧಿಯಾಗಿ ಅಂಗ ಮುಂತಾಗಿ ಇರ್ಪವರು*
*ಲಿಂಗಕ್ಕೆ ದೂರವಯ್ಯ ನಾಗಪ್ರಿಯ ಚನ್ನರಾಮೇಶ್ವರಾ !* ॥೧॥

*ಘನಸುಖ ಮಹಾಸುಖವ ಮುಟ್ಟಲು*
*ಸಮಸುಖಿಂಗಳ ಸುಖಿಸಬಲ್ಲ ಸುಖವನಲ್ಲಯೇ ಕೊಯ್ದು*
*ಸೂಡ ಕಟ್ಟಬಲ್ಲ ನಾಗಪ್ರಿಯ ಚೆನ್ನರಾಮೇಶ್ವರಾ,*
*ನಿಮ್ಮ ಶರಣನು ಸುಖಿಸಬಲ್ಲ ಸುಖವನು* ॥೨॥

ಶಿವನಾಗಮಯ್ಯನ ಪ್ರಕರಣ ಕೆಲವು ಸಮಸ್ಯೆಗಳನ್ನು ನಮ್ಮ ಮುಂದೆ ಒಡ್ಡುತ್ತದೆ:

೧. ಶಿವನಾಗಮಯ್ಯನ ಇತಿವೃತ್ತಗಳೇನು ?
೨. ಬಸವಣ್ಣನವರು ತಮ್ಮ ವಚನಗಳಲ್ಲಿ ಈತನನ್ನು ಎಲ್ಲಿಯೂ ಸ್ಮರಿಸದಿರಲು ಕಾರಣಗಳೇನು ?
೩. ಈತನ ಕುಲ ಯಾವುದು ? ಶೂದ್ರನೆ ? ಶ್ವಪಚನೆ ?
೪. ಈತನ ಕಾಯಕ ಯಾವುದು ?
೫. ಶಿವನಾಗಮಯ್ಯನನ್ನು ಕಂಬಳಿ ನಾಗಿದೇವ ಎಂದು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿ ಕರೆಯಲು ಆಧಾರಗಳೇನು ?
೬. ಈತನ ವಚನಗಳ ಅಂಕಿತ ನಾಗಯ್ಯಪ್ರಿಯ ಚೆನ್ನರಾಮೇಶ್ವರನ ಅಥವಾ ನಾಗಪ್ರಿಯ ಚೆನ್ನ ರಾಮೇಶ್ವರನೆ ?
೭. ಬಸವಣ್ಣನವರು ಈತನನ್ನು ಹಿರಿಯಭಕ್ತ ಎಂದು ಸಂಬೋಧಿಸಲು ಕಾರಣವೇನು ? ಈತನು ವಯಸ್ಸಿನಿಂದ ಹಿರಿಯನೆ ಅಥವಾ ಅನುಭಾವದಿಂದ ಹಿರಿಯನೆ ?
೮. ಈತನ ವಿಷಯವಾಗಿ ಆವೊಂದು ಕೃತಿಯೂ ಕಾಣದಿರಲು ಕಾರಣಗಳೇನು ?

ಇವೇ ಮೊದಲಾದ ಸಮಸ್ಯೆಗಳನ್ನು ಪರಿಹರಿಸ ಬೇಕಾದುದು ವಿದ್ವಾಂಸರ ಸಂಶೋಧಕರ ಕರ್ತವ್ಯವಾಗಿದೆ.

### ಅನುಬಂಧ – ೧

**ಹರಿಹರ ಚಿತ್ರಿಸಿದ 'ಸಂಬೋಳಿಯ ನಾಗಿದೇವ'**

ಎಂದಿಂತು ಗೀತವುಂ ತನ್ನ ಸಾಮರ್ಥ್ಯವುಂ ಕೊಂಡಾಡುತಿಪ್ಪ ಪರಮಮಾಹೇಶ್ವರರ ಕರುಣಮಂ ಕೈಕೊಂಡು. ಪನ್ನಿಚ್ಛಾಸಿರ ಮನ್ನಣೆಯ ಭಕ್ತರ ನಡುವೆ ಸನ್ನಿಹಿತನಾಗಿ ಬಸವಿದೇವಂ ಸುಖದಿಂದುಮಿರ್ದೊಂದು ದೆವಸಂ ಶರಣಕುಲವುಂ ಪಾರ್ದಿರ್ಪ ಸಮಯದೊಳು; ಬರುತಿರ್ದಪರೆಂಬ ಭಾವದೊಡನೆ ಪುಳಕಂ ಪುಟವೇರಿ ಭೋಂಕನೆದ್ದುನ್ನತಾಸನವೇರಿ. ಪಲ್ಲವಸತ್ತಿಗೆ ಮೇಲ್ಮಸೆಗೆ ಕೆಲಬಲನ ಪರಿಜನಂ ನೆಲನನುಗ್ಗಡಿಸೆ ಚಾಮರಸೀಗುರಿಗಳಿಕ್ಕೆ ಲದೊಳಲ್ಲಾಡೆ ಶಂಖಧ್ವನಿಯುಣ್ಮೆ, ಶಿವಭಕ್ತಪಾದಶೇಖರನೆಂಬ ಶರಣಜನವನವಸಂತನೆಂಬ ಭಕ್ತಜನಬಾಂಧವನೆಂಬ ಬಿರುದಿನ ಕಹಳಾರವಂ ದೆಸೆ ದೆಸೆಗೆ ಪಸರಿಸೆ, ಪುರಮಂ ಪೊರಮಟ್ಟು ಹಿರಿಯ ಮಾಹೇಶ್ವರರ ಕೇರಿಗಳ ಕೆಲದೊಳು ನಡೆತಪ್ಪಾಗಳು – ಓಹಿಲಯ್ಯಂಗೆ ಹಿತಾರ್ಥ, ಉದ್ಭಟಯ್ಯಂಗೆ ಹಿತಾರ್ಥ. ಬಸವ ರಾಜಂಗೆ ಹಿತಾರ್ಥ, ಆರೋಗಿಸು – ಎಂದೆಂಬ ಶಿವಲಿಂಗಾರೋಗಣೆಯ ಸಮಯ ಸರ್ವಮಂಗಳರಚಿತ ಪರಿನಾಣಪೂರಿತದಿವ್ಯವಾಕ್ಯಂಗಳಂ ಘಂಟಾನಾದದೊಡನೆ ಕೇಳ್ದು, ಕರಣಂ ಕಳೆಯೇರೆ ಸಿರಿಮೊಗಂ ಸಂಪದವೇರಿ ದಂಡಿಗೆಯಿಂ ಘಳಿಲನಿಳಿದು, ಸಂಬೋಳಿಯನಾಗಿದೇವನೆಂಬ ಹಿರಿಯ ಮಾಹೇಶ್ವರನ ಮನೆಯಂ ಪೊಕ್ಕು, ಸಂಗಪ್ರಸಾದವ ನವರ ಪ್ರಸಾದವೆರಸಿ ಕೈಕೊಳುತ್ತಿರೆ :

ಇತ್ತಲೊಡನೆ ಬರುತ್ತಿರ್ಪ ವೈಷ್ಣವರ ಬೇಹಿನ ಸಾಹಸಿಗನೊರ್ವಂ ಪುರಕೆ ಪರಿತಂದು ಬಸವನ ಚರಿತ್ರಮನಜ್ಞಾನಿಗಳಪ್ಪ ವಿಪ್ರಕುಲಕ್ಕೆ ಪೇಳೆ : ಕೇಳ್ದು ಸಂಭ್ರಮದಿಂ ಸಡಗರಿಸುತ್ತಂ, ನಾರಣಕ್ರಮಿತಂ ಕೃಷ್ಣಪೆದ್ದಿ, ವಿಷ್ಣುಭಟ್ಟಂ, ಕೇಶವಭಟ್ಟಂ, ವಿಷ್ವಕ್ಸೇನ ಭಟ್ಟಂ, ಮುರಾರಿಕ್ರಮಿತಂ, ಸೌರಿಪೆದ್ದಿ ಮುಕುಂದಭಟ್ಟಂ, ಪದ್ಮನಾಭಕ್ರಮಿತಂ, ಗೋವಿಂದಪಂಡಿತಂ, ಜನಾರ್ದನಪೆದ್ದಿ, ವಾಸುದೇವಘೈಸಂ ಅಚ್ಯುತಕ್ರಮಿತಂ ದಾಮೋದರ ಭಟ್ಟಂ ಮೊದಲಾದ ಛಾಂದಸರು ವೇದಜಡರು ಮಟ್ಟಿಯ ಮರುಳ್ಗಳು ವೃಥೋತ್ಸಾಹಿಗಳು ಹೆಬ್ಬೇಳಿಗಳು ದರ್ಭೆಯ ನಿರ್ಭಾಗ್ಯರೆಲ್ಲಂ ನೆರೆದರಮನೆಗೆಬಂದು ದೇವದೇವ, ಎಲೆ ಭೂಪ, ಎಲೆಲೆಲೆ ಬಿಜ್ಜಳ, ಬಸವನ ನಡೆವಳಿ ದಿನದಿನಕ್ಕೆ

ವಿಪರೀತಮಾಗಿರ್ದಪುದು. ಹಿರಿಯ ಮಾಹೇಶ್ವರರೆಂದು ಬೆರಸಿಕೊಂಡಿಪ್ಪುದಂತಲ್ಲದೆ ಇಂದೀ ಗಳಿಗೆಯೊಳು ಪೊಲಗೇರಿಯೊಳೊರ್ವಂ – ಪೊಲೆಯನೆಂದಡೆ ಕೋಪಂ ಹಿರಿಯ ಭಕ್ತನ ಮನೆಯೊಳಗುಂಡುದಲ್ಲದೆ ನಿನ್ನೋಲಗದೊಳು ಪೊಲೆಗಲಸಲುಂ ಬಂದಪಂ. ಇಂತಾದಡೆಮಗಿರಲ್ಬಾರದು – ಎಂದು ಪೇಳ್ವರಂ ಸಂತೈಸಿ, ಬಸವನಂ ಕರೆಯಿಮೆಂದರಸಾಳ್ಗಳಂ ಕಳುಪುತ್ತಂ; ಬಸವರಾಜಂ ಬಂದೋಲಗದ ಮನೆಯಂ ಪೊಗುವನೆಂದು ರಾಜಾಂಗಣದ ಬಯಲೊಳು ಒಡ್ಡೋಲಗಂಗೊಟ್ಟು ಕುಳ್ಳಿರಲು :

ಅಲ್ಲಿಗೆ ಜಂಗಮದಶಾವಸ್ಥಂ ಜಂಗಮಪ್ರಾಣಿಯೆನಿಪ ಸಂಗನಬಸವಂ ಬಂದು ನಿಂದಿರೆ, ಬಿಜ್ಜಳಂ ಕಂಡು – ಎಲೆ ಬಸವಣ್ಣ, ಸುವರ್ಣಂ ಕಮ್ಮಿತಾದಂತೆ ವಿಪ್ರ ಕುಲಕನುಕೂಲಮಪ್ಪ ಶಿವಭಕ್ತಿ ಪೊದ್ದಿರ್ದು ಸದಾಚಾರದಿಂ ಸುಖಿಯಾಗಿರ್ಪುದ ನೊಲ್ಲದೆ, ಅತಿಭಕ್ತಿ, ತಲೆಗೇರಿ ಹಿರಿಯ ಮಾಹೇಶ್ವರರೆಂದು ಪೊಲೆಗಲಸಿ ಅವರ ಮನೆಯೊಳುಂಡುದಲ್ಲದೆ ಇಲ್ಲಿ ಬಂದು ಎಲ್ಲರಂ ಗೋಜಾಗತಂ ಮಾಳ್ಪುದು ಮಾರ್ಗವಲ್ಲ ಎಂದು ವಿಪ್ರಪ್ರೇರಿತಂ ನುಡಿಯೆ, ಬಸವರಾಜಂ ಕೇಳ್ದು – ಎಲೆ ಬುದ್ಧಿಯಿಲ್ಲದ ಭೂಪ, ಎರಗಿವಿಯ ಮರುಳೆ, ನಾರಣಕ್ರಮಿತರ ಕೇರಿಯಂ ಪೊಕ್ಕೆನೆ ? ಮುಕುಂದ ಭಟ್ಟರ ಮನೆಯೊಳುಂಡನೆ ? ಸೌರಪದ್ದಿಗಳ ಸಾರಿ ನಿಂದೆನೆ ? ದಾಮೋದರ ಭಟ್ಟರಂ ಪ್ರೇಮದಿಂ ಸೋಂಕಿದೆನೆ ? ಕೇಶವಘೈಸರ ವಾಸನೆಯುಂಟೆ ? ಹರನನರಿಯದೆ ಹೊಲೆಯರ ಮನೆಯಂ ಹೊಕ್ಕುಂಡುದಿಲ್ಲ – ಎಂದು ಶಿವಪ್ರೇರಕಂ ನುಡಿದ ಮಾತಿನೊಡನೆ ಬಿಜ್ಜಳಂ ಕೋಪದೊಳುರಿದು – ಇಂತು ನುಡಿವರೆ, ಭಂಡಾರಿಬಸವ ? ವೇದಶಾಸ್ತ್ರ ಪುರಾಣಾಗಮಯಜ್ಞ ವಿಧಿಯಂ ನಡೆವ ವಿಪ್ರರಂ ಹೊಲೆಯರೆಂದು ಶಿವಭಕ್ತನಾದ ಹೊಲೆಯನಂ ಉತ್ತಮನೆಂಬುದಕ್ಕೆ ಪ್ರಮಾಣೇನು ? ವಿಪ್ರರ ಮೈಯಂ ಕೊಯ್ಯೆ ನೆತ್ತರ್ ಸುರಿದು ಭಕ್ತರ ಮೈಯೊಳು ಪಾಲ್ ಸುರಿದಪುದೆ ? ಬೇಡ ಬೇಡ, ಸಮಯ ಪಕ್ಷಪಾತದೊಳಪ್ಪು ದೆಲ್ಲತಿರೇಕವೇಕೆ ? ಪದುಳಮಿರ್ದಡೆ ಸಾಲ್ವುದು – ಎಂದರಸಂ ನುಡಿಯೆ, ಬಸವಣ್ಣಂ ಕೇಳ್ದು ನಸುನಗುತ್ತೆ ಆ ಮಾತಿಂಗೊಡಂಬಟ್ಟು – ತಪ್ಪದು ತಪ್ಪದೆಲೆ ಅರಸ. ನೀಂ ತಪ್ಪಿ ನುಡಿಯೆ. ನೀನೆಂದಂತೆ ವಿಪ್ರರ ಮೈಯೊಳು ನೆತ್ತರು ಭಕ್ತರ ಮೈಯೊಳು ಪಾಲ್ ಸುರಿಯದಿರ್ದಡೆ, ಸಂಗಂಗೆ ದೂರಂ ಶರಣರ್ಗೆ ದೂರಂ, ನೋಡು ನೋಡರಸ, ನೀಂ ನೋಡಿನಿತು ಬೇಗಂ ಸೈರಿಸು – ಎಂದು :

ಗಳಗಳನೆ ನಡೆತಂದು, ಸಂಬೋಳಿಯ ನಾಗಿದೇವನ ನಂದಣಲಾಂ ಬಿಜಯಂಗೆಯ್ಸಿ ತಾಂ ಕೆಲದೊಳು ಬರುತ್ತಂ – ದೇವ, ಭಕ್ತದೇಹಿಕದೇವ, ನೀಂ ಪೊಳಲಿ ಪೊಕ್ಕ ವರೊಕ್ಕುದಂ ಕೊಂಡೆ. ನೀನಿರ್ದ ಕುಲವೆ ಸತ್ಕುಲಂ. ನಿನ್ನಿಂದ ನಾ ಕುಲಜನೆ. ಕೂಡಲಸಂಗ ಕರುಣಿಸು ಎಂದು ಗೀತಮಂ ಪಾಡುತಂ ನಡೆತಂದು. ಬಿಜ್ಜಳನುಂ ಪರವಾದಿಗಳುಂ ಕೌತುಕಂಬಡುತ್ತಿರಲು, ದಂಡಿಗೆಯಿಂದುಪಮನ್ಯು ದೇವರನಿಳುಪುವಂತಿಳುಪಿ ತಾನೆ ಕೈಗೊಟ್ಟು ಬಂದಾಸ್ಥಾನದ ನಡುವೆ ನಿಂದಿರ್ದು, ಕರೆ ಕರೆ ನಿನ್ನ ಕರ್ಮ ಜಡರನೆಂದು ಕರಸಿ, ಬಂದ ವಿಪ್ರನೊರ್ವನ ಮೈಯಂ ಸೀಳೆ ಕೆನ್ನೆತ್ತರುಂ ಪುಳುವುಂ ಸರಿಯಲರಸಂ ಕಂಡು ನೆರೆ ಪೇಸಿ ತೆಗೆತೆಗೆಯೆಂದು ಕಣ್ಮುಚ್ಚಿ ಕೊಳುತ್ತಿರೆ; ಬಸವರಾಜನೆದ್ದು. ಇತ್ತ ನೋಡು ಬಿಜ್ಜಳನೃಪಾಲ ಎಂದು, ರಜತಾದ್ರಿಯರಸನಂ ಗೌರೀ ಪತಿಯಂ ಗಂಗಾಧರನಂ ವಿಭೂತಿಭೂಷಣನಂ ಚಂದ್ರಧರನಂ ಪುಣ್ಯಮಯನಂ ಶಿವನಂ ನೆನೆದು ಸುಧಾಕರಧರನ ಪಾದದಂತಿರ್ದ ಶರಣನ ಪಾದಮಂ ಪಿಡಿದು. ಸುರಧೇನುವಿನ ಪಯೋಧರಮನಿಸುವಂತೆ ಉಂಗುಟದ ಮೊನೆಯನಿಸಲೊಡಂ. ಶ್ವೇತಪರ್ವತದ ಪಾದತಟದ ಸರಿವುದರಿವಿನ ಹಾಲೊರತೆ ಸುರಿತಪ್ಪಂತೆ ಹಾಲ ಹಳ್ಳವೋಲಗದ ನಡುವೆ ಮಡುಗಟ್ಟಿ ಪರಿದು ಪೊರಸೂಸೆ, ಕಂಡು ಬಿಜ್ಜಳಂ ಕೌತುಕಂಗೊಂಡು ಭಯರಸ ವೇರಿ ಭಾವಿಸುತ್ತಿರೆ, ಪುರಜನಂ ಬೆರಗಾಗೆ, ಶರಣರ್ ಗುಡಿಗಟ್ಟೆ ಪರವಾದಿಗಳ್ ಮೆಲ್ಲಮೆಲ್ಲನೆ ಸರಿಯೆ :

ಸಾಮರ್ಥ್ಯದಾಯಕಂ ನಾಯಕರ ದೇವಂ ಬಸವರಾಜಂ ನಿಂದು – ಎಲೆ ಧರಿತ್ರೀನಾಥ, ಸೂರ್ಯನ ಮೈಯೊಳು ಕಳಂಕುಂಟೆ ? ಅಮೃತರಸದೊಳು ಕೃಪೆಯುಂಟೆ ? ಶಿವಭಕ್ತರ ಮೈಯೊಳು ಸುಧಾರಸವಲ್ಲದೆ ಮತ್ತೊಂದುಂಟೆ ? ಶರಣ ಕುಲದುನ್ನತಿಯನರಿಯದೆ ನಿನ್ನ ವೇದಜಡರ ಮಾತು ಮೇರೆಗೆಡಿಸಿತ್ತು, ನಿರ್ದೈವರ ನುಡಿ ಬುದ್ಧಿಗೆಡಿಸಿತ್ತು, ಕರ್ಮಿಗಳ ಸಂಗಂ ಪೆರ್ಮೆಗೆಡಿಸಿತ್ತು, ಇದಂ ಕಂಡಾದಡಂ ಶರಣರ ನಂಬು, ಮರುಳಾಗದಿರು ಎಂದು ಬಿಜ್ಜಳಂಗಭಯಮಂ ಕೊಟ್ಟು ಭಕ್ತಿಯ ಬೆಂಬಳಿಯ ಶರಣರ ಬೆಂಬಳಿಯಲ್ಲದೆ ಭವಿಗಳಂ ಮುಟ್ಟನೆಂಬ ಸಂಬೋಳಿಯ ನಾಗಿದೇವನಂ ಗಜಮಸ್ತಕದ ಮೇಲೆ ಬಿಜಯಂಗೆಯ್ಸಿ ಪುರದೊಳು ಮೆರೆಯಿಸಿ ತನ್ನ ಮಹಮನೆಗೆ ತಂದಾನೆಯಿಂದಿಳಿಪಿ ಗದ್ದುಗೆಯನಿತ್ತು ಮೈತೀವ ಲುಡಕೊಟ್ಟು ಮನಂ ತೀವಲಾರಾಧಿಸುತ್ತವರಂ ಕಳುಪಿ; ಸಂಗನಬಸವಂ ಬಸವಿದೇವಂ ಹಾರದ ನಡುವಣ ನಾಯಕರತ್ನದಂತೆ,

ಅವಯವದ ನಡುವಣ ಉತ್ತಮಾಂಗದಂತೆ. ನವರತ್ನದ ನಡುವಣ ಚಿಂತಾರತ್ನದಂತೆ, ಗೋಕುಲದೊಳಗಣ ಕಾಮಧೆನುವಿನಂತೆ, ತರುಕುಲದ ನಡುವಣ ಸುರಕುಜದಂತೆ, ಗಿರಿಗಳ ನಡುವಣ ಮೇರುಗಿರಿಯಂತೆ, ಸುವರ್ಣದ ನಡುವಣ ಪರುಷದಂತೆ, ನಕ್ಷತ್ರಂಗಳ ನಡುವಣ ಚಂದ್ರನಂತೆ, ನವಗ್ರಹಂಗಳ ನಡುವಣ ಭಾಸ್ಕರನಂತೆ, ಅನುಲೇಪನಂಗಳ ನಡುವಣ ಭಸಿತಮಂಡನದಂತೆ, ಕಾಂತಿಗಳ ನಡುವಣ ಸ್ವಯಂಜ್ಯೋತಿಯಂತೆ, ಸಮಸ್ತ ಶರಣರಮಧ್ಯಸ್ಥಿತ ಮನೋಹರ ಮೂರ್ತಿಯಾಗಿ ನಿತ್ಯಸುಖದಿಂದಿರ್ಪಲ್ಲಿ –

(ಬಸವರಾಜದೇವರ ರಗಳೆ : (ಸಂ.) ಟಿ.ಎಸ್. ವೆಂಕಣ್ಣಯ್ಯ, ಮೈಸೂರು, ೧೯೩೮, ಹತ್ತನೆಯ ಸ್ಥಲ. ಪು. ೬೬–೭೦).

### ಅನುಬಂಧ – ೨

***ಶಾಂತಲಿಂಗ ದೇಶಿಕ ಚಿತ್ರಿಸಿದ 'ಕಂಬಳಿಯ ನಾಗಯ್ಯ'***

*ಈಶಭಕುತರೆ ವಿ / ಶೇಷವೆನುತ ಬಸ*
*ವೇಶ ಕಂಬಳಿಯ ನಾಗಯ್ಯನ*
*ಭಾಸುರ ಕರದಿ ಸು / ಧಾಸರಿಗರೆದನು*
*ಭೂಸುರತತಿ ನಾಚುವಂತೆ*

ಈಶಭಕ್ತರು ಅಧಿಕವೆಂದು ಬಸವೇಶ ಶಿವನಾಗಮಯ್ಯನ ಕರದಲ್ಲಿ ಅಮೃತವ ಕರೆದರೆಂಬುದಕ್ಕೆ ಕಥೆ :

ನೈಮಿಷಾರಣ್ಯವಾಸದ ಮುನಿಗಳು ಕುಲದಲ್ಲಿ ಅಧಿಕರಾರೆಂದು ಕೇಳಲು ಪೇಳುತ್ತಿರ್ದನು. ಸೂತಮುನೀಂದ್ರನು ಕ್ರಿಮಿಕೀಟ ಪತಂಗ ಮೊದಲಾದ ಸಚರಾಚರ ಚೌರಾಸಿಪ್ರಾಣಿಗಳೊಳಗೆ ಗೋವುಗಳಧಿಕ, ಗೋವಿನಿಂದ ಮನುಷ್ಯರಧಿಕ, ಮನಷ್ಯರಿಂದ ಅಷ್ಟಭೂತಗಳಧಿಕ. ಅಷ್ಟಭೂತಗಳಿಂದ ಅಷ್ಟವಸುಗಳಧಿಕ, ಅಷ್ಟವಸುಗಳಿಂದ ಅಷ್ಟದಿಕ್ಪಾಲಕರಧಿಕ, ಅವರಿಂದ ನವಗ್ರಹಗಳಧಿಕ, ನವಗ್ರಹಗಳಿಂದ ದ್ವಾದಶಾದಿತ್ಯರಧಿಕ, ಆದಿತ್ಯರಿಂ ನವಬ್ರಹ್ಮರಧಿಕ, ಆ ಬ್ರಹ್ಮರಿಂ ಆರುವತ್ತೆಂಟುಕೋಟಿ ತೀರ್ಥವಧಿಕ, ತೀರ್ಥದಿಂ ಯಮುನೆಯೆಂಬ ನದಿಯಧಿಕ, ನದಿಯಿಂ ಜಾಹ್ನವಿಯಧಿಕ, ಜಾಹ್ನಯಿಗಿಂದ ಜಹ್ನುಮುನಿಯಧಿಕ, ಮುನಿಗಿಂದ ಸಗರನ ಸುತ ಭಗೀರಥನಧಿಕ ಅವನಿಗಿಂದ ಹಿಮದ ನಗವಧಿಕ, ನಗದಿಂ ಹಿಮಭೂಮಿಯಧಿಕ, ಅದರಿಂ ಶರಧಿಗಳಧಿಕ, ಶರಧಿಯಿಂ ಮೇಘವಧಿಕ, ಅದರಿಂ ನಕ್ಷತ್ರವಧಿಕ, ಅದರಿಂ ಚಂದ್ರನಧಿಕ, ಅದರಿಂ ಸೂರ್ಯನಧಿಕ, ಸೂರ್ಯನಿಂ ಅಗ್ನಿಯಧಿಕ, ಅದರಿಂ ದೇವರ್ಕಳಧಿಕ, ಅವರಿಂ ಯಜ್ಞವಧಿಕ, ಅದರಿಂ ದೀಕ್ಷಿತರಧಿಕ, ಅವರಿಂದ ವೇದವಧಿಕ, ವೇದದಿಂದ ಧನುರ್ವೇದವಧಿಕ, ಅದರಿಂ ದ್ವಿಜರಧಿಕ, ಅವರಿಂ ವಿಪ್ರರಧಿಕ, ಅವರಿಂ ಕೃತಬುದ್ಧಿಗಳಧಿಕ, ಅವರಿಂ ಕರ್ತಾರರಧಿಕ ಅವರಿಂದ ಯಮ ನಿಯಮ ಪಂಚಕಂಯೋಗಿಗಳಧಿಕ, ಅವರಿಂ ಜೋಗಿವೆಮಳರಧಿಕ, ಅವರಿಂ ಸನ್ಯಾಸಿಗಳಧಿಕ, ಅವರಿಂ ಪಾಶುಪತಿಗಳಧಿಕ, ಅವರಿಂ ಆದಿಶೈವ ಶುದ್ಧಶೈವ ಮಾರ್ಗಶೈವ ಪ್ರವರಶೈವರಧಿಕ, ಅವರಿಂ ಅದ್ವೈತಜ್ಞಾನಿಗಳಾಧಿಕ, ಅವರಿಂ ಶಿವಾರ್ಚಕರಧಿಕ, ಆ ಶಿವಾರ್ಚಕರ್ಗೆ ಹರಿಯಜಸುರಪ ಮನುಮುನಿಗಳು ಸಮಾನವಲ್ಲ, ಅಂತಾ ಶಿವಾರ್ಚಕರು ವೀರಶೈವಸಂಪನ್ನರಾದ ಲಿಂಗಾಂಗ ಸಂಬಂಧಿಗಳಿಗೆ ಆ ಹದಿನಾಲ್ಕು ಭುವನದೊಳಗೆ ಆರು ಸಮಾನವಿಲ್ಲವಾಗಿ ಹೊಲೆಯನಾದರೂ ಶಿವಪೂಜೆಯಿಂದ ಸತ್ಕುಲಜನಪ್ಪನು. ಅದೆಂತೆಂದೊಡೆ ವೇದವ್ಯಾಸ ಬೋಯಿತಿಯ ಮಗ ಮಾತಂಗಿಯ ಮಗ ಮಾತಂಗನು, ಸುನಕನ ಮಗ ಸನಕನು, ಊರ್ವಸಿಯೆಂಬ ವೇಶಿಯ ಮಗ ವಸಿಷ್ಠನು, ಮಂಡೋದರಿ ಕಪ್ಪೆಯ ಮಗಳು, ಆಕೆಯ ಮಗ ಮಾಂಡವ್ಯನು, ಅಗಸ್ತ್ಯ ಕಬ್ಬಿಲನು, ದೂರ್ವಾಸ ಮುಚ್ಚಿಗನು, ಕಶ್ಯಪ ಕಮ್ಮಾರನು, ಕೌಂಡಲ್ಯನೆಂಬ ಮುನಿಯು ನಾಯಿಂದನು, ಸಾಂಖ್ಯಮುನಿ ಶ್ವಪಚನು. ವಾಲ್ಮೀಕಿ ಮುನಿಯು ವ್ಯಾಧನು. ಪಾರಾಶರ ಮುನಿಯು ಬೇಡನು, ಶೃಂಗಮುನಿ ಎರಳೆಯ ಮಗನು, ಇವರೆಲ್ಲರು ಶಿವಭಕ್ತಿಯಿಂದ ಸತ್ಕುಲಜರಾದರು. ಶಿವನಾಗಮಯ್ಯ ನವರೆಂಬ ಹಿರಿಯಭಕ್ತರ ಒಂದು ರೋಮಕ್ಕೆ ವಿಪ್ರರು ಎಣ್ಣೆಯಿಲ್ಲವೆಂದು ಬಸವಣ್ಣನೆನಲು ಬಿಜ್ಜಳ ಕೇಳಿ ನುಡಿದನು. ಭಕ್ತರ ಚಿವುಟಿದರೆ ಮೈಯಲ್ಲಿ ಹಾಲು ಒಗುವುದೆ ? ಭವಿಗಳ ಚಿವುಟಿದರೆ ಮೈಯಲ್ಲಿ ನೀರು ಒಕ್ಕಾವೆ ? ಎನಲು. ಬಸವಣ್ಣನು ಶಿವಭಕ್ತರೆ ನಿತ್ಯವಾದ ಸತ್ಕುಲಜರೆಂಬುದ ತೋರುವೆನೆಂದು ಶಿವನಾಗಮಯ್ಯಗಳೆಂಬ ಹಿರಿಯ ಭಕ್ತರ ಕರದಲ್ಲಿ ಅಮೃತವ ಕರೆದು ಮೆರೆದರಂದು. ಇಂದು ನಿನಗೆ ಯಾತೇಕ್ಕೆಲವೊ ಎಂದು ಭೈರವದೇವ ವಾದವ ಖಂಡಿಸುತ್ತಿದ್ದನು.

**(ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ : (ಸಂ_ ಡಾ॥ ಆರ್.ಸಿ. ಹಿರೇಮಠ, ಡಾ॥ ಎಂ.ಎಸ್. ಸುಂಕಾಪುರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೪೩೭–೩೮)**

## ಅನುಬಂಧ – ೩

### *ಉತ್ತರ ದೇಶದ ಬಸವಲಿಂಗ ಚಿತ್ರಿಸಿದ 'ಶಿವನಾಗಮಯ್ಯ'*

ಕಲ್ಯಾಣದಲ್ಲಿ ಶಿವನಾಗಮಯ್ಯಗಳೆಂಬ ಶರಣರು ಕಾಡೊಳಗೆ ಚಂದನ, ಬಾಳೆಯಲ್ಲಿ ಕಪ್ಪುರ. ಚಿಪ್ಪಿನಲ್ಲಿ ಮುತ್ತು ಹುಟ್ಟುವಂತೆ ಹಿರಿಯ ಕುಲದಲ್ಲಿ ಉದಿಸಿ ವೀರಶೈವರಾಗಿರಲು ಬಸವೇಶ್ವರನು ಅವರಲ್ಲಿ ಪಾದೋದಕ ಪ್ರಸಾದವ ಸೇವಿಸುತ್ತಿರಲು. ಅದ ವಿಪ್ರರು ಕೇಳಿ ಬಿಜ್ಜಳನ ಕೂಡೆ ಹಿರಿಯ ಭಕ್ತರೆಂದು ತಪ್ಪಟೆಯ ನಾಗನ ಕಾಲಿಗೆ ಬಿದ್ದು ಅವನುಂಡು ಮಿಕ್ಕುದನುಂಬು ತವನೆ ಎಂದು ಹೇಳಿದರು. ಮತ್ತೆ ಬಸವಣ್ಣನು ಶಿವನಾಗ ಮಯ್ಯಗಳ ದಂಡಿಗೆಯ ಮೇಲೆ ಕುಳ್ಳಿರಿಸಿಕೊಂಡು ಸಭೆಗೆ ಬರುತವನೆ ನೀವು ಹೊರೆಗೆ ಓಲಗವಾಗಬೇಕೆಂದು ವಿಪ್ರರು ಹೇಳಲು ಹಾಂಗೆಯೇ ಬಂದು ಬಿಜ್ಜಳ ಕುಳಿತನು. ಆಗ ಶಿವನಾಗ ಮಯ್ಯಗಳ ಉನ್ನತ ಗದ್ದುಗೆಯಲ್ಲಿ ಕುಳ್ಳಿರಿಸಿ ಬಳಿಕ ಕೂಚಿಪೆದ್ದಿ, ಪೂಚಿಪೆದ್ದಿ, ಕೃಷ್ಣಪೆದ್ದಿ, ಬಿಜ್ಜಳ ಮೊದಲಾದವರ ನಡುವೆ ಬಸವಣ್ಣನು ಹಾರದ ಮಧ್ಯದಲ್ಲಿದ್ದ ನಾಯಕರತ್ನದಂತೆ ಪಶುಗಳ ನಡುವಣ ಕಾಮಧೇನುವಿನಂತೆ, ತರುಗಳ ನಡುವಿನ ಕಲ್ಪವೃಕ್ಷ ದಂತೆ, ಗಿರಿಗಳ ನಡುವಿನ ಮೇರುವಿನಂತೆ. ನವಗ್ರಹಗಳ ನಡುವಣ ಸೂರ್ಯನಂತೆ, ಅನುಲೇಪನದೊಳಗಣ ಭಸಿತದಂತೆ ಒಪ್ಪಿದನು.

ಆಗ ಬಿಜ್ಜಳನು ಬಸವರಸರೆ ಕುಲಹೀನರ ಕೂಡಿಕೊಂಡು ಹೀಂಗೆ ಸಭೆಗೆ ಬರುವರೆ ಎನಲು, ಪಾಷಾಣದಿಂದಾದ ಲಿಂಗವ ಕಲ್ಲೆನಬಹುದೆ, ಪರುಷಸೋಂಕಿ ಲೋಹ ಚಿನ್ನವಾದ ಬಳಿಕ ಕಬ್ಬುನವೆಂಬರೆ, ಗುರುಮುಟ್ಟಿ ಶುದ್ಧವಾದ ಭಕ್ತರ ಕುಲವ ನೆತ್ತಬಹುದೆ ಎನಲು, ಅದಕ್ಕೆ ಬಿಜ್ಜಳ ನಿಮ್ಮ ಭಕ್ತರ ಚಿವುಟಿದರೆ ಹಾಲು ಬರುವುದು, ಉಳಿದವರ ಚಿವುಟಿದರೆ ರಕ್ತಬರುವುದೆ ಎನಲು, ಹಾಂಗಹುದೆಂದು ಶಿವನಾಗಮಯ್ಯಗಳ ಬೆರಳುಗಳಲ್ಲಿ ಅಮೃತವ ಕರೆಸಲು ಬಿಜ್ಜಳ ತಲೆದೂಗಿ ಬಸವೇಶ್ವರಂಗೆ ಶಿವನಾಗಮಯ್ಯಂಗೆ ಉಡುಗೊರೆಯ ಕೊಟ್ಟು ಕಳುಹಿದನು.

*(ಬಸವೇಶ್ವರ ಪುರಾಣದ ಕಥಾಸಾಗರ : (ಸಂ.) ಎಸ್. ಉಮಾಪತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ಪು. ೨೧೭–೧೮).*

*(ಕೃಪೆ : ಬಸವ ಪಥ)*

---

ಲೇಸೆನಿಸಿಕೊಂಡು ಅಯ್ದು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ನಾಲ್ಕು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ಮೂರು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ಎರಡು ದಿವಸ ಬದುಕಿದಡೇನು ?
ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ !
ಅಜಕಲ್ಪಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ !!
ಎಂದುದಾಗಿ ಕೂಡಲಸಂಗನ ಶರಣರ ವಚನದಲ್ಲಿ
ಲೇಸೆನಿಸಿಕೊಂಡು ಒಂದು ದಿವಸ ಬದುಕಿದಡೇನೊ !

ಹಾವಾಡಿಗನು ಮೂಕೊರತಿಯು:
ತನ್ನ ಕೈಯಲ್ಲಿ ಹಾವು,
ಮಗನ ಮದುವೆಗೆ ಶಕುನವ ನೋಡಹೋಹಾಗ
ಇದಿರಲೊಬ್ಬ ಮೂಕೊರತಿಯ ಹಾವಡಿಗನ ಕಂಡು,
ಶಕುನ ಹೊಲ್ಲೆಂಬ ಚದುರನ ನೋಡಾ.
ತನ್ನ ಸತಿ ಮೂಕೊರತಿ, ತನ್ನ ಕೈಯಲ್ಲಿ ಹಾವು,
ತಾನು ಮೂಕೊರೆಯ.
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ.

– ಬಸವಣ್ಣ

# ಸಾಮೂಹಿಕ ಧ್ವನಿಯ ನಡುವೆ ಮೊಳಗಿದ ಒಂದು ಗಟ್ಟಿ ದನಿ

- ಡಾ. ಎಸ್. ವಿದ್ಯಾಶಂಕರ್

ಉಳಿಯುಮೇಶ್ವರ ಚಿಕ್ಕಣ್ಣ ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ದೇವರಗುಡಿ ಗ್ರಾಮದವನು. ಇಲ್ಲಿನ ಮಲ್ಲಿಕಾರ್ಜುನನ ಮೂಲ ಹೆಸರು ಉಳಿಯುಮೇಶ್ವರ. ಬಹುವಾಗಿ ಹುಳಿಮಯನೆನ್ನುವವನು ಸ್ಥಾಪಿಸಿದ ಶಿವಲಿಂಗ ಉಳಿಯುಮೇಶ್ವರ. ಡಾ. ಎಂ.ಎಂ. ಕುಲಬುರ್ಗಿಯವರು "ಇಲ್ಲಿಯ ಒಂದು ಶಾಸನದಲ್ಲಿ ಬೇರೆ ಬೇರೆ ಕಾಲದ ಐದು ದತ್ತಿಗಳಿವೆ. ಇವುಗಳಲ್ಲಿ ಮೊದಲನೆಯ ದತ್ತಿ (ಕ್ರಿ.ಶ. ೧೧೧೦) ಸ್ಥಾನಾಚಾರ್ಯ ಕೇದಾರ ಪಂಡಿತವನ್ನು, ಮೂರನೆಯ ದತ್ತಿ (೧೧೬೮). ನಾಲ್ಕು ಐದನೆಯ ದತ್ತಿಗಳು ಸ್ಥಾಣಚಾರ್ಯ ಚಿಕ್ಕಯ್ಯ ಪಂಡಿತನನ್ನು ಉಲ್ಲೇಖಿಸುತ್ತದೆ. ಇನ್ನೊಂದು ಶಾಸನವೂ (೧೨೦೨) ಚಿಕ್ಕಯ್ಯ ಪಂಡಿತನನ್ನು ಉಲ್ಲೇಖಿಸುತ್ತದೆ. ಕಲ್ಲೇದೇವರಪುರ ಶಾಸನ (೧೨೭೯)ದಲ್ಲಿ ಶರಣರ ಹೆಸರುಗಳ ಮಧ್ಯದಲ್ಲಿ ಕಂಡು ಬರುವ 'ಚಿಕ್ಕ' ಎಂಬುವನು ಈತನೇ ಆಗಿರುವ ಸಾಧ್ಯತೆಯಿದೆ" ಎಂದು ಅಭಿಪ್ರಾಯ ಪಡುವರು. (ನೋಡಿ: ಸಂಕೀರ್ಣ ವಚನ ಸಂಪುಟ, ಕನ್ನಡ ಪುಸ್ತಕ ಪ್ರಾಧಿಕಾರ (೨೦೦೧) ಪ್ರಸ್ತಾವನೆ, ಪು xxv) ಇದನ್ನು ಒಪ್ಪಿದ್ದೇ ಆದರೆ, ಉಳಿಯುಮೇಶ್ವರ ಚಿಕ್ಕಣ್ಣನನ್ನು ಬಸವ ಸಮಕಾಲೀನ ನೆಂದು ಹೇಳಲಾಗದು, ೧೩ನೇ ಶತಮಾನದವನೆಂದು ಹೇಳಬೇಕಾಗುತ್ತದೆ. ಅವನ ಎರಡು ವಚನಗಳಲ್ಲಿ ಬಸವಾದಿ ಶರಣರ ಪ್ರಸ್ತಾಪ ಬಂದಿದೆ.

*ಎನ್ನಂತರಂಗದ ಜ್ಯೋತಿಯೇ ಬಸವಣ್ಣನಯ್ಯಾ,*
*ಎನ್ನ ಬಹಿರಂಗದ ಜ್ಯೋತಿಯೇ ಚೆನ್ನಬಸವಣ್ಣನಯ್ಯಾ,*
*ಎನ್ನ ಸರ್ವಾಂಗದ ಜ್ಯೋತಿಯೇ ಪ್ರಭುದೇವನಯ್ಯಾ,*
*ಇಂತಿವರ ಶ್ರೀಪಾದದಲ್ಲಿ ಉರಿ ಕರ್ಪುರ ಸಂಯೋಗದಂತೆ*
*ಬೆರೆಸಿದೆನಯ್ಯಾ ಉಳಿಯುಮೇಶ್ವರಾ*

*(ವ. ೧೬೬೦)*

*ಬಸವಣ್ಣನೆ ಎನಗೆ ಗುರುಸ್ವರೂಪನಯ್ಯಾ,*
*ಚನ್ನಬಸವಣ್ಣನೆ ಎನಗೆ ಲಿಂಗ ಸ್ವರೂಪನಯ್ಯಾ,*
*ಸಿದ್ಧರಾಮಯ್ಯನೆ ಎನಗೆ ಜಂಗಮಸ್ವರೂಪನಯ್ಯಾ,*
*ಮರುಳಶಂಕರ ದೇವರೆ ಎನಗೆ ಪ್ರಸಾದಸ್ವರೂಪನಯ್ಯಾ,*
*ಪ್ರಭುದೇವರೆ ಎನಗೆ ಜ್ಞಾನ ಸ್ವರೂಪನಯ್ಯಾ,*
*ಇಂತಿವರ ಶ್ರೀಪಾದದಲ್ಲಿ ಉರಿಯುಂಡ*
*ಕರ್ಪೂರದಂತಡಗಿದೆನಯ್ಯಾ ಉಳಿಯುಮೇಶ್ವರಾ*

*(ವ. ೧೬೩೭)*

ಮೇಲಣ ವಚನಗಳಲ್ಲಿ ಪ್ರಸ್ತಾಪಿತವಾಗಿರುವ ಶರಣರೆಲ್ಲರೂ ೧೨ನೇ ಶತಮಾನದವರು. ಇವರುಗಳ ಶ್ರೀಪಾದದಲ್ಲಿ ತಾನು *'ಉರಿಯುಂಡ ಕರ್ಪೂರದಂತಡಗಿದೆ'* ಎಂದು ಹೇಳಿರುವುದನ್ನು ಗಮನಿಸಿದಾಗ ಉಳಿಯುಮೇಶ್ವರ ಚಿಕ್ಕಣ್ಣ ಬಸವಾನಂತರ ಕಾಲದವನೆನ್ನುವುದು ವಾಸ್ತವಕ್ಕೆ ದೂರವಾದ ಸಂಗತಿ. ಕಲಬುರ್ಗಿಯವರು ಮೇಲೆ ಉಲ್ಲೇಖಿಸಿರುವ ಚಿಕ್ಕಯ್ಯ ಪಂಡಿತನು, ವಚನಕಾರ ಉಳಿಯುಮೇಶ್ವರ ಚಿಕ್ಕಣ್ಣನಿಂದ ಭಿನ್ನನಾದವನು.

ಉಳಿಯುಮೇಶ್ವರ ಚಿಕ್ಕಣ್ಣ ನಿಸ್ಸಂಶಯವಾಗಿ ಬಸವ ಸಮಕಾಲೀನ ಶರಣ. ಸದ್ಯಕ್ಕೆ ಅವನ ೧೨ ವಚನಗಳು ದೊರತಿವೆ. ಅವನು ಮಹಾಜ್ಞಾನಿ, ಪಂಡಿತ, ವಿದ್ವಾಂಸನಲ್ಲ: ಸಾಮಾನ್ಯ ಶರಣ. ಅವನಿಗೆ ವಚನ ರಚನೆಯಲ್ಲಿ ಭಾವಪ್ರಧಾನವೇ ಹೊರತು ಬುದ್ಧಿಪ್ರಧಾನವಲ್ಲ. ಹೀಗಾಗಿ ಅವನ ವಚನ ವ್ಯಾಕರಣದ ಕಟ್ಟು ಪಾಡುಗಳಿಗೆ ಒಳಗಾಗುವುದಿಲ್ಲ. ಅವನಿಗೆ ಶಿವಶರಣರ 'ದೇಹವೇ ದೇವಾಲಯ' ಎನ್ನುವ ಪರಿಕಲ್ಪನೆಯಲ್ಲಿ ತುಂಬು ವಿಶ್ವಾಸ. ಹೀಗಾಗಿ ಸಮಸ್ತ ಪುಣ್ಯಕ್ಷೇತ್ರಗಳೂ ತನ್ನಲ್ಲಿಯೇ ಇದೆ. ಏಕೆಂದರೆ, ದೇಹವೆನ್ನುವ ದೇವಾಲಯದಲ್ಲಿರುವ ದೇವನಿಗೆ ನಾಮಾಂತರಗಳಿವೆಯೇ ಹೊರತು ಆತ ಒಬ್ಬನೇ ದೈವ- ಅರ್ಥಾತ್ ಉಳಿಯುಮೇಶ್ವರ ತನ್ನ ಇಷ್ಟದೈವ. ಈ ಭಾವವನ್ನು ಹೊರಸೂಸುವ ಅವನ ವಚನದ ಮುಕ್ತ ಬಂಧವನ್ನು ಗಮನಿಸಬೇಕು.

*ವಾರಣಾಸಿ ಅವಿಮುಕ್ತಿ ಇಲ್ಲಿಯೇ ಇದ್ದಾನೆ*
*ಹಿಮದ ಕೇತಾರ, ವಿರೂಪಾಕ್ಷ ಇಲ್ಲಿಯೇ ಇದ್ದಾನೆ*
*ಗೋಕರ್ಣ, ಸೇತುರಾಮೇಶ್ವರ ಇಲ್ಲಿಯೇ ಇದ್ದಾನೆ*
*ಶ್ರೀಶೈಲ ಮಲ್ಲಿನಾಥ ಇಲ್ಲಿಯೇ ಇದ್ದಾನೆ*

೧೮೬, ೭ನೇ ಮುಖ್ಯರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು - ೪೦.

*ಸಕಲ ಲೋಕ ಪುಣ್ಯ ಕ್ಷೇತ್ರ ಇಲ್ಲಿಯೇ ಇದ್ದಾನೆ*
*ಸಕಲಲಿಂಗ ಉಳಿಯುಮೇಶ್ವರ ತನ್ನಲ್ಲಿ ಇದ್ದಾನೆ.*

*(ವ. ೧೬೩೮)*

ಚನ್ನಬಸವಣ್ಣ ಇಷ್ಟಲಿಂಗವನ್ನು ವೀರಶೈವ ಗುರುವಿನಿಂದ ಸ್ವೀಕರಿಸಬೇಕೇ ವಿನಾ ಶೈವಗುರುವಿನಿಂದಲ್ಲ ಎಂದಿರುವನು(ವ ೮೮೧: ೧೪೮೩) ಮುಂಡೆಯ ಕೈಯಲ್ಲಿ ಬಾಗಿನವ ಸ್ವೀಕರಿಸುವುದನ್ನು ಗಂಡನುಳ್ಳ ಗರತಿಯರು ಮೆಚ್ಚರು; ಹಾಗೆಯೇ ಶೈವಗುರುವಿನ ಕೈಯಲ್ಲಿ ಲಿಂಗಸಾಲಿತ್ಯವಾಗುವುದನ್ನು ವೀರಶೈವ ಶರಣರು ಮೆಚ್ಚರು. ಆದ್ದರಿಂದ **'ಶೈವಗುರುವಿನ ಕೈಯಲ್ಲಿ ಸಾಹಿತ್ಯವಪ್ಪುದರಿಂದ ಸಾವುದೇ ಲೇಸಯ್ಯ'** ಎಂದು ತನ್ನ ಉಗ್ರ ವೀರಶೈವನಿಷ್ಠೆಯನ್ನು ಚನ್ನಬಸವಣ್ಣ ಪ್ರಕಟಪಡಿಸಿರುವನು. ಆದರೆ, ಉಳಿಯುಮೇಶ್ವರ ಚಿಕ್ಕಣ್ಣ ಉದಾರವಾದಿ. ಅವನು ಇದಕ್ಕೆ ತದ್ವಿರುದ್ಧವಾಗಿ 'ಶೈವನೇಮಸ್ಥರ ಕೈಯಲುಪದೇವಾದೊಡೇನಯ್ಯಾ ಅಲ್ಲಿ ಏನೂ ಊನಯವಿಲ್ಲ ಪಾರಂಪರ್ಯದಲ್ಲಿ ನಡೆದತ್ತಾಗಿ' ಎನ್ನುವನು. ತನ್ನ ವಿಚಾರವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತ, ನದಿಮೂಲ ಗುರುಮೂಲವನ್ನು ಯಾರಾದರೂ ಹುಡುಕುವರೇ? ಎನ್ನುವನು. ಗುರು-ಲಿಂಗ-ಜಂಗಮಸಾಕ್ಷಿಯಾಗಿ ಷಡಕ್ಷರ ಓಂಕಾರ ಮಂತ್ರೋಚ್ಚಾರಣೆಗಳಿಂದ ಇಷ್ಟಲಿಂಗಧಾರಣೆಯಾಗಿರುವುದರಿಂದ ಶೈವಗುರುವಿನಿಂದ ಬಂದ ಲಿಂಗವನ್ನು ಚೈತನ್ಯ ಶಕ್ತಿಯನ್ನು ಆವಾಹಿಸಿ ಅದನ್ನು ಶಿಷ್ಯನಿಗೆ ಕೊಡುವುದರಿಂದ ಅದು ಸಾಕ್ಷಾತ್ ಶಿವನ ಪ್ರತಿರೂಪವು. ಇದನ್ನು ಬಲವಾಗಿ ನಂಬಿದರೆ ಅಸಾಧ್ಯವೂ ಸಾಧ್ಯವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಬಳ್ಳೇಶ್ವರದ ಮಲ್ಲಯ್ಯಗಳು ಬಳ್ಳವನ್ನು ಲಿಂಗವನ್ನಾಗಿ ಮಾಡಿದ್ದು; ಕಾಳಹಸ್ತಿಯಲ್ಲಿ ಕಣ್ಣಪ್ಪನು ಸ್ಥಾವರಲಿಂಗವನ್ನೇ ತನ್ನ ಸುಜ್ಞಾನಶಕ್ತಿಯಿಂದ ಗುರು ರೂಪ ಮಾಡಿ ಪೂಜಿಸಿದ್ದು; ಕಲ್ಯಾಣದಲ್ಲಿ ಬಸವಣ್ಣ ಬದನೆಕಾಯಿಯನ್ನು ಲಿಂಗವನ್ನಾಗಿ ಮಾಡಿದ್ದು-ಹೀಗೆ ಮೂರು ಪವಾಡ ಕಥೆಗಳನ್ನು ಹೇಳಿ ಈ ಪುರಾತನರೆಲ್ಲರೂ ಲಿಂಗಪೂಜೆ ಮಾಡುವುದನ್ನು ಬಿಟ್ಟರೆ? ಇವರೆಲ್ಲರೂ ಲಿಂಗವನ್ನು ಪೂಜಿಸಿ ಲಿಂಗದಲ್ಲಿಯೇ ಸಂದರು ಎಂದರು ತನ್ನ ನಿಲುವನ್ನು ಸಮರ್ಥಿಸುವನು.(ವ. ೧೬೬೯)

ಶರೀರ ಮೂಳೆ, ಚರ್ಮ, ಮಾಂಸ, ರಕ್ತ, ಮಾಂಸ ಖಂಡಗಳು ತುಂಬಿದ ಚೀಲ. ಇದು ನಿಷ್ಪ್ರಯೋಜಕವಾದುದು. ಇದನ್ನು ನಾನೆಂತು ಸಲಹಲಿ? ಇದನ್ನು ಹೊತ್ತು ತೊಳಲುವುದು ಯಾವಾಗ ಕೊನೆಗೊಳ್ಳುತ್ತದೆ? ಯಾವಾಗ ಇದರ ಸಂಶಯವನ್ನು ನಾನು ಬಿಡುವುದು? ಹೊತ್ತ ನೀರಿನ ಕೊಡ ಎಡಹಿದ ಕಾರಣ ಒಡೆದು ಮರಳಿ ನೀರನ್ನು ಸೇರುವಂತೆ ನನ್ನ ಶರೀರ ನಾಶವಾಗಿ ನಾನು ನಿಮ್ಮೊಡನೆ ಎಂದು ಬೆರೆಯುವೆನೊ? ಎನ್ನುವ ಆರ್ತತೆ ಈ ಭಕ್ತನದು(ವ. ೧೬೨೮). ಒಂದು ಜನ್ಮವಲ್ಲ, ಎಂಬತ್ತ ನಾಲ್ಕು ಲಕ್ಷ ಜನ್ಮಗಳ ದುಃಖವನ್ನು ನಾನು ಎಂದಿಗೆ ನೀಗಿಕೊಳ್ಳುವೆನು? ನಾನು ಮುಗ್ಧ ಶಿಶು, ನೊಂದಿರುವೆ, ಎನ್ನನ್ನು ತಂದೆಯಂತೆ ಕಂದ ಬಾ ಎಂದು ಕರೆದು ಕಂಬನಿಯನ್ನು ತೊಡೆದು ಎನ್ನನ್ನು ಆನಂದದಿಂದ ಎತ್ತಿಕೊಳ್ಳುವುದು ಯಾವಾಗ? ನನ್ನ ಮೇಲೆ ಕಣ್ಣು ಬಿಟ್ಟು ನೋಡು-ಎಂದು ದಯಾಸಿಂಧುವೂ ಪ್ರೀತಿಯ ತಂದೆಯೂ ಆದ ಪರಮಾತ್ಮನಲ್ಲಿ ಬೇಡುವನು (ವ. ೧೬೩೪) ಪರಮಾತ್ಮನ ಕೃಪಾಕಟಾಕ್ಷಕ್ಕಾಗಿ ಬಹಳ ಕಾಲದಿಂದ ಹಂಬಲಿಸಿರುವ ಭಕ್ತನ ಮನಃಸ್ಥಿತಿಯಂತೆ ಚಿಕ್ಕಣ್ಣ ಎನ್ನ ಮನವನ್ನು ಮಂಚವ ಮಾಡಿ ತನುವನ್ನು ಸಿಂಗರಿಸುವೆ. ಎನ್ನ ಅಂತರಂಗ-ಬಹಿರಂಗಗಳಲ್ಲಿ ವ್ಯಾಪಿಸಿರುವ ಭಕ್ತವತ್ಸಲ ಶಿವಲಿಂಗದೇವನೆ ಬಾರಯ್ಯ **'ಓಂ ನಮಃ ಶಿವಾಯ'** ಎಂಬ ಷಡಕ್ಷರಮಂತ್ರರನ್ನು ಜಪಿಸುವೆ ಕರುಣೆದೋರು ಎಂದು ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿರುವನು(ವ. ೧೬೩೧). ಚಿಕ್ಕಣ್ಣನಲ್ಲಿ ಭಕ್ತಿಯ ಆರ್ದ್ರತೆಯಿದೆ, ಹಾಗೆಯೇ ಅದನ್ನು ಅಭಿವ್ಯಕ್ತಿಸುವಲ್ಲಿ ಭಾಷೆಗೆ ಸಹಜಗುಣವನ್ನು ತರುವಲ್ಲಿ ಕಲಾತ್ಮಕ ಸೌಂದರ್ಯವನ್ನು ಮೆರೆಯುವನು. ಇಲ್ಲಿ ಭಕ್ತನ ಅಂತರಂಗದ ನಿವೇದನೆ ಭಾಷೆಯಲ್ಲಿ ಮೈದುಂಬಿ ಹೊಸಜೀವಕಳೆ ಭಾಷೆಗೆ ಪ್ರಾಪ್ತವಾಗಿ ಬಿಡುತ್ತದೆ. ಭಕ್ತಿಯಲ್ಲಿ ಜೀವದ್ಭಾಷೆಯದೇ ಮುಖ್ಯ ಪಾತ್ರ. ಚಿಕ್ಕಣ್ಣನ ಈ ವಚನ ಅವನ ಅಂತರಂಗದ ಸಾಂದ್ರಭಕ್ತಿಯ ತುಡಿತಕ್ಕೆ ಒಂದು ಸೊಗಸಾದ ಉದಾಹರಣೆ,

***ಎಲುವೊಡೆದು, ತನು ಕರಗಿ ಮನವು ಝುಜ್ಜರಂಬೋಗಿ,***
*ಲಿಂಗದಲ್ಲಿ ನೀರು ನೀರಾಗಿ ಬೆರೆಸಲಿಬೇಕು.*
*ಜಂಗಮದಲ್ಲಿ ವಾರಿಕಲ್ಲಾಗಿ ಕರಗಲಿಬೇಕು.*
*ಸರ್ವಾಂಗಪುಳಕಂಗಳೊಡೆದು ಕಡಲುಗಳಾಗಿ*
*ನಿರ್ವಾಣಪದವೆಂದಪ್ಪುದೋ ಉಲೀಯುಮೇಶ್ವರಾ ?*

*(ವ. ೧೬೩೨)*

*'ಲಿಂಗಾಂಗ ಸಾಮರಸ್ಯ'*ದ ಸ್ಥಿತಿಯನ್ನು ಈ ವಚನಕಾರ ***'ನಿರ್ವಾಣಪದ'***ಎಂದು ಕರೆದಿರುವುದನ್ನು ಗಮನಿಸಬೇಕು. ಚಿಕ್ಕಣ್ಣನ ಆತ್ಮವಿಮರ್ಶೆಯಲ್ಲಿ ಅವನ ಮಾನಸಿಕ ಸ್ಥಿತಿಯನ್ನು

ನಾವು ಗುರುತಿಸಬಹುದಾಗಿದೆ. ಅವನ ಈ ಮಾತುಗಳನ್ನು ಗಮನಿಸಿದಾಗ, ತನ್ನಲ್ಲಿ ಅಂತರಂಗ ಶುದ್ಧಿ ಇನ್ನೂ ಸಾಧಿತವಾಗಿವಾಗಿಲ್ಲವೆನ್ನುವ ನೋವಿನ ಎಳೆಯನ್ನು ಗುರುತಿಸಬಹುದು. ಹಾಗೆಯೇ ಅವನ ಆತ್ಮವಿಮರ್ಶೆಯಲ್ಲಿ ತನ್ನನ್ನು ಒರೆಹಚ್ಚುವ ಪ್ರಾಂಜಲ ಮನೋಭಾವವೂ ಇದೆ. ಅದು ಎಲ್ಲರಿಗೂ ಸಾಧ್ಯವಾಗುವ ನಿಲುಮೆಯಲ್ಲ:

*ಆನು ಭಕ್ತ, ಆನು ಶರಣ, ಆನು ಲಿಂಗೈಕ್ಯನೆಂದೊಡೆ*
*ಲಿಂಗವು ನಗದೆ?*
*ಪಂಚೇಂದ್ರಿಯಂಗಳು ನಗವೆ? ಅರಿಷಡ್ವರ್ಗಂಗಳು ನಗವೆ?*
*ಎನ್ನ ತನುವಿನೊಳಗಣ ಸತ್ವರಜತಮೋಗುಣಂಗಳು ನಗವೆ?*
*ಹೇಳಯ್ಯಾ ಉಳಿಯುಯೇಶ್ವರಾ*

*(ವ. ೧೬೩೦)*

ಚಿಕ್ಕಣ್ಣ ಪರಿಪಕ್ವಗೊಂಡ ಭಕ್ತನ ಮನಃಸ್ಥಿತಿ ಹೇಗಿರ ಬೇಕೆಂಬುದನ್ನು ಸೊಗಸಾಗಿ ಹೇಳಿರುವನು,



*ತೊರೆಯ ಉದಕವ ಕೊಂಡು*
*ತರಿದು ಸೊಪ್ಪನೆ ಮದ್ದು*
*ಇರವು ಲಿಂಗಗೂಡಾಗಿ ಇರಬೇಕು.*
*ಕೆರೆಯ ನೀರನೆ ಮಿಂದು*
*ಅರುವೆಗಪ್ಪಡ ಉಟ್ಟು*
*ಇರವು ಲಿಂಗಗೂಡಾಗಿ ಇರಬೇಕು.*

ಎಂದು ಹೇಳಿ ಮತ್ತೆ ಅದೇ ವಚನದ ಉತ್ತರಾರ್ಧದಲ್ಲಿ ಅಜ್ಞಾನ ಕವಿದು, ಹೆರರಿಗಾಸೆಯ ಮಾಡಿಸಿ ಅರಿಷಡ್ವರ್ಗಗ ಳಿಂದ ಇರಿದಿರಿದು ಸುಡುವರೆ? ಎಂದು ತನ್ನ ಇಷ್ಟದೈವವನ್ನು ಚಿಕ್ಕಣ್ಣ ಕೇಳಿರುವನು (ವ. ೧೬೩೫) ಎಲುದೋರೆ ಸರಸವಾಡಲೇನು ನಾನು ಭೃಂಗೀಶನೆ? ಸೀಳಿ ಹೊಡೆಯ ಲೇನು ನಾನು ಗಜಾಸುರನೆ? ಹೆಣ್ಣು ಲೀಲೆಯವಾಡಲೇನು ನಾನು ಅಂಧಕಾಸುರನೆ? ಮನವನಲ್ಲಾಡಲೇನು ನಾನು ಸಿರಿಯಾಳನೆ? ನಾನು ಸಾಮಾನ್ಯ ಮನುಷ್ಯ, ನೆಣ-ತೃಣ ದಂತಿರುವವನು. ನನ್ನನ್ನು ಇಷ್ಟು ಬಳಲಿಸುವರೆ? ನನ್ನ ಮೇಲೆ ಕೃಪೆಮಾಡು ಎನ್ನುವಲ್ಲಿ ಭಕ್ತನ ಆರ್ತತೆ ಚಿಕ್ಕಣ್ಣನಲ್ಲಿ ಕಾಣಿಸಿಕೊಂಡಿದೆ (ವ. ೧೬೩೬).

ಚಿಕ್ಕಣ್ಣನ ವಚನಗಳಲ್ಲಿನ ಅಭಿವ್ಯಕ್ತಿಯ ತಾಜಾತನ ಅವನನ್ನು ಒಳ್ಳೆಯ ವಚನಕಾರನನ್ನಾಗಿ ಗುರುತಿಸುವಂತೆ ಮಾಡುತ್ತದೆ. ಸಾಹಿತ್ಯದ ಸಂವಹನಗುಣ ಅವನ ಈ ವಚನದಲ್ಲಿ ತೀರಾ ಸಹಜವಾಗಿ ಸಿದ್ಧಿಸಿಬಿಟ್ಟಿದೆ. ತಾನು ಕೈಲಾಸಕ್ಕೆ ಹೋದಂತೆ, ಅಲ್ಲಿನ ಗಣವರರಿಗೆ ತಾನು ಬಂದಿದ್ದೇನೆಂಬುದನ್ನು ಶಿವನ ಗಮನಕ್ಕೆ ತನ್ನಿ ಎಂದು ಹೇಳುವಲ್ಲಿನ ಕಾಲ್ಪನಿಕ ಚಿತ್ರದ ಸಂಭಾಷಣೆಯ ಮಾರ್ದವತೆಯಲ್ಲಿ ತನ್ನ ಹಾಗೂ ಶಿವನ ಸಂಬಂಧವನ್ನು ಗುರುತಿಸಿಕೊಳ್ಳುವ ರೀತಿ ಅನನ್ಯವಾಗಿದೆ.

*ನಂದಿನಾಥ ಭೃಂಗಿನಾಥ ವೀರಭದ್ರ*
*ಗಣಂಗಳೆಲ್ಲಾ ನೀವು ಕೇಳಿರೆ*
*ನಿಮ್ಮ ತೊತ್ತು ಬಂದಿದ್ದಾನೆಂದು ನೀವು ಹೇಳಿರೆ,*
*ನಿಮ್ಮ ಲೆಂಕ ಬಂದಿದ್ದಾನೆಂದು ನೀವು ಹೇಳಿರೆ,*
*ನಿಮ್ಮ ದಾಸ ಬಂದಿದ್ದಾನೆಂದು ನೀವು ಹೇಳಿರೆ,*
*ಎನ್ನ ದೇವರು ಉಳಿಯುಮೇಶ್ವರನ ಸಿಂ(ಗದ)*
*ಚಿಕ್ಕ ಬಂದಿದ್ದಾನೆಂದು ನೀವು ಹೇಳಿರೆ*

*(ವ. ೧೬೩೬)*

ತನ್ನಇಷ್ಟ ದೈವ ಉಳಿಯುಮೇಶ್ವರನೇ ಕೈಲಾಸದ ಶಿವನೆಂದು ಅವಿನಾಭಾವದಲ್ಲಿ ಗುರುತಿಸಿಕೊಳ್ಳುವ ಚಿಕ್ಕಣ್ಣ ಅದನ್ನು ವಚನದ ಕೊನೆಯ ಎರಡು ಸಾಲುಗಳಲ್ಲಿ ಅತ್ಯದ್ಭುತವಾಗಿ ಪ್ರಕಟಪಡಿಸಿರುವನು.

ಉಳಿಯುಮೇಶ್ವರದ ಚಿಕ್ಕಣ್ಣನು ಗ್ರಾಮೀಣ ಪರಿಸರದ ಓರ್ವ ಸಾಮಾನ್ಯ ಭಕ್ತನೇ ಇರಬಹುದು. ಆದರೆ ಅವನಿಗೆ ಕಲ್ಯಾಣದ ಶರಣರ ಅನುಭಾವದ ಪ್ರಭಾವವಿದೆ. ಆ ಪ್ರಭಾವೀ ವಲಯದಲ್ಲಿ ಕೆಲಕಾಲವಿದ್ದಿರಬಹುದಾದ ಇವನಲ್ಲಿ ಸಹಜವಾಗಿ ಶಿವಶರಣರ ಅನುಭಾವದ ಸಾಧನೆಯ ಪರಿಣಾಮ ಕಾಣಿಸಿಕೊಂಡಿದೆ. ಅವನು ಆ ಪರಿಸರದಲ್ಲಿ ಸಹಜವಾಗಿ ಉಸಿರಾಡಿದ್ದರೂ ಸ್ವಂತಿಕೆಯನ್ನು ಉಳಿಸಿಕೊಂಡಿರುವನು. ಅದು ಅವನ *'ಶೈವನೇಮಸ್ಥರ ಕೈಯಲುಪದೇಶವಾದೊಡೇನಯ್ಯಾ, ಅಲ್ಲಿ ಊನಯವಿಲ್ಲ, ಪಾರಂಪರ್ಯದಲ್ಲಿ ನಡೆದತ್ತಾಗಿ'* ಎನ್ನುವ ಉದಾರೀಧೋರಣೆ ಯಲ್ಲಿ ವ್ಯಕ್ತಗೊಂಡಿದೆ. ಒಂದು ನಿಷ್ಠಾವಂತ ಭಕ್ತಸಮೂಹದ ನಡುವೆ ತನ್ನ ಒಂಟಿದನಿಯನ್ನು ಆತ ಕಾಯ್ದುಕೊಂಡಿರು ವನು. ಅವನು ಸಾಮಾನ್ಯ ವಚನಕಾರನಿರಬಹುದು ಆದರೆ, ಅವನು ತನ್ನ ಸ್ವಂತಿಕೆಯಿಂದಲೇ ಆ ಆಕಾಶಕಾಯದ ನಡುವೆ ತನ್ನನ್ನು ಗುರುತಿಸಿಕೊಳ್ಳುವನು.



# ಜನಪದರ ಇಷ್ಟಲಿಂಗ ನಿಷ್ಠೆ

– ಗೊ.ರು. ಚನ್ನಬಸಪ್ಪ *

ಶರಣ ಧರ್ಮದ ತಿರುಳು, ಕರುಳು ಇಷ್ಟಲಿಂಗ ನಿಷ್ಠೆ. ಇಷ್ಟಲಿಂಗ ಪೂಜೆ ಎಂದರೆ ವಿಗ್ರಹಾರಾಧನೆಯಲ್ಲ, ಇಷ್ಟಲಿಂಗ ವಿಗ್ರಹವಲ್ಲ. ಅದು ಗುರುಕಾರುಣ್ಯದ ಕರಸ್ಥಳದ ಚುಳುಕು ! ಭಕ್ತನ ಬಹಿರ್‌ದೃಷ್ಟಿಯನ್ನು ಅಂತರ್ಮುಖಿಯಾಗಿಸುವ ಮಾಧ್ಯಮ. ಹರಿದು ಹಂಚಿಹೋಗುವ ಮನವನ್ನು ಒಂದೆಡೆ ತಂದು ನಿಲ್ಲಿಸುವ ಆಯಸ್ಕಾಂತ. ಆದರ ಆಕಾರ ಗೋಲಾಕಾರ; ಬ್ರಹ್ಮಾಂಡವನ್ನೂ ಮೀರಿದ ಸಂಕೇತ.

ಶರಣ ಧರ್ಮದ ಶರಧಿ ಬಸವಣ್ಣನ ನುಡಿಯಲ್ಲೇ ಹಿಡಿದಿಡುವುದಾದರೆ ಅದು –

*ಜಗದಗಲ, ಮುಗಿಲಗಲ ಮಿಗೆಯಗಲ ನಿಮ್ಮಗಲ,*
*ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,*
*ಬ್ರಹ್ಮಾಂಡದಿಂದವೆ ಅತ್ತತ್ತ ನಿಮ್ಮ ಶ್ರೀ ಮಕುಟ,*
*ಅಗಮ್ಯ ಆಗೋಚರ ಅಪ್ರತಿಮ ಲಿಂಗವೇ,*
*ಕೂಡಲಸಂಗಮದೇವಯ್ಯ*
*ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ !*

ಈ ವಚನದ ವಿವರಣೆ ನನ್ನಂಥವರಿಗೆ ನಿಲುಕದು. ಬಸವಣ್ಣ ಇಷ್ಟಲಿಂಗವನ್ನು ಕುರಿತು ಹೇಳುವ ಮಾತುಗಳನ್ನೇ, ನಾನು ಈ ವಚನ ಕುರಿತು ಹೇಳಬಹುದು ಅಷ್ಟೆ. ಆದರೆ, ನಮ್ಮ ಹಳ್ಳಿಯ ತಾಯಿಗೆ ಅಣ್ಣನ ಮಾತು ಅರ್ಥವಾಗಿದೆ. ಅವಳ ಅನುಭವಕ್ಕೆ ವೇದ್ಯವಾಗಿದೆ. ಇಷ್ಟಲಿಂಗದ ಮಹತ್ವ ಮನವರಿಕೆಯಾಗಿದೆ. ಎಂತಲೇ –

*ಹೂವು ಹೆರಳಿಗೆ ಚೆಂದ, ಮುತ್ತು ಕೊರಳಿಗೆ ಚೆಂದ,*
*ಚುಕ್ಕಿಗಳು ಚೆಂದ ಮುಗಿಲಿಗೆ – ಕಂದಯ್ಯ*
*ಅಂಗೈಗೆ ಚೆಂದ ಲಿಂಗಯ್ಯ !*

ಎನ್ನುತ್ತಾಳೆ. ಆಕೆಯ ದೃಷ್ಟಿಯಲ್ಲಿ ಇಷ್ಟಲಿಂಗ ಒಂದು ಚೆಂದದ ಆಭರಣ. ಆದರೆ ಅದು ಉಳಿದ ಆಭರಣದಂತಲ್ಲ. ತೇಜಸ್ಸಿನ ಆಭರಣ; ಓಜಸ್ಸಿನ ಆಭರಣ; ಅನುಭಾವದ ಆಭರಣ; ಅಂತಃಚಕ್ಷುವನ್ನು ತೆರೆಸುವ ಆಭರಣ; ಅಂತರಂಗವನ್ನು ಅರಳಿಸುವ ಆಭರಣ; ಆತ್ಮನಿರೀಕ್ಷೆಯ ಆಭರಣ; ಅದು ಸರ್ವಾಭರಣ. ಸ್ವಸ್ವರೂಪ ದರ್ಶನದ ದರ್ಪಣ !

ಇಷ್ಟಲಿಂಗದ ನಿಷ್ಠೆ ಬಲಗೊಂಡರೆ ಬದುಕಿನ ಸವಾಲುಗಳನ್ನು ಎದುರಿಸುವ ಆತ್ಮಸ್ಥೈರ್ಯ, ಆತ್ಮವಿಶ್ವಾಸಗಳು ಉಂಟಾಗುತ್ತವೆ. ಇಷ್ಟಲಿಂಗ ಧರಿಸಿದ ಭಕ್ತ ಕೆಚ್ಚಿನ ಕಲಿಯಾಗುತ್ತಾನೆ. ಜನಪದ ತ್ರಿಪದಿಯೊಂದು ಇದಕ್ಕೆ ಸಾಕ್ಷಿಯಿದೆ:

*ಹಚ್ಚ ಹಣೆಯಮ್ಯಾಲ, ಬಟ್ಟೀನ ವಿಭೂತಿ*
*ಇಚ್ಚೇಯ ಲಿಂಗ ಎದಿಮ್ಯಾಲ – ಇದ್ದರ*
*ಕಿಚ್ಚೀನ ಕೆಂಡ ತುಳಿದೇನ !*

ಎಂತಹ ಕೆಚ್ಚಿನ ಮಾತು ! ಇಲ್ಲಿನ ಇಚ್ಛೆಯ ಲಿಂಗವೆಂದರೆ ಇಷ್ಟಲಿಂಗವೇ. ಆ ಇಷ್ಟಲಿಂಗದ ಪೂಜೆಯ ಮಾತಿರಲಿ; ಅದು ಎದೆಯ ಮೇಲಿದ್ದರೂ ಸಾಕು, ನಮಗೆ ರಕ್ಷೆಯಾಗುತ್ತದೆ. ಆ ರಕ್ಷೆಯೊಂದಿದ್ದರೆ ಕಷ್ಟ–ಕಾರ್ಪಣ್ಯಗಳ ಕೆಂಡದ ಮೇಲಾದರೂ ನಡೆದೇನು ಎಂಬ ಧೈರ್ಯ. ಶರಣ ಧರ್ಮಾಚರಣೆಯ ಸಂಸ್ಕೃತಿ ಸೊಲ್ಲಿದು.

ನಮ್ಮ ಜನಪದರ ಸೊಲ್ಲುಗಳು ಅಧ್ಯಯನ ಕಲಿಕೆಯ ಫಲವಲ್ಲ; ಸ್ವಂತ ಬದುಕಿನ ಅನುಭವದ ಫಲ. ಅವರು ತಮಗರಿವಿಲ್ಲದೆಯೇ ಆದ ಅನುಭಾವಿಗಳು. ಬಹುಶಃ ಇಷ್ಟಲಿಂಗದ ಬಗೆಗೆ ನಮ್ಮ ಜನಪದರಿಗಿರುವಷ್ಟು ನಿಷ್ಠೆ ಅದನ್ನು ಕುರಿತು ಓದಿಕೊಂಡವರಿಗೂ ಇರಲಾರದು.

ಜನಪದರ ಇಷ್ಟಲಿಂಗ ಪೂಜೆಯ ವೈಭವವನ್ನು ನೋಡಿ:

*ತೆಂಗೀನ ತೋಟಕ್ಕೆ ತಿಂಗಳಿಂದ ಮಳೆಯಿಲ್ಲ*
*ಸಂಗಯ್ಯ ಶರಣ ಲಿಂಗಯ್ಯ–ಮಿಂದ ನೀರು*
*ತೆಂಗೀನ ತೋಟಕ್ಕೆ ಹರಿದಾವು !*

ಎಂತಹ ಭಾವಪೂರ್ಣ ನುಡಿಗಳು ! ಲಿಂಗಕ್ಕೆ ಎರೆದ ನೀರು ಬರಿಯ ನೀರಲ್ಲ; ಭಕ್ತಿಯ ಸುಜಲ. ಅದು ಬದುಕಿನ ತೋಟಕ್ಕೆ ಹರಿದಿದೆ; ಬವಣೆಯನ್ನು ನೀಗಿದೆ. ಬರಡು ಬದುಕಿನ ನೆಲಕ್ಕೆ ತಂಪೆರೆದಿದೆ. ಹಸಿರು ಹೊಮ್ಮಿಸಿದೆ. ಸಮೃದ್ಧಿಯುಂಟು ಮಾಡಿದೆ. ಸ್ವಾವಲಂಬನೆಯ ಫಲ ತಂದುಕೊಟ್ಟಿದೆ.

*ಲಿಂಗಯ್ಯ ಇರುವಾಗ ಹಂಗಿನಂಜಿಕೆ ಬ್ಯಾಡ*
*ಭಂಗಬಟ್ಟುಂಬ ಭಯ ಬ್ಯಾಡ – ಗೆಳತ್ಯಮ್ಮ*
*ಸಂಗಯ್ಯ ಶರಣರಿರುವಾಗ.*

* ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಶಿವರಾತ್ರೀಶ್ವರ ಕೇಂದ್ರ, ೮ನೆಯ ವಿಭಾಗ, ಜಯನಗರ, ಬೆಂಗಳೂರು – ೮೨.

ಲಿಂಗನಿಷ್ಠೆ ಇದ್ದವರಿಗೆ ಹಂಗು ಹೆದರಿಕೆಗಳಿರುವುದಿಲ್ಲ. ಅವರು ಭಂಗಪಟ್ಟು ಉಣ್ಣುವುದಿಲ್ಲ. ಸ್ವತಃ ಕಾಯಕ ಮಾಡಿ ಬೆವರು ಹರಿಸಿ ದುಡಿದು, ಬಂದುದನ್ನು ಶಿವನ ಪ್ರಸಾದವೆಂದು ಪರಿಭಾವಿಸುತ್ತಾರೆ. ಆ ಪ್ರಸಾದವನ್ನು ಹಸಿದವರೊಡನೆ ಹಂಚಿಕೊಳ್ಳುತ್ತಾರೆ. ಅವರ ಇಷ್ಟಲಿಂಗ ಪೂಜೆ ವೈಯಕ್ತಿಕವಾದರೂ ಪೂಜೆಯ ಫಲ ಸಾರ್ವತ್ರಿಕ.

ನಮ್ಮ ಹಳ್ಳಿಗರೇನೂ ಶಾಸ್ತ್ರಪುರಾಣಗಳನ್ನು ಓದಿದವರಲ್ಲ, ಆದರೆ ಅವರ ಸೊಲ್ಲುಗಳು ಶಾಸ್ತ್ರಪುರಾಣಗಳಿಗಿಂತ ಹಿರಿದಾದವು. ಏಕೆಂದರೆ, ಅವು ಬುದ್ಧಿಯ ಫಲಸೃಷ್ಟಿಯಲ್ಲ, ಬದುಕಿನ ಅನುಭಾವದ ಫಲಸೃಷ್ಟಿ. ಅವರಿಗೆ ತಮ್ಮ ಬದುಕೇ ಶಾಲೆ; ಅನುಭವವೇ ಗುರು. ಅವರು ಸೊಲ್ಲು ಸೊಲ್ಲಿಗೆ ಶರಣರನ್ನು ನೆನೆಯುತ್ತಾರೆ. ಹಸಿದ ಹಸುವಿಗೆ ಹುಲ್ಲು ಹಾಕುತ್ತಾರೆ. ಶಿಶುವಿಗೆ ಹಾಲುಣಿಸುತ್ತಾರೆ. ಬಿಸಿಲಲ್ಲಿ ನಿಂತವರನ್ನು ನೆರಳಿಗೆ ಕರೆಯುತ್ತಾರೆ.

ಇಂತಹ ಪರಮ ಸಾತ್ವಿಕ ಬದುಕುವ ಜನಪದರನ್ನು ಅವರು ನಂಬಿದ ದೈವ ಕೈಬಿಡಲು ಸಾಧ್ಯವೇ ? ಅವರು ದೇವರಿಗೆ ಮೊರೆಯಿಡಲೇಬೇಕಿಲ್ಲ –

*ಚಿಂತೆ ಮಾಡ್ಹೊತ್ತಿಗೆ ಅಂತುರಲಿ ಶಿವ ಬಂದ*
*ಚಿಂತ್ಯಾಕೆ ನಿನಗೆ ಹಸುಮಗಳೆ – ಲಿಂಗಯ್ಯ*
*ಚಿಂತಿಲ್ದ ಅನ್ನ ಕೊಡುತಾನೆ !*

ಈ ಸೊಲ್ಲಿನ ಸೊಗಸು ನೋಡಿ. ಆಕೆ ಚಿಂತೆ ಮಾಡುವಷ್ಟರಲ್ಲಿ ಶಿವನೇ ಬಂದು ಚಿಂತಿಲ್ಲದ ಅನ್ನ ಕೊಟ್ಟು ಸಲಹುತ್ತಾನೆ ಎಂದು ಮಗಳಿಗೆ ಸಾಂತ್ವನ ಹೇಳುತ್ತಾಳೆ ! ಲಿಂಗಯ್ಯ ಕೊಡುವ ಅನ್ನ ಮತ್ತೆ ಮತ್ತೆ ಹಸಿಯುವ ಅನ್ನವಲ್ಲ; ಹಸಿಯದ ಅನ್ನ. ಹಸಿದರೆ ತಾನೆ ಚಿಂತೆ. ಆ ಅನ್ನ ಅಂಗಗುಣಗಳನ್ನು ಕಳೆದು ಲಿಂಗಗುಣಗಳನ್ನು ಅರಳಿಸುವ ಅನ್ನ. ಅರಿವಿನ ಪ್ರಸಾದ, ಅನುಭಾವದ ಪ್ರಸಾದ; ಆನಂದದ ಪ್ರಸಾದ.

ಈ ಮುಗ್ಧಭಕ್ತೆ ತಾನು ಮಾಡುವ ಶಿವಪೂಜೆ ಮಾತ್ರವಲ್ಲ, ಲೋಕಕಾರಣ ಕರ್ತನಾದ ಭಗವಂತನ ಶಿವಪೂಜೆಯನ್ನೂ ಕಾಣುತ್ತಾಳೆ. ಇದೊಂದು ಅದ್ಭುತ ಕಲ್ಪನೆ:

*ಆಗಸದ ಅಡಿವ್ಯಾಗ ಧೂಪದಾ ಹೊಗೆಯೆದ್ದು*
*ಆಕಾಶದ ಗಂಟೆ ಘಳಿರೆಂದು – ಮಳೆ ಬಂದು*
*ಆಯ್ತು ಮಲ್ಲಯ್ನ ಶಿವಪೂಜೆ !*

ನಮ್ಮ ಶಿವಪೂಜೆಗೆ ತರುವ ನೀರು, ಹೂ, ಪತ್ರೆ, ಧೂಪಗಳು ಶಿವನೇ ಮಾಡುವ ಪೂಜೆಗೆ ಸಾಲುತ್ತವೆಯೇ ? ಇಲ್ಲ. ಅವನ ಪೂಜೆಗೆ ನಿಸರ್ಗವೇ ಸಾಮಗ್ರಿ ಒದಗಿಸಿ ಸೇವೆ ಸಲ್ಲಿಸುತ್ತದೆ. ಬೀಸುವ ಬಿರುಗಾಳಿಗೆ ಎದ್ದ ಧೂಳು ಧೂಪವಾಗಿದೆ. ಬಿದ್ದ ಎಲೆ ಹೂಗಳೇ ಪತ್ರೆ ಪುಷ್ಪಗಳಾಗುತ್ತವೆ. ಮೋಡಗಳ ಸಂಘರ್ಷದಿಂದುಂಟಾಗುವ ಮಿಂಚು ಆರತಿಯಾಗುತ್ತದೆ. ಗುಡುಗಿನ ಸದ್ದು ಘಂಟೆಯ ದನಿಯಾಗುತ್ತದೆ. ಸುರಿಯುವ ಮಳೆ ಲಿಂಗಕ್ಕೆ ಅಭಿಷೇಕವಾಗುತ್ತದೆ. ಆಗ ಆಯ್ತು ಮಲ್ಲಯ್ನ ಶಿವಪೂಜೆ ! ಸಾಕ್ಷಾತ್ ಶಿವನ ಪೂಜೆಯೆಂದರೆ ಸಾಮಾನ್ಯವೇ ? ಆಗಸದಿಂದ ಬಿದ್ದ ಮಳೆ ನೆಲವನ್ನು ಹದಗೊಳಿಸುತ್ತದೆ. ಲೋಕಕ್ಕೆ ಬೇಕಾದ ಸಮೃದ್ಧ ದವಸ ಧಾನ್ಯ ಬೆಳೆಯುತ್ತದೆ. ಸಕಲ ಜೀವರಾಶಿಗಳಿಗೂ ಪ್ರಸಾದ (ಶಿವನಪೂಜೆಯ ಫಲ) ದೊರೆಯುತ್ತದೆ.

ಹೀಗೆ ನಿಸರ್ಗದ ಸಹಜ ನಡೆಯನ್ನೇ ಶಿವನ ಪೂಜೆ ಎನ್ನುವುದು ಸಾಮಾನ್ಯ ಕಲ್ಪನೆಯಲ್ಲ. ನಾವು ಮಾಡುವ ಪೂಜೆ ಸೀಮಿತ. ಆದರೆ ಶಿವನು ಮಾಡುವ ಪೂಜೆ ಸೀಮಾತೀತ !

ಇಂತಹ ವಿಶ್ವಚೇತನ ಆಕೆಯ ಅಂಗೈಯ ಮೇಲಿದೆ. ತಾನು ಆ ಇಷ್ಟಲಿಂಗದ ಪೂಜೆ ಮಾಡುವಾಗ ಆಕೆ ಬೇಡುವುದೇನನ್ನು ?

*ಅಂಗೈಯ ಒಳಗೆ ಲಿಂಗಮೂರುತಿ ಸ್ವಾಮಿ*
*ಮಂಗಳಾರತಿಯ ನಾ ಬೆಳಗಿ – ಬೇಡುವೆ*
*ಮಾರಾಯರ ಮುಂದೆ ಮರಣಾವ.*

ತಾನು ಮುತ್ತೈದೆಯಾಗಿ ಮರಣ ಹೊಂದಬೇಕೆಂಬುದು ಆಕೆಯ ಆಸೆ. ಈ ಮಾತು ನಮ್ಮ ಸಾಮಾಜಿಕ ವ್ಯವಸ್ಥೆಯ ಒಂದು ಲೋಪವನ್ನು ತಿಳಿಸುತ್ತದೆ. ಗಂಡ ತೀರಿಕೊಂಡಮೇಲೆ ಹೆಂಡತಿಗೆ ವಿಧವೆಯ ಪಟ್ಟ ಕಟ್ಟುವ ಸಮಾಜ ಆಕೆಯ ಸ್ಥಾನ ಮಾನವನ್ನು ಕಂದಿಸಿ, ಕುಂದಿಸಿಬಿಡುತ್ತದೆ. ಆ ಸ್ಥಿತಿಯನ್ನು ಅನುಭವಿಸುವುದಕ್ಕಿಂತ ಮೊದಲೇ ಕಣ್ಮರೆಯಾಗಬೇಕೆಂಬುದು ಅವಳ ನಿಲುವು.

ಹಾಗೆಯೇ ಇಷ್ಟಲಿಂಗದ ಪರಿಕಲ್ಪನೆಯನ್ನು ತಂದುಕೊಟ್ಟ ಬಸವಣ್ಣನಲ್ಲಿ ನಮ್ಮ ಹಳ್ಳಿಯ ತಾಯಿಗೆ ಅನನ್ಯ ಭಕ್ತಿ. ಅವನಲ್ಲೂ ಒಂದು ಬೇಡಿಕೆ ಸಲ್ಲಿಸುತ್ತಾಳೆ.

ಎಂತಹ ಸುಂದರ ಬೇಡಿಕೆ ! ಆಕೆ ಬಸವಣ್ಣನಲ್ಲಿ ಕೇಳುತ್ತಿರುವುದು ಭೌತಿಕ ಸಂಪತ್ತನ್ನಲ್ಲ. ಬದುಕಿರುವವರೆಗೂ ಅಭಿಮಾನದಿಂದ ಬಾಳುವ ವರ ಕೇಳುತ್ತಾಳೆ. ಆಕೆಯ ಇಷ್ಟಲಿಂಗದಲ್ಲಿ ನಿಷ್ಠೆಯ ದೃಷ್ಟಿಯಿಡುತ್ತಾಳೆ. ಅಲ್ಲಿ ಬಸವಣ್ಣನೆಂಬ ಮಹಾಲಿಂಗವನ್ನೇ ಕಾಣುತ್ತಾಳೆ.

ಈ ಅನಕ್ಷರಸ್ಥ ಹಳ್ಳಿಯ ಹೆಣ್ಣಿಗಿರುವ ನೈಷ್ಠಿಕ ಭಕ್ತಿ ನಮ್ಮಲ್ಲಿ ಎಷ್ಟು ಜನಕ್ಕೆ ಇದ್ದೀತು ?

❑

# ವೀರಶೈವ ಸಿದ್ಧಾಂತದ ಕೆಲವು ವಿಚಾರಗಳು

– ಡಾ|| ಸಿ. ಶಿವಕುಮಾರಸ್ವಾಮಿ *

ಭಾರತ ದೇಶವು ನಾನಾ ಧರ್ಮ ಹಾಗೂ ಸಿದ್ಧಾಂತಗಳ ನೆಲೆವೀಡು. ಇಲ್ಲಿ ಪ್ರಸಿದ್ಧವಾಗಿರುವ ಅನೇಕ ಸಿದ್ಧಾಂತಗಳಲ್ಲಿ ವೀರಶೈವ ಸಿದ್ದಾಂತವೂ ಸಹ ಸುಪ್ರಸಿದ್ಧವಾಗಿದೆ. ಪರಶಿವನ ಅಪ್ಪಣೆಯ ಮೇರೆಗೆ ಶ್ರೀ ಜಗದ್ಗುರು ರೇಣುಕಾಚಾರ್ಯರು ಭೂಲೋಕದಲ್ಲಿ ಅವತರಿಸಿ ವೀರಶೈವ ಸಿದ್ಧಾಂತವನ್ನು ಪ್ರಚುರ ಪಡಿಸಿದ ವಿಷಯವು ವೀರಾಗಮ, ವಿಜಯಾಗಮ, ಸಿದ್ಧಾಗಮ, ಸ್ವಾಯಂಭುವಾಗಮ, ಸುಪ್ರಭೇದಾದಿ ಶಿವಾಗಮಗಳ ಉತ್ತರಭಾಗದಿಂದ ತಿಳಿದು ಬರುತ್ತದೆ. ಅಲ್ಲದೆ ವೀರಶೈವ ಸಿದ್ಧಾಂತಕ್ಕೆ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳೇ ಮೂಲ. ವೀರಶೈವ ಸಿದ್ಧಾಂತದ ವಿಚಾರಗಳು ಶಿವಾಗಮಗಳ ಉತ್ತರ ಭಾಗದಲ್ಲಿ ನಿರೂಪಿತ ವಾಗಿರುವುದರ ಜೊತೆಗೆ ವೇದ, ಉಪನಿಷತ್ತು, ಪುರಾಣ ಮತ್ತು ಇತಿಹಾಸಾದಿ ಗ್ರಂಥಗಳಲ್ಲಿ ಪ್ರಸಂಗಾನುಸಾರವಾಗಿ ಅಲ್ಲಲ್ಲಿ ಪ್ರತಿಪಾದಿಸಲ್ಪಟ್ಟಿರುವುದನ್ನು ಕಾಣಬಹುದು. ಈ ಎಲ್ಲ ಗ್ರಂಥಗಳಲ್ಲಿ ನಿರೂಪಿತವಾಗಿರುವ ವೀರಶೈವ ತತ್ತ್ವಗಳು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ರೇಣುಕಾಗಸ್ತ್ಯ ಸಂವಾದ ರೂಪದಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು ನಿರೂಪಿಸಿದ್ದಾರೆ. ಆದ್ದರಿಂದ ಶ್ರೀ ರೇಣುಕಾಚಾರ್ಯರು ಮಹಾಮಹಿಮಾಶಾಲಿಯಾದ ಅಗಸ್ತ್ಯ ಮಹರ್ಷಿಯನ್ನು ನಿಮಿತ್ತ ಮಾಡಿಕೊಂಡು ಜಗತ್ತಿಗೆ ಉಪದೇಶಿಸಿದ ವೀರಶೈವ ಸಿದ್ಧಾಂತವನ್ನು ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲಾಗುವುದು.

**ವೀರಶೈವ ಶಬ್ದದ ನಿರ್ವಚನ** : ವೀರಶೈವ ಧರ್ಮದ ವೈಶಿಷ್ಟ್ಯವು ಅದರ ಹೆಸರಿನಲ್ಲಿಯೇ ಅಡಕವಾಗಿದೆ. ಆದ್ದರಿಂದ ಶ್ರೀ ರೇಣುಕಾಚಾರ್ಯರು ವೀರಶೈವ ಸಿದ್ಧಾಂತದ ಬೋಧನೆಯನ್ನು 'ವೀರಶೈವ' ಶಬ್ದದ ನಿರ್ವಚನದಿಂದಲೇ ಆರಂಭಿಸುತ್ತಾರೆ. ಆ ನಿರ್ವಚನವು ಇಂತಿದೆ –

*ವಿಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯಬೋಧಿಕಾ ।*
*ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥*
*ವೇದಾಂತಜನ್ಯಂ ಯದ್‌ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।*
*ವಿದ್ಯಾಯಾಂ ರಮತೇ ಯಃಸ ವೀರ ಇತ್ಯಭಿಧೀಯತೆ ॥*
*ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।*
*ತಸ್ಮಾದೇತೇ ಮಹಾಭಾಗ ವೀರಶೈವಾ ಇತಿ ಸ್ಮೃತಾಃ ॥*

*(ಸಿದ್ಧಾಂತ ಶಿಖಾಮಣಿ : ೫.೧೫-೧೭)*

ಇದರ ತಾತ್ಪರ್ಯವೇನೆಂದರೆ 'ವಿ' ಎಂಬ ಶಬ್ದವು ಲಿಂಗಾಂಗ ಸಾಮರಸ್ಯರೂಪ ವಿನೋದದಿಂದ ರಮಿಸುತ್ತಾರೆಯೋ ಅವರು ವೀರಶೈವರು. ವೇದಾಂತವು ಪ್ರತಿಪಾದಿಸುವ ಜ್ಞಾನವು ವಿದ್ಯೆ. ಅದರಲ್ಲಿ ಆನಂದಿಸುವವರು ವೀರರು. ಪರಶಿವನ ಸಚ್ಚಿದಾನಂದ ಸ್ವರೂಪದ ಜ್ಞಾನವೆ ವಿದ್ಯೆ. ಆ ವಿದ್ಯೆಯಲ್ಲಿ ಯಾರಿಗೆ ವಿಶೇಷವಾದ ಆಸಕ್ತಿ ಇರುವುದೋ ಅವರು "ವೀರಶೈವರು".

**ಶಿವದೀಕ್ಷೆ** : ವೀರಶೈವ ಧರ್ಮದ ಆಚರಣೆಗೆ ಶಿವದೀಕ್ಷೆಯೇ ಆರಂಭ. ಶಿವದೀಕ್ಷೆಯು ಒಂದು ಸಂಸ್ಕಾರ. ದೀಕ್ಷೆಯ ಲಕ್ಷಣವನ್ನು ಶ್ರೀ ಸಿದ್ಧಾಂತ ಶಿಖಾಮಣಿಯು ಹೀಗೆ ನಿರೂಪಿಸುತ್ತಾರೆ.

*ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಮ್ ।*
*ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥*

*(ಸಿ.ಶಿ. ೬.೧೧)*

*ಯಾವುದು ಶಿವಜ್ಞಾನವನ್ನುಂಟು ಮಾಡುವುದೋ ಮತ್ತು ಆಣವ, ಕಾರ್ಮಿಕ, ಮಾಯೀಯ ಎಂಬ ಮಲತ್ರಯಗಳನ್ನು ನಾಶ ಮಾಡುವುದೋ ಅದನ್ನು ಜ್ಞಾನಿಗಳು 'ದೀಕ್ಷೆ'* ಎಂದು ಕರೆಯುತ್ತಾರೆ. ಗುರುವು ತನ್ನ ಶಿಷ್ಯನ ಹಸ್ತದಲ್ಲಿ ಅಭಿಷೇಕ ಹಾಗೂ ಮಂತ್ರದಿಂದ ಪವಿತ್ರವಾದ ಲಿಂಗವನ್ನು ಸ್ಥಾಪನೆ ಮಾಡುವುದು ದೀಕ್ಷೆಯ ಪ್ರಮುಖವಾದ ಅಂಗ. ಈ ದೀಕ್ಷೆಯು ವೇಧಾ, ಮನು ಮತ್ತು ಕ್ರಿಯೆ ಎಂದು

* ಸಂಸ್ಕೃತ ಪ್ರಾಧ್ಯಾಪಕರು, ಬಸವೇಶ್ವರ ಪ್ರಥಮ ದರ್ಜೆ ಕಾಲೇಜು, ಬೆಂಗಳೂರು-೧೦

ಮೂರು ವಿಧವಾಗಿದ್ದು, ಅವುಗಳ ಸ್ವರೂಪಾದಿಗಳನ್ನು ಸಿದ್ಧಾಂತ ಶಿಖಾಮಣಿ ವಿಸ್ತೃತವಾಗಿ ನಿರೂಪಿಸಿದೆ.

***ಲಿಂಗಧಾರಣೆಗೆ ಸ್ತ್ರೀ-ಪುರುಷರೆಲ್ಲರೂ ಅರ್ಹರು :***

ವೈದಿಕ, ಜೈನ ಮತಗಳ ರೀತ್ಯಾ ಸ್ತ್ರೀಯರು ಉಪನಯನ ಸಂಸ್ಕಾರಕ್ಕೆ ಅರ್ಹರಲ್ಲ. ಆದರೆ ವೀರಶೈವರಲ್ಲಿ ಸ್ತ್ರೀ-ಪುರುಷರಿಬ್ಬರೂ ಲಿಂಗಧಾರಣೆ ಮತ್ತು ಶಿವದೀಕ್ಷೆಗೆ ಅರ್ಹರು. ಇಲ್ಲಿ ಧರ್ಮಾಚರಣೆಗೆ ಸ್ತ್ರೀ-ಪುರುಷರೆಂಬ ಭೇದವಿರುವುದಿಲ್ಲ. ಸ್ತ್ರೀಯರೂ ಪುರುಷರಂತೆ ಮಾನವರಾದುದರಿಂದ ಯಾವುದೇ ರೀತಿಯ ತರತಮ ಭಾವವು ವೀರಶೈವ ಧರ್ಮದಲ್ಲಿರುವುದಿಲ್ಲ.

***ಲಿಂಗಧಾರಿಗಳಲ್ಲಿ ಜಾತಿಭೇದವಿಲ್ಲ :*** ವೀರಶೈವ ಧರ್ಮದ ವೈಶಿಷ್ಟ್ಯವೆಂದರೆ ಯಾವುದೇ ಜಾತಿಯಲ್ಲಿ ಹುಟ್ಟಿದ ಸ್ತ್ರೀ-ಪುರುಷರೆಲ್ಲರೂ ಲಿಂಗಧಾರಣೆಯ ಮೂಲಕ ವೀರಶೈವರಾಗಬಹುದು. ಶಿವದೀಕ್ಷೆಯಾದ ವ್ಯಕ್ತಿಯು ಜನ್ಮತಃ ಬ್ರಾಹ್ಮಣನಾಗಿರಲಿ, ಕ್ಷತ್ರಿಯನಾಗಿರಲಿ, ವೈಶ್ಯನಾಗಿರಲಿ ಅಥವಾ ಶೂದ್ರನಾಗಿರಲಿ ಅವರ ಹಿಂದಿನ ಜಾತಿಗಳು ನಾಶವಾಗುತ್ತವೆಂದು ಶ್ರೀ ರೇಣುಕಾಚಾರ್ಯರು ಬೋಧಿಸಿದ್ದಾರೆ. ಅಂತೆಯೇ ಶಿವಭಕ್ತರಲ್ಲಿ ಜಾತಿ ಭೇದವನ್ನು ಮಾಡಬಾರದೆಂದು ಅವರು ಸುಂದರವಾದ ದೃಷ್ಟಾಂತದ ಮೂಲಕ ಆದೇಶಿವಿತ್ತಿದ್ದಾರೆ.

*ಶಿವಭಕ್ತಿ ಸಮಾವೇಶೇ ಕ್ವ ಜಾತಿಪರಿಕಲ್ಪನಾ ।*
*ಇಂಧನೇಷ್ವಗ್ನಿದಗ್ಧೇಷು ಕೋ ವಾ ಭೇದಃ ಪ್ರಕೀರ್ತ್ಯತೇ ॥*

*(ಸಿ.ಶಿ. ೧೧.೫೫)*

ಕಟ್ಟಿಗೆಗಳು ಅನೇಕ ಜಾತಿಯವುಗಳಾಗಿದ್ದರೂ ಅವುಗಳು ಬೆಂಕಿಯಲ್ಲಿ ಸುಟ್ಟುಹೋದ ಬಳಿಕ ಹೇಗೆ ಜಾತಿಭೇದ ಮಾಡಲು ಸಾಧ್ಯವಿಲ್ಲವೋ; ಹಾಗೆಯೇ ಬೇರೆ ಬೇರೆ ಜಾತಿಯವರಿಗೆ ಶಿವದೀಕ್ಷಾ ಸಂಸ್ಕಾರವನ್ನು ಮಾಡುವುದರಿಂದ ಅವರ ಜಾತಿ ಸಂಸ್ಕಾರಗಳೆಲ್ಲ ಸುಟ್ಟು ಹೋಗಿ ಅವರು ಪರಿಶುದ್ಧರಾಗುತ್ತಾರೆ. ಹೀಗೆ ಸಂಸ್ಕಾರ ಹೊಂದಿದವರಲ್ಲಿ ಭೇದಭಾವವನ್ನು ಮಾಡಲಾಗುವುದಿಲ್ಲ.

***ಅಷ್ಟಾವರಣಗಳು :*** ಲಿಂಗಧಾರಣ ವಿಧಿಯು ಭಕ್ತನನ್ನು ಅಷ್ಟಾವರಣ ಸಂಪನ್ನನಾಗುವಂತೆ ಮಾಡುತ್ತದೆ. ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ, ಮಂತ್ರ ಪಾದೋದಕ ಮತ್ತು ಪ್ರಸಾದ - ಈ ಎಂಟು ಭಕ್ತನ ಧರ್ಮಶ್ರದ್ಧೆಯನ್ನು ರಕ್ಷಿಸುವ ಕವಚಗಳು. ಆದ್ದರಿಂದ ಇವುಗಳಿಗೆ ಅಷ್ಟಾವರಣಗಳೆಂದು ಹೆಸರು. ಶಿಷ್ಯನಿಗೆ ದೀಕ್ಷಾ ಸಂಸ್ಕಾರವನ್ನು ಮಾಡುವವನು ಗುರು. ಗುರುವು ದೀಕ್ಷಾ ಕಾಲದಲ್ಲಿ ಶಿಷ್ಯನಿಗೆ ನೀಡುವ ಪೂಜ್ಯ ವಸ್ತು ಲಿಂಗ. ಗುರು ಶಿಷ್ಯನಿಗೆ ದೀಕ್ಷೆ ನೀಡುವ ಸಂದರ್ಭದಲ್ಲಿ ಸಾಕ್ಷಿಯಾಗಿ ಇರುವ ವ್ಯಕ್ತಿ ಜಂಗಮ. ಗುರು-ಲಿಂಗ-ಜಂಗಮ ಈ ಮೂರು ಆವರಣಗಳು ಪೂಜನೀಯವಾದವುಗಳು. ಶಿವಪೂಜಾನುಷ್ಠಾನದ ಸಂದರ್ಭದಲ್ಲಿ ಸಾಧಕನು ಶರೀರದ ನಿರ್ದಿಷ್ಟವಾದ ಅಂಗಗಳಲ್ಲಿ ತ್ರಿಪುಂಡ್ರರೂಪವಾಗಿ ಧರಿಸುವಂತಹದು ಭಸ್ಮ. ರುದ್ರಾಕ್ಷಿಗಳು ಶರೀರದಲ್ಲಿ ಧರಿಸುವಂತಹುಗಳು. ಇಷ್ಟಲಿಂಗದ ಪೂಜಾಕಾಲದಲ್ಲಿ ಭಕ್ತನು ಜಪಿಸುವ ಪ್ರಣವಸಹಿತ ಪಂಚಾಕ್ಷರೀ ಮಂತ್ರ. ಭಸ್ಮ-ರುದ್ರಾಕ್ಷಿ-ಮಂತ್ರ ಈ ಮೂರು ಪೂಜಾಸಾಮಗ್ರಿಗಳು. ಗುರು-ಲಿಂಗ-ಜಂಗಮರ ಪೂಜೆಯಿಂದ ಭಕ್ತನು ಪಡೆಯುವ ಪ್ರತಿಫಲವೇ ಪಾದೋದಕ ಮತ್ತು ಪ್ರಸಾದ.

***ವೀರಶೈವರ ಸದಾಚಾರಗಳು :*** ಎಲ್ಲ ಧರ್ಮಗಳಿಗೂ ತಳಪಾಯದಂತಿರುವ ಸದಾಚಾರ ಸಂಹಿತೆಯು ವೀರಶೈವರಿಗೂ ಮಾನ್ಯವೆಂಬುದು ಈ ಮುಂದಿನ ಮಾತಿನಿಂದ ಸ್ಪಷ್ಟವಾಗುತ್ತದೆ.

*ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।*
*ದಾನಂ ಪೂಜಾ ಜಪೋ ಧ್ಯಾನಂ ಇತಿ ಧರ್ಮಸ್ಯ ಸಂಗ್ರಹಃ ॥*

*(ಸಿ.ಶಿ. ೧೬, ೬೨)*

ಅಹಿಂಸೆ, ಸತ್ಯವನ್ನು ಹೇಳುವುದು, ಕಳ್ಳತನ ಮಾಡದಿರುವುದು, ಬ್ರಹ್ಮಚರ್ಯ, ದಯೆ, ಕ್ಷಮೆ, ದಾನ, ಪೂಜೆ, ಜಪ ಮತ್ತು ಧ್ಯಾನ - ಇವುಗಳ ಆಚರಣೆಯೇ ಧರ್ಮಸಂಗ್ರಹ. ಇವು ವೀರಶೈವರ ಸದಾಚಾರಗಳು. ಇವುಗಳ ಆಚರಣೆಯಿಂದಲೇ ವೈಯಕ್ತಿಕ ಶ್ರೇಯಸ್ಸು, ಸಾಮಾಜಿಕ ಸುಭದ್ರತೆ.

***ನವವಿಧ ಭಕ್ತಿ :*** ಶಿವನ ಮಹಿಮೆಯಲ್ಲಿರುವ ವಿಶ್ವಾಸ-ಶ್ರದ್ಧೆಗಳಿಂದ ಪ್ರೇರಿತವಾದ ಭಕ್ತಿಯು ವೀರಶೈವರ ಎಲ್ಲ ಸದಾಚಾರಗಳಿಗೆ ಸ್ಫೂರ್ತಿಯಾಗಿದೆ. ಭಕ್ತಿಯಿಲ್ಲದೆ ಭಕ್ತಸ್ಥಿತಿಯಲ್ಲಿ, ಭಕ್ತನಾಗದೆ ಧರ್ಮದಲ್ಲಿ ಪ್ರವೇಶವಿಲ್ಲ. ಈ ಹಿನ್ನೆಲೆಯಲ್ಲಿ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಎಂಬ ಒಂಬತ್ತು ಬಗೆಯ ಭಕ್ತಿಯ ಸ್ವರೂಪವು ಪುಣ್ಯಾತ್ಮರಿಗೆ ಮಾತ್ರ

ಸುಲಭ ಸಾಧ್ಯವೆಂದು ಪ್ರತಿಪಾದನೆ ಇದೆ. (ಸಿ.ಶಿ. ೯.೨-೩)

*ಶಿವಪಂಚಯಜ್ಞಗಳು :* ವೀರಶೈವ ಸಿದ್ಧಾಂತದಲ್ಲಿ ತಪಸ್ಸು, ಕರ್ಮ, ಜಪ, ಧ್ಯಾನ ಮತ್ತು ಜ್ಞಾನವೆಂಬ ಪಂಚವಿಧ ಪೂಜಾ ಪ್ರಕಾರಗಳನ್ನು ಉಪದೇಶಿಸಲಾಗಿದೆ. ಇವುಗಳನ್ನು ಶಿವಪಂಚಯಜ್ಞಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಶಿವನಿಗೋಸ್ಕರ ದೇಹವನ್ನು ದಂಡಿಸುವುದು ತಪಸ್ಸು. ಶಿವಲಿಂಗದ ಪೂಜೆಯೇ ಕರ್ಮ. ಪಂಚಾಕ್ಷರ ಮಂತ್ರದ ಪುನಃ ಪುನಃ ಆವೃತ್ತಿಯೇ ಜಪ. ಶಿವಸ್ವರೂಪದ ಚಿಂತನೆಯೇ ಧ್ಯಾನ ಮತ್ತು ಶಿವಾಗಮಗಳ ಅರ್ಥವನ್ನರಿಯುವುದೇ ಜ್ಞಾನ. ಈ ಶಿವಪಂಚಯಜ್ಞಗಳ ಆಚರಣೆಯಿಂದ ಭಕ್ತನಿಗೆ ಇಷ್ಟಲಿಂಗದಲ್ಲಿ ಮತ್ತು ಧರ್ಮದಲ್ಲಿ ಶ್ರದ್ಧೆಯುಂಟಾಗುತ್ತದೆ.

*ವೀರಶೈವರಿಗೆ ಸೂತಕಗಳಿರುವುದಿಲ್ಲ :* ಲಿಂಗಾಂಗ ಸಂಗಿಗಳಾದ ವೀರಶೈವರಿಗೆ ಜನನ ಸೂತಕ, ಮರಣ ಸೂತಕ, ಜಾತಿ ಸೂತಕ, ಉಚ್ಛಿಷ್ಟ ಸೂತಕಗಳು ಇರುವುದಿಲ್ಲ. ಅಂತೆಯೇ ಲಿಂಗಾರ್ಚನರತಳಾದ ವೀರಶೈವ ಸ್ತ್ರೀಗೆ ಮಾಸಿಕ ಋತು ಕಾಲದಲ್ಲಿ ಹಾಗೂ ಹೆರಿಗೆಯ ಕಾಲದಲ್ಲಿ ಸೂತಕವಿರುವುದಿಲ್ಲ. ಇಂತಹ ಸೂತಕಗಳ ಪ್ರಸಂಗಗಳು ಬಂದಾಗ ಗುರುಗಳ ಪಾದೋದಕವನ್ನು ಪ್ರೋಕ್ಷಿಸಿಕೊಂಡು ಪರಿಶುದ್ಧರಾಗಬೇಕೆಂಬುದು ಸಿದ್ಧಾಂತ ಸಿಖಾಮಣಿಯ ಮತು. (ಸಿ.ಶ. ೯.೪೩-೪೫). ವೀರಶೈವ ಧರ್ಮಶಾಸ್ತ್ರಾನುಸಾರವಾಗಿ ವೀರಶೈವರಿಗೆ ಆಜೀವ ಪರ್ಯಂತ ಅನುಷ್ಠಾನ ಮಾಡಬೇಕಾದ ಶಿವಪೂಜೆಯ ಸಮಯದಲ್ಲಿ ಮಾತ್ರ ಸೂತಕವಿರುವುದಿಲ್ಲ. ಆದರೆ ಉಳಿದ ಸಂದರ್ಭಗಳಲ್ಲಿ ಸೂತಕಗಳಿರುತ್ತವೆಂದು ತಿಳಿಯಬೇಕು.

**ವೀರಶೈವರು ಆಚರಿಸಬೇಕಾದ ವಿಶಿಷ್ಟ ಆಚರಣೆಗಳು:** ಧರ್ಮದಲ್ಲಿ ಶ್ರದ್ಧೆಯನ್ನು ರಕ್ಷಿಸುವ ಸಲುವಾಗಿ ಕೆಲವು ನಿಯಮಗಳನ್ನು ಬೋಧಿಸಲಾಗಿದೆ. ಅವುಗಳಲ್ಲಿ ವೀರಶೈವರು (೧) ಶಿವಭಕ್ತರಲ್ಲದವರ ಸಹವಾಸವನ್ನು ಮಾಡಬಾರದು, (೨) ಶಿವಾಗಮೋಕ್ತ ಆಚಾರವಂತರನ್ನು ವಿಧಿವತ್ತಾಗಿ ಪೂಜಿಸಬೇಕು (೩) ಶಿವಭಕ್ತರ ಮನೆಗಳಲ್ಲಿಯೇ ಊಟ ಮಾಡಬೇಕು (೪) ವೀರಶೈವಾಚಾರಕ್ಕೆ ವಿಮುಖರಾಗಿರುವ ಭವಿಗಳು ನೀಡಿದ ಯಾವುದೇ ಪದಾರ್ಥಗಳನ್ನು ಸ್ವೀಕರಿಸಬಾರದು (೫) ಶಿವನನ್ನು ಬಿಟ್ಟು ಇತರೆ ದೇವತೆಗಳನ್ನು ಪೂಜಿಸಬಾರದು ಮತ್ತು ಸ್ತುತಿಸಬಾರದು (೬) ಸ್ಥಾವರಲಿಂಗಗಳ ನೈವೇದ್ಯವನ್ನು ಸ್ವೀಕರಿಸಬಾರದು (೭) ಸ್ಥಾವರಲಿಂಗಕ್ಕೆ ಅಥವಾ ಶಿವಭಕ್ತರಿಗೆ ಅಪಾಯವೊದಗಿದಾಗ ಪ್ರಾಣತ್ಯಾಗ ಮಾಡಿಯಾದರೂ ರಕ್ಷಿಸಬೇಕು (೮) ಶಿವನಿಂದೆಯನ್ನು ಕೇಳಬಾರದು. (ಸಿ.ಶಿ. ೯. ೨೭-೩೭).

*ಷಟ್‌ಸ್ಥಲಗಳು :* ವೀರಶೈವ ಸಿದ್ಧಾಂತದಲ್ಲಿ ಪರಶಿವ ಬ್ರಹ್ಮವನ್ನು ಸ್ಥಲ ಎಂದು ಕರೆಯಲಾಗಿದೆ. ಈ ಸ್ಥಲರೂಪ ಪರಶಿವಬ್ರಹ್ಮವು ಅಂಗ-ಲಿಂಗವೆಂದು ಎರಡು ವಿಧವಾಗಿದೆ. ಚಿಚ್ಛಕ್ತಿ ವಿಶಿಷ್ಟಜೀವನು ಅಂಗನೆನಿಸಿದರೆ, ಚಿಚ್ಛಕ್ತಿ ವಿಶಿಷ್ಟ ಪರಶಿವನೇ ಲಿಂಗನೆನಿಸುತ್ತಾನೆ. ಲಿಂಗಾಂಗ ಪದವಾಚ್ಯರಾದ ಶಿವ-ಜೀವರ ಸಮರಸಾತ್ಮಕವಾದ ಐಕ್ಯವನ್ನು ಗುರಿಯಾಗಿಟ್ಟು ಕೊಂಡು ವೀರಶೈವ ಧರ್ಮವು ಷಟ್‌ಸ್ಥಲಗಳನ್ನು ಅಂಗೀಕರಿಸಿದೆಯೆಂದು ಶ್ರೀ ರೇಣುಕ ಭಗವತ್ಪಾದರು ಬೋಧಿಸುತ್ತಾರೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ - ಇವೇ ಆರು ಸ್ಥಲಗಳು. ಯಾವನಲ್ಲಿ ನಿಜವಾದ ಭಕ್ತಿಯು ಉತ್ಪನ್ನವಾಗುವುದೋ ಅವನು ಭಕ್ತ ಎನಿಸುತ್ತಾನೆ. ಸಹಜದಾನದಲ್ಲಿ ನಿಷ್ಣಾತನೂ, ಶಿವಾಸಕ್ತನೂ, ಬ್ರಹ್ಮಾದಿಸ್ಥಾನ ವಿಮುಖನೂ ಆದವನೇ ಮಹೇಶ್ವರ ಎನಿಸುವನು. ಈ ಮಹೇಶ್ವರನು ತನ್ನ ಮನಸ್ಸಿನ ಪ್ರಸನ್ನತೆಗಾಗಿ ನಿರ್ಮಲಜ್ಞಾನನ ಕಾರಣವಾದ ಶಿವಪ್ರಸಾದವನ್ನು ಸ್ವೀಕರಿಸುವುದರಿಂದ ಪ್ರಸಾದಿ ಎನಿಸುತ್ತಾನೆ. ಪರಶಿವಬ್ರಹ್ಮವು ಚಿತ್ ಸ್ವರೂಪವೆಂತಲೂ, ಆ ಪರಶಿವಬ್ರಹ್ಮನಲ್ಲಿರುವ ಶಕ್ತಿಯು ಪ್ರಾಣಸ್ವರೂಪವೆಂದೂ ಮತ್ತು ಲಿಂಗವು ಈ ಎರಡರ ಸ್ವರೂಪವಾಗಿರುವುದೆಂದು ತಿಳಿಯುವ ಪ್ರಸಾದಿಯೇ ಪ್ರಾಣಲಿಂಗಿ. ತನ್ನ ಪತಿಯ ಹೊರತು ಪರಪುರುಷನಲ್ಲಿ ವಿಮುಖಳಾದ ಪತಿವ್ರತೆಯಂತೆ, ಯವನು ತನ್ನನ್ನು ಶಿವನ ವಿಷಯದಲ್ಲಿ ಸತಿಯನ್ನಾಗಿ ಭಾವಿಸಿಕೊಂಡು ಅನ್ಯದೇವತೆಗಳ ವಿಷಯದಲ್ಲಿ ವಿಮುಖ ನಾಗುವನೋ ಆ ಪ್ರಾಣಲಿಂಗಿಯೇ ಶರಣ ಎನಿಸುತ್ತಾನೆ. ಈ ಶರಣನು ಪ್ರಾಣಲಿಂಗಾದಿ ಯೋಗದಿಂದ ಸುಖಾತಿಶಯವನ್ನು ಹೊಂದಿ ಶಿವೋಹಂ ಭಾವನೆಯಿಂದ ಶಿವನಲ್ಲಿ ಏಕತ್ವವನ್ನು ಹೊಂದುವುದರಿಂದ ಐಕ್ಯ ಎನಿಸುತ್ತಾನೆ.

*ಏಕೋತ್ತರಶತಸ್ಥಲಗಳು :* ವೀರಶೈವ ಸಿದ್ಧಾಂತದಲ್ಲಿ ಷಟ್‌ಸ್ಥಲಾಂತರ್ಗತವಾದ ಏಕೋತ್ತರ ಶತಸ್ಥಲ ವ್ಯವಸ್ಥೆಯ ಬೋಧನೆ ಇದೆ. ಮೊದಲಿಗೆ ಷಟ್‌ಸ್ಥಲವನ್ನು ಅಂಗಷಟ್‌ಸ್ಥಲ ಮತ್ತು ಲಿಂಗಷಟ್‌ಸ್ಥಲವೆಂದು ಎರಡು ವಿಭಾಗ ಮಾಡಲಾಗಿದೆ. ಅಂಗಸ್ಥಲಗಳು ೪೪ ಮತ್ತು ಲಿಂಗಸ್ಥಲಗಳು ೫೭. ಸಿದ್ಧಾಂತ ಶಿಖಾಮಣಿಯ ಪಿಂಡಸ್ಥಲದಿಂದ ಸಹಭಾಜನಸ್ಥಲದವರೆಗಿನ ೪೪ ಅಂಗಸ್ಥಲಗಳಲ್ಲಿ ಸಾಧಕನ ಅಂತರಂಗದ ವಿಕಾಸ ಸ್ಥಿತಿಯನ್ನು ವಿವರಿಸಿ ಕೊನೆಯಲ್ಲಿ

ಐಕ್ಯಸ್ಥಿತಿಯನ್ನು ವಿವರಿಸಲಾಗಿದೆ. ಈ ರೀತಿಯಾಗಿ ಲಿಂಗೈಕ್ಯ ಸ್ಥಿತಿಯನ್ನು ಪಡೆದು ಲಿಂಗರೂಪನೇ ಆದ ಶಿವಯೋಗಿಯ ಜೀವನ್ಮುಕ್ತಿಯ ಸ್ಥಿತಿಯನ್ನು ದೀಕ್ಷಾ ಗುರುಸ್ಥಲದಿಂದ ಜ್ಞಾನಶೂನ್ಯಸ್ಥಲದವರೆಗಿನ ೫೭ ಲಿಂಗಸ್ಥಲಗಳಲ್ಲಿ ಉಪದೇಶಿಸಲಾಗಿದೆ. ಹೀಗೆ ಒಟ್ಟು ೧೦೧ ಸ್ಥಲಗಳಲ್ಲಿ ಸಾಧಕನು ಪರಿಪೂರ್ಣವಾದ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಹೊಂದುವ ಸೂಕ್ಷ್ಮಾತಿಸೂಕ್ಷ್ಮವಾದ ಮನೋವಿಕಾಸದ ಮಾರ್ಗದ ವಿವರವನ್ನು ತಿಳಿಯಬಹುದು.

***ವೀರಶೈವ ತತ್ತ್ವವಿಚಾರ :*** ವಿಶ್ವದ ಎಲ್ಲ ಸಿದ್ಧಾಂತಗಳೂ ಮುಖ್ಯವಾಗಿ ಶಿವ, ಜೀವ, ಜಗತ್ತು ಈ ಮೂರು ವಿಷಯಗಳನ್ನು ಕುರಿತು ನಿರೂಪಿ ಸುತ್ತವೆ. ವೀರಶೈವ ಸಿದ್ಧಾಂತದಲ್ಲಿಯೂ ಸಹ ಈ ತತ್ತ್ವತ್ರಯಗಳನ್ನು ಕುರಿತು ಉಪದೇಶಿಸುವುದ ಜೊತೆಗೆ ಮೋಕ್ಷದ ಸ್ವರೂಪವನ್ನು ಬೋಧಿಸಲಾಗಿದೆ. ಕ್ರಿಯಾ-ಜ್ಞಾನ ಸಮುಚ್ಚಯಾತ್ಮಕವಾದ ಈ ಸಿದ್ಧಾಂತದಲ್ಲಿ ಸದಾಚಾರ ಮತ್ತು ತತ್ತ್ವವಿಚಾರಗಳ ಸಮನ್ವಯವನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ತತ್ತ್ವವಿಚಾರವು ಷಟ್‌ಸ್ಥಲ ಧರ್ಮಾಚರಣೆಗೆ ಹಿನ್ನೆಲೆಯಾಗಿ ಬಂದಿದೆ.

**ಶಿವ :** 'ಏಕಂ ಸದ್ವಿಪ್ರಾಬಹುಧಾ ವದಂತಿ' ಎಂಬ ವೇದವಾಕ್ಯದಂತೆ ವೀರಶೈವ ಸಿದ್ಧಾಂತದಲ್ಲಿ ಶಿವನೇ ಸರ್ವೋತ್ಕೃಷ್ಟವಾದ ತತ್ತ್ವ. ಆತನು ಲಿಂಗರೂಪನು, ಶಕ್ತಿ ವಿಶಿಷ್ಟನೆಂದೂ ಕರೆದಿದ್ದಾರೆ. ವೇದಾಂತ ಪ್ರತಿಪಾದಕರು ಬ್ರಹ್ಮ ಶಬ್ದಕ್ಕೆ ಯಾವುದು ವಿಷಯವೆಂದು ಹೇಳುತ್ತಾರೆಯೋ ಅಂತಹ ಸಕಲ ಜಗತ್ತಿಗೂ ಮೂಲ ಕಾರಣನಾದ ಪರಶಿವನನ್ನು ವಂದಿಸುತ್ತೇನೆ ಎಂಬ ಶಿವಸ್ತುತಿಯಲ್ಲಿ (ಸಿ.ಶಿ. ೧.೨) ಪರಶಿವನೇ ಬ್ರಹ್ಮನೆಂದು ಪ್ರತಿಪಾದಿತವಾಗಿದೆ. ಅವನು ಮೂಲತಃ ಅದ್ವಿತೀಯನು 'ಏಕೋಹಿ ರುದ್ರೋ ನ ದ್ವಿತೀಯಾಯ ತಸ್ಥುಃ', 'ಏಕಮೇವಾದ್ವಿತೀಯಂ ಬ್ರಹ್ಮ' ಮುಂತಾದ ಶ್ರುತಿವಾಕ್ಯಗಳೇ ಇದಕ್ಕೆ ಪ್ರಮಾಣ. ಶ್ರುತಿ ಪ್ರಮಾಣವಾದ ಈ ವಿಷಯವು ಹೀಗಿದೆ :

***ಏಕ ಏವ ಶಿವಃ ಸಾಕ್ಷಾಚ್ಚಿದಾನಂದ ಮಯೋ ವಿಭುಃ ।***
***ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ ॥***

*(ಸಿ.ಶಿ. ೫.೩೪)*

ಪರಶಿವನು ಅದ್ವಿತೀಯನು, ಚಿದಾನಂದ ಸ್ವರೂಪನು, ಭೇದರಹಿತನು, ಆಕಾರ ರಹಿತನು, ಗುಣರಹಿತನು, ಪ್ರಪಂಚಾತೀತನೂ ಆಗಿರುತ್ತಾನೆ.

**ಜೀವ :** ಜೀವಾತ್ಮನ ಸ್ವರೂಪದ ನಿರೂಪಣೆಯು ಸಿದ್ಧಾಂತಶಿಖಾಮಣಿಯ ಪಿಂಡ ಸ್ಥಲದಲ್ಲಿದೆ. ಅದರಂತೆ ಜೀವನು ಪರಶಿವನ ಅಂಶವೇ ಆಗಿರುವನು. ಚಿದಾನಂದಮಯನಾದ ಪರಶಿವನು ನಿರ್ವಿಕಲ್ಪ ನಿರಾಕಾರ, ನಿರ್ಗುಣ, ನಿಷ್ಪ್ರಪಂಚಕನೂ ಆಗಿ ಒಬ್ಬನೇ ಆಗಿರುವನು. ತನ್ನಲ್ಲಿ ನಿತ್ಯಸಂಬಂಧದಿಂದಿರುವ ವಿಮರ್ಶಾಶಕ್ತಿಯಲ್ಲಿರುವ ಅನಾದಿ ಮಾಯೆಯ ಸಂಬಂಧ ದಿಂದ ಆ ಪರಶಿವನ ಅಂಶವು ಜೀವನ ರೂಪದಲ್ಲಿ ದೇವ, ಮನುಷ್ಯ, ಪಶು, ಪಕ್ಷಿ ಇತ್ಯಾದಿ ಭೇದಗಳಿಂದ ಕೂಡಿದ ಪ್ರಾಣಿ ವರ್ಗದಲ್ಲಿ ನೆಲೆಸಿದನು. ಆ ಪರಶಿವನು ಮಾಯಾಶಕ್ತಿ ಯಿಂದೊಡಗೂಡಿ ಜೀವಿಗಳ ಹೃದಯದಲ್ಲಿ ಪ್ರೇರಕನಾಗಿ ವಾಸಿಸುವನು.

**ಜಗತ್ತು :** ಚೇತನಾಚೇತನಾತ್ಮಕವಾದ ಈ ಜಗತ್ತು ಸೃಷ್ಟಿಗೂ ಮೊದಲು ಪರಮಬ್ರಹ್ಮನಲ್ಲಿ ಲೀನವಾಗಿದ್ದು ಪರಶಿವನ ಬ್ರಹ್ಮನಲ್ಲಿರುವ ಶಕ್ತಿಯ ಇಚ್ಛಾದಿರೂಪ ಸ್ಪಂದನದಿಂದ ಈ ಜಗತ್ತು ಸೃಷ್ಟಿಯಾಯಿತು. ಶಿವನಿಂದ ಸೃಷ್ಟಿಯಾದ ಈ ಜಗತ್ತು ೩೬ ತತ್ತ್ವಗಳಿಂದ ಕೂಡಿದ್ದು ಶಿವಸ್ವರೂಪವೇ ಆಗಿದೆ. ಮಣ್ಣಿನಿಂದ ಮಾಡಿದ ಘಟ ಮಣ್ಣಿನಿಂದ ಹೇಗೆ ಭಿನ್ನವಲ್ಲವೋ, ಸಮುದ್ರದಿಂದ ಹುಟ್ಟಿದ ನೊರೆ ಇತ್ಯಾದಿಗಳು ಹೇಗೆ ಸಮುದ್ರಕ್ಕಿಂತ ಭಿನ್ನವಲ್ಲವೋ, ತಂತುಗಳಿಂದ ಉತ್ಪನ್ನವಾದ ಪಟವು ಹೇಗೆ ತಂತು ಸ್ವರೂಪವೇ ಆಗಿರುವುದೋ ಹಾಗೆಯೇ ಶಿವನಿಂದ ಉತ್ಪನ್ನವಾದ ಜಗತ್ತು ಶಿವನಿಗಿಂತ ಭಿನ್ನವಾಗಿರದೆ ಶಿವಸ್ವರೂಪವೇ ಆಗಿರುತ್ತದೆ. ವೃಕ್ಷವು ಪತ್ರ-ಶಾಖಾದಿ ರೂಪದಿಂದ ವಿರಾಜಿಸುತ್ತಿರುವಂತೆ ಶಿವನು ಭೂಮಿ-ಜಲಾದಿ ರೂಪದಿಂದ ವಿರಾಜಿಸುತ್ತಿರುವನು ಎಂದು ಪ್ರತಿಪಾದನೆಯ ಮೂಲಕ ಚರಾಚರಾತ್ಮಕವಾದ ಈ ಜಗತ್ತು ಸಾಕ್ಷಾತ್ ಶಿವನ ಸ್ವರೂಪವೆನ್ನಲಾಗಿದೆ. (ಸಿ.ಶಿ., ೧೦.೬೧-೬೬). ಅಲ್ಲದೆ **"ಪೀಠವೇ ಪರಾಶಕ್ತಿ, ಪರಶಿವನು ಲಿಂಗ. ಶಿವಶಕ್ತಿಯರ ಸಂಬಂಧವುಳ್ಳ ಈ ಲಿಂಗವು ವಿಶ್ವದ ರೂಪವಾಗಿದೆ"** (ಸಿ.ಶಿ. ೧೧.೩.೨) ಎಂಬಲ್ಲಿ ಜಗತ್ತನ್ನು ಲಿಂಗವೆಂದು ಕರೆಯಲಾಗಿದೆ.

**ಮುಕ್ತಿ :** ಎಲ್ಲ ಧರ್ಮ-ದರ್ಶನಗಳೂ ಮುಕ್ತಿಯೇ ಮಾನವನ ಪರಮಗುರಿಯೆಂದು ಪ್ರತಿಪಾದಿಸುತ್ತವೆ.

ವೀರಶೈವ ದರ್ಶನವೂ ಕೂಡ ಇದನ್ನು ಶಿವ-ಜೀವರ ಸಾಮರಸ್ಯವೆಂದು ನಿರೂಪಿಸಿದೆ. ವೀರಶೈವ ಶಬ್ದದ ನಿರ್ವಚನದ ಸಂದರ್ಭದಲ್ಲಿ ವಿದ್ಯೆಯೆಂದರೆ ಶಿವ-ಜೀವೈಕ್ಯವನ್ನು ಬೋಧಿಸುವಂತಹದ್ದು. ಅದರಲ್ಲಿ ಯಾರು ಆನಂದವನ್ನು ಪಡೆಯುತ್ತಾರೆಯೋ ಅವರು ವೀರಶೈವರು ಎಂದು ಹೇಳಿರುವಲ್ಲಿ ವೀರಶೈವರ ಮುಕ್ತಿಯ ಸ್ವರೂಪವು ಸೂಚಿತವಾಗಿದೆ. ಆಣವಾದಿ ಮಲಸಂಬಂಧವನ್ನು ಕಳೆದುಕೊಂಡ, ಕಳಂಕವಿಲ್ಲದ ಮನೋವ್ಯಾಪಾರವುಳ್ಳ ಶಿವಯೋಗಿಗೆ ಶಿವೋಹಂ (ನಾನು ಶಿವನೇ) ಎಂಬ ನಿರಂತರ ಭಾವದಿಂದ ಶಿವೈಕ್ಯವು ಉಂಟಾಗುತ್ತದೆ ಅದೇ ಮುಕ್ತಿ.

ಈ ಮೇಲೆ ಹೇಳಿದ ಕ್ರಿಯಾಪ್ರಧಾನವಾದ ಅಷ್ಟಾವರಣ, ನೀತಿ ಪ್ರಧಾನವಾದ ಪಂಚಾಚಾರ, ಜ್ಞಾನಪ್ರಧಾನವಾದ ಷಟ್‌ಸ್ಥಲಾಚರಣೆಯನ್ನು ಮಾಡುವ ವೀರಶೈವನು ಸುವರ್ಣಾಲಂಕಾರ ನ್ಯಾಯದಂತೆ ಸಾಕ್ಷಾತ್ ಪರಮಾತ್ಮನೇ ಆಗಿ ***"ಏಕೇನ ಜನ್ಮನಾ ಮುಕ್ತಿಃ ವೀರಾಣಾಂ ತು ಮಹೇಶ್ವರೀ"*** ಎಂಬ ಶಿವಾಗಮದ ವಾಕ್ಯದಂತೆ ಮುಕ್ತಿಯನ್ನು ಪಡೆಯಲು ಬೇಕಾಗುವ ಸಮಸ್ತ ಆಚರಣೆಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬೋಧಿಸಲಾಗಿದೆ.

***ಗುರು-ಲಿಂಗ-ಜಂಗಮ ಸ್ವರೂಪ ವಿವೇಚನೆ (ಹೆಚ್ಚಿನ ವಿವರಗಳು)***

ಶೈವಾಗಮೋತ್ತರ ಭಾಗಗಳಲ್ಲಿ ನಿರೂಪಿತವಾಗಿರುವ ವೀರಶೈವ ಸಿದ್ಧಾಂತವು ಷಟ್‌ಸ್ಥಲಾತ್ಮಕವಾದುದು. ಭಕ್ತಿ-ಜ್ಞಾನ-ಕ್ರಿಯಾತ್ಮಕವಾದ ಈ ಷಟ್‌ಸ್ಥಲಮಾರ್ಗವು ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಆರು ಹಂತಗಳಿಂದ ವಿಶಿಷ್ಟವಾಗಿರುವುದರಿಂದ ವೀರಶೈವವು ಷಟ್‌ಸ್ಥಲಸಿದ್ಧಾಂತವೆಂದು ಪ್ರಸಿದ್ಧವಾಗಿದೆ. ಷಟ್‌ಸ್ಥಲ ಸಿದ್ಧಾಂತದಲ್ಲಿ ವೀರಶೈವಕ್ಕೆ ಸಂಬಂಧಿಸಿದ ಶಿವದೀಕ್ಷೆ, ಅಷ್ಟಾವಣ, ಪಂಚಾಚಾರ, ಷಟ್‌ಸ್ಥಲಗಳೆಂಬ ಸಾಧನಮಾರ್ಗ ಮತ್ತು ಶಿವ, ಜೀವ ಜಗತ್ತು, ಮೋಕ್ಷಗಳೆಂಬ ತತ್ತ್ವ ವಿಚಾರಗಳು ನಿರೂಪಿತವಾಗಿವೆ. ಇಲ್ಲಿ ನಿರೂಪಿತವಾಗಿರುವ ವೀರಶೈವಕ್ಕೆ ಸಂಬಂಧಿಸಿದ ವಿಚಾರಗಳೇ ನಂತರದ ಸಿದ್ಧಾಂತ ಶಿಖಾಮಣಿ ಹಾಗು ವಚನ ಸಾಹಿತ್ಯಕ್ಕೆ ಆಕರಗಳಾದುವು.

*ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಮ್ ।*
*ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥*

*(ಸಿ.ಶಿ. ೧.೨೫)*

ಬಸವಾದಿ ಶಿವಶರಣರು ನೇರವಾಗಿ ಈ ರೀತಿಯಾಗಿ ಹೇಳದಿದ್ದರೂ, ತಮ್ಮ ವಚನಗಳಲ್ಲಿ ಯಥೋಚಿತವಾಗಿ ಶಿವಾಗಮಗಳ ವಾಕ್ಯಗಳನ್ನು ಉಲ್ಲೇಖ ಮಾಡುವುದರ ಮೂಲಕ ಶಿವಾಗಮಗಳನ್ನು ಬಳಸಿಕೊಂಡಿದ್ದಾರೆ ಎಂದು ಹೇಳಬಹುದು. ಪ್ರಸ್ತುತ ವೀರಶೈವದ ಅಷ್ಟಾವರಣಗಳ ಪೈಕಿ ಮೊದಲಿನ ಮೂರು ಆವರಣಗಳಾದ ಗುರು-ಲಿಂಗ-ಜಂಗಮಗಳ ಸ್ವರೂಪ ನಿರೂಪಣೆಯೇ ಆಗಿದೆ.

ಅಷ್ಟಾವರಣ ವೀರಶೈವ ಧರ್ಮದ ವೈಶಿಷ್ಟ್ಯಪೂರ್ಣವಾದ ಕಟ್ಟಳೆ, ಲಿಂಗಧಾರಣವಿಧಿಯು ಭಕ್ತನನ್ನು ಅಷ್ಟಾವರಣಸಂಪನ್ನನಾಗುವಂತೆ ಮಾಡುತ್ತದೆ. ಗುರು-ಲಿಂಗ-ಜಂಗಮ-ಭಸ್ಮ-ರುದ್ರಾಕ್ಷಿ-ಮಂತ್ರ-ಪಾದೋದಕ-ಪ್ರಸಾದ ಈ ಎಂಟು ಭಕ್ತನ ಧರ್ಮಶ್ರದ್ಧೆಯನ್ನು ಕಾಪಾಡುವ ಕವಚಗಳು. ಆದ್ದರಿಂದ ಇವುಗಳಿಗೆ ಅಷ್ಟಾವರಣಗಳೆಂದು ಹೆಸರು. ಇವು ಕೇವಲ ಬಹಿರಂಗದ ಸಾಧನಗಳು ಮಾತ್ರವಾಗಿರದೆ ಅಂತರಂಗವನ್ನು ಮಾಗಿಸುವ ಸಂಕೇತಗಳೂ ಆಗಿವೆ. ಈ ಅಷ್ಟಾವರಣಗಳಿಂದ ಅಂಗನು ಸಹಜವಾಗಿಯೇ ಲಿಂಗ ಸ್ವರೂಪಿಯಾಗುತ್ತಾನೆ. ಗುರು-ಲಿಂಗ-ಜಂಗಮವೆಂಬ ಮೊದಲಿನ ಮೂರು ಆವರಣಗಳು ಪೂಜನೀಯವಾದವುಗಳು; ನಂತರದ ಭಸ್ಮ-ರುದ್ರಾಕ್ಷಿ-ಮಂತ್ರಗಳು ಪೂಜಾ ಸಾಧನಗಳು; ಕೊನೆಯ ಪಾದೋದಕ ಪ್ರಸಾದಗಳು ಗುರು-ಲಿಂಗ-ಜಂಗಮರ ಪೂಜಾ ಫಲಗಳಾಗಿವೆ. ಈಗ ಗುರು-ಲಿಂಗ-ಜಂಗಮರ ಸ್ವರೂಪ ಮಹಾತ್ಮ್ಯೆಗಳನ್ನು ಪ್ರತ್ಯೇಕವಾಗಿ ಗಮನಿಸೋಣ.

**ಶ್ರೀಗುರು :** ಅಷ್ಟಾವರಣಗಳಲ್ಲಿ ಮೊದಲನೆಯ ಸ್ಥಾನ ಗುರುವಿನದು. ವೀರಶೈವ ಆಚಾರ ಮತ್ತು ತತ್ತ್ವವಿಚಾರಗಳೆರಡಕ್ಕೂ ಶ್ರೀಗುರುವೇ ಮಾರ್ಗದರ್ಶಕನು. ಇಂತಹ ಮಾರ್ಗದರ್ಶಕನಾದ ಗುರುವಿನ ಸ್ವರೂಪವನ್ನು ಶಿವಯೋಗಿ ಶಿವಾಚಾರ್ಯರು ಹೀಗೆ ನಿರೂಪಿಸಿದ್ದಾರೆ.

***ಗುಣಾತೀತಂ ಗುಕಾರಂ ಚ ರೂಪಾತೀತಂ ರುಕಾಕರಮ್ ।***
***ಗುಣಾತೀತ ಮರೂಪಂ ಚ ಯೋ ದದ್ಯಾತ್***
***ಸ ಗುರುಃ ಸ್ಮೃತಃ॥***

*(ಸಿ.ಶಿ. ೧೫.೮)*

ಗುರು ಎಂಬ ಪದದಲ್ಲಿನ 'ಗು' ಎಂಬ ಅಕ್ಷರವು ಸತ್ವಾದಿ ಗುಣರಾಹಿತ್ಯವನ್ನು 'ರು' ಎಂಬ ಅಕ್ಷರವು

ಅಶುದ್ಧಮಾಯಾರೂಪರಾಹಿತ್ಯವನ್ನು ಬೋಧಿಸುತ್ತದೆ. ಹೀಗೆ ನಿರ್ಗುಣ-ನಿರಾಕಾರನಾದ ಪರಶಿವಬ್ರಹ್ಮ ಸ್ವರೂಪವನ್ನು ಯಾರು ಅನುಗ್ರಹಿಸುವನೋ ಅಂಥವನು 'ಗುರು' ವೆನಿಸುತ್ತಾನೆ. ಶ್ರೀಗುರುವನ್ನು 'ಆಚಾರ್ಯ'ನೆಂಬ ಅಭಿಧಾನದಿಂದ ಕರೆದು ಆಚಾರ್ಯನ ಸ್ವರೂಪವನ್ನು ಹೀಗೆ ನಿರೂಪಿಸುತ್ತದೆ ಸಿದ್ಧಾಂತ ಶಿಖಾಮಣಿ --

*ಆಚಿನೋತಿ ಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ।*
*ಸ್ವಯಮಾಚರತೇ ಯಸ್ತು ಸ ಆಚಾರ್ಯ ಇತಿ ಸ್ಮೃತಃ ॥*

*(ಸಿ.ಶಿ. ೧೪.೯)*

ತಾತ್ಪರ್ಯವೇನೆಂದರೆ ಯಾರು ಶಿಷ್ಯರಿಗೆ (ವೀರಶೈವ) ಶಾಸ್ತ್ರಾರ್ಥವನ್ನು ಬೋಧಿಸಿ, ಶಿಷ್ಯರನ್ನು ವೀರಶೈವಾಚಾರದಲ್ಲಿ ನೆಲೆಗೊಳಿಸುವುದರ ಜೊತೆಗೆ ತಾನೂ ಸಹ ಆಚಾರ ಸಂಪನ್ನನಾಗಿರುತ್ತಾನೆಯೋ ಅವನು ಆಚಾರ್ಯ ಎನಿಸುತ್ತಾನೆ.

ಗುರುವಾದವನು ಶಿಷ್ಯನಿಗೆ ಉಪದೇಶ ಮಾಡುವುದರ ಮೂಲಕ ಆತನನ್ನು ಆಚಾರಸಂಪನ್ನವಾಗುವಂತೆ ಮಾಡುವುದರ ಜೊತೆಗೆ ತಾನೂ ಸಹ ಆಚಾರಸಂಪನ್ನನಾಗ ಬೇಕೆಂದು ಸಿದ್ಧಾಂತಶಿಖಾಮಣಿಯ ಕಳಕಳಿ ಇಂದಿನ ದಿನಗಳಲ್ಲಿ ಅತಿ ಮಹತ್ವದ್ದಾಗಿದೆ. ಏಕೆಂದರೆ ನುಡಿದಂತೆ ನಡೆಯುವವರು ಅತಿ ವಿರಳವಾಗುತ್ತಿರುವ ಈ ಕಾಲದಲ್ಲಿ ಗುರುವಾದವನು ಉಪದೇಶ ಮಾಡಿದರೆ ಸಾಲದು ತಾನೂ ಆಚಾರವಂತನಾಗಬೇಕೆಂಬ ಮಾರ್ಮಿಕವಾದ ಸಂದೇಶ ಇಲ್ಲಿದೆ.

ಬಸವಣ್ಣನವರೂ ಸಹ ***'ಶಿವಪಥವನರಿವಡೆ ಗುರುಪಥವೆ ಮೊದಲು'*** ಎಂದು ಹೇಳುವಲ್ಲಿ ಗುರುವಿನ ಹಿರಿಮೆಯನ್ನು ಕೊಂಡಾಡಿದ್ದಾರೆ.

ವೀರಶೈವ ಸಂಪ್ರದಾಯದಲ್ಲಿ ಗುರುವಿಗೆ ಸಂಬಂಧಿಸಿ ದಂತೆ ಎರಡು ವಿಶೇಷಗಳಿವೆ. ಒಂದನೆಯದಾಗಿ, ಗುರುವು ಗುರುವಂಶದಲ್ಲಿಯೇ ಜನಿಸಿರಬೇಕು (ಗುರುವಂಶ ಸಮುದ್ಭೂತಃ, ಚಂದ್ರಜ್ಞಾನಾಗಮ, ಕ್ರಿ.ಪಾ, ೨.೫೦) ಅರ್ಥಾತ್ ಗುರುವು ಹುಟ್ಟು ವೀರಶೈವನಾಗಿರಬೇಕು.

ಎರಡನೆಯ ವಿಶೇಷವು ಚಂದ್ರಜ್ಞಾನಗಮದಲ್ಲಿಯೇ ಬರುವ

*ಗುರುರ್ಗೃಹಸ್ಥ ಏವ ಸ್ಯಾನ್ನ ಕದಾಚಿದ್ಯತಿರ್ಗುರುಃ ।*
*ವಾನಪ್ರಸ್ಥಯತೀನಾಂ ತು ಗುರುತ್ವಂ ನಿಷ್ಫಲಂ ಭವೇತ್ ॥*

*(ಕ್ರಿ.ಪಾ. ೨.೫೩)*

*"ಗೃಹಸ್ಥನು ಮಾತ್ರ ಗುರುವು. ಯಾವಾಗಲೂ ಸನ್ಯಾಸಿಯು ಗುರುವಲ್ಲ. ವಾನಪ್ರಸ್ಥ ಯತಿಗಳ ಗುರುತ್ವವು ನಿಷ್ಫಲ"* ಎಂಬುದೇ ಆಗಿದೆ. ಗೃಹಸ್ಥ ಎಂದರೆ ಸಾಮಾಜಿಕವಾದ ಜವಾಬ್ದಾರಿ ಇರುವ ವ್ಯಕ್ತಿ ಎಂದರ್ಥ. ಸಾಮಾಜಿಕ ಜವಾಬ್ದಾರಿಯಿರುವ ವ್ಯಕ್ತಿಯು ಮಾತ್ರ ಗುರುವಾಗಲು ಯೋಗ್ಯ ಎಂಬುದು ಮೇಲಿನ ಮಾತಿನ ಅರ್ಥ. ಗೃಹಸ್ಥ ಎಂದರೆ ವಿವಾಹಿತನಾಗಿ ಮನೆಯ ಜವಾಬ್ದಾರಿಯನ್ನು ನಿರ್ವಹಿಸುವವನು ಎಂಬ ಸಾಮಾನ್ಯ ಅರ್ಥವೂ ಇದೆ. ಈ ಅರ್ಥದಲ್ಲಿ ತೆಗೆದುಕೊಂಡರೆ ಪ್ರಾಚೀನ ಕಾಲದಲ್ಲಿ ವೀರಶೈವ ಗುರುವು ಸಂಸಾರದ ಜವಾಬ್ದಾರಿಗಳನ್ನು ನಿರ್ವಹಿಸುವುದರ ಜೊತೆಗೆ ಭಕ್ತರಿಗೆ ಜ್ಞಾನೋಪದೇಶವನ್ನು ಮಾಡುವುದು ಕಷ್ಟಕರವಾಗಿ ಪರಿಣಮಿಸಿರುವ ಕಾರಣ ಗುರು ನೈಷ್ಠಿಕ ಬ್ರಹ್ಮಚಾರಿಯಾಗಿರುವುದು ಯೋಗ್ಯವೆನಿಸಿರಬೇಕು. ಅಂಥಹ ಸಂದರ್ಭದಲ್ಲಿ ಮಠಾಧಿಕಾರಿಯಾದ ಗುರುವು ನೈಷ್ಠಿಕ ಬ್ರಹ್ಮಚಾರಿಯಾಗಿರುವುದು ರೂಢಿಯಲ್ಲಿ ಬಂದಿರ ಬೇಕೆನಿಸುತ್ತದೆ.

ಭಕ್ತನ ಅನುಗ್ರಹಕ್ಕಾಗಿ ಗುರುವ ಮೂರು ವಿಧ ಕಾರ್ಯವನ್ನು ನಿರ್ವಹಿಸುತ್ತಾನೆ. ಶಿಷ್ಯರಿಗೆ ಶಿವದೀಕ್ಷೆಯನ್ನು ಕೊಡುವುದರಿಂದ ದೀಕ್ಷಾಗುರು, ವೀರಶೈವಾಚಾರದಲ್ಲಿ ಶಿಕ್ಷಣವನ್ನು ನೀಡುವುದರಿಂದ ಶಿಕ್ಷಾಗುರು ಮತ್ತು ಶೈವಾಗಾಮಗಳ ಜ್ಞಾನವನ್ನು ಬೋಧಿಸುವುದರಿಂದ ಜ್ಞಾನಗುರು ಎನಿಸುತ್ತಾನೆ. ಈ ತ್ರಿವಿಧ ಕಾರ್ಯಗಳನ್ನು ನಿರ್ವಹಿಸುವ ಕಾರಣ ಗುರುವನ್ನು ಸಾಕ್ಷಾತ್ ಶಿವನೆಂದು ಸಾರಿದೆ ಶ್ರೀ ಸಿದ್ಧಾಂತ ಶಿಖಾಮಣಿ.

*ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮ ಮಾಯಯಾ ।*
*ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥*

*(ಸಿ.ಶಿ., ೯.೫೩)*

"ತನ್ನ ಮಾಯೆಯಿಂದ ಮಹಾದೇವನು ಎಲ್ಲರಿಗೂ ಕಾಣಿಸುವುದಿಲ್ಲ. ಆದರೆ ಭಕ್ತಿಯ ಸಿದ್ಧಿಗಾಗಿ ಅವನೇ ಗುರುರೂಪದಲ್ಲಿ ಪ್ರತ್ಯಕ್ಷನಾಗಿದ್ದಾನೆ." ಆದ್ದರಿಂದ ಗುರುವಿನ

ಪೂಜೆಯೇ ಶಿವನ ಪೂಜೆ –

*ಗುರುಪೂಜೈವ ಪೂಜಾಸ್ಯಾಚ್ಛಿವಸ್ಯ ಪರಮಾತ್ಮನ ಃ ।*

*(ಚಂದ್ರಜ್ಞಾನಾಗಮ, ಕ್ರಿ.ಪಾ. ೨)*

ಈ ಆಗಮವಾಕ್ಯದಿಂದ ಪ್ರೇರಿತವಾದುದು ಸಿದ್ಧಾಂತ ಶಿಖಾಮಣಿಯ ಈ ಮಾತು –

*ಗುರೋರಭ್ಯರ್ಚನಾದೇವ ಸಾಕ್ಷಾದಭ್ಯರ್ಚಿತಃ ಶಿವಃ ।*
*ನಾಸ್ತಿ ಭೇದಸ್ತಯೋಃ ಕಶ್ಚಿದೇಕತ್ವಾತ್ ತತ್ತ್ವರೂಪತಃ ॥*

*(೯.೫೧)*

ಗುರುವನ್ನು ಪೂಜಿಸುವುದರಿಂದ ಶಿವನನ್ನು ಪ್ರತ್ಯಕ್ಷವಾಗಿ ಪೂಜಿಸಿದಂತಾಗುತ್ತದೆ. ಶಿವ–ಗುರು ಇಬ್ಬರೂ ಒಂದೇ ಸ್ವರೂಪಗಳಾಗಿರುವುದರಿಂದ ಅವರಲ್ಲಿ ಸ್ವಲ್ಪವೂ ಭೇದವಿರುವುದಿಲ್ಲ.

ಲಿಂಗ : ಅಷ್ಟಾವರಣಗಳಲ್ಲಿ 'ಲಿಂಗ'ವು ಎರಡನೆಯ ಆವರಣ. ಲಿಂಗವೆಂದರೇನು ? ಎಂಬ ಪ್ರಶ್ನೆಗೆ ಶೈವಾಗಮಗಳಲ್ಲಿ ಕಂಡುಬರುವ ಲಿಂಗ ಪದದ ನಿಷ್ಪತ್ತಿಯನ್ನು ಗಮನಿಸಿದರೆ ಅದರು ಸ್ಪಷ್ಟವಾಗುತ್ತದೆ.

*ಲಿ ಕಾರೋ ಲಯಬುದ್ಧಿಸ್ಥೋ ಬಿಂದುನಾ ಸ್ಥಿತಿರುಚ್ಯತೇ ।*
*ಗ ಕಾರಾತ್ ಸೃಷ್ಟಿರಿತ್ಯುಕ್ತಾ ಲಿಂಗಂ ಸೃಷ್ಟ್ಯಾದಿಕಾರಣಮ್ ॥*
*ಲೀನಂ ಪ್ರಪಂಚರೂಪಂ ಹಿ ಸರ್ವಮೇತಚ್ಚರಾಚರಮ್ ।*
*ಸರ್ಗಾದೌ ಗಮ್ಯತೇ ಯಸ್ಮಾತ್ ತಸ್ಮಾಲಿಂಗಮುದೀರಿತಮ್ ॥*
*ಲಿಂಗಂ ಶೈವಮಿದಂ ಸಾಕ್ಷಾಚ್ಛಿವಶಕ್ತ್ಯುಭಯಾತ್ಮಕಮ್ ।*
*ಧ್ಯಾತವ್ಯಮರ್ಚನೀಯಂ ಚ ಭುಕ್ತಿಮುಕ್ತಿಫಲೇಚ್ಛುನಾ ॥*

*(ಸೂಕ್ಷಾಗಮ. ಕ್ರಿ.ಪಾ. ೬.೫–೨)*

'ಲಿ' ಎಂಬುದು ಲಯವನ್ನೂ, ಬಿಂದು (ಅನುಸ್ವಾರ) ಸ್ಥಿತಿಯನ್ನೂ ಮತ್ತು 'ಗ' ಕಾರವು ಸೃಷ್ಟಿಯನ್ನೂ ಹೇಳುತ್ತವೆ. ಹೀಗೆ ಲಿಂಗವು ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣವಾದುದು. ಚರಾಚರಾತ್ಮಕವಾದ ಸಮಸ್ತ ಪ್ರಪಂಚದ ರೂಪವು ಅದರಲ್ಲಿ ಲೀನವಾಗಿದ್ದು ಸೃಷ್ಟಿಯ ಕಾಲದಲ್ಲಿ ಅದರಿಂದಲೇ ಹೊರ ಹೊಮ್ಮುತ್ತದೆ. ಸ್ವರ್ಗವೇ ಮೊದಲಾದವುಗಳು ಅದರಿಂದಲೇ ಉತ್ಪನ್ನವಾಗುವುದರಿಂದ ಲಿಂಗವೆಂದು ಕರೆಯಲಾಗಿದೆ. ಅಲ್ಲದೆ ಈ ಲಿಂಗವು ಶಿವ–ಶಕ್ತಿಯರಿಬ್ಬರ ರೂಪವೂ ಆಗಿದೆ.

ಇದೇ ವಿಷಯವನ್ನು ಚಂದ್ರಜ್ಞಾನಾಗಮ ಹೀಗೆ ವಿವರಿಸುತ್ತದೆ –

*ಜಠರೇ ಲ್ಲೀಯತೇ ಸರ್ವಂ ಜಗತ್‌ಸ್ಥಾವರಜಂಗಮಮ್ ।*
*ಪುನರುತ್ಪದ್ಯತೇ ಯಸ್ಮಾತ್ತದ್ ಬ್ರಹ್ಮಲಿಂಗಸಂಜ್ಞಕಮ್ ॥*

*(ಕ್ರಿಯಾಪಾದ ೩.೮)*

ಎಲ್ಲಾ ಚರಾಚರ ಜಗತ್ತು ಅದರ ಹೊಟ್ಟೆಯಲ್ಲಿ ಅಡಗಿರುತ್ತದೆ. (ಲೀಯತೇ); ಅದೇ ಜಗತ್ತು ಮತ್ತೆ ಅದರಿಂದ ಉತ್ಪನ್ನವಾಗುತ್ತದೆ (ಗಮ್ಯತೇ) ಅದೇ ಲಿಂಗವೆಂದು ಕರೆಯಲ್ಪಡುವ ಬ್ರಹ್ಮ.

ಶೈವಾಗಮಗಳ ಲಿಂಗ ಪದ ನಿಷ್ಪತ್ತಿಯೇ ಸಿದ್ಧಾಂತ ಶಿಖಾಮಣಿಯ ಲಿಂಗ ಪದ ನಿಷ್ಪತ್ತಿದೆ ಆಧಾರವಾಗಿದೆ.

*ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಮ್ ।*
*ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮಶಾಶ್ವತಮ್ ॥*

*(೬.೧೬)*

ಯಾವುದರಲ್ಲಿ ಚರಾಚರಾತ್ಮಕವಾದ ಈ ಜಗತ್ತು ಲಯವನ್ನು ಹೊಂದುತ್ತದೆಯೋ ಮತ್ತು ಯಾವುದರಿಂದ ಮತ್ತೆ ಮತ್ತೆ ಹುಟ್ಟಿಬರುತ್ತದೆಯೋ ಅದು ಶಾಶ್ವತವಾದ ಬ್ರಹ್ಮಪದ ವಾಚ್ಯವಾದ ಲಿಂಗ.

ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗವೆಂದು ಲಿಂಗವು ತ್ರಿವಿಧವಾಗಿದೆ. ಸ್ಥೂಲಶರೀರದಲ್ಲಿ ಧರಿಸುವಂತಹದ್ದು ಇಷ್ಟಲಿಂಗ, ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗ ಮತ್ತು ಕಾರಣ ಶರೀರದಲ್ಲಿ ಭಾವಲಿಂಗವೆನಿಸಿದ (ಸಿ.ಶಿ. ೬.೪೬) ಈ ತ್ರಿವಿಧ ಲಿಂಗಗಳು ಭಕ್ತನಿಗೆ ಶಿವದೀಕ್ಷಾ ಸಂಸ್ಕಾರದಿಂದ ಗುರುವಿನ ಮೂಲಕ ದೊರೆಯುತ್ತದೆ. ನಂತರ ಗುರುವು ಶಿಷ್ಯನಿಗೆ ಹೀಗೆ ಉಪದೇಶಿಸಬೇಕು –

*ಪ್ರಾಣವದ್ಧಾರಣೀಯಂ ಯತ್ ಪ್ರಾಣಲಿಂಗಮಿದಂ ತವ ।*
*ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥*
*ಯದಿ ಪ್ರಮಾದಾತ್ ಪತಿತೇ ಲಿಂಗೇ ದೇಹಾನ್ಮಹೀತಲೇ ।*
*ಪ್ರಾಣಾನ್ ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ॥*

*(ಸಿ.ಶಿ. ೬.೨೫–೨೬)*

ಇದು ನಿನ್ನ ಪ್ರಾಣಲಿಂಗ. ಇದನ್ನು ಪ್ರಾಣದಂತೆ ಧರಿಸಬೇಕು. ಯಾವುದೇ ಸಂದರ್ಭದಲ್ಲಿಯೂ ಇದನ್ನು ನಿನ್ನ

ದೇಹದಿಂದ ಬೇರೆ ಮಾಡಬೇಡ. ಒಂದು ವೇಳೆ ಪ್ರಮಾದದಿಂದ ನೆಲದ ಮೇಲೆ ಬಿದ್ದರೆ ಕೂಡಲೇ ಪ್ರಾಣವನ್ನು ತ್ಯಜಿಸು. ಅದರಿಂದ ಮೋಕ್ಷ ದೊರೆಯುತ್ತದೆ.

ಸಿದ್ಧಾಂತ ಶಿಖಾಮಣಿಯು ಗುರುವಿನ ಮೂಲಕ ನೀಡಿರುವ ಉಪದೇಶವು ಎಂಥ ಕಳಕಳಿಯಿಂದ ಕೂಡಿದೆ ಯೆಂಬುದನ್ನು ಗಮನಿಸಬೇಕು. ಇಷ್ಟ–ಪ್ರಾಣ–ಭಾವತತ್ತ್ವಗಳ ಸಮನ್ವಯವೇ ಲಿಂಗತತ್ತ್ವ. ಅದೇ ವೀರಶೈವತ್ವ. ಲಿಂಗವು ದೇಹದಿಂದ ಕೆಳಗೆ ಬಿದ್ದರೆ ವೀರಶೈವವತ್ವವೇ ಕೆಳಗೆ ಬೀಳುತ್ತದೆ. ದೇಹದ ಮೇಲೆ ಇರುವವರೆಗೆ ಅದು ಲಿಂಗ. ದೇಹದಿಂದ ಬೇರ್ಪಟ್ಟಾಗ ಅದು ಪ್ರಾಣ–ಭಾವಗಳ ಸಂಬಂಧವನ್ನು ಕಳೆದುಕೊಂಡು ಅದು ಕಲ್ಲಾಗುತ್ತದೆ. ಶಿವಪೂಜೆಯ ನಂತರ ಲಿಂಗವನ್ನು ತೆಗೆದು ಗೂಟಕ್ಕೆ ನೇತು ಹಾಕಿದರೂ ಅದೇ ಸ್ಥಿತಿ. ಈ ಕಳಕಳಿ ಮೇಲಿನ ಉಪದೇಶದಲ್ಲಿ ಅಡಗಿದೆ. ಮತ್ತೊಂದು ಉಪದೇಶವೆಂದರೆ – "ಒಂದು ವೇಳೆ ಪ್ರಮಾದದಿಂದ ಲಿಂಗವು ನೆಲದ ಮೇಲೆ ಬಿದ್ದರೆ ಕೂಡಲೇ ಪ್ರಾಣವನ್ನು ಬಿಡು" ಎಂಬುದು. ಇಲ್ಲಿ ಪ್ರಾಣವನ್ನು ತ್ಯಜಿಸು ಎಂದರೆ ಶರೀರವನ್ನು ತ್ಯಜಿಸು ಎಂದರ್ಥವಲ್ಲ. ಇಷ್ಟಲಿಂಗವನ್ನು ನಿನ್ನ ಪ್ರಾಣದಂತೆ ಕಾಪಾಡು ಎಂದರ್ಥ. ಮಾನವನು ತನ್ನ ಪ್ರಾಣವನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸುವಂತೆ ಇಷ್ಟಲಿಂಗವು ಅವರ ದೇಹದಿಂದ ಬೇರ್ಪಡದಂತೆ ಎಚ್ಚರವಹಿಸಬೇಕೆಂದು ತಾತ್ಪರ್ಯ.

ವೀರಶೈವದ ವೈಶಿಷ್ಟ್ಯವೆಂದರೆ ಯಾವುದೇ ಜಾತಿಯಲ್ಲಿ ಜನಿಸಿದ ಸ್ತ್ರೀ–ಪುರುಷರೆಲ್ಲರೂ ಲಿಂಗಧಾರಣೆಯ ಮೂಲಕ ವೀರಶೈವರಾಗಬಹುದು. ಶಿವದೀಕ್ಷೆಯಾದ ವ್ಯಕ್ತಿಯ ಮೂಲಜಾತಿಗಳು ನಾಶವಾಗುತ್ತವೆ ಹಾಗೂ ಅವರಲ್ಲಿ ಜಾತಿಭೇದವನ್ನು ಮಾಡಬಾರದೆಂದು ಶ್ರೀ ಸಿದ್ಧಾಂತ ಶಿಖಾಮಣಿಯು ಬೋಧಿಸುತ್ತದೆ. ಇದು ಪ್ರತಿಯೊಬ್ಬ ವೀರಶೈವನೂ ಹೆಮ್ಮೆಪಡುವಂತಹ ಸಂದೇಶವಾಗಿದೆ.

*ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯೋ ವಾ ಶೂದ್ರ ಏವ ವಾ ।*
*ಅಂತ್ಯಜೋ ವಾ ಶಿವೇ ಭಕ್ತಃ ಶಿವವನ್ಮಾನ್ಯ ಏವ ಸಃ ॥*
*ಶಿವಭಕ್ತಿಸಮಾವೇಶೇ ಕ್ವ ಜಾತಿಪರಿಕಲ್ಪನಾ ।*
*ಇಂಧನೇಷ್ವಗ್ನಿದಗ್ಧೇಷು ಕೋ ವಾ ಭೇದಃ ಪ್ರಕೀರ್ತ್ಯತೇ ॥*

*(ಸಿ.ಶಿ. ೧೧.೫೪–೫೫)*

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಅಂತ್ಯಜನು ಶಿವಭಕ್ತನಾಗಿರಲು, ಅವನನ್ನು ಶಿವನೆಂದೇ ತಿಳಿಯಬೇಕು. ಅಗ್ನಿಯಲ್ಲಿ ದಗ್ಧವಾದ ಕಟ್ಟಿಗೆಗಳಲ್ಲಿ ಭೇದವನ್ನು ಹೇಳಲಾಗದಿರುವಂತೆ ಶಿವಭಕ್ತಿಯ ಸಮಾವೇಶವಾದವನ ಜಾತಿಯ ಕಲ್ಪನೆ ಎಲ್ಲಿಯದು ?

ಸಂಸಾರಪಾಶರೂಪವಾದ ಅನಿಷ್ಟವನ್ನು ಪರಿಹರಿಸುವ ಇಷ್ಟಲಿಂಗವನ್ನು ಜ್ಞಾನಿಯಾದವನು ಯಾವಾಗಲೂ ಶರೀರದಲ್ಲಿ ಸಾವಧಾನವಾಗಿ ಧರಿಸಬೇಕು. ಏಕೆಂದರೆ ವೇದಗಳಲ್ಲಿ, ಶಾಸ್ತ್ರಗಳಲ್ಲಿ, ಪುರಾಣಗಳಲ್ಲಿ ಹಾಗೂ ಕಾಮಿಕಾದಿ ವಾತುಲಾಂಗಳಾದ ೨೮ ಶಿವಾಗಮಗಳಲ್ಲಿಯೂ ಲಿಂಗಧಾರಣೆಯು ಹೇಳಲ್ಪಟ್ಟಿದೆಯೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಬೋಧಿಸಲಾಗಿದೆ. (ಸಿ.ಶಿ. ೬.೫೦–೫೭)

*ಜಂಗಮ :* ಈ ಜಗತ್ತು ಸ್ಥಾವರ ಮತ್ತು ಜಂಗಮ ಎಂದು ಎರಡು ವಿಧ. ಯಾವುದು ಒಂದೇ ಸ್ಥಳದಲ್ಲಿ ಯಾವಾಗಲೂ ಇರುತ್ತದೆಯೋ ಅದು ಸ್ಥಾವರ, ಸಂಚಾರಶೀಲವಾದದ್ದು ಜಂಗಮ ಎಂಬುದು ಸಾಮಾನ್ಯವಾದ ವಿವರಣೆ. *"ಚರಿಷ್ಣು ಜಂಗಮಚರಂ ತ್ರಸಮಿಂಗಂ ಚರಾಚರಮ್"* (ಅಮರಕೋಶ. ೧೧೧೯) ಎಂಬ ಅಮರಕೋಶದ ವಾಕ್ಯಾನುಸಾರವಾಗಿ ಜಂಗಮ ಎಂದರೆ ಸಂಚರಿಸುವ, ಚಲಿಸುವ ಎಂದರ್ಥ. ಜಂಗಮ ಶಬ್ದವು ಗಮ್‌ಲೃ ಗತೌ ಧಾತುವಿನಿಂದ ನಿಷ್ಪನ್ನವಾಗಿದ್ದು ನಡೆದಾಡುವ, ಸಂಚರಿಸುವ ಎಂಬ ಅರ್ಥವನ್ನು ಹೊಂದಿದ್ದರೂ ಗಮ್‌ಲೃ ಗತೌ ಧಾತುವಿಗೆ ಜ್ಞಾನವೆಂಬ ಅರ್ಥವೂ ಇರುವುದರಿಂದ ಜಂಗಮ ಎಂದರೆ ಶಿವಜ್ಞಾನಸಂಪನ್ನ ಎಂದು ಅರ್ಥವಾಗುತ್ತದೆ. ಅಷ್ಟಾವರಣಗಳಲ್ಲಿ ಜಂಗಮವು ಮೂರನೆಯ ಆವರಣವಾಗಿದ್ದು, ಅದರ ಸ್ವರೂಪವನ್ನು ಸಿದ್ಧಾಂತಶಿಖಾಮಣಿಯು ಹೀಗೆ ನಿರೂಪಿಸಿದೆ –

*ಜಾನಂತ್ಯತಿಶಯಾದ್ ಯೇ ತು ಶಿವಂ ವಿಶ್ವಪ್ರಕಾಶಕಮ್ ।*
*ಸ್ವಸ್ವರೂಪತಯಾ ತೇ ತು ಜಂಗಮಾ ಇತಿ ಕೀರ್ತಿತಾಃ ॥*

*(೧೧.೩೬)*

ಜಗತ್ತಿನ ಪ್ರಕಾಶಕನಾದ ಶಿವನನ್ನು ಯಾರು ತಮ್ಮ ಸ್ವರೂಪದಿಂದಲೂ, ಅರ್ಥಾತ್ ತನ್ನನ್ನು ಶಿವನ ಅತಿಶಯ ವಾದ ರೂಪವೆಂದು ನಿಶ್ಚಯವಾಗಿ ತಿಳಿಯುತ್ತಾನೆಯೋ ಅವನೇ ಜಂಗಮ ಎಂದು ಕರೆಯಲ್ಪಡುತ್ತಾನೆ.

ಜಂಗಮನಿಗೆ ಶಿವಜ್ಞಾನಿ, ಶಿವಯೋಗಿ, ಮಾಹೇಶ್ವರ, ಚರ, ಭಕ್ತ, ಶೈವ, ಸಂನ್ಯಾಸಿ, ಯೋಗಿ, ಪಾಶುಪತ, ಯತಿ ಮುಂತಾದ ಪರ್ಯಾಯ ಹೆಸರುಗಳಲ್ಲಿ ಉಂಟೆಂಬುದು ಚಂದ್ರಜ್ಞಾನಾಗಮ (ಕ್ರಿ.ಪಾ. ೪.೭) ಸೂಕ್ಷ್ಮಾಗಮ (ಕ್ರಿ.ಪಾ. ೭.೬೪) ಪಾರಮೇಶ್ವರಾಗಮ (೧೦.೬೭-೬೮)ಗಳಿಂದ ತಿಳಿದುಬರುತ್ತದೆ.

ಜಂಗಮ ಸಹಜ ಮತ್ತು ಮಾಂತ್ರಿಕ ಎಂದು ಎರಡು ವಿಧ. ಮಂತ್ರ ಸಾಮರ್ಥ್ಯದಿಂದ ಆವಾಹಿಸಲ್ಪಡುವ ಶಿವಸ್ವರೂಪಿಯಾದ ಜಂಗಮಲಿಂಗವೇ ಅರ್ಥಾತ್ ಇಷ್ಟಲಿಂಗವೇ ಮಾಂತ್ರಿಕಜಂಗಮ, ಮಾಹೇಶ್ವರನೇ ಚರ ಜಂಗಮ. ಈ ಸಹಜ ಜಂಗಮ ಮತ್ತೆ ಬ್ರಹ್ಮಚಾರಿ, ಗೃಹಸ್ಥ ಮತ್ತು ನಿರಾಭಾರಿ ಎಂದು ಮೂರು ವಿಧ. ಅವರಲ್ಲಿ ಉತ್ತರೋತ್ತರನಾದವನು ಶ್ರೇಷ್ಠ ಅರ್ಥಾತ್ ಬ್ರಹ್ಮಚಾರಿ ಗಿಂತಲೂ ಗೃಹಸ್ಥ, ಗೃಹಸ್ಥನಿಗಿಂತಲೂ ನಿರಾಭಾರಿಯು ಶ್ರೇಷ್ಠನಾದವನು. ಈ ಮೂರು ಬಗೆಯ ಜಂಗಮರನ್ನು ಸಾಧಕನು ವಿಧಿವತ್ತಾಗಿ ಪೂಜಿಸಬೇಕೆಂದು ಚಂದ್ರಜ್ಞಾನಗಮ (ಕ್ರಿ.ಪಾ. ೪.೮) ಬೋಧಿಸುತ್ತದೆ. ಭಸ್ಮ, ರುದ್ರಾಕ್ಷ ಧಾರಣೆ, ಸದ್ಗುರುವಿನ ಸೇವೆ, ಶಿವಸ್ತುತಿ, ಶಿವನಾಮೋಚ್ಚಾರಣೆ, ಶಿವಪೂಜೆ, ಗುರ-ಜಂಗಮರಿಗೆ ದಾನ ಮಾಡುವುದು, ಶಿವಾಗಮಗಳ ಅರ್ಥಾನುಸಂಧಾನ ಮುಂತಾದವುಗಳು ಜಂಗಮನ ಲಕ್ಷಣಗಳು.

ಪೂರ್ವೋಕ್ತ ಶಿವಜ್ಞಾನಸಂಪನ್ನನಾದ ಜಂಗಮನಿಗೆ ಸ್ವಯ, ಚರ ಮತ್ತು ಪರ ಎಂಬ ಮೂರು ಅವಸ್ಥೆಗಳಿವೆ. ಈ ಅವಸ್ಥೆಗಳಿಂದ ಸಂಪನ್ನನಾದ ಜಂಗಮನನ್ನು ಸ್ವಯಜಂಗಮ, ಚರಜಂಗಮ ಮತ್ತು ಪರಜಂಗಮ ಎಂದು ಕರೆಯ ಲಾಗುತ್ತದೆ. ಈ ಮೂರು ಬಗೆಯ ಜಂಗಮರ ಸ್ವರೂಪವಿಂತಿದೆ.

*ಸ್ವಯಂಜಂಗಮ*

*ಸ್ವಚ್ಛಂದಾಚಾರಸಂತುಷ್ಟೋ ಜ್ಯೋತಿರ್ಲಿಂಗಪರಾಯಣಃ ।*
*ಆತ್ಮಸ್ಥಸಕಲಾಕಾರಃ ಸ್ವಾಭಿಧೋ ಮುನಿಸತ್ತಮಃ ॥*

*(ಸಿ.ಶ. ೧೫.೫೨)*

ಸ್ವಯಜಂಗಮನು ಸ್ವೇಚ್ಛಾಚಾರಸಂತುಷ್ಟನೂ, ಜ್ಯೋತಿ ರ್ಲಿಂಗ ಪರಾಯಣನೂ, ಸಮಸ್ತ ಪ್ರಪಂಚವನ್ನು ತನ್ನಲ್ಲಿರಿಸಿಕೊಂಡವನೂ, ಮುನಿಶ್ರೇಷ್ಠನೂ ಆಗಿರುವನು. ಇದರ ತಾತ್ಪರ್ಯವೇನೆಂದರೆ ಅಹಂಕಾರ-ಮಮಕಾರ ಗಳಿಲ್ಲದ ಸ್ವಯಂಜಂಗಮನು ಸ್ವತಂತ್ರವಾದ ಸ್ವಭಾವವುಳ್ಳವ ನಾಗಿದ್ದು, ಯಾರ ಅಧೀನನೂ ಅಲ್ಲ. ಈತನು ಇಷ್ಟಲಿಂಗದ ಪೂಜೆಯ ಜೊತೆಗೆ ಜ್ಯೋತಿರ್ಲಿಂಗದ ಉಪಾಸನೆ ಮಾಡುತ್ತಾನೆ. ಈ ಸ್ವಯಜಂಗಮನಿಗೆ ಶಿವಧ್ಯಾನ, ಶಿವಜ್ಞಾನ, ಭಿಕ್ಷಾನ್ನಸೇವನೆ ಮತ್ತು ಏಕಾಂತವಾಸಗಳೆಂಬ ನಾಲ್ಕೇ ಕರ್ಮಗಳುಂಟು, ಐದನೆಯ ಕರ್ಮವಾವುದೂ ಇರುವುದಿಲ್ಲ.

*ಧ್ಯಾನಂ ಶೈವಂ ತಥಾ ಜ್ಞಾನಂ ಭಿಕ್ಷಾ ಚೈಕಾಂತಶೀಲತಾ ।*
*ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ ॥*

*(ಸಿ.ಶಿ. ೧೫.೫೬)*

ಈ ಜಂಗಮನನ್ನು ಸ್ವಯಜಂಗಮ ಎಂದು ಕರೆಯುವ ಕಾರಣವೇನೆಂದರೆ ಈತನು ಪ್ರಪಂಚದಲ್ಲಿರುವ ಸಮಸ್ತ ಜೀವರಾಶಿಗಳನ್ನು ತನ್ನ ಸ್ವರೂಪದಲ್ಲಿ ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾನೆ. ಆದ್ದರಿಂದ ಅವನು ಯಾರನ್ನೂ ದ್ವೇಷಿಸುವುದಿಲ್ಲ. ಭಿಕ್ಷುಕ ಅಥವಾ ಭೂಪತಿ ಹೀಗೆ ಎಲ್ಲರಲ್ಲಿಯೂ ಸಮಬುದ್ಧಿಯುಳ್ಳವನಾಗಿರುತ್ತಾನೆ.

*ಚರಜಂಗಮ*

*ಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂ ಮಮತಾಕೃತಿಃ ।*
*ಸ್ವಯಮೇವ ಸ್ವಯಂ ಭೂತ್ವಾ ಚರತೀತಿ ಚರಾಭಿಧಃ ॥*

*(ಸಿ.ಶಿ. ೧೫.೫೭)*

ಸ್ವಸ್ವರೂಪಜ್ಞಾನಸಂಪನ್ನನೂ, ಅಹಂಕಾರ-ಮಮಕಾರಗಳಿಂದ ದೂರವಿರುವವನೂ ಆದ ಸ್ವಯಂಜಂಗಮನು ತಾನೇ ತಾನಾಗಿ ಸಂಚರಿಸುವುದರಿಂದ ಚರಜಂಗಮನೆಂದು ಕರೆಯಲ್ಪಡುತ್ತಾನೆ. ಈ ಜಂಗಮನು ಒಂದು ನಿರ್ದಿಷ್ಟವಾದ ಸ್ಥಳದಲ್ಲಿ ವಾಸಿಸದೆ, ನಗರ-ಗ್ರಾಮಗಳಲ್ಲಿ ಸಂಚರಿಸುತ್ತಾ, ಶಿವಾದ್ವೈತ ಜ್ಞಾನದಿಂದ ಸಮಸ್ತ ಪ್ರಪಂಚವನ್ನು ಶಿವಸ್ವರೂಪದಂತೆ ನೋಡುತ್ತಾನೆ. ಸನ್ಮಾನ-ಅವಮಾನಗಳ ವಿಷಯದಲ್ಲಿ ಸಮಾನ ಭಾವನೆಯಿಂದ ಕೂಡಿ, ಪ್ರಕೃತಿದತ್ತವಾದ ಸಂಪತ್ತಿನ ವಿಷಯದಲ್ಲಿ ನಿಸ್ಪೃಹನೂ, ಶಮ, ದಮ ಮೊದಲಾದ ಸದ್ಗುಣಗಳಿಂದ ಯುಕ್ತನಾದ ಈ ಜಂಗಮನು ಸದಾ ಸಂತೋಷದಿಂದ ಸಂಚಾರಶೀಲ ನಾಗಿರುತ್ತಾನೆ. ಈತನ ಸಂಚಾರದ ಮುಖ್ಯ ಪ್ರಯೋಜನವೆಂದರೆ ಭಕ್ತರಿಗೆ ಶಿವಜ್ಞಾನೋಪದೇಶ ಮತ್ತು ಲೋಕೋದ್ಧಾರವೇ ಆಗಿರುತ್ತದೆ. ಈ ರೀತಿಯಾಗಿ

ಸಂಚಾರಶೀಲನಾದ ಜಂಗಮನನ್ನು 'ಚರಪಟ್ಟಾಧಿಕಾರಿ' ಎಂದೂ ಸಹ ಕರೆಯಲಾಗಿದೆ.

***ಪರಜಂಗಮ :***

**ಪರಶ್ಚಾಸೌ** ಜಂಗಮಶ್ಚ ಪರಜಂಗಮ: ಎಂಬುದು ಪರಜಂಗಮ ಶಬ್ದದ ನಿಷ್ಪತ್ತಿ, 'ಪರ' ಎಂದರೆ ಶ್ರೇಷ್ಠ ಮತ್ತು ಜಂಗಮ ಎಂದರೆ ಜೀವನ್ಮುಕ್ತ. ಅರ್ಥಾತ್ ಜೀವನ್ಮುಕ್ತರಲ್ಲಿ ಶ್ರೇಷ್ಠನಾದವನನ್ನು ಪರಜಂಗಮ ಎಂದು ಕರೆಯಲಾಗುತ್ತದೆ. ಇಂತಹ ಜೀವನ್ಮುಕ್ತನಿಗೆ ಯಾವುದೇ ಬಗೆಯ ವಿಧಿ-ನಿಷೇಧಗಳಿರುವುದಿಲ್ಲ. ಈತನು ಒಂದೇ ಸ್ಥಳದಲ್ಲಿ ವಾಸಿಸುತ್ತಿರುತ್ತಾನೆ. ಇಲ್ಲವೇ ಸಂಚಾರಶೀಲನೂ ಆಗಿರುತ್ತಾನೆ. ಸಿದ್ಧಾಂತಶಿಖಾಮಣಿಯಲ್ಲಿ ಪರಜಂಗಮನ ಸ್ವರೂಪವು ಹೀಗೆ ನಿರೂಪಿತವಾಗಿದೆ -

***ಸ್ವಯಮೇವ ಸ್ವಯಂ ಭೂತ್ವಾ ಚರತಃ ಸ್ವಸ್ವರೂಪತಃ ।***
***ಪರಂ ನಾಸ್ತೀತಿ ಬೋಧಸ್ಯ ಪರತ್ವಮಭಿಧೀಯತೇ ॥***

*(ಸಿ.ಶಿ. ೧೫.೬೪)*

**ತಾನೇ** ತಾನಾಗಿ ಸಂಚರಿಸುತ್ತಿರುವ, ತನ್ನ ಸ್ವರೂಪಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲವೆಂಬ ಜ್ಞಾನಿಯು ಪರಜಂಗಮನೆಂದು ಕರೆಯಲ್ಪಡುತ್ತಾನೆ. ದೇಹಾಭಿಮಾನವನ್ನು ಬಿಟ್ಟಿರುವ ಶಿವಯೋಗಿಯು ಸ್ವೇಚ್ಛೆಯಿಂದ ಸಂಚರಿಸುತ್ತಾ, ತನ್ನ ದರ್ಶನ-ಸ್ಪರ್ಶನಗಳಿಂದ ಸಮಸ್ತ ಭಕ್ತರಿಗೆ ಮೋಕ್ಷವನ್ನು ಅನುಗ್ರಹಿಸುತ್ತಾನೆ.

**ಈ** ಸಂದರ್ಭದಲ್ಲಿ ಜಂಗಮನಿಗೆ ಸಂಬಂಧಿಸಿದಂತೆ ಒಂದು ಮುಖ್ಯವಾದ ಅಂಶವನ್ನು ಗಮನಿಸಬೇಕಾಗಿದೆ. ಅದೇನೆಂದರೆ, ಗುರುವಾಗಬೇಕಾದವನು ಹುಟ್ಟು ವೀರಶೈವನೇ ಆಗಿರಬೇಕು ಎಂದು ಹೇಳಲಾಗಿದೆ. ಆದರೆ ಶಿವದೀಕ್ಷೆಯಿಂದ ವೀರಶೈವರಾದ ಅನ್ಯಜಾತಿಯವರೂ ತಮ್ಮ ಸಾಧನೆಯ ಮೂಲಕ ಅಥವಾ ಹುಟ್ಟು ವೀರಶೈವರೂ ಜಂಗಮರಾಗಬಹುದಿತ್ತು. ಇದಕ್ಕೆ ಪಾರಮೇಶ್ವರಾಗಮದಲ್ಲಿನ ಈ ವಾಕ್ಯಗಳೇ ಪ್ರಮಾಣ -

***ಏತದಷ್ಟಗುಣಂ ಚಿಹ್ನಂ ಯಸ್ಮಿನ್ ಮ್ಲೇಚ್ಛೇಪಿ ದೃಶ್ಯತೇ ।***
***ಸ ಏವಾತಿಪ್ರಿಯೋ ಭಕ್ತೋ ಮಮ ಯೋಗೀ ಸ ಏವ ಹಿ ॥***

*(೧೭.೮೬)*

***ತತ್ರ ವಿಭೇದೇನ ಜಾತಿ ಭೇದೇವ ಕೇನಚಿತ್ ।***
***ವರ್ಷಾಂತೇ ಲಿಂಗಿನೋ ದೇವಿ ಜಾತಕರ್ಮಾನಮಾಶ್ರಿತಾಃ ॥***

*(೧೬.೫)*

**ಗುರುವಿನಿಂದ** ಇಷ್ಟಲಿಂಗ ಪಡೆದು ಹೊಸದಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿದ ಭಕ್ತನು ಜಂಗಮನಾದ ವಿಷಯದಲ್ಲಿ ಚನ್ನಬಸವಣ್ಣನವರ ಈ ವಚನಗಳು ಅತ್ಯಂತ ಉಪಯುಕ್ತ ಮಾಹಿತಿಯನ್ನು ನೀಡುತ್ತವೆ :

*೧. ಜಾತಿವಿಡಿದು ಜಂಗಮವ ಮಾಡಬೇಕೆಂಬ ಪಾತಕರು ನೀವು ಕೇಳಿರೋ*
*........... ...... .............. ..............*
*........... ........ ........... ......... ....*
*ಜಾತಿ ನಾಲ್ಕುವಿಡಿದು ಬಂದ ಜಂಗಮವೇ ಶ್ರೇಷ್ಠವೆಂದು*
*ಅವನೊಡಗೂಡಿಕೊಂಡು ನಡೆದು ಜಾತಿ ಎಂಜಲುಗಳ್ಳರಾಗಿ*
*ಉಳಿದ ಜಂಗಮವ ಕುಲವನೆತ್ತಿ ನುಡಿದು, ಅವನ ಆತಿಗಳೆದ*
*........ .......... ................ .........*
*೨) ಶ್ರೀಗುರು ಶಿಷ್ಯವ ಭವಿಪೂರ್ವಾಶ್ರಮವ ಕಳೆದು ಭಕ್ತನ ಮಾಡಿದ ಬಳಿಕ*
*ಆ ಭಕ್ತ ಹೋಗಿ ಜಂಗಮವಾಗಿ ಗುರುವಿನ ಮಠಕ್ಕೆ ಬಂದಡೆ*
*........ .......... .......... ........... ......*

**ಇತ್ಯಾದಿ** ವಚನದಲ್ಲಿ ಭವಿಯಾಗಿ ಹುಟ್ಟಿದವನು ವೀರಶೈವನಾಗಿ ಮುಂದೆ ಜಂಗಮನಾಗುವ ವಿಷಯ ಇಲ್ಲಿ ಸ್ಪಷ್ಟವಾಗಿದೆ.

***ಜಂಗಮ ಮಾಹಾತ್ಮ್ಯೆ :*** ಶೈವಾಗಮಗಳು ಜಂಗಮನ ಮಹಿಮೆಯನ್ನು ಈ ರೀತಿಯಾಗಿ ವರ್ಣಿಸಿವೆ. ಚಂದ್ರಜ್ಞಾನಾಗಮದ -

***ಐಹಿಕಾಮುಷ್ಮಿಕಾಭೋಗಾ ಮೋಕ್ಷಸ್ತತ್ಸಂಗತೋ ಭವೇತ್ ।***
***ಚರಸಂಗಸ್ತು ಸರ್ವೇಷಾಂ ಸರ್ವಕಾಮಫಲಪ್ರದಃ ।***
***ತತ್ಪಾದಪಾಂಸುಭಿಃ ಪೂತಂ ಭವನಂ ಚೇತರೇತ್ ವನಮ್ ।***
***ತದ್ಯಥಾಶಕ್ತಿ ಸಂಪೂಜ್ಯ ಜಂಗಮಾ ಹಿ ಹಿತೇಪ್ಸುನಾ ।***
***ಯದಮೀ ಮಾನುಷಾಕಾರಾಃ ಪ್ರತ್ಯಕ್ಷಪರಮೇಶ್ವರಾಃ ॥***

*(ಕ್ರಿ.ಪಾ. ೪.೨೬-೩೦)*

**ಈ** ಶ್ಲೋಕಗಳ ಪ್ರಕಾರ *"ಲೌಕಿಕ-ಪಾರಲೌಕಿಕ ಭೋಗಗಳು ಮಾತ್ರವಲ್ಲ, ಮೋಕ್ಷವೂ ಸಹ ಜಂಗಮನಿಗೆ ಅನಾಯಾಸವಾಗಿ ಲಭಿಸುತ್ತವೆ. ಆದ್ದರಿಂದ ಜಂಗಮನ ಸಹವಾಸವನ್ನಪೇಕ್ಷಿಸುವವರೆಲ್ಲರ ಎಲ್ಲ ಇಷ್ಟಾರ್ಥಗಳು ಫಲಪ್ರದವಾಗುತ್ತವೆ. ಜಂಗಮನ ಪಾದದೂಳಿನಿಂದ*

*ಪವಿತ್ರವಾದುದೇ ಮನೆ, ಉಳಿದದ್ದೆಲ್ಲವೂ ಕಾಡು. ಆ ಕಾರಣ ಸ್ವಹಿತವನ್ನು ಬಯಸುವ ಭಕ್ತನು ಯಥಾಶಕ್ತಿ ಜಂಗಮಾರ್ಚನೆ ಮಾಡಬೇಕು. ಏಕೆಂದರೆ ಜಂಗಮನು ಮನುಷ್ಯ ರೂಪದಲ್ಲಿರುವ ಸಾಕ್ಷಾತ್ ಪರಮೇಶ್ವರನೇ ಸರಿ."* ಅಂತೆಯೇ ಯೋಗಜಾಗಮದಲ್ಲಿ –

*ದರ್ಶನಾದರ್ಚನಾತ್ತಸ್ಯ ತ್ರಿಸಪ್ತಕುಲಸಂಯುತಾಃ ।*
*ಜನಾಃ ಮುಕ್ತಿಪದಂ ಯಾಂತಿ ಕಿಂ ಪುನಸ್ತತ್ಪರಾಯಣಃ ॥*

"ಜಂಗಮನ ದರ್ಶನ ಮಾಡುವುದರಿಂದ ಮತ್ತು ಆತನನ್ನು ಪೂಜಿಸುವುದರಿಂದ ಇಪ್ಪತ್ತೊಂದು ತಲೆಮಾರಿನ ವರೆಗೆ ಆ ವಂಶದವರು ಮೋಕ್ಷವನ್ನು ಪಡೆಯುತ್ತಾರೆ. ಇನ್ನೂ ಭಕ್ತಿಯಿಂದ ಸದಾ ತಮ್ಮ ಮನಸ್ಸನ್ನೇ ಜಂಗಮಕ್ಕೆ ಸಮರ್ಪಿಸಿದವರಿಗೆ ಅದೆಂತಹ ಫಲ ದೊರಕುವುದಿಲ್ಲ ? ಅರ್ಥಾತ್ ಬಹು ದೊಡ್ಡದಾದ ಫಲ ದೊರೆಯುತ್ತದೆ."

ಪೂರ್ವೋಕ್ತ ಆಗಮಗಳ ಅಭಿಪ್ರಾಯಗಳು ಸಿದ್ಧಾಂತ ಶಿಖಾಮಣಿಯ ಜಂಗಮ ಮಾಹಾತ್ಮ್ಯಸ್ಥಲದಲ್ಲಿ ಪುನರುಕ್ತಿ ಯಾಗಿವೆ. (ಸಿ.ಶಿ. ೧೧.೪–೪೪)

*ಜಂಗಮನ ಉತ್ಕೃಷ್ಟತೆ :* ವೀರಶೈವ ಸಿದ್ಧಾಂತದಲ್ಲಿ ಇಷ್ಟಲಿಂಗಾರ್ಚನೆಗಿಂತಲೂ ಜಂಗಮಾರ್ಚನೆಯ ಪ್ರಾಶಸ್ತ್ಯ ವನ್ನು ನಿರೂಪಿಸಲಾಗಿದೆ.

*ಚರೇಽಧಿಕಾ ಸ್ವೇಷ್ಟಲಿಂಗಾದುತ್ತಮಾ ಭಕ್ತಿರುಚ್ಯತೇ ।*

ಇಷ್ಟಲಿಂಗಕ್ಕಿಂತಲೂ ಜಂಗಮನ ವಿಷಯದಲ್ಲಿ ಹೆಚ್ಚು ಭಕ್ತಿಯಿಂದಿರುವುದು ಉತ್ತಮ ಭಕ್ತಿ ಎಂದು ನಿರೂಪಿಸಿದ ಚಂದ್ರಜ್ಞಾನಾಗಮವು ಜಂಗಮನನ್ನು ಪೂಜಿಸದೆ ಶಿವನನ್ನು ಪೂಜಿಸಿದ್ದೇ ಆದರೆ ಅಂತಹ ಪೂಜೆಯು ನಿಷ್ಫಲವಾಗುತ್ತದೆ. ಎಂದು ಜಂಗಮನ ಉತ್ಕೃಷ್ಟತೆಯನ್ನೂ ಸಾರುತ್ತದೆ.

*ಜಂಗಮಾನಸಮಭ್ಯರ್ಚ್ಯೈವ ಮತ್ಪೂಜಾ ಕ್ರಿಯತೇ ಯದಿ ।*
*ಸಾ ಪೂಜಾ ವಿಫಲೈವ ಸ್ಯಾದಿತ್ಯೇತಚ್ಛಿವಶಾಸನಮ್ ॥*

*(ಚಂ.ಜ್ಞಾ. ಕ್ರಿ.ಪಾ. ೪.೩೬)*

*ಸಿದ್ಧಾಂತಶಿಖಾಮಣಿಯಲ್ಲಿಯೂ ಸಹ –*

*ಅಜಂಗಮಂ ತು ಯಲ್ಲಿಂಗಂ ಮೃಚ್ಛಿಲಾದಿವಿನಿರ್ಮಿತಮ್ ।*
*ತದ್ವರಂ ಜಂಗಮಂ ಲಿಂಗಂ ಶಿವಯೋಗೀತಿ ವಿಶ್ರುತಮ್ ॥*
*ಅಚರೇ ಮಂತ್ರಸಂಸ್ಕಾರಾಲ್ಲಿಂಗೇ ವಸತಿ ಶಂಕರಃ ।*
*ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ ॥*

*(ಸಿ.ಶಿ. ೯.೬೧–೬೨)*

ಎಂದು ಚರಲಿಂಗ (ಜಂಗಮ) ಮತ್ತು ಅಚರಲಿಂಗ (ಸ್ಥಿರಲಿಂಗ)ವೆಂದು ಲಿಂಗದ ಎರಡು ಪ್ರಕಾರಗಳನ್ನು ಪ್ರತಿಪಾದಿಸಿ, ಮಣ್ಣು–ಕಲ್ಲು ಮೊದಲಾದವುಗಳಿಂದ ನಿರ್ಮಿತವಾದ ಸ್ಥಿರಲಿಂಗಕ್ಕಿಂತಲೂ ಶಿವಯೋಗಿಯ ರೂಪದಲ್ಲಿರುವ ಜಂಗಮಲಿಂಗದ ಶ್ರೇಷ್ಠತೆಯನ್ನು ದೃಷ್ಟಾಂತ ಸಹಿತ ಪ್ರತಿಪಾದಿಸಿದೆ. *"ಲಿಂಗಮುಖಂ ವೈ ಜಂಗಮಃ"* (ಲಿಂಗದ ಮುಖವೇ ಜಂಗಮ) ಎಂಬ ಉಕ್ತಿಯಂತೆ ಜಂಗಮನು ಲಿಂಗದ ಮುಖವೆಂಬ ಅಭಿಧಾನದಿಂದ ಜಂಗಮನಿಗೆ ಅರ್ಪಿತವಾದ ಎಲ್ಲವೂ ಲಿಂಗಾರ್ಪಿತವಾಗುತ್ತದೆ. ಆದ್ದರಿಂದಲೇ ಸಿದ್ಧಾಂತ ಶಿಖಾಮಣಿಯು –

*ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ ।*
*ತತ್‌ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಮ್ ॥*

*(ಸಿ.ಶಿ. ೯.೯೧)*

ಜಂಗಮನ ತೃಪ್ತಿಯಿಂದ ಶಿವನ ಸಂತೃಪ್ತಿ ಮತ್ತು ಶಿವನ ಸಂತೃಪ್ತಿಯಿಂದ ಚರಾಚರ ಪ್ರಪಂಚದ ಸಂತೃಪ್ತಿ ಎಂದು ಸಮರ್ಥಸಿದೆ. ಬಸವಣ್ಣನವರೂ ಸಹ

*ಮರಕ್ಕೆ ಬಾಯಿಬೇರೆಂದು ತಳಕ್ಕೆ ನೀರೆರೆದರೆ*
*ಮೇಲೆ ಪಲ್ಲವಿಸಿತ್ತು ನೋಡಾ*
*ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ*
*ಮುಂದೆ ಸಕಲ ಪದಾರ್ಥವನೀವನು*
*ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದಡೆ*
*ನರಕ ತಪ್ಪದು ಕಾಣಾ ಕೂಡಲಸಂಗಮದೇವಾ.*

ಎಂಬ ವಚನದಲ್ಲಿ ಜಂಗಮನ ಮಹತ್ತ್ವವನ್ನು ಕೊಂಡಾಡಿದ್ದಾರೆ. ಆದ್ದರಿಂದ ವೀರಶೈವರೆಲ್ಲರೂ ಗುರು–ಲಿಂಗ–ಜಂಗಮವೆಂಬ ಶಿವನ ಮೂರು ರೂಪಗಳನ್ನು ಶ್ರದ್ಧೆಯಿಂದ ಪೂಜಿಸಿ ಅವುಗಳ ಅನುಗ್ರಹವನ್ನು ಪಡೆದುಕೊಳ್ಳಬೇಕು. ವೀರಶೈವರು ಗುರು–ಲಿಂಗಗಳಲ್ಲಿ ಭಯ–ಭಕ್ತಿಗಳಿಂದಿರುವಂತೆ, ಜಂಗಮರ ಬಗ್ಗೆಯೂ ಗೌರವದಿಂದಿರಬೇಕು. ಜಂಗಮರ ಮಾಹಾತ್ಮ್ಯವನ್ನರಿತೇ ಈ ಧರ್ಮದಲ್ಲಿ ಜಂಗಮಾರಾಧನೆಗೆ ಅನಾದಿಕಾಲದಿಂದಲೂ ಮಹತ್ತ್ವವು ಪ್ರಾಪ್ತವಾಗಿದೆ. ಅಷ್ಟಾವರಣಗಳಲ್ಲಿ ಮೊದಲ ಈ ಮೂರು (ಗುರು–ಲಿಂಗ–ಜಂಗಮ) ಆವರಣಗಳು

ಪೂಜ್ಯವಾದವುಗಳು. ಈ ಮೂರರ ವಿಷಯದಲ್ಲಿ ಸಾಧಕನು ಸಮಾನ ಭಕ್ತಿ–ಗೌರವಗಳಿಂದಿದ್ದು ಅವರ ಅನುಗ್ರಹಕ್ಕೆ ಪಾತ್ರನಾಗಬೇಕೆಂದು ಸಿದ್ಧಾಂತ ಶಿಖಾಮಣಿಯು ಬೋಧಿಸುತ್ತದೆ.

*ಶಿವಯೋಗೀ ಶಿವಃ ಸಾಕ್ಷಾದಿತಿ ಕೈಂಕರ್ಯಭಕ್ತಿತಃ ।*
*ಪೂಜಯೇದಾದರೇಣೈವ ಯಥಾ ಲಿಂಗಂ*
*ಯತಾ ಗುರುಮ್॥*

*(ಸಿ.ಶಿ. ೯.೬೬)*

***ಪಂಚಾಚಾರಗಳು***

ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳನ್ನು ವೀರಶೈವ ಸಿದ್ಧಾಂತದಲ್ಲಿ ಸರ್ವಾಚಾರ ಸಂಪತ್ತೆಂದು ಕರೆಯಲಾಗಿದ್ದು ಪಂಚಾಚಾರಗಳನ್ನು ನೈತಿಕ ವಿಭಾಗಕ್ಕೆ ಸೇರಿಸಲಾಗಿದೆ. ಇದರಿಂದ ವ್ಯಕ್ತಿ ಹಾಗೂ ಸಮಾಜಗಳಲ್ಲಿನ ಸುಮಧುರ ಬಾಂಧವ್ಯ ಸಾಧ್ಯವಾಗುತ್ತದೆ. ವೀರಶೈವನೂ ಸಹ ಸಮಾಜದ ಅವಿಭಾಜ್ಯ ಅಂಗವಾಗಿರುವುದರಿಂದಾಗಿ ವೈಯಕ್ತಿಕ ಹಾಗೂ ಸಾಮಾಜಿಕ ಜೀವನದಲ್ಲಿ ಅವನು ಯಾವ ರೀತಿ ನಡೆದರೆ ಪರಧರ್ಮ ಸಹಿಷ್ಣುತೆಯ ಜೊತೆಗೆ ಸ್ವಧರ್ಮನಿಷ್ಠೆಯಿಂದ ಕೂಡಿಕೊಂಡು ಲಿಂಗಾಂಗ ಸಾಮರಸ್ಯ ರೂಪದ ಮುಕ್ತಿಯನ್ನು ಪಡೆಯಲು ಸಮರ್ಥನಾಗುತ್ತಾನೆಂಬುದು ಪಂಚಾಚಾರಗಳಿಂದ ವ್ಯಕ್ತವಾಗುತ್ತದೆ.

ಶಿವದೀಕ್ಷೆಯ ಕಾರಣದಿಂದ ಇಷ್ಟಲಿಂಗಧಾರಿಯಾದ ವೀರಶೈವನು ಅಷ್ಟಾವರಣ ಸಂಪನ್ನನೂ, ಪಂಚಾಚಾರ ಪರಾಯಣನೂ ಆಗುತ್ತಾನೆ. ಅವುಗಳಲ್ಲಿ ಶ್ರದ್ಧೆಯನ್ನು ಬೆಳೆಸುವ ಕಾರ್ಯವನ್ನು ಗುರೂಪದೇಶ ಮಾಡುತ್ತದೆ ಎಂದು ಬೋಧಿಸುತ್ತದೆ ಕಾರಣಾಗಮ –

*ಅಷ್ಟಾವರಣೇಷು ತ್ವಂ ಶ್ರದ್ಧಾಂ ಕುರು ಪ್ರಯತ್ನತಃ ।*
*ಪ್ರವರ್ತಸ್ವ ಮಹಾಬುದ್ಧೇ ಪಂಚಾಚಾರೇಷ್ವಪಿ ಕ್ರಮಾತ್ ॥*

*(ಕಾರಣಾಗಮ ಕ್ರಿಪಾ ೧.೧೨೮)*

ಷಟ್‌ಸ್ಥಲಾಂತರ್ಗತ ಏಕೋತ್ತರಶತಸ್ಥಲ ನಿರೂಪಣೆಯನ್ನು ಮಾಡುವ ಸಿದ್ಧಾಂತಶಿಖಾಮಣಿ, ಸ್ವತಂತ್ರವಾಗಿ ಪಂಚಾಚಾರಗಳ ನಿರೂಪಣೆಯನ್ನು ಮಾಡದಿದ್ದರೂ, ಅದಕ್ಕೆ ಆಧಾರಗ್ರಂಥಗಳಾದ ಶೈವಾಗಮೋತ್ತರ ಭಾಗಗಳಲ್ಲಿ ಅವುಗಳ ಸ್ಪಷ್ಟ ನಿರೂಪಣೆಯನ್ನು ಮಾಡಿರುವುದು ಕಂಡುಬರುತ್ತದೆ. ಆದರೂ ಸಂದರ್ಭವಶಾತ್ ಸ್ಥಲ ನಿರೂಪಣಾವಸರದಲ್ಲಿ ಆಚಾರಮೀಮಾಂಸೆಯು ಸಿದ್ಧಾಂತಶಿಖಾಮಣಿಯಲ್ಲಿ ಬಂದಿರುವುದನ್ನು ಗಮನಿಸಬಹುದು. ಇದು ಆಯಾ ಆಚಾರ ನಿರೂಪಣೆಯ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ.

ಚಂದ್ರಜ್ಞಾನಾಗಮದಲ್ಲಿ ಪಂಚಾಚಾರಗಳ ಉಲ್ಲೇಖ ಹಾಗೂ ಸ್ವರೂಪವು ಈ ರೀತಿಯಾಗಿದೆ :

*ಲಿಂಗಾಚಾರಃ ಸದಾಚಾರ: ಶಿವಾಚಾರಸ್ತಥೈವ ಚ ।*
*ಭೃತ್ಯಾಚಾರೋ ಗಣಾಚಾರ: ಪಂಚಾಚಾರಾ: ಪ್ರಕೀರ್ತಿತಾಃ ॥*

*(ಚಂದ್ರಜ್ಞಾನಾಗಮ ಕ್ರಿ.ಪಾ. ೯.೪)*

ಲಿಂಗಾಚಾರ, ಸದಾಚಾರ, ಶಿವಾಚಾರ, ಭೃತ್ಯಾಚಾರ ಮತ್ತು ಗಣಾಚಾರ – ಇವುಗಳನ್ನು ಪಂಚಾಚಾರಗಳೆಂದು ಕರೆಯಲಾಗಿದೆ. ೧೨ನೆಯ ಶತಮಾನದ ಶಿವಶರಣ ಚನ್ನಬಸವಣ್ಣನವರು ತಮ್ಮ 'ಲಿಂಗಾಚಾರ ಸದಾಚಾರ ಶಿವಾಚಾರ ಗಣಾಚಾರ ಭೃತ್ಯಾಚಾರವೆಂಬ ಪಂಚಾಚಾರದ ಆಚರಣೆಯೆಂತೆಂದಡೆ' ಎಂಬ ವಚನದಲ್ಲಿ ಪಂಚಾಚಾರ್ಯರು ಉಲ್ಲೇಖಮಾಡಿದ್ದಾರೆ. (ಚ.ಬ.ವ. ೧೧೪೯, ಕ.ವಿ.ವಿ. ಧಾರವಾಡ) ಈಗ ಅವುಗಳ ಸ್ವರೂಪಗಳನ್ನು ಗಮನಿಸೋಣ.

*ಲಿಂಗಾಚಾರ :* ಚಂದ್ರಜ್ಞಾನಾಗಮವು ಲಿಂಗಾ ಚಾರದ ಸ್ವರೂಪವನ್ನು ಹೀಗೆ ವಿವರಿಸಿದೆ :

ತಾತ್ಪರ್ಯವೇನೆಂದರೆ, ಗುರುವು ದೀಕ್ಷಾಕಾಲದಲ್ಲಿ ಅನುಗ್ರಹಿಸಿದ ಇಷ್ಟಲಿಂಗವನ್ನು ಹೊರತುಪಡಿಸಿ ಈ ಭೂಮಂಡಲದಲ್ಲಿ ಮತ್ತೊಂದು ದೈವವಿಲ್ಲವೆಂಬ ಭಾವನೆಯೇ ಲಿಂಗಾಚಾರವೆಂದು ಹೇಳಲ್ಪಟ್ಟಿದೆ. ಅದನ್ನು ಸಿದ್ಧಾಂತ ಶಿಖಾಮಣಿಯ ಭಕ್ತಮಾರ್ಗಕ್ರಿಯಾಸ್ಥಲದಲ್ಲಿ ಹೀಗೆ ನಿರೂಪಿಸಿದೆ.

*ನಾರ್ಚಯೇದನ್ಯದೇವಾಂಸ್ತು ನ ಸ್ಮರೇನ್ನಚ ಕೀರ್ತಯೇತ್ ।*
*ನ ತನ್ನೈವೇದ್ಯಮಶ್ನೀಯಾಚ್ಛಿವಭಕ್ತೋ ದೃಢವ್ರತಃ ॥*
*ಯದ್ ಗೃಹೇಷ್ವನ್ಯದೇವೋऽಸ್ತಿ ತದ್‌ಗೃಹಾಣಿ ಪರಿತ್ಯಜೇತ್ ।*
*ನಾನ್ಯ ದೇವಾರ್ಚಕಾನ್ ಮರ್ತ್ಯಾನ್ ಪೂಜಾಕಾಲೇ*
*ನಿರೀಕ್ಷಯೇತ್ ॥ '*
*ಸದಾ ಶಿವೈಕನಿಷ್ಠಾನಾಂ ವೀರಶೈವಾಧ್ವವರ್ತಿನಾಮ್ ।*
*ನಹಿ ಸ್ಥಾವರಲಿಂಗಾನಾಂ ನಿರ್ಮಾಲ್ಯಾದ್ಯುಪಯುಜ್ಯತೇ ॥ "*

ಶಿವನನ್ನು ಹೊರತುಪಡಿಸಿ ಇತರ ದೇವತೆಗಳನ್ನು ಪೂಜಿಸಬಾರದು, ಸ್ಮರಿಸಬಾರದು, ಸ್ತುತಿಸಬಾರದು, ನೈವೇದ್ಯವನ್ನು ಸ್ವೀಕರಿಸಬಾರದು. ಯಾರ ಮನೆಗಳಲ್ಲಿ ಶಿವೇತರ ದೇವಾಲಯವಿರುವದೋ ಅಂತಹ ಮನೆಗಳನ್ನು ಬಿಡಬೇಕು, ಇತರ ದೇವಪೂಜಕರನ್ನು ಪೂಜಾಕಾಲದಲ್ಲಿ ನೋಡಬಾರದು. ಯಾವಾಗಲೂ ಶಿವಲಿಂಗನಿಷ್ಠರೂ, ವೀರಶೈವಮಾರ್ಗ ನಿರತರೂ ಆದ ಶಿವಭಕ್ತರು ದೇವಾಲಯಗಳಲ್ಲಿರುವ ಸ್ಥಾವರಲಿಂಗಗಳ ನೈವೇದ್ಯವನ್ನು ಸ್ವೀಕರಿಸಬಾರದು. ವೀರಶೈವ ಸಾಧಕನು ತನ್ನ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳನ್ನು ಹೊರತುಪಡಿಸಿ ಸ್ಥಾವರಲಿಂಗಗಳ ಹಾಗೂ ಇತರ ದೇವತೆಗಳ ಪೂಜಾದಿಗಳನ್ನು ಮಾಡದೆ, ಇಷ್ಟಲಿಂಗದಲ್ಲಿನ ನಿಷ್ಠೆಯನ್ನೇ ಲಿಂಗಾಚಾರವೆಂದು ಸಿದ್ಧಾಂತಶಿಖಾಮಣಿಯು ಪ್ರತಿಪಾದಿಸಿದೆ. ಇದಲ್ಲದೆ ವೀರಶೈವ ಸಿದ್ಧಾಂತದಲ್ಲಿನ ಶರಣಸತಿ-ಲಿಂಗಪತಿ ಎಂಬ ಪರಿಕಲ್ಪನೆಯೂ ಪ್ರಸಿದ್ಧವಾದದ್ದೇ. ಸಾಧಕನು ತನ್ನ ಇಷ್ಟಲಿಂಗವನ್ನು ಪತಿಯೆಂತಲೂ, ತನ್ನನ್ನು ಸತಿಯೆಂತಲೂ ಭಾವನೆಯುಳ್ಳವನಾಗಿರುತ್ತಾನೆ. ಪ್ರಪಂಚದಲ್ಲಿ ಪತಿವ್ರತಾ ಸ್ತ್ರೀಯು ತನ್ನ ಪತಿಯನ್ನು ಬಿಟ್ಟು ಅನ್ಯ ಪುರುಷನಲ್ಲಿ ಪ್ರೇಮವುಳ್ಳವಳಾದರೆ ಅವಳು ದೋಷಿಯಾಗುವಂತೆ, ಭಕ್ತನೂ ಸಹ ಇಷ್ಟಲಿಂಗ ಪೂಜೆಯನ್ನು ಹೊರತುಪಡಿಸಿ ಅನ್ಯದೇವೋ ಪಾಸಕನಾದರೆ ದೂಷಿತನಾಗುತ್ತಾನೆ. ಶಿವೇತರ ದೇವೋಪಾ ಸನೆಯು ವೀರಶೈವರಿಗೆ ನಿಷಿದ್ಧವಾಗಿದ್ದು ಇಷ್ಟಲಿಂಗವೇ ವೀರಶೈವರಿಗೆ ಪರದೈವವಾಗಿದೆ ಎಂದು ಸಿದ್ಧಾಂತ ಶಿಖಾಮಣಿಯು ಶೀಲಸಂಪಾದನಸ್ಥಲದಲ್ಲಿ ಹೇಳುವುದರ ಮೂಲಕ ಲಿಂಗಾಚಾರದ ಮಹತ್ತ್ವವನ್ನು ಸೊಗಸಾಗಿ ನಿರೂಪಿಸಿದೆ.

*ಪತಿವ್ರತಯಾ ಯಚ್ಛೀಲಂ ಪತಿರಾಗಾತ್ ಪ್ರಶಸ್ಯತೇ ।*
*ತಥಾ ಶಿವಾನುರಾಗೇಣ ಸುಶೀಲೋ ಭಕ್ತ ಉಚ್ಯತೇ ॥* [೬]

ಇದನ್ನೇ ಬಸವಣ್ಣನವರು ತಮ್ಮದೊಂದು ವಚನದಲ್ಲಿ **ಅರಸನ ಕಂಡು ತನ್ನ ಪುರುಷನ ಮರೆದಡೆ** (ಬ.ವ. ೪೨೫; ಕ.ವಿ.ವಿ.) ಎಂದು ಮಾರ್ಮಿಕವಾಗಿ ಹೇಳಿದ್ದರೆ, ಚನ್ನಬಸವಣ್ಣನವರು **ಲಿಂಗವನಲ್ಲದೆ ಅನ್ಯವನರಿಯದಿಹುದೆ ಲಿಂಗಾಚಾರ** (ಚ.ಬ.ವ. ೧೦೩; ಕ.ವಿ.ವಿ) ಎಂದು ಲಿಂಗಾಚಾರದ ಸ್ವರೂಪವನ್ನು ವಿವರಿಸಿದ್ದಾರೆ. ಲಿಂಗಾಚಾರದ ಸ್ವರೂಪದ ಪ್ರಕಾರಾಂತರವನ್ನು ಚಂದ್ರ ಜ್ಞಾನಾಗಮವು ಹೀಗೆ ನಿರೂಪಿಸಿದೆ !

*ಕ್ರಿಯಾವೇಧಾಮನ್ವಭಿಖ್ಯ ದೀಕ್ಷಾಂತರ್ಗತಮೂರ್ತಯಃ ।*
*ಏಕವಿಂಶತಿ ದೀಕ್ಷಾಶ್ಚ ಲಿಂಗಾಚಾರ ಇತಿ ಸ್ಮೃತಃ ॥* [೮]

ತಾತ್ಪರ್ಯವೇನೆಂದರೆ, ಕ್ರಿಯಾ, ವೇದಾ, ಮತ್ತು ಮನು (ಮಂತ್ರ) ಎಂಬ ತ್ರಿವಿಧ ದೀಕ್ಷೆಗಳು ಪ್ರತ್ಯೇಕವಾಗಿ ಏಳು ಪ್ರಕಾರಗಳಾಗಿದ್ದು, ಒಟ್ಟು ೨೧ ವಿಧ ದೀಕ್ಷೆಗಳು ಲಿಂಗಾಚಾರ ಎನಿಸುತ್ತವೆ. ಅಲ್ಲದೆ ಚಂದ್ರಜ್ಞಾನಾಗಮವು ೨೧ ವಿಧ ದೀಕ್ಷೆಗಳ ನಾಮನಿರ್ದೇಶನವನ್ನೂ ಮಾಡಿದೆ. ಇವೆಲ್ಲವು ಗಳ ಸ್ವರೂಪವು ಕಾರಣಾಗಮದಲ್ಲಿ ವಿಸ್ತೃತವಾಗಿ ಪ್ರತಿಪಾದಿತವಾಗಿರುವುದನ್ನು ಕಾಣುತ್ತೇವೆ.

ಈ ಲಿಂಗಾಚಾರದ ಪರಿಪಾಲನೆಯಿಂದ ಸಾಧಕನಿಗೆ ಏಕದೇವೋಪಾಸನೆಯಲ್ಲಿ ನಿಷ್ಠೆ ಹಾಗೂ ಮನೋಧಾರ್ಢ್ಯತೆ ಯುಂಟಾಗುತ್ತವೆ. ತತ್ಪರಿಣಾಮವಾಗಿ ಅಂತರ್ಮುಖನಾದ ಸಾಧಕನು ಅಂತರ್ಲಿಂಗಾನುಸಂಧಾನ ಮಾಡಲು ಸಮರ್ಥ ನಾಗುತ್ತಾನೆ.

**ಸದಾಚಾರ** : ಪಂಚಾಚಾರಗಳಲ್ಲಿ 'ಸದಾಚಾರ'ವು ಎರಡನೆಯದು. "ಲಿಂಗಧಾರೀ ಸದಾಶುದ್ಧಃ" ಎಂಬ ಸಿದ್ಧಾಂತ ಶಿಖಾಮಣಿಯ ಸಾರ್ಥಕತೆಯು ಸದಾಚಾರವನ್ನ ವಲಂಬಿಸಿದೆ. ಸದಾಚಾರದ ಸ್ವರೂಪವು ಸೂಕ್ಷ್ಮಾಗಮದಲ್ಲಿ ಹೀಗೆ ನಿರೂಪಿತವಾಗಿದೆ:

*ಸಜ್ಜನಃ ಶಿವಭಕ್ತಶ್ಚ ಯೇನ ಮಾರ್ಗೇಣ ಸರ್ವದಾ ।*
*ತೋಷ್ಯತೇ ಚ ಮಹಾದೇವಿ ಸದಾಚಾರಃ ಸ ವೈ ಸ್ಮೃತಃ ॥* [೯]

ಅರ್ಥಾತ್ ಸಜ್ಜನರಾದ ಶಿವಭಕ್ತರನ್ನು ಸದಾ ಸಂತೋಷಗೊಳಿಸುವ ಆಚಾರವೇ ಸದಾಚಾರವೆನಿಸುತ್ತದೆ.

ಸಿದ್ಧಾಂತಶಿಖಾಮಣಿಯಲ್ಲಿ ಶಿವಯೋಗಿ ಶಿವಾಚಾರ್ಯರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿ ರುವುದನ್ನು ಕಾಣುತ್ತೇವೆ.

*ಸದಾಚಾರಪ್ರಿಯಃ ಶಂಭುಃ ಸದಾಚಾರೇಣ ಪೂಜ್ಯತೇ ।*
*ಸದಾಚಾರಂ ವಿನಾ ತಸ್ಯ ಪ್ರಸಾದೋ ನೈವ ಜಾಯತೇ ॥*

ಶಿವನು ಸದಾಚಾರ ಪ್ರಿಯನು, ಸದಾಚಾರದಿಂದಲೇ ಪೂಜಿಸಲ್ಪಡುತ್ತಾನೆ. ಸದಾಚಾರವಿಲ್ಲದೆ ಅವನ ಪ್ರಸಾದವೇ ಸಿದ್ಧಿಸುವುದಿಲ್ಲ. ಅರ್ಥಾತ್ ಸದಾಚಾರ ಸಹಿತವಾದ

ಜ್ಞಾನದಿಂದ ಮಾತ್ರ ಶಿವನು ಪ್ರಸನ್ನನಾಗುತ್ತಾನೆಂದರ್ಥ. ಚಂದ್ರಜ್ಞಾನಾಗಮದಲ್ಲಿ ಸದಾಚಾರದ ಸ್ವರೂಪವು ಹೀಗೆ ನಿರೂಪಿತವಾಗಿದೆ :

*ಧರ್ಮಾರ್ಜಿತೇನ ದ್ರವ್ಯೇಣ ಯತ್‌ಸಂತರ್ಪಣಮನ್ವಹಮ್ ।*
*ಗುರುಲಿಂಗಜಂಗಮಾನಾಂ ಸದಾಚಾರ ಇತಿ ಸ್ಮೃತಃ ॥*

ಧರ್ಮಮಾರ್ಗದಿಂದ ಗಳಿಸಿದ ಸಂಪತ್ತಿನಿಂದ ಪ್ರತಿನಿತ್ಯವೂ ಗುರು-ಲಿಂಗ-ಜಂಗಮರಿಗೆ ಸಂತರ್ಪಣೆ ಮಾಡುವುದು ಸದಾಚಾರವೆನಿಸಿದೆ. ಚನ್ನಬಸವಣ್ಣನವರು ಇದೇ ಅಭಿಪ್ರಾಯವನ್ನು ಸರಳಗನ್ನಡದಲ್ಲಿ ಹೇಳಿದ್ದಾರೆ - ***"ಸತ್ಯ ಶುದ್ಧ ಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ನೀಡಿ, ಸತ್ಯ ಶುದ್ಧನಾಗಿಹುದೆ ಸದಾಚಾರ".*** (ಚ.ಬ.ವ. ೧೧೮೫; ಕ.ವಿ.ವಿ.) ಶಿವಾನುಭವ ಶಬ್ದಕೋಶದಲ್ಲಿ ಸದಾಚಾರದ ನಿರೂಪಣೆಯು ಈ ರೀತಿಯಾಗಿದೆ - "ಸತ್ಯಶುದ್ಧ ಕಾಯಕವನು ಮಾಡುತ್ತ ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು ಪರಹಿತಾರ್ಥ ಮಾಡುವುದೇ ಸದಾಚಾರ. ಈ ಸತ್ಯ ಶುದ್ಧ ಕ್ರಿಯೆಯನ್ನು ಬಸವಾದಿ ಶಿವಶರಣರು ಕಾಯಕವೆಂದಿದ್ದಾರೆ. ಈ ಕಾಯಕತತ್ತ್ವವು ವೀರಶೈವ ಧರ್ಮವು ಜಗತ್ತಿಗೆ ನೀಡಿದ ಅನುಪಮ ಕೊಡುಗೆಯಾಗಿದೆ.

ವೀರಶೈವ ಸಿದ್ಧಾಂತದಲ್ಲಿ ಸೋಪಾಧಿ, ನಿರುಪಾಧಿ ಮತ್ತು ಸಹಜವೆಂದು ಮೂರು ಬಗೆಯ ದಾನಗಳು ಪ್ರತಿಪಾದಿತವಾಗಿವೆ. ಫಲಾಪೇಕ್ಷೆಯಿಂದ ಮಾಡುವ ದಾನವು ಸೋಪಾಧಿಕ, ಯಾವುದೇ ರೀತಿಯ ಫಲಾಪೇಕ್ಷೆಯಿಲ್ಲದೆ ಈಶ್ವರಾರ್ಪಣ ಬುದ್ಧಿಯಿಂದ ಮಾಡುವ ದಾನವು ನಿರುಪಾಧಿಕ ಮತ್ತು ಆದಾತೃ-ದಾತೃ-ದೇಯ ವಸ್ತುಗಳಲ್ಲಿ ಶಿವಸ್ವರೂಪವನ್ನು ಭಾವಿಸಿ, ತಾನು ದಾನಮಾಡುವವನಲ್ಲವೆಂಬ ಭಾವನೆಯಿಂದ ಮಾಡುವ ದಾನವು ಸಹಜದಾನವೆನಿಸುತ್ತದೆ.

ಶ್ರೀ ಸಿದ್ಧಾಂತಶಿಖಾಮಣಿಯ ***"ಸಹಜಂ ದಾನಮುತ್ಕೃಷ್ಟಂ ಸರ್ವದಾನೋತ್ತಮೋತ್ತಮಮ್"*** ಎಂಬ ಉಕ್ತಿಯ ಮೇರೆಗೆ ತ್ರಿವಿಧ ದಾನಗಳಲ್ಲಿ ಶ್ರೇಷ್ಠವಾದ ಸಹಜದಾನದಿಂದ ಆರಾಧ್ಯರಾದ ಗುರು-ಲಿಂಗ-ಜಂಗಮರನ್ನು ಪ್ರತಿನಿತ್ಯವೂ ಸಂತರ್ಪಣೆ ಮಾಡುವುದೇ ವೀರಶೈವರ ಸದಾಚಾರ. ಈ ಸದಾಚಾರವು ಎಂಟು ವಿಧ ಶೀಲಗಳಿಂದ ಕೂಡಿದೆ. ಅವುಗಳೆಂದರೆ ಅಂಕುರಶೀಲ, ಉತ್ಪನ್ನಶೀಲ, ದ್ವಿದಲಶೀಲ, ಪ್ರವೃದ್ಧಶೀಲ, ಸಪ್ರಕಾಂಡಶೀಲ, ಸಶಾಖಶೀಲ, ಸಪುಷ್ಪಶೀಲ ಮತ್ತು ಸಫಲಶೀಲ. ಶಿವತತ್ತ್ವದ ಜಿಜ್ಞಾಸೆ, ಶಿವಧ್ಯಾನದಲ್ಲಿ ಏಕತಾನತೆ, ಮತ್ತು ಶಿವಜ್ಞಾನವೊಂದರಲ್ಲಿಯೇ ನಿಷ್ಠೆ - ಈ ಮೂರನ್ನು ಶೀಲವೆಂದು ಕರೆಯುತ್ತದೆ ಸಿದ್ಧಾಂತ ಶಿಖಾಮಣಿ. ಈ ಎಂಟು ಬಗೆಯ ಶೀಲಗಳ ವಿವರಣೆಯನ್ನು ಬಯಸುವ ಜಿಜ್ಞಾಸೆಗಳು ಚಂದ್ರಜ್ಞಾನಾಗಮ, ಕ್ರಿಯಾಪಾದದ ೯ನೇ ಪಟಲದ ಶ್ಲೋಕ ೨೩-೩೦ ರವರೆಗೆ ನೋಡಬಹುದು.

ಈ ಎಂಟು ಬಗೆಯ ಶೀಲಗಳಿಂದ ಕೂಡಿದ ಸದಾಚಾರದ ಆಚರಣೆಯಿಂದ ಸಾಧಕನಿಗೆ ಶಿವಾನುಗ್ರಹ ಮತ್ತು ಮನೋಭಿಲಾಷೆಯ ಸಿದ್ಧಿಗಳುಂಟಾಗುತ್ತವೆ;

*ಯಃ ಸದಾಚಾರಮಷ್ಟಾಂಗಂ ಭಕ್ತಿನಿಷ್ಠೋ ನಿಷೇವತೇ ।*
*ಸ ಸದ್ಯಃ ಸಿದ್ಧಿಮಾಪ್ನೋತಿ ಪರಾಂ ಶಂಭೋರನುಗ್ರಹಾತ್ ॥*

*ಸದಾಚಾರಪ್ರಿಯಃ ಶಂಭುಃ ಸದಾಚಾರೇಣ ಪೂಜ್ಯತೇ ।*
*ಸದಾಚಾರಂ ವಿನಾ ತಸ್ಯ ಪ್ರಸಾದೋ ನೈವ ಜಾಯತೇ ॥*

ಎಂಬ ಆಚಾರ್ಯೋಕ್ತಿಯ ಮೇರೆಗೆ ಸದಾಚಾರವು ಶಿವಾನುಗ್ರಹವನ್ನು ಉಂಟುಮಾಡುವಂತಹದ್ದಾಗಿದೆ. ಇದನ್ನು ನಿಷ್ಠೆಯಿಂದ ಪಾಲಿಸುವುದೇ ಶಿವಾರಾಧನೆ ಎಂದು ತಿಳಿಯತಕ್ಕದ್ದು. ಈ ಸದಾಚಾರದಿಂದ ಲೋಕಾನುಗ್ರಹ ಮತ್ತು ಶಿವಾನುಗ್ರಹಗಳೆಂಬ ಐಹಿಕ ಮತ್ತು ಆಮುಷ್ಮಿಕ ಫಲಗಳನ್ನು ಸಾಧಕನು ಪಡೆಯುತ್ತಾನೆ. ಆದ್ದರಿಂದ ಪ್ರತಿಯೊಬ್ಬ ವೀರಶೈವನೂ ಸದಾಚಾರ ಸಂಪನ್ನನಾಗಬೇಕು.

**ಶಿವಾಚಾರ :** ಪಂಚಕೃತ್ಯ ಪರಾಯಣನೂ, ಪರಬ್ರಹ್ಮಸ್ವರೂಪಿಯೂ ಆದ ಶಿವನೇ ಭಕ್ತರ ರಕ್ಷಕ, ಮತ್ತಾರೂ ಅಲ್ಲ ಎಂಬುದೇ ಶಿವಾಚಾರವೆನಿಸುತ್ತದೆ.

*ಶಿವ ಏವ ಪರಂ ಬ್ರಹ್ಮ ಪಂಚತತ್ತ್ವಪರಾಯಣಮ್ ।*
*ನ ತತೋಽನ್ಯಾ ಗತಿರಿತಿ ಶಿವಾಚಾರೋ ಹಿ ಕೀರ್ತಿತಃ ॥*

ಎಂಬ ಆಗಮೋಕ್ತಿಯ ಮೇರೆಗೆ ಸೃಷ್ಟಿ, ಸ್ಥಿತಿ, ಸಂಹಾರ, ನಿಗ್ರಹ, ಅನುಗ್ರಹಗಳೆಂಬ ಪಂಚಕೃತ್ಯ ಪರಾಯಣನೂ, ಪರಬ್ರಹ್ಮ ಸ್ವರೂಪಿಯೂ ಆದ ಶಿವನೇ ನನ್ನ ರಕ್ಷಕ, ಮತ್ತಾರೂ ಇಲ್ಲವೆಂಬ ಭಾವನೆಯೇ ಶಿವಾಚಾರವೆನಿಸುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿಯು -

*ಶಿವಸಂಸ್ಕಾರಯೋಗೇನ ವಿಶುದ್ಧಾನಾಂ ಮಹಾತ್ಮನಾಮ್ ।*
*ಕಿಂ ಪೂರ್ವಕಾಲಿಕೈರ್ಧರ್ಮೈಃ ಪ್ರಾಕೃತಾನಾಂ ಹಿ ತೇ ಮತಾಃ॥*

ಅತಿವರ್ಣಾಶ್ರಮ ಧರ್ಮವೆಂದು ಪ್ರಸಿದ್ಧವಾದ ವೀರಶೈವದಲ್ಲಿ ಶಿವದೀಕ್ಷೆಯಿಂದ ಪವಿತ್ರನಾದ ವ್ಯಕ್ತಿಯಲ್ಲಿ ಪೂರ್ವಾಶ್ರಮದ ಜಾತ್ಯಾದಿಗಳನ್ನು ಪರಿಗಣಿಸಲಾಗದೆಂದು ಹೇಳಲಾಗಿದೆ. ಅಂತೆಯೇ ಚನ್ನಬಸವಣ್ಣನವರು – ***"ಶಿವಭಕ್ತರಲ್ಲಿ ಕುಲಗೋತ್ರ ಜಾತಿ ವರ್ಣಾಶ್ರಯವನರಸದೆ ಅವರೊಕ್ಕುದ ಕೊಂಬುದೆ ಶಿವಾಚಾರ"*** (ಚ.ಬ.ವ. ೧೧೫೯ ಕ.ವಿ.ವಿ.) ಎಂದು ಶಿವಾಚಾರವನ್ನು ವರ್ಣಿಸಿದ್ದಾರೆ.

**ಚಂದ್ರಜ್ಞಾನಾಗಮವು** ಮತ್ತೊಂದು ಸಂದರ್ಭದಲ್ಲಿ ದ್ರವ್ಯ, ಕ್ಷೇತ್ರ, ಗೃಹ ಮೊದಲಾದ ಹದಿನಾರು ಪದಾರ್ಥಗಳನ್ನು ಶೈವಾಗಮೋಕ್ತ ರೀತ್ಯಾ ಶುದ್ಧಿಗೊಳಿಸುವುದೇ ಶಿವಾಚಾರ ವೆಂದು ನಿರೂಪಿಸಿದೆ –

**ಆ** ಷೋಡಶಶುದ್ಧಿಗಳ ನಾಮನಿರ್ದೇಶನವು ಚಂದ್ರ ಜ್ಞಾನಾಗಮದಲ್ಲಿ ಈ ರೀತಿಯಾಗಿದೆ – ೧. ದ್ರವ್ಯಶುದ್ಧಿ, ೨. ಕ್ಷೇತ್ರಶುದ್ಧಿ, ೩. ಗೃಹಶುದ್ಧಿ, ೪. ಭಾಂಡಶುದ್ಧಿ, ೫. ತೃಣಶುದ್ಧಿ, ೬. ಕಾಷ್ಠಶುದ್ಧಿ, ೭. ವೀಟಿಕಾಶುದ್ಧಿ, ೮. ಪಾಕಶುದ್ಧಿ, ೯. ರಸಶುದ್ಧಿ, ೧೦. ಭವಶುದ್ಧಿ, ೧೧. ಭೂತಶುದ್ಧಿ, ೧೨. ಭಾವಶುದ್ಧಿ, ೧೩. ಮಾರ್ಗಶುದ್ಧಿ, ೧೪. ಕಾಲಶುದ್ಧಿ, ೧೫. ವಾಕ್‌ಶುದ್ಧಿ ಮತ್ತು ೧೬. ಜನಶುದ್ಧಿ. ಇವುಗಳ ಲಕ್ಷಣವನ್ನು ಇದೇ ಆಗಮದ ಒಂಬತ್ತನೆಯ ಪಟಲದ ಶ್ಲೋಕ ೩೩–೪೯ ರವರೆಗೆ ವಿವರಿಸಲಾಗಿದೆ. ಆಸಕ್ತರು ಗಮನಿಸಬಹುದು.

**ಒಟ್ಟಿನಲ್ಲಿ** ಇಂತಹ ಶಿವಾದ್ವೈತ ಭಾವನೆಯಿಂದ ಸಾಧಕನಲ್ಲಿ ನಿಧಾನವಾಗಿ ಶಿವಭಾವವು ದೃಢವಾಗುತ್ತಾ, ಸರ್ವತ್ರ ಶಿವದೃಷ್ಟಿಯುಂಟಾಗುತ್ತದೆ. ಈ ಬಗೆಯ ಶಿವದೃಷ್ಟಿಯಿಂದ ಸಾಧಕನ ಸಂಕುಚಿತ ಬುದ್ಧಿಯು ನಷ್ಟವಾಗಿ **"ಸರ್ವಂ ಶಿವಮಯಂ ಜಗತ್"** ಎಂಬ ವಿಶಾಲಭಾವನೆ ಯುಂಟಾಗುತ್ತದೆ. ತತ್ಪರಿಣಾಮವಾಗಿ ಅವನು ಯಾರನ್ನು ದ್ವೇಷಿಸನು ಹಾಗೂ ಯಾವುದನ್ನು ಕಂಡು ಜುಗುಪ್ಸೆ ಪಡನು. ಇಂತಹ ಶಿವಾಚಾರದಿಂದ ವ್ಯಕ್ತಿಯ ವಿಕಾಸವಾಗಿ ಸಮಾಜದಲ್ಲಿ ಉನ್ನತಿಯು ಕಂಡುಬರುತ್ತದೆ. ಸಾಧಕನ ಭಾವಶುದ್ಧಿಯಾಗದ ಹೊರತು ಶಿವಾಚಾರವು ಉತ್ಪನ್ನವಾ ಗುವುದಿಲ್ಲ. ಆದ ಕಾರಣ ಭಾವಶುದ್ಧಿಗೋಸ್ಕರವಾಗಿ ನಾವು ಪ್ರತಿನಿತ್ಯ ಉಪಯೋಗಿಸುವ ಹದಿನಾರು ಪದಾರ್ಥಗಳನ್ನು ಶೈವಾಗಮೋಕ್ತ ಕ್ರಮದಿಂದ ಶುದ್ಧಿಗೊಳಿಸುವ ಪ್ರಕ್ರಿಯೆಯು ಶಿವಾಚಾರವೆನಿಸಿದೆ ಎಂಬುದು ಪೂರ್ವೋಕ್ತ ನಿ[illegible] ಯಿಂದ ಸ್ಪಷ್ಟವಾಗುತ್ತದೆ. ಇಂತಹ ಶಿವಾಚಾರದ ಆಚರಣೆಯಿಂದ ಶಿವಸಾಯುಜ್ಯ ಪ್ರಾಪ್ತವಾಗುತ್ತದೆಂದು ಚಂದ್ರಜ್ಞಾನಾಗಮ ಘೋಷಿಸಿದೆ –

*ವಿದ್ವನ್ನಯಂ ಶಿವಾಚಾರಃ ಸರ್ವಶಾಸ್ತ್ರೇಷು ಗೋಪಿತಃ ।*
*ಏತದಾಚರಣನ್ಮರ್ತ್ಯಃ ಶಿವಸಾಯುಜ್ಯಮಶ್ನುತೇ ॥*

**ಗಣಾಚಾರ :** "ಅನುಷ್ಠಿತೋ ಭಕ್ತಗಣೈರ್ಗ ಣಾಚಾರ ಇತೀರಿತಃ" ಎಂಬ ಚಂದ್ರಜ್ಞಾನಾಗಮೋಕ್ತಿಯ ಪ್ರಕಾರ ಶಿವಭಕ್ತರು ಅನುಷ್ಠಾನ ಮಾಡಬೇಕಾದ ಆಚಾರವೇ ಗಣಾಚಾರವೆನಿಸುತ್ತದೆ. ತನ್ನ ಇಷ್ಟದೇವತೆಯಲ್ಲಿ, ತನ್ನ ಗುರುವಿನಲ್ಲಿ, ತನ್ನ ಧರ್ಮಗ್ರಂಥಾದಿಗಳ ವಿಷಯದಲ್ಲಿ ಶ್ರದ್ಧೆಯಿಂದಿರುವ ಸಂದರ್ಭದಲ್ಲಿ ಯಾವನಾದರೂ ಅಧಾರ್ಮಿಕ ವ್ಯಕ್ತಿಯು ಅವುಗಳನ್ನು ನಿಂದಿಸಿ ಅವಹೇಳನ ಮಾಡಿದ್ದೇ ಆದರೆ ಸಾಮ ಅಥವಾ ದಂಡೋಪಾಯದಿಂದ ಪ್ರತಿಭಟಿಸುವ ಆಚಾರವೇ ಗಣಾಚಾರ. ವ್ಯಕ್ತಿ ಮತ್ತು ಸಮಾಜದಲ್ಲಿರುವ ದುರ್ಗುಣಗಳ ಪರಿಹಾರವೇ ಗಣಾಚಾರದ ಮುಖ್ಯ ಪ್ರಯೋಜನ. ಶಿವ, ಶಿವಭಕ್ತ ಮುಂತಾದವರನ್ನು ನಿಂದಿಸುವವನು ಮಾತ್ರ ಪಾಪಿಯಾಗಲಾರ, ನಿಂದನೆಯನ್ನು ಕೇಳುವವನೂ ಸಹ ಪಾಪಿಯಾಗುತ್ತಾನೆಂದು ಮಹಾಕವಿ ಕಾಳಿದಾಸನು ಕುಮಾರ ಸಂಭವದಲ್ಲಿ ಪಾರ್ವತಿಯ ಮೂಲಕ ಹೇಳಿಸಿರುವ "ನ ಕೇವಲಂ ಯೋ ಮಹತೋಪಭಾಷತೇ/ ಶ್ರುಣೋತಿ ತಸ್ಮಾದಪಿಯಃ ಸ ಪಾಪಭಾಕ್ ॥" ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಶಿವಭಕ್ತರು ಎಂದಿಗೂ ಶಿವನಿಂದನೆಯನ್ನು ಕೇಳಬಾರದು. ಆದ್ದರಿಂದ

*ಶಿವಸ್ಯ ಶಿವಭಕ್ತಸ್ಯ ಶಿವಧರ್ಮಾಧಿಕಸ್ಯ ಚ ।*
*ನ ಶೃಣೋತಿ ಚ ಯನ್ನಿಂದಾಂ ಸ ಗಣಾಚಾರ ಉಚ್ಯತೇ ॥*

ಎಂಬ ಶಿವಾಗಮೋಕ್ತಿಯಲ್ಲಿ ಶಿವನ, ಶಿವಭಕ್ತರ ಅಥವಾ ಶಿವಧರ್ಮದ ನಿಂದನೆಯನ್ನು ಕೇಳದಿರುವುದೇ ಗಣಾಚಾರ ವೆಂದು ಹೇಳಲಾಗಿದೆ.

ಚನ್ನಬಸವಣ್ಣನವರು ತಮ್ಮ **'ಶಿವಾಚಾರದ ನಿಂದೆಯ ಕೇಳದಿಹುದೆ ಗಣಾಚಾರ'** ಎಂದು ಆಗಮದ ಅಭಿಪ್ರಾಯವನ್ನು ತಿಳಿಗನ್ನಡದಲ್ಲಿ ಹೇಳಿದ್ದಾರೆ. ಸೂಕ್ಷ್ಮಾ ಗಮವು ಗಣಾಚಾರದ ಸ್ವರೂಪವನ್ನು ಹೀಗೆ ನಿರೂಪಿಸಿದೆ –

*ಗುರುಲಿಂಗಾದಿ ವಿಷಯೇ ನ ಶ್ರಾವ್ಯಂ ದೂಷಣಂ ಯದಿ ।*
*ಶ್ರುತಂ ತಾನ್ ಶಿಕ್ಷಯಾಮೀತಿ ಗಣಾಚಾರಃ ಸ ಹಿ ಸ್ಮೃತಃ ॥*

ಶ್ರೀ ಸಿದ್ಧಾಂತಶಿಖಾಮಣಿಯು ಗಣಾಚಾರದ ಸ್ವರೂಪವನ್ನು ಈ ರೀತಿಯಾಗಿ ಮಾಡಿಕೊಡುತ್ತದೆ –

*ಯತ್ರ ಸ್ಥಾವರಲಿಂಗಾನುಮಪಾಯಃ ಪರಿವರ್ತತೇ ।*
*ಅಥವಾ ಶಿವಭಕ್ತಾನಾಂ ಶಿವಲಾಂಛನಧಾರಿಣಾಮ್ ॥*
*ತತ್ರ ಪ್ರಾಣಾನ್ ವಿಹಾಯಾಪಿ ಪರಿಹಾರಂ ಸಮಾಚರೇತ್ ।*
*ಶಿವಾರ್ಥಂ ಮುಕ್ತಜೀವಶ್ಚೇಚ್ಛಿವಸಾಯುಜ್ಯಮಾಪ್ನುಯಾತ್ ॥*
*ಯತ್ರ ಚಾಚಾರನಿಂದಾಸ್ತಿ ಕದಾಚಿತ್ತತ್ರ ನ ವ್ರಜೇತ್ ।*
*ಯದ್ಗೃಹೇ ಶಿವನಿಂದಾಸ್ತಿ ತದ್ಗೃಹಂ ತು ಪರಿತ್ಯಜೇತ್ ॥*
*ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।*
*ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ ಯದ್ಯಕ್ಷಮೋ ಭವೇತ್ ॥*

ತಾತ್ಪರ್ಯವೇನೆಂದರೆ ಸ್ಥಾವರಲಿಂಗಗಳಿಗೆ, ಶಿವಲಾಂಛನಧಾರಿಗಳಾದ ಶಿವಭಕ್ತರಿಗೆ ಅಪಾಯವು ಬಂದೊದಗಿದರೆ ಪ್ರಾಣವನ್ನು ತ್ಯಾಗಮಾಡಿಯಾದರೂ ಅಪಾಯವನ್ನು ತಪ್ಪಿಸಬೇಕು. ಎಲ್ಲಿ ಆಚಾರ ನಿಂದೆಯು ಕಂಡುಬರುತ್ತದೆಯೋ ಅಲ್ಲಿಗೆ ಎಂದಿಗೂ ಹೋಗಬಾರದು, ಯಾವ ಮನೆಯಲ್ಲಿ ಶಿವ ನಿಂದೆಯು ಕಂಡುಬರುತ್ತದೆಯೋ ಅಂತಹ ಮನೆಯನ್ನು ಬಿಡಬೇಕು. ಶಿವನಿಂದಕರನ್ನು ನೋಡಿದರೆ ಘಾತಿಸಬೇಕು ಅಥವಾ ಶಪಿಸಬೇಕು. ಈ ಎರಡೂ ಸಾಧ್ಯವಾಗದಿದ್ದಾಗ ಆ ಸ್ಥಳವನ್ನು ಬಿಟ್ಟು ಹೋಗಬೇಕೆಂದರ್ಥ. ಒಟ್ಟಿನಲ್ಲಿ ಶಿವನಿಂದೆಯನ್ನು ಕೇಳದಿರುವುದೇ ಈ ಆಚಾರದ ಪ್ರಧಾನ ಸ್ವರೂಪವೆಂದು ಸ್ಪಷ್ಟವಾಗುತ್ತದೆ. ಈಗಿನ ಕಾಲದಲ್ಲಿ ಘಾತಿಸುವುದು ಅಪರಾಧ ಹಾಗೂ ಮಾನವನಿಗೆ ಶಾಪ ಕೊಡುವ ಶಕ್ತಿಯು ಇಲ್ಲವಾಗಿದೆ. ಆದ್ದರಿಂದ ಶಿವನಿಂದೆಯನ್ನು ಕೇಳಿದಾಗ ಆ ಸ್ಥಳವನ್ನು ಬಿಟ್ಟು ಹೋಗುವುದೇ ಕ್ಷೇಮ. ಮಹಾತ್ಮರ ನಿಂದನೆ ಮಾಡುವವನಷ್ಟೇ ಕೇಳುವವನೂ ಪಾಪಿಯಾಗುತ್ತಾನೆಂದು ತಿಳಿದ ಪಾರ್ವತಿಯು ಶಿವನಿಂದನೆಯನ್ನು ಕೇಳಬಾರದೆಂದು ನಿಶ್ಚಯಿಸಿ ಶಿವನಿಂದಕನಾದ ಬ್ರಹ್ಮಚಾರಿಯನ್ನು ಖಂಡಿಸಲಾಗಲಿ, ಘಾತಿಸಲಾಗಲೀ ಸಮರ್ಥಳಾಗದೆ ಆ ಸ್ಥಳವನ್ನು ಬಿಟ್ಟು ಹೊರಡಲು ನಿರ್ಧರಿಸಿದ್ದು ಗಣಾಚಾರಕ್ಕೆ ಒಂದು ಉತ್ತಮ ನಿದರ್ಶನವಾಗಿದೆ. ಅಂತೆಯೇ ದಕ್ಷಯಜ್ಞದ ಸಂದರ್ಭದಲ್ಲಿ ತನ್ನ ಪತಿಯಾದ ಶಿವನ ನಿಂದನೆಯನ್ನು ಕೇಳಿದ ದಾಕ್ಷಾಯಣಿಯು ತನ್ನ ಪ್ರಾಣತ್ಯಾಗದ ಮೂಲಕ ಅದನ್ನು ಪ್ರತಿಭಟಿಸಿದ್ದೂ ಸಹ ಗಣಾಚಾರದ ಒಂದು ಆಚರಣೆಯೇ ಆಗಿದೆ.

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿರುವ **"ಶಿವನಿಂದಾಕರಂ ದೃಷ್ಟ್ವಾಘಾತಯೇತ್"** ಎಂಬಲ್ಲಿನ **'ಘಾತಯೇತ್'** ಎಂದರೆ ದೈಹಿಕವಾಗಿ ಘಾತಿಸುವುದಲ್ಲ, ದುರ್ಬುದ್ಧಿಯ ಘಾತನವೆಂದು ಶ್ರೀ ಮತ್ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ಶ್ರೀ ಜಗದ್ಗುರು ಡಾ॥ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ "ಶಕ್ತಿವಿಶಿಷ್ಟಾದ್ವೈತ ತತ್ತ್ವತ್ರಯ ವಿಮರ್ಶಃ" ಎಂಬ ಸಂಸ್ಕೃತ ಗ್ರಂಥದಲ್ಲಿ ವಿವರಿಸಿದ್ದಾರೆ. ಮಹಾಸನ್ನಿಧಿಯವರು ಹೀಗೆ ವಿವರಿಸುತ್ತಾರೆ – "ಇಲ್ಲಿ ಹೇಳಲಾಗಿರುವ ಘಾತನವೆಂದರೆ ಶರೀರ ಘಾತನವಲ್ಲ, ದುರ್ಬುದ್ಧಿಯಘಾತನವೆಂದು ತಿಳಿಯಬೇಕು. ಶರೀರಘಾತದಿಂದ ಮನುಷ್ಯನ ಬುದ್ಧಿಯು ಶುದ್ಧವಾಗದೆ ಬುದ್ಧಿಯ ಶುದ್ಧಿಯಿಂದ ಪರಿಶುದ್ಧವಾಗುತ್ತದೆ. ಆ ಕಾರಣ ಸದುಪದೇಶದಿಂದ ಅವನಲ್ಲಿರುವ ದುರ್ಬುದ್ಧಿಯನ್ನು ಘಾತಿಸುವುದೇ ಈ ಸಂದರ್ಭದಲ್ಲಿ ಘಾತನ ಶಬ್ದದ ಮುಖ್ಯವಾದ ಅರ್ಥ. ಈ ಪ್ರಕಾರವಾಗಿ ಗಣಾಚಾರ ನಿರತನಾದ ಸಾಧಕನು ತನ್ನಲ್ಲಿಯ ದುರ್ಗುಣಗಳನ್ನು ತ್ಯಜಿಸಿ, ತನ್ನ ನಿಕಟವರ್ತಿಗಳಾದ ಜನಗಳ ದುರ್ಗುಣಗಳನ್ನು ಸದುಪದೇಶದ ಮೂಲಕ, ಕೆಲವೊಮ್ಮೆ ದಂಡದ ಸಹಾಯದಿಂದ ದೂರಮಾಡಲು ಪ್ರಯತ್ನಶೀಲನಾಗುತ್ತಾನೆ."

ಈ ಗಣಾಚಾರದಲ್ಲಿ ಕಾಮಿಕ–ವಾಚಿಕ–ಮಾನಸಿಕ ಭೇದದಿಂದ ಒಟ್ಟು ೬೪ ಶೀಲಗಳಿವೆಯೆಂದು ಚಂದ್ರಜ್ಞಾನಾಗಮವು ನಿರೂಪಿಸಿದೆ –

*ಸರ್ವೋತ್ತಮೇ ಗಣಾಚಾರೇ ಸದ್ಯಃ ಸಿದ್ಧಿಕರೇ ಪರೇ ।*
*ಶೀಲಾನಿ ತು ಚತುಃಷಷ್ಟಿರ್ವರ್ತಂತೇ ತಾನಿ ಸಂಶ್ರುಣು ॥*

೬೪ ಶೀಲಗಳ ನಿರೂಪಣೆಯು ಚಂದ್ರಜ್ಞಾನಗಮದ ಒಂಬತ್ತನೆಯ ಪಟಲದ ಶ್ಲೋಕ ೫೩–೧೨೨ ರವರೆಗೆ ಕಂಡುಬರುತ್ತದೆ. ಜಿಜ್ಞಾಸುಗಳು ಆ ಭಾಗವನ್ನು ಅವಲೋಕಿಸಬಹುದು.

೫. ಭೃತ್ಯಾಚಾರ

*ಶಿವಭಕ್ತಜನಾಃ ಸರ್ವೇ ವರಿಷ್ಠಾಃ ಪೃಥಿವೀತಲೇ ।*
*ತೇಷಾಂ ಭೃತ್ಯೋಽಹಮಿತಿ ಯದ್ ಭೃತ್ಯಾಚಾರ ಇತಿ ಸ್ಮೃತಃ ॥*

ಎಂಬ ಚಂದ್ರಜ್ಞಾನಾಗಮೋಕ್ತಿಯ ಪ್ರಕಾರ ಈ ಭೂಮಂಡಲದಲ್ಲಿ ಶಿವಭಕ್ತರೆಲ್ಲರೂ ಶ್ರೇಷ್ಠ, ನಾನು ಅವರ ಸೇವಕನೆಂದು ಭಾವಿಸಿ, ಅವರ ಸೇವೆಯನ್ನು ಮಾಡುವುದೇ ಭೃತ್ಯಾಚಾರವೆನಿಸುತ್ತದೆ. ಸಿದ್ಧಾಂತಶಿಖಾಮಣಿಯಲ್ಲಿ ಭೃತ್ಯಾಚಾರದ ಸ್ವರೂಪವು ಈ ರೀತಿಯಾಗಿದೆ.

*ಶಿವಯೋಗೀ ಶಿವಃ ಸಾಕ್ಷಾದಿತಿ ಕೈಂಕರ್ಯಭಕ್ತಿತಃ ।*
*ಪೂಜಯೇದಾದರೇಣೈವ ಯಥಾ ಲಿಂಗಂ ಯಥಾಗುರು ॥*

ತಾತ್ಪರ್ಯವೇನೆಂದರೆ ಲಿಂಗವನ್ನೂ, ಗುರುವನ್ನೂ ಹೇಗೆ ಆದರದಿಂದ ಪೂಜಿಸಲಾಗುವುದೋ ಹಾಗೆಯೇ ಶಿವಯೋಗಿಯನ್ನೂ ಸಾಕ್ಷಾತ್ ಶಿವನೆಂದು ಭಾವಿಸಿ ಕಿಂಕರ (ಸೇವಕ) ಭಾವದಿಂದ ಪೂಜಿಸಬೇಕೆಂದರ್ಥ. ***"ಶಿವಶರಣರ ಹಿರಿಯರಾಗಿ ತಾನೆ ಕಿರಿಯನಾಗಿ, ಭಯಭಕ್ತಿಯಿಂದ, ಆಚರಿಸುವುದೇ ಭೃತ್ಯಾಚಾರ"*** ವೆಂದು ಚನ್ನಬಸವಣ್ಣನವರೂ, *"ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂದ ಹಿರಿಯರಿಲ್ಲ"* ವೆಂದು ಬಸವಣ್ಣವರೂ ಪೂರ್ವೋಕ್ತ ಆಗಮದ ಅಭಿಪ್ರಾಯವನ್ನೇ ಪುನರುಚ್ಚರಿಸುವುದರ ಮೂಲಕ ಭೃತ್ಯಾಚಾರದ ಸುಂದರ ಮೀಮಾಂಸೆಯನ್ನು ನೀಡಿದ್ದಾರೆ.

ಭೃತ್ಯತ್ವ ಮತ್ತು ವೀರಭೃತ್ಯತ್ವವೆಂದು ಭೃತ್ಯಾಚಾರದ ಎರಡು ಭೇದಗಳನ್ನು ವಿವರಿಸುತ್ತದೆ ಚಂದ್ರಜ್ಞಾನಗಮ –

*ಭೃತ್ಯತ್ವಂ ವೀರಭೃತ್ಯತ್ವಂ ಭೃತ್ಯಾಚಾರೋ ದ್ವಿಧಾ ಮತಃ ।*

ಗುರು–ಲಿಂಗ–ಜಂಗಮರಿಗೆ ಭಕ್ತಿಯಿಂದ ಸೇವೆ ಮಾಡುವುದೇ ಭೃತ್ಯತ್ವ ಎನಿಸುತ್ತದೆ –

*ಗುರುಲಿಂಗಜಂಗಮಾನಾಂ ಕೈಂಕರ್ಯಾಚರಣಂ ಹಿ ಯತ್ ।*
*ಭೃತ್ಯತ್ವಮಿತಿ ನಿರ್ದಿಷ್ಟಂ ದೇವದೇವೇನ ಶಂಭುನಾ ॥*

ಭಕ್ತಿಯ ಪರಾಕಾಷ್ಠೆಯಿಂದ ಗುರುವಿಗೆ ತನುವನ್ನು, ಶಿವನಿಗೆ (ಇಷ್ಟಲಿಂಗಕ್ಕೆ) ಮನವನ್ನು ಮತ್ತು ಜಂಗಮಕ್ಕೆ ಧನವನ್ನು ಸಮರ್ಪಿಸಿ, ಪಾರಲೌಕಿಕ ಸುಖದಲ್ಲಿಯೂ ನಿಸ್ಪೃಹನಾಗಿ, ಕೇವಲ ಮೋಕ್ಷಾಕಾಂಕ್ಷಿಯಾಗಿರುತ್ತಾನೆಯೋ ಅಂತಹ ಸಾಧಕನ ಸ್ಥಿತಿಗೆ ವೀರಭೃತ್ಯತ್ವವೆನ್ನುತ್ತಾರೆ. ಆ ಬಗೆಯ ವೀರಭೃತ್ಯದ ಭಾವನೆಯಿಂದಲೇ ಭಕ್ತನು ಶಿವಾನುಗ್ರಹವನ್ನು ಪಡೆಯುತ್ತಾನೆ. ಅದನ್ನು ಚಂದ್ರಜ್ಞಾನಾಗಮವು ಹೀಗೆ ವಿವರಿಸಿದೆ –

*ದೇಶಿಕಾಯ ತನುಂ ಚಿತ್ತಂ ಶಂಭವೇ ಚ ಧನಂ ತಥಾ ।*
*ಜಂಗಮಾಯ ಸಮರ್ಪ್ಯೈವಂ ಮಹೋತ್ಸಾಹಸಮನ್ವಿತಃ ॥*
*ಮುಕ್ತಿಮೇವ ಪರಾಂ ಕಾಂಕ್ಷಮಾಣೋ ಯದವತಿಷ್ಠತೇ ।*
*ತನ್ಮತಂ ವೀರಭೃತ್ಯತ್ವಂ ಶಿವಾನುಗ್ರಹಸಾಧನಮ್ ॥*

ವೀರಶೈವದ ಈ ಭೃತ್ಯಾಚಾರವು ವಿನಯವಂತಿಕೆಯನ್ನು ಪ್ರಧಾನ ಗುಣವನ್ನಾಗಿ ಪಡೆದಿರುತ್ತದೆ. ಅಹಂಕಾರದಿಂದ ನಾಶ, ವಿನಯದಿಂದ ಔನ್ನತ್ಯ ಪ್ರಾಪ್ತಿಯೆಂಬುದು ಶಾಸ್ತ್ರಪ್ರಮಾಣದಿಂದಲೂ ಹಾಗೂ ಲೋಕಾನುಭವದಿಂದಲೂ ಸಿದ್ಧವಾಗಿದೆ. ಪೂರ್ವೋಕ್ತಗಳಾದ ಲಿಂಗಾಚಾರ, ಸದಾಚಾರ, ಶಿವಾಚಾರ ಮತ್ತು ಗಣಾಚಾರಗಳನ್ನು ನಿಷ್ಠೆಯಿಂದ ಆಚರಿಸಿದಾಗ ಸಾಧಕನಲ್ಲಿ ಅಹಂಕಾರವು ಬರಬಾರದೆಂಬ ಉದ್ದೇಶದಿಂದ ಶಿವಾಗಮಗಳು ಭೃತ್ಯಾಚಾರವನ್ನು ಕೊನೆಯದಾಗಿ ಉಪದೇಶಿಸಿವೆ. ಭೃತ್ಯಭಾವಸತ್ತ್ವವೇ ಪೂರ್ವೋಕ್ತಗಳಾದ ಆಚಾರಗಳ ಅನುಷ್ಠಾನದ ಫಲ. ಭೃತ್ಯಭಾವನೆಯಿಂದ ಕೂಡಿದ ಸಾಧಕನು ಸಮಾಜದಲ್ಲಿ ಸಮತಾವಾದ ಮತ್ತು ಶಾಂತಿಯನ್ನು ಉಂಟುಮಾಡಲು ಸಮರ್ಥನಾಗುತ್ತಾನೆ.

ಈ ಪ್ರಕಾರ ಪೂರ್ವೋಕ್ತ ಐದು ಬಗೆಯ ಆಚಾರಗಳು ಪಂಚಾಚಾರಗಳೆಂದು ಪ್ರಸಿದ್ಧವಾಗಿವೆ. ಈ ಪಂಚಾಚಾರಗಳ ಪಾಲನೆ ಮಾಡುವುದರಿಂದ ಎಲ್ಲರ ವ್ಯಾವಹಾರಿಕ ಜೀವನವು ಸುಂದರವಾಗಿ ನಡೆಯುತ್ತದೆ. ಆಚಾರಹೀನನಾದ ಪುರುಷನು ತತ್ತ್ವಜ್ಞಾನಸಂಪನ್ನನಾಗಿದ್ದರೂ ಕೂಡ ನಿಂದಿತನಾಗುತ್ತಾನೆ. ಆದುದರಿಂದ ಅಜ್ಞರು ಯಾವ ರೀತಿಯಾಗಿ ಈ ಪಂಚಾಚಾರಗಳನ್ನು ಪಾಲಿಸುವುದು ಅವಶ್ಯಕವೋ, ಹಾಗೆಯೇ ತತ್ತ್ವಜ್ಞಾನಿಗಳೂ ಸಹ ಇವುಗಳನ್ನು ಪಾಲಿಸುವುದು ಅಷ್ಟೇ ಆವಶ್ಯಕ. ಆ ಕಾರಣ ವೀರಶೈವ ಸಿದ್ಧಾಂತದಲ್ಲಿ ಪಂಚಾಚಾರಗಳನ್ನು ಪಂಚಪ್ರಾಣಗಳೆಂದು ಕರೆಯಲಾಗಿದೆ.

ಈ ಪಂಚಾಚಾರಗಳಲ್ಲಿ ಪ್ರತಿಯೊಂದು ಆಚಾರದ ಸಂಪೂರ್ಣ ಪಾಲನೆಯಿಂದ ವೀರಶೈವ ಸಾಧಕನು ಲಿಂಗಾಂಗ ಸಾಮರಸ್ಯರೂಪ ಮೋಕ್ಷವನ್ನು ಪಡೆಯಲು ಅರ್ಹನಾಗುತ್ತಾನೆ. ಹೇಗೆಂದರೆ ಪ್ರತಿಯೊಂದು ಆಚಾರದಲ್ಲಿಯೂ ಸರ್ವಾಚಾರ ಸಂಪತ್ತು ಅಡಗಿರುವುದನ್ನು ಗಮನಿಸಬಹುದು. ಲಿಂಗಾಚಾರದಲ್ಲಿ ಲಿಂಗನಿಷ್ಠೆಯಿಂದ ಕೂಡಿದ ಸಾಧಕನು

ಶಿವಸರ್ವೋತ್ತಮ ಭಾವನೆಯುಳ್ಳವನಾದ್ದರಿಂದ ಶಿವನ ಸ್ವರೂಪವೇ ಆದಂತಹ ಗುರು-ಲಿಂಗ-ಜಂಗಮರನ್ನು ಸತ್ಯಶುದ್ಧ-ಕಾಯಕದಿಂದ ಸಂಪಾದಿಸಿದ ದ್ರವ್ಯದಿಂದ ಸಂತೋಷಗೊಳಿಸುವ ಕಾರಣ ಸದಾಚಾರ ಸಂಪನ್ನ ನಾಗುತ್ತಾನೆ. ಇಂತಹ ಸದಾಚಾರಸಂಪನ್ನನಾದ ಸಾಧಕನಲ್ಲಿ ನಿಧಾನವಾಗಿ ಸರ್ವತ್ರ ಶಿವದೃಷ್ಟಿಯುಂಟಾಗುತ್ತದೆ. **"ಸರ್ವಂ ಶಿವಮಯಂ ಜಗತ್"** ಎಂಬ ವಿಶಾಲ ಭಾವನೆಯುಂಟಾಗಿ, ಶಿವಾಚಾರಸಂಪನ್ನನಾಗುತ್ತಾನೆ. ಶಿವಪೂಜಾದಿ ನಿತ್ಯಕರ್ಮ ಗಳಿಗೆ ಉಂಟಾಗುವ ವಿಘ್ನಗಳ ನಿವಾರಣೆಗೋಸ್ಕರ ಗಣಾಚಾರಿಯಾಗುತ್ತಾನೆ. ಅಂತೆಯೇ ಗುರು-ಲಿಂಗ-ಜಂಗಮಗಳ ವಿಷಯದಲ್ಲಿ ಸೇವಾತತ್ಪರನಾಗುವುದರಿಂದ ಭೃತ್ಯಾಚಾರದ ಸಂಪತ್ತು ಸಹಜವಾಗಿ ಸಿದ್ಧಿಸಿದ ಸಾಧಕನು ಅಹಂಕಾರ -ಮಮಕಾರ ರಹಿತನಾಗುತ್ತಾನೆ. ಒಟ್ಟಿನಲ್ಲಿ ಈ ಪಂಚಾಚಾರಗಳು ವೀರಶೈವ ಧರ್ಮದ ನೈತಿಕ ಮೌಲ್ಯಗಳೆಂದು ಸ್ಪಷ್ಟವಾಗಿ ಹೇಳಬಹುದು. ಇವುಗಳು ಕಾಯಾ-ವಾಚಾ-ಮನಸಾ ಆಚರಿಸಬೇಕಾದ ನೀತಿ ನಿಯಮಗಳಾಗಿದ್ದು, ವ್ಯಕ್ತಿಯ ಹಾಗೂ ಸಮಾಜದ ಸಮೃದ್ಧಿಗೆ ಅವಶ್ಯವಿರುವ ನೀತಿ ಸಂಹಿತೆಗಳೆಂದು ಹೇಳಬಹುದಾಗಿದೆ. ಈ ಆಚಾರಗಳು ಕೇವಲ ವೀರಶೈವರನ್ನು ಮಾತ್ರವಲ್ಲ ಸಮಸ್ತ ಮಾನವರನ್ನೂ ಪರಿಷ್ಕರಿಸುವಂತಹ ಸಾಧನಗಳಾಗಿವೆ. ಆದ್ದರಿಂದ ಸಮಸ್ತ ಮಾನವರೂ ಯಥಾಶಕ್ತಿ ಈ ಆಚಾರಗಳನ್ನು ಪಾಲಿಸುವುದರ ಮೂಲಕ ವೈಯಕ್ತಿಕ ಹಾಗೂ ಸಮಾಜದ ಉನ್ನತಿಯನ್ನು ಸಾಧಿಸಿಲು, ಸಮಾಜದಲ್ಲಿ ಶಾಂತಿ-ಸಮೃದ್ಧಿಗಳು ನೆಲೆಸುವಂತೆ ಶ್ರಮಿಸುವುದು ಆದ್ಯ ಕರ್ತವ್ಯವಾಗಿದೆ.

- ಶಿವಂ ಭೂಯಾತ್ -

ಆಕರ ಗ್ರಂಥಗಳು


೧. ಚಂದ್ರಜ್ಞಾನಾಗಮ, (ಆಂಗ್ಲಾನುವಾದ ಸಹಿತ), ಸಂ. ಡಾ. ರಮಾಘೋಷ್, ಶೈವಭಾರತಿ ಶೋಧ ಪ್ರತಿಷ್ಠಾನ, ವಾರಾಣಸಿ, ೧೯೯೫.

೨. ಚಂದ್ರಜ್ಞಾನಾಗಮ ವಿಚಾರ ರಶ್ಮಿ - ಸಂ. ಡಾ. ಎಂ. ಶಿವಕುಮಾರ ಸ್ವಾಮಿ, ವೀರಶೈವ ಅನುಸಂಧಾನ ಸಂಸ್ಥಾನ, ಬೆಂಗಳೂರು, ೨೦೦೧

೩. ಕಾರಣಾಗಮ (ಕನ್ನಡಾನುವಾದ ಸಹಿತ) ಅನು - ಡಾ॥ ಮಲ್ಲಿಕಾರ್ಜುನ ಪರಡ್ಡಿ, ವೀರಶೈವ ಅನುಸಂಧಾನ ಸಂಸ್ಥಾನ, ಬೆಂಗಳೂರು, ೧೯೯೯.

೪. ಸೂಕ್ಷ್ಮಾಗಮ (ಕನ್ನಡಾನುವಾದ ಸಹಿತ), ಅನುಃ ಷಣ್ಮುಖಯ್ಯ ಅಕ್ಕೂರಮಠ, ವೀರಶೈವ ಅನುಸಂಧಾನ ಸಂಸ್ಥಾನ, ಬೆಂಗಳೂರ, ೨೦೦೦

೫. ಶ್ರೀ ಸಿದ್ಧಾಂತ ಶಿಖಾಮಣಿ (ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾ ಸಹಿತ), ಸಂ. ಡಾ. ಹೆಚ್.ಪಿ. ಮಲ್ಲೇದೇವರು, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು, ೧೯೯೫

೬. ಶ್ರೀ ಸಿದ್ಧಾಂತ ಶಿಖಾಮಣಿ, (ಕನ್ನಡಾನುವಾದ ಸಹಿತ), ಶ್ರೀ ಕಾಶೀನಾಥ ಶಾಸ್ತ್ರಿಗಳು, ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ೧೯೯೮

೭. ವೀರಶೈವ ಧರ್ಮ ಗ್ರಂಥಗಳು - ಡಾ. ಮಲ್ಲಿಕಾರ್ಜುನ ಪರಡ್ಡಿ, ಶ್ರೀ ಜಗದ್ಗುರು ರೇಣುಕಾಚಾರ್ಯ ಪ್ರಕಾಶನ, ತೆಗ್ಗಿನಮಠ, ಹರಪನಹಳ್ಳಿ, ೧೯೯೯.

೮. ಶಕ್ತಿವಿಶಿಷ್ಟಾದ್ವೈತ ತತತ್ತ್ವತ್ರಯ ವಿಮರ್ಶಃ - ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು, ಶೈವಭಾರತೀ ಶೋಧ ಪ್ರತಿಷ್ಠಾನ, ವಾರಾಣಸಿ, ೧೯೯೬.

೯. ಬಸವಣ್ಣನವರ ವಚನಗಳು, ಸಂ. ಡಾ. ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ ಪ್ರಕಾಶನ, ಧಾರವಾಡ, ೧೯೬೮.

೧೦. ಚನ್ನಬಸವಣ್ಣನವರ ವಚನಗಳು, ಸಂ. ಡಾ. ಆರ್.ಸಿ. ಹಿರೇಮಠ, ಕ.ವಿ.ವಿ. ಧಾರವಾಡ, ೧೯೭೧.

೧೧. ಸಿದ್ಧಾಂತ ಶಿಖಾಮಣಿ - ಒಂದು ಅಧ್ಯಯನ, ಡಾ. ಎಂ. ಶಿವಕುಮಾರಸ್ವಾಮಿ, ಭಾರವಿ ಪ್ರಕಾಶನ, ಬೆಂಗಳೂರು.

೧೨. ಸಿದ್ಧಾಂಶ ಶಿಖಾಮಣಿ ವಿಚಾರ ದೀಪ್ತಿ, ಡಾ. ಎಂ. ಶಿವಕುಮಾರಸ್ವಾಮಿ, ವೀರಶೈವ ಅನುಸಂಧಾನ ಸಂಸ್ಥಾನ, ಬೆಂಗಳೂರು, ೧೯೯೮.

೧೩. ಶೈವಾಗಮಗಳಲ್ಲಿ ವೀರಶೈವ, ಡಾ. ಎಂ. ಶಿವಕುಮಾರಸ್ವಾಮಿ, ವೀರಶೈವ ಅನುಸಂಧಾನ ಸಂಸ್ಥಾನ, ಬೆಂಗಳೂರು.

೧೪. ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ - ಕಾಶಿ ಜಗದ್ಗುರು ಡಾ॥ ಚಂದ್ರಶೇಖರ್ ಶಿವಾಚಾರ್ಯ ಮಹಾಸ್ವಾಮಿಗಳು, ಪಂಚಾಚಾರ್ಯ ಧರ್ಮಸಂಸ್ಥೆ, ಬೆಂಗಳೂರು, ೨೦೦೦.

# ಮಹಾದೇವಿಯಕ್ಕನ ಬದುಕಿನ ರೂಪು ರೇಷೆಗಳು

*(ಒಂದು ಐತಿಹಾಸಿಕ ಪುನಾರಚನೆ)*

- ಡಾ. ಎಂ. ಚಿದಾನಂದ ಮೂರ್ತಿ *

ಮಹಾದೇವಿಯಕ್ಕನ ಬದುಕನ್ನು ನಾಲ್ಕು ಘಟ್ಟಗಳಲ್ಲಿ ಗ್ರಹಿಸಬಹುದು. ಹುಟ್ಟಿನಿಂದ ತಾರುಣ್ಯದವರೆಗೆ ಅವಳು ಸುಂದರ ಕನಸುಗಳನ್ನು ಕಾಣುತ್ತ ಹಕ್ಕಿಯಂತೆ ಬದುಕಿದ ಕಾಲ – ಇದು ಮೊದಲ ಘಟ್ಟ; ಬಲವಂತದ ಮದುವೆಗೆ ಒಳಗಾಗಿ ಕೆಲಕಾಲ ತನ್ನ ಒಲ್ಲದ ಗಂಡನೊಡನೆ ಬಾಳುವೆಯನ್ನು ಮಾಡಿದ ಕಾಲ-ಇದು ಎರಡನೆಯ ಘಟ್ಟ; ಕೈಹಿಡಿದ ಗಂಡನ ಮನೆಯಿಂದ ಹೊರಬಂದರೂ ಏಕಾಂಗಿನಿಯಾಗಿ ಅಲೆದಾಡುತ್ತ ದುಷ್ಟರ, ಕಾಮುಕರ ಕ್ರೂರ ಕಣ್ಣಿಗೆ ಒಳಗಾಗಿ ವೇದನೆಗೆ ಒಳಗಾದ ಕಾಲ-ಇದು ಮೂರನೆಯ ಘಟ್ಟ; ಕಲ್ಯಾಣದಲ್ಲಿ ಬಸವ, ಅಲ್ಲಮರಂತಹ ಭಕ್ತರಿಂದ ಸಾಂತ್ವನ ಸಮಾಧಾನವನ್ನು ಪಡೆದು, ಮನಸ್ಸಿನ ಬೇಗುದಿಯನ್ನು ಕಳೆದುಕೊಂಡು, ಬಳಿಕ ಶ್ರೀ ಶೈಲಕ್ಕೆ ಬಂದು ತನ್ನ ಕೊನೆಯ ದಿನಗಳನ್ನು ಚನ್ನಮಲ್ಲಿಕಾರ್ಜುನನ ಸಾನ್ನಿಧ್ಯದಲ್ಲಿ ಶಾಂತವಾಗಿ ಕಳೆದುದು ನಾಲ್ಕನೆಯ ಘಟ್ಟ. ಈ ಸ್ಥೂಲ ವಿಭಜನೆ ನಮ್ಮ ಗ್ರಹಿಕೆಗೆ ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಮಾಡಿದುದಾದರೂ ಇದಕ್ಕೆ ವಾಸ್ತವಿಕತೆಯ ಹಿನ್ನಲೆಯಿದೆ; ಮತ್ತು ಅವಳ ಬದುಕಿನ ಘಟನೆಗಳ ಹಿನ್ನೆಲೆಯಲ್ಲಿ ಅವಳ ವ್ಯಕ್ತಿತ್ವ ವಿಕಾಸ ಹೊಂದುತ್ತ ಹೋದುದನ್ನು - ಮಾಗಿ ಕಣ್ಣಾದುದನ್ನು - ಅಂತಹ ವಿಭಜನೆ ತಾರ್ಕಿಕವಾಗಿ ತೋರಿಸುತ್ತದೆ. ಈ ಬಗೆಯ ಬದುಕಿನ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಅವಳ ವಚನಗಳ ಅರ್ಥವೂ ಹೆಚ್ಚು ವಿಶದವಾಗುತ್ತದೆ.

ಮಹಾದೇವಿಯಕ್ಕನ ಹುಟ್ಟಿದೂರು ಉಡುತಡಿ ಎಂದು ಹರಿಹರ ಕವಿ ಹೇಳುತ್ತಾನೆ. ಅದು ಗುಲ್ಬರ್ಗಾ ಜಿಲ್ಲೆಯ ಮಹಾಗಾಂವ್ ಎಂದು ಒಂದಿಬ್ಬರು ವಾದಿಸಿದ್ದರೂ [೧] ಅದು ಈಗಿನ ಉಡುಗಣಿ ಎಂದೇ ಜನಪ್ರತೀತಿ ಮತ್ತು ವಿದ್ವಾಂಸರ ನಂಬಿಕೆ. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಶಿರಾಳಕೊಪ್ಪಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿ ತಡಗಣಿಯೂ ಅದರ ಪಕ್ಕದಲ್ಲೇ ಉಡುಗಣಿಯೂ ಉಂಟು. "ಉಡುತಡಿ" ಎನ್ನುವ ಹಿಂದಿನ ದೊಡ್ಡ ಗ್ರಾಮ ಉಡುಗಣಿ, ತಡಗಣಿ ಎಂದು ಎರಡಾಗಿ ಒಡೆಯಿತೆಂದಿಟ್ಟುಕೊಂಡರೂ, "ಉಡುತಡಿ" ಎನ್ನುವ ಊರ ಹೆಸರೂ ಎರಡಾಗಿ ಒಡೆದು "ಗಣಿ" ಎಂಬ ಪ್ರತ್ಯಯ ಸಮೇತ ಉಡುಗಣಿ, ತಡುಗಣಿ ಎಂದಾಯಿತು ಎಂಬ ವಿವರಣೆಯನ್ನು ಸಮರ್ಥಿಸಿ ಕೊಳ್ಳುವುದು ಕಷ್ಟ. ಕಣಿ ಅಥವಾ ಗಣಿ ಎಂದು ಕೊನೆಯಾಗುವ ಊರ ಹೆಸರುಗಳೇನೋ ಆ ಭಾಗದಲ್ಲಿವೆ. (ಉದಾ: ಬೇಡಕಣಿ). ಉಡುಗಣಿಯ ಪಕ್ಕದಲ್ಲಿರುವ ಕೋಟೆ, ಅಗುಳಗಳು ಈಚಿನವಂತೆ ಕಂಡುಬಂದರೂ ಅದಕ್ಕಿಂತ ಹಿಂದೆ ಅವು ಇರಲಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಆ ಊರಲ್ಲಿರುವ ಸುಂದರವಾದ ವಿಷ್ಣು ವಿಗ್ರಹವು ಆ ಊರು ಹನ್ನೊಂದು ಹನ್ನೆರಡನೆಯ ಶತಮಾನದಷ್ಟು ಪ್ರಾಚೀನವಾದುದೆಂಬುದಕ್ಕೆ ಆಧಾರ. ಅದೇನೇ ಇರಲಿ, ಸದ್ಯಕ್ಕೆ ಉಡುಗಣಿಯೇ ಮಹಾದೇವಿಯಕ್ಕನ ಹುಟ್ಟೂರು ಎಂದು ನಂಬಬಹುದು. ತಂದೆ ನಿರ್ಮಲಸೆಟ್ಟಿ ತಾಯಿ ಸುಮತಿ ಎಂದು ಹರಿಹರ ಹೇಳಿದ್ದರೂ ಆ ಹೆಸರುಗಳು ಸಾಂಕೇತಿಕವಾಗಿರುವಂತೆ ತೋರುತ್ತದೆ. (ಉಡುಗಣಿಯು ಬಳ್ಳಿಗಾವೆಗೆ ಐದು ಕಿಲೋಮೀಟರ್ ದೂರದಲ್ಲಿದೆ).

ಮಹಾದೇವಿಯನ್ನು ಅವಳ ತಾಯ್ತಂದೆಯರು ಶ್ರೀಶೈಲದ ಮಲ್ಲಿಕಾರ್ಜುನನಿಗೆ ಹರಸಿಕೊಂಡು ಪಡೆದರೆಂಬುದಕ್ಕೆ ಸೂಚನೆಗಳಿವೆ. ಶಿಕಾರಿಪುರ ತಾಲ್ಲೂಕಿನ ಪಕ್ಕದ ಹಿರೇಕೆರೂರು ತಾಲ್ಲೂಕಿನ ಪರ್ವತ ಸಿದ್ಧಗೇರಿಯ (ಹೆಸರನ್ನು ಗಮನಿಸಿ 'ಪರ್ವತ' ಎಂದರೆ ಶ್ರೀಶೈಲ) ಕ್ರಿ.ಶ. 1265ರ ಒಂದು ಶಾಸನದಲ್ಲಿ ಹೀಗಿದೆ.

*"ಸ್ವಸ್ತಿ ಸಮಸ್ತ ಭುವನ ಮಂಡ.... ಮಣಿದೀಪಿಕಾಯಮಾನಾನೇಕ ಮಾಣಿಕ್ಯ ಶಿಲಾತಳ ಪ್ರಭಾವ ಪಟಲ ಜಟಿಲ ಶ್ರೀಶೈಲ ಶಿಖರ ಸಿಂಹಾಸನಾಸೀನ ಚತುರ್ದಶಭುವನಾಧೀಶ್ವರ ಶ್ರೀಶ್ರೀ ಪರ್ವತ ಶ್ರೀ ಸ್ವಯಂಭುಲಿಂಗ ಚಕ್ರವರ್ತಿ ಶ್ರೀಮಲ್ಲಿಕಾರ್ಜುನ ದೇವರ್ಗೆ*

---

* ನಿವೃತ್ತ ಕನ್ನಡ ಪ್ರಾಧ್ಯಾಪಕರು, ಬೆಂ.ವಿ.ವಿ., 'ಮಿಂಚು', ಆರ್.ಪಿ.ಸಿ. ಲೇಔಟ್, (ಹಂಪೆ ನಗರ), ಬೆಂಗಳೂರ–೫೬೦ ೦೫೦

*ದಂಣಾಯಕರು ಸೋವುಯಾಜಿಗಳು... ದಲಿ ದೇವದರ್ಶನವಾಗಿ ಶ್ರೀಮಲ್ಲಿಕಾರ್ಜುನ ದೇವರ ಸನ್ನಿಧಿಯಲ್ಲಿ ಶಕವರ್ಷ ೧೧೮೭ನೇಯ ಕ್ರೋಧನ ಸಂವತ್ಸರದ ವೈಶಾಖದ ಪೌರ್ಣಮಿ ಬೃಗುವಾರ ವಿಶಾಖಾ ನಕ್ಷತ್ರ ಶಿವಯೋಗಯುಕ್ತವಪ್ಪ ಪುಣ್ಯತಿಥಿಯಲ್ಲಿ ಶ್ರೀ ಪರ್ವತದ ಪುಲುಮಠದ ಆಚಾರ್ಯರಪ್ಪ ಪರಿಪೂರ್ಣ ಶಿವಾಚಾರ್ಯರ ಸಮಕ್ಷದಲು ಮಲ್ಲಿಕಾರ್ಜುನದೇ ವರ್ಗೆ..."*[೨]

ಆ ದೇವರಿಗೆ ಸಿದ್ಧಗೇರಿ ಎಂಬ ಊರನ್ನು ದಾನ ಮಾಡಲಾಗುತ್ತದೆ.ಮುಂದೆ ಊರಿಗೆ *"ಪರ್ವತ ಸಿದ್ಧಗೇರಿ"* ಎಂಬುದು ಹೆಸರಾಗಿ ಪರಿಣಮಿಸುತ್ತದೆ.

**ಈ** ಶಾಸನದಲ್ಲಿ ಬರುವ ಕರ್ನೂಲ್ ಜಿಲ್ಲೆಯ ಶ್ರೀಶೈಲದ ಹುಲುಮಠದ ಹೆಸರು ಹರಿಹರಕವಿ ತನ್ನ ***"ಮಹಾದೇವಿ ಅಕ್ಕನ ರಗಳೆ"*** ಯಲ್ಲಿ ಹೇಳಿದ್ದಾನೆ. ಮಹಾದೇವಿಯ ವೈರಾಗ್ಯಪರಳಾಗಿ ಶ್ರೀಶೈಲಕ್ಕೆ ಹೋದಾಗ, ಅವಳನ್ನು ಬಿಟ್ಟಿರಲಾರದ ಕೌಶಿಕ ದೊರೆ ಕಪಟ ಸನ್ಯಾಸಿ ವೇಷದಲ್ಲಿ ಶ್ರೀಶೈಲಕ್ಕೆ ಹೋಗಿ ಅಲ್ಲಿ ***'ಕಲುಮಠ ಹುಲುಮಠ'***ದ ಗುರುಗಳು ಲಂಚಕೊಟ್ಟು ಅವಳನ್ನು ಒಲಿಸಿಕೊಳ್ಳಲು ಯತ್ನಿಸಿದನಂತೆ! ಅದಿರಲಿ. ಮೇಲಿನ ಶಾಸನದಿಂದ ಬಳ್ಳಿಗಾವೆ ಪ್ರದೇಶದ ಜನರಿಗೆ ಶ್ರೀಶೈಲದ ಮಲ್ಲಿಕಾರ್ಜುನನು ಆರಾಧ್ಯ ದೈವವಾಗಿದ್ದುದು, ಅಲ್ಲಿಯ ಜನ ಆ ದೇವರಿಗೆ ದತ್ತಿಗಳನ್ನು ಬಿಡುತ್ತಿದ್ದುದು ಸೂಚಿತವಾಗುತ್ತದೆ. ಮಹಾದೇವಿಯ ತಂದೆ ತಾಯಿಗಳಿಗೆ ಶ್ರೀ ಶೈಲದ ಮಲ್ಲಿಕಾರ್ಜುನ ಮನೆದೇವರಾಗಿದ್ದರಬಹುದು. ಶಿವಭಕ್ತರಾದ ಆ ದಂಪತಿಗಳು ತಮ್ಮ ಮಗಳಿಗೆ ಮಹಾದೇವಿ ಎಂದು ಹೆಸರಿಡಲು ಒಂದು ಕಾರಣವಿರುವಂತಿದೆ. ಸಿದ್ಧರಾಮ ತನ್ನ ವಚನಗಳಲ್ಲಿ ನಾಲ್ಕಾರು ಕಡೆ ಶ್ರೀಶೈಲದ ಮಲ್ಲಿಕಾರ್ಜುನನ ಹೆಂಡತಿ ಹೆಸರು "ಮಹಾದೇವಿ" ಎಂದು ಹೇಳಿದ್ದಾನೆ. [೩] ಮಲ್ಲಿಕಾರ್ಜುನ ದೈವದ ಹೆಂಡತಿ ಮಹಾದೇವಿ ಎಂದಿರುವುದೂ, ಮಹಾದೇವಿಯಕ್ಕನು ಮಲ್ಲಿಕಾರ್ಜುನ ತನ್ನ ಗಂಡನೆಂದು ಭಾವಿಸಿರುವುದೂ ಆಕಸ್ಮಿಕಗಳೆಂದು ಅನ್ನಿಸುವುದಿಲ್ಲ [೪]. ಎಚ್ಚರಿಕೆಯ ಊಹೆಯೊಂದನ್ನು ಮಾಡುವುದಾದರೆ, ಮಹಾದೇವಿ ಯಕ್ಕನ ತಂದೆತಾಯಿಗಳು ಶ್ರೀಶೈಲದ ಮಲ್ಲಿಕಾರ್ಜುನ ದೇವರಿಗೆ ಹರಸಿಕೊಂಡು ಹುಟ್ಟಿದ ಮಗುವಿಗೆ ಮಲ್ಲಿಕಾರ್ಜುನನ ಹೆಂಡತಿಯ ಹೆಸರಾದ ***"ಮಹಾದೇವಿ"*** ಎಂಬ ನಾಮಕರಣವನ್ನೇ ಮಾಡಿರಬಹುದು. ಈ ಊಹೆಯನ್ನೇ ಸ್ವಲ್ಪ ಬೆಳೆಸುವುದಾದರೆ, ಬ್ಯಾಲದಲ್ಲಿ ತಂದೆ ತಾಯಿಗಳು ಮತ್ತು ಇತರ ದೊಡ್ಡವರು *"ನೀನು ಶ್ರೀಶೈಲದ ಮಲ್ಲಿಕಾರ್ಜುನನ ಹೆಂಡತಿ"* ಎಂದು ತಮಾಷೆಯಾಗಿ ಆಡಿರಬಹುದಾದ ಮಾತೇ ಮಗುವಿನ ಮನಸ್ಸಿನಲ್ಲಿ ಉಳಿದು ಬಾಲ್ಯದಲ್ಲೇ ಆ ಮಗು ಚನ್ನಮಲ್ಲಿಕಾರ್ಜುನನನ್ನು ತನ್ನ ಗಂಡನನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆ ಕನಸುಗಳನ್ನು ಬೆಳಸಿಕೊಂಡಿರಬೇಕು. ಬಾಲ್ಯದ ಮುಗ್ಧ ಆಸೆ ಕನಸುಗಳು ದೊಡ್ಡವರಾದ ಮೇಲೂ ಬಲವಾಗಿ ಬೇರೂರುತ್ತವೆ ಎಂಬುದನ್ನು ಗಮನಿಸಿದರೆ ಮೇಲಿನ ಊಹೆಯ ಸಂಭಾವ್ಯತೆಯ ಅರಿವಾಗುತ್ತದೆ. ಮಹಾದೇವಿಯಕ್ಕ ತನ್ನ ಯೌವನದಲ್ಲಿ ಚನ್ನಮಲ್ಲಿಕಾರ್ಜುನನೇ ತನ್ನ ಗಂಡನೆಂದು ಭಾವಿಸಲು ಬಾಲ್ಯದ ಮೇಲಿನಂತಹ ಯಾವುದೋ ಸಂಗತಿ ನಿಮಿತ್ತ ಕಾರಣವಾಗಿರಬೇಕು.

ಇಷ್ಟು ಮಾತ್ರ ನಿಜ: ಬಳ್ಳಿಗಾವೆಯ ಭಕ್ತಿಮಯ, ಜ್ಞಾನಮಯ ಶೈವ ವಾತಾವರಣದಲ್ಲಿ ಹುಟ್ಟಿ ಬೆಳೆದ ಅವಳ ತಂದೆ ತಾಯಂದಿರು ತಮ್ಮ ಮನೆಯಲ್ಲೂ ಅದೇ ಶಿವಭಕ್ತಿಯ ವಾತಾವರಣದಲ್ಲಿ ಆ ಹುಡುಗಿಯನ್ನು ಬೆಳಸಿದರು. ಆ ಕಾಲಕ್ಕೆ ಬಳ್ಳಿಗಾವೆ ಒಂದು ಬಹುದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿದ್ದಿತು. ಕಲ್ಯಾಣ ಚಾಲುಕ್ಯರ ***'ದಕ್ಷಿಣ ದಿಶಾಭಾಗದ'*** ರಾಜಧಾನಿಯೆಂದು ಪ್ರಸಿದ್ಧವಾಗಿದ್ದ ಅಲ್ಲಿ ಎಲ್ಲ ಮತಗಳ (ಶೈವ, ಬೌದ್ಧ, ಜೈನ ವೈಷ್ಣವ) ಕೇಂದ್ರಗಳಿದ್ದುವು. ಅದರಲ್ಲೂ ಅದು ಕಾಳಾಮುಖ ಪಾಶುಪತರ ಪ್ರತಿಷ್ಠಿತ ಕೇಂದ್ರವಾಗಿತ್ತು. ಆ ಊರ ತುಂಬ ಶಿವಮಂದಿರಗಳಿದ್ದುವು. ಕೇದಾರೇಶ್ವರ ದೇವಾಲಯದ ಶಾಸನಗಳ ಪ್ರಕಾರ, ಶಿವಭಕ್ತಿಯ ರೋಮಾಂಚನದ ಬೆಳಸನ್ನು ಬೆಳೆಸುವ ಹೊಲದಂತಿದ್ದಿತು. ಆ ಕ್ಷೇತ್ರ. ಭಾರತದ ನಾನಾ ಭಾಗಗಳಿಂದ ಏಕದಂಡಿ, ದ್ವಿದಂಡಿ, ಹಂಸ, ಪರಮಹಂಸ ಸಾಧುಗಳು ಸಂತರು ಜ್ಞಾನ ಪಿಪಾಸುಗಳಾದ ವಿದ್ಯಾರ್ಥಿಗಳು ಕಲಾವಿದರು ಬಳ್ಳಿಗಾವೆಗೆ ಕಿಕ್ಕಿರಿಯುತ್ತಿದ್ದರು. ಭಿಕ್ಷೆಗಾಗಿ ಉಳಿದುಕೊಳ್ಳುವುದಕ್ಕಾಗಿ ಬಳ್ಳಿಗಾವೆಯ ಸುತ್ತ ಮುತ್ತಣ ಬಡಾವಣೆಗಳಿಗೆ ಹಳ್ಳಿಗಳಿಗೆ ಹರಡಿಕೊಳ್ಳುತ್ತಿದ್ದರು. ಮಹಾದೇವಿಯಕ್ಕ ಹುಟ್ಟಿ ಬೆಳೆದ ವಾತಾವರಣವೇ ಶಿವಭಕ್ತಿ ವೈರಾಗ್ಯಗಳಿಂದ ಆರ್ದ್ರವಾಗಿದ್ದಿತು. ಜೊತೆಗೆ, ಅದು ಕಾವ್ಯಮಯ ವಾತಾವರಣದಿಂದಲೂ ತುಂಬಿತ್ತು. ಶಾಂತಿನಾಥನಂತಹ ಚಂಪೂ ಕವಿಯ ಊರು ಅದಾಗಿತ್ತು ಮಾತ್ರವೇ ಅಲ್ಲ, ಸ್ವತಃ ವಚನಕಾರ ಅಲ್ಲಮನೇ ಆ ಊರಿನವರು ಎಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಏಕಮಾತ್ರ ಪುತ್ರಿಯಾಗಿ ಆರೈಕೆಗೊಂಡ ಆ ಮಗು ತಾರುಣ್ಯದಲ್ಲಿ ಆಕರ್ಷಕ ಸುಂದರಿಯೂ ಆಗಿ ಬೆಳೆದಳು. ಆ ವಯಸ್ಸಿಗೆ ಎಲ್ಲ ಸರಿವಯಸ್ಸಿನ ಹುಡುಗಿಯರು ಮದುವೆಯಾಗುವ ಸುಂದರ ಗಂಡನ ಕನಸನ್ನು ಕಾಣುತ್ತಿದ್ದರೆ ಅಕ್ಕಮಹಾದೇವಿಯೂ ಅಂತಹುದೇ ಕನಸನ್ನು ಕಾಣುತ್ತಿದ್ದಳು, ಇಷ್ಟೇ ವ್ಯತ್ಯಾಸ, ಆ ಗಂಡು ಶ್ರೀಶೈಲದ ಚನ್ನಮಲ್ಲಿಕಾರ್ಜುನನೇ ಆಗಿದ್ದ. ಲೌಕಿಕ ಗಂಡುಗಳ ಕಡೆ ಅವಳ ಮನಸ್ಸು ಹೋಗಲಿಲ್ಲ.

*ಅಕ್ಕ ಕೇಳವ್ವ ಅಕ್ಕಯ್ಯ, ನಾನೊಂದು ಕನಸ ಕಂಡೆ*
*ಅಕ್ಕಿ ಅಡಕೆ ಓಲೆ ತೆಂಗಿನಕಾಯಿ ಕಂಡೆ.*
*ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು*
*ಭಿಕ್ಷಕ್ಕೆ ಬಂದುದನು ಕಂಡೆನವ್ವ.*
*ಮಿಕ್ಕು ಮೀರಿ ಹೋಹವನ ಬೆಂಬತ್ತಿ ಕೈವಿಡಿದೆನು*
*ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.*

ಇಂತಹ ವಚನಗಳು ಆ ಷೋಡಶ ವಯಸ್ಸಿನ ಹುಡುಗಿಯ ಸುಂದರ ಕನಸುಗಳನ್ನು ಸೂಚಿಸುತ್ತವೆ. ಈ ವಯಸ್ಸಿನಲ್ಲೇ ಅವಳು ಕೌಶಿಕ ಎಂಬ ದೊರೆಯ ಕಣ್ಣಿಗೆ ಬಿದ್ದು ಅವನ ಬಲವಂತಕ್ಕೆ ಮದುವೆಯಾಗಿ ಅವನ ಅಂತಃಪುರವನ್ನು ಸೇರಬೇಕಾಯಿತು. ಕೌಶಿಕನ ಕೈ ಹಿಡಿಯುವಂತೆ ಅವಳ ತಾಯಿಯೂ ಒತ್ತಾಯಪಡಿಸಿ ರುವುದಕ್ಕೆ ಮಹಾದೇವಿಯಕ್ಕನ ವಚನಗಳಲ್ಲೇ ಸೂಚನೆಯಿದೆ.

*ಮನ ಮನ ತಾರ್ಕಣೆಯ ಕಂಡು ಅನುಭವಿಸಲು*
*ನೆನಹು ಘನವಹುದಲ್ಲದೆ ಅದು ಹವಣದಲ್ಲಿ ನಿಲುವುದೆ?*
*ಎಲೆ ಅವ್ವಾ, ನೀನು ಮರುಳವ್ವೆ.*
*ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯಗೊಲಿದು ಸಲೆ ಮಾರುಹೋದೆನು,*
*ನಿನ್ನ ತಾಯಿತನವನೊಲ್ಲೆ ಹೋಗಾ.*

ತನ್ನ ತಾಯಿಯ ಬಲವಂತ ಹೆಚ್ಚಾದಾಗ ಅವಳ ತಾಯ್ತನವನ್ನೇ ತಿರಸ್ಕರಿಸಲು ಸಿದ್ಧವಾಗಿರುವ ಮಹಾ ದೇವಿಯ ಮನಸ್ಸು ಚನ್ನಮಲ್ಲಿಕಾರ್ಜುನನಲ್ಲಿ ಎಷ್ಟು ತೀವ್ರವಾಗಿ ಸಿಲುಕಿತ್ತು ಎಂಬುದನ್ನು ಊಹಿಸಬಹುದು. ಮದುವೆಯ ಸಂದರ್ಭದಲ್ಲಿ ಮಹಾದೇವಿ ಮದುವಣಗಿತ್ತಿಯ ಅಲಂಕಾರಗಳನ್ನು ತಿರಸ್ಕರಿಸಿದಂತೆ ಕಾಣುತ್ತದೆ. ಚನ್ನಮಲ್ಲಿ ಕಾರ್ಜುನನ ವಧುವಾದ ತನಗೆ ಬೇರೆ ಶೃಂಗಾರ ಬೇಕಿಲ್ಲವೆಂದು ಒಂದೆಡೆ ಹೇಳಿಕೊಂಡಿದ್ದಾಳೆ.

*ಗುರುಪಾದತೀರ್ಥವೆ ಮಂಗಳಮಜ್ಜನವೆನಗೆ*
*ವಿಭೂತಿಯೆ ಒಳುಗುಂದದರಿಷಿಣವೆನಗೆ*
*ದಿಗಂಬರವೇ ದಿವ್ಯಾಂಬರವೆನಗೆ*
*ಶಿವಭಕ್ತರ ಪಾದರೇಣುವೆ ಅನುಲೇಪವೆನಗೆ*
*ರುದ್ರಾಕ್ಷಿಯೆ ಮೈದೊಡಿಗೆಯೆನಗೆ*
*ಶರಣರ ಪಾದರಕ್ಷೆಯೆ ಶಿರದಲ್ಲಿ ತೊಂಡಿಲು ಬಾಸಿಗವೆನಗೆ*
*ಚನ್ನಮಲ್ಲಿಕಾರ್ಜುನನ ಮದುವಳಿಗೆಗೆ*
*ಬೇರೆ ಶೃಂಗಾರವೇಕೆ ಹೇಳಿರೆ ಅವ್ವೆಗಳಿರಾ.*

ವಯಸ್ಸಿಗೆ ಮೀರಿದ ಮಾನಸಿಕ ಪಕ್ವತೆ ಇಂತಹ ವಚನಗಳಲ್ಲಿ ಹಲವೆಡೆ ಎದ್ದು ಕಾಣುತ್ತದೆ.

ಯಾರು ಈ 'ಕೌಶಿಕ'? ಇತಿಹಾಸದಲ್ಲಿ ಗುರುತಿಸಲು ಸಾಧ್ಯವಾಗಿದೆ. ಕೌಶಿಕ ಯಾರು ಅಲ್ಲ - ಅಕ್ಕಮಹಾದೇವಿಯ ಕಾಲದಲ್ಲಿ ಬಳ್ಳಿಗಾವೆಯಲ್ಲಿ ಬಿಜ್ಜಳನ ಮನ್ನೆಯನಾಗಿ ಆಳುತ್ತಿದ್ದ ಕಸಪಯ್ಯನಾಯಕನೇ ಎಂಬುದನ್ನು ನಾನು ಈಗಾಗಲೇ ಸಾಧಾರಣವಾಗಿ ತೋರಿಸಿಕೊಟ್ಟಿದ್ದೇನೆ. [೫]

ಮಹಾದೇವಿಯಕ್ಕನ ವಿವಾಹ ನಿಜವಾಗಿಯೂ ನಡೆಯಿತೇ ಎಂಬುದು ಈಗ ಪ್ರಶ್ನೆಯೇ ಅಲ್ಲ. ಕಸಪಯ್ಯ ನಾಯಕನು ಅವಳನ್ನು ಬಲವಂತದಿಂದ ಮದುವೆ ಯಾದುದು ಮಾತ್ರವೇ ಅಲ್ಲ, ಅವಳ ದೇಹವನ್ನೂ ಅವನು ಪಡೆದಿದ್ದನೆಂಬುದಕ್ಕೆ ವಚನಾಧಾರಗಳೂ ಇವೆ, ಹರಿಹರನ ಆಧಾರವೂ ಇದೆ.

*ಎಮ್ಮೆಗೊಂದು ಚಿಂತೆ, ಸಮ್ಮಗಾರಗೊಂದು ಚಿಂತೆ*
*ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ*
*ಎನಗೆ ಎನ್ನ ಚಿಂತೆ, ತನಗೆ ತನ್ನ ಕಾಮದ ಚಿಂತೆ*
*ಒಲ್ಲೆ ಹೋಗು, ಸೆರಗ ಬಿಡು ಮರುಳೆ,*
*ಎನಗೆ ಚನ್ನಮಲ್ಲಿಕಾರ್ಜುನ ದೇವರು ಒಲಿವರೊ ಒಲಿಯರೊ ಎಂಬ ಚಿಂತೆ.*

ಕೌಶಿಕ (ಕಸಪಯ್ಯನಾಯಕ) ಅವಳನ್ನು ಕಾಮಕೇಳಿಗೆ ಕರೆದಾಗ ಮೂಡಿರಬಹುದಾದ ವಚನವಿದು. ಅವಳ ವಿರಸ ದಾಂಪತ್ಯದ ಚಿತ್ರವನ್ನು ಹಲವು ವಚನಗಳು ಕೊಡುತ್ತವೆ. ***"ಒಳಗಣ ಗಂಡನವ್ವಾ, ಹೊರಗಣ ಮಿಂಡನವ್ವಾ - ಎರಡನೂ ನಡೆಸಲು ಬಾರದವ್ವಾ, ಲೌಕಿಕ ಪರಮಾರ್ಥ ವೆಂಬೆರಡೂ ನಡೆಸಲು ಬಾರದವ್ವಾ"*** - ಗಂಡನಾಗ ಬೇಕಾಗಿದ್ದ ಚನ್ನಮಲ್ಲಿಕಾರ್ಜುನನೇ ರಾಣಿವಾಸದಲ್ಲಿದ್ದ

ಮಹಾದೇವಿಗೆ ಮಿಂಡನ ಜಾಗದಲ್ಲಿ ನಿಲ್ಲಬೇಕಾಗಿದೆ. ದೇಹವನ್ನು ಕಸಪಯ್ಯ ನಾಯಕನಿಗೆ ಒಪ್ಪಿಸಿದ ಮಹಾದೇವಿ ಆ ಬಳಿಕ ಅನುಭವಿಸಿರಬಹುದಾದ ಯಾತನೆ, ಶಿವನೊಡನೆ ಕಲ್ಪನೆ ಸೇರಿ ಆ ಯಾತನೆಯನ್ನು ಮರೆಯಲು ಯತ್ನಿಸಿದ್ದು ಇವೆಲ್ಲ ಅವಳ ವಚನಗಳಲ್ಲಿ ಅಭಿವ್ಯಕ್ತಗೊಂಡಿದೆ. "ಆತನನಪ್ಪಿಕೊಂಡು ತಳವೆಳಗಾದೆನು" – ಇಂತಹ ಮಾತುಗಳನ್ನು ಮನೋವಿಜ್ಞಾನದ ಬೆಳಕಿನಲ್ಲಿ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಅವಳ ಬಾಳನ್ನು ವ್ಯಾಪಿಸಿದ ವಿಷಮ ದಾಂಪತ್ಯದ ಯಾತನೆ ಅವಳಲ್ಲಿದ್ದ ಕವಯಿತ್ರಿಯನ್ನು ಹೊರಕ್ಕೆ ತಂದಿತು. ತನ್ನನ್ನು ತಾನು ಹಗುರಗೊಳಿಸಿಕೊಳ್ಳಲು ಅವಳಿಗೆ ಹಾಡು ಜೀವನದುದ್ದಕ್ಕೂ ಒಂದು ಸಾಧನ ವಾಯಿತು. ವಚನಕಾರರಲ್ಲಿ ಯಾರಿಗಾದರೂ ವಚನ ರಚನೆ ಅನಿವಾರ್ಯ ಕ್ರಿಯೆಯಾಗಿದ್ದರೆ ಅದು ಅಕ್ಕಮಹಾದೇವಿಗೆ. ಯಾವನೋ ಒಬ್ಬ ಗಂಡನನ್ನು ಕೈ ಹಿಡಿದ ಮೇಲೆ ಅವನ ದಾಸಿಯಂತೆ ಬದುಕಬೇಕೆಂಬ ಪಾರಂಪರಿಕ ವಾತಾವರಣದಲ್ಲಿ ಮಹಾದೇವಿ ತನ್ನ ಮನದ ಅಳಲನ್ನು ಯಾರಿಗೆ ಹೇಳಿಕೊಳ್ಳಲು ಸಾಧ್ಯ ? ಹೀಗಾಗಿ ಅವಳು ಇಲ್ಲವೇ ತನ್ನ ಜೊತೆ ತಾನು ಮಾತನಾಡಿಕೊಂಡು, ಕನಸು ಕಂಡು, ಹಾಡಿ ತನ್ನನ್ನು ತಾನು ಹಗುರಗೊಳಿಸಿಕೊಳ್ಳಬೇಕಾಗಿತ್ತು. ಸುಮ್ಮನಿದ್ದರೆ ಬಹುಶಃ ಹುಚ್ಚು ಹಿಡಿಯುವಂತಹ ಸನ್ನಿವೇಶ. ಅವಳು ಹಾಡಿ ಹಾಡಿ ತನ್ನನ್ನು ತಾನು ಹಗುರಗೊಳಿಸಿ ಕೊಂಡಳು. ಈ ಕಾರಣದಿಂದ ಸಹಜವಾಗಿಯೇ ಭಾವುಕ ಸ್ವಭಾವದ ಅವಳ ವಚನಗಳು ಬಹುತೇಕ ಆತ್ಮಚರಿತ್ರಾತ್ಮಕವೂ ಭಾವ ಗೀತಾತ್ಮಕವೂ ಆಗಿವೆ. *'ಅಯ್ಯಾ, ನೀನು ಕೇಳಿದಡೆ ಕೇಳು, ಕೇಳದಡೆ ಮಾಣು, ಆನು ನಿಮ್ಮ ಹಾಡಿದಡಲ್ಲದೆ ಸೈರಿಸಲಾರೆನಯ್ಯಾ'* ಎಂಬ ವಚನಭಾಗವನ್ನು ಇಲ್ಲಿ ಸ್ಮರಿಸಬೇಕು.

ಮದುವೆಯಾದ ಮೇಲೂ ಅವಳ ಮನೆಗೆ ಅವ್ಯಾಹತವಾಗಿ ಬರುತ್ತಿದ್ದ ಶಿವಭಕ್ತರ [೬] ಬಗ್ಗೆ ಕಸಪಯ್ಯ ನಾಯಕ ತಾಳಿದ ಧೋರಣೆ ಅವಳು ತನ್ನ ವಿರಸ ಸಂಸಾರದಿಂದ ಹೊರಬರಲು ಕಾರಣವಾಯಿತು. ಅವರಿಬ್ಬರೂ ಒಮ್ಮೆ ಏಕಾಂತದಲ್ಲಿರುವಾಗ ಅವಳನ್ನು ಕಾಣಲು ಶಿವಭಕ್ತರು ಬಂದುದು ಕಾರಣವಾಗಿ ಅವಳ ಗಂಡ ಸಿಡಿಮಿಡಿಗೊಂಡ – ಅಂತಹ *'ತಪ್ಪು'* ಮೂರನೆಯ ಬಾರಿ ಆತನಿಂದ ನಡೆದಿರಬಹುದು. ಅದೇ ನೆಪವಾಗಿ ಮಹಾದೇವಿ ಹೊರಟಾಗ ಕಾಮವಶನಾಗಿದ್ದ ಅವನು ಅವಳ ವಸ್ತ್ರವನ್ನು ಸೆಳೆದು *'ನಿನಗೇಕೆ ವಸ್ತ್ರ'* ಎಂದು ವ್ಯಂಗೋಕ್ತಿಯಾಡಿದ್ದೇ ಕಾರಣವಾಗಿ ಅವಳು ದಿಗಂಬರೆಯಾಗಿ (ಕೇಶಾಂಬರೆಯಾಗಿ) ಮನೆ ಬಿಟ್ಟು ಹೊರಟಳು ಎಂಬ ನಿರೂಪಣೆಯೇನೋ ಹರಿಹರನಲ್ಲಿ ಸಿಗುತ್ತದೆ. ಅವಳ ದಿಗಂಬರತನ ಹಲವು ಸಮಸ್ಯೆಗಳನ್ನೊಡ್ಡುತ್ತದೆ. ಅವಳು ಸಂಪೂರ್ಣ ನಗ್ನಳಾಗಿಯೇ ಬಳ್ಳಿಗಾವೆಯಿಂದ ಕಲ್ಯಾಣಕ್ಕೆ ಹೋದಳೆಂದು ಕಲ್ಪಿಸಿ ಕೊಳ್ಳುವುದು ತೀರ ಕಠಿಣ.

*ಕೈಸಿರಿಯ ದಂಡವ ಕೊಳಬಹುದಲ್ಲದೆ*
*ಮೈ ಸಿರಿಯ ದಂಡವ ಕೊಳಲುಂಟೆ ?*
*ಉಟ್ಟಂತಹ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ*
*ಮುಚ್ಚಿರ್ದ ಮುಸುಕಿರ್ದ ನಿರ್ವಾಣವ ಸೆಳೆದುಕೊಳ್ಳಬಹುದೆ ?*
*ಚನ್ನಮಲ್ಲಿಕಾರ್ಜುನ ದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ*
*ಉಡುಗೆ ತೊಡುಗೆಯ ಹಂಗೇಕೋ ಮರುಳೆ ?*

ಇಂತಹ ಕಡೆ ತನ್ನ ಮೈಯಮೇಲಿನ ಒಡವೆ ಉಡುಪುಗಳನ್ನು ತನ್ನ ಗಂಡನೇ ಕಿತ್ತುಕೊಂಡುದನ್ನು ಅವಳು ಸೂಚಿಸಿರುವಂತಿದೆ. *'ಕೇಶಾಂಬರ'* ಎಂದರೆ ಉಣ್ಣೆಯಿಂದ ಮಾಡಿದ ವಸ್ತ್ರ ಗೊಂಗಡಿ ಎಂದ ಶ್ರೀ ಎಚ್. ದೇವೀರಪ್ಪನವರು ಹರಿಹರನ ಕೇಶಿರಾಜ ದಣಾಯಕನ ರಗಳೆಯನ್ನವಲಂಬಿಸಿ ವಾದಿಸಿದ್ದರೂ [೭], ಮುಂದೆ ಕಲ್ಯಾಣದಲ್ಲಿ ಅಲ್ಲಮ ಎಲ್ಲರ ಮುಂದೆ ಅವಳ ದಿಗಂಬರತ್ವವನ್ನು ಪ್ರಸ್ತಾಪಿಸುವುದನ್ನು ಗಮನಿಸಿದರೆ ಸಮಸ್ಯೆ ಅಷ್ಟು ಸರಳವಲ್ಲವೆಂದು ಗೊತ್ತಾಗುತ್ತದೆ. ಬಟ್ಟೆಗಳ ಕಡೆ ಲಕ್ಷ್ಯ ಕೊಡದೆ, ಕನಿಷ್ಠ ಬಟ್ಟೆಗಳೊಡನೆ ಗಂಡನ ಮನೆಯಿಂದ ಹೊರಬಿದ್ದ ಮಹಾದೇವಿ ಮತ್ತೆ ತೌರುಮನೆಯತ್ತ ಕಾಲು ಹಾಕಲಿಲ್ಲ. ಸಾಂಪ್ರದಾಯಕ ಸಮಾಜದಲ್ಲಿ ಗಂಡನ ಮನೆಯಿಂದ ಹೊರಬಿದ್ದ ಹೆಣ್ಣಿಗೆ ತೌರಿನ ಬಾಗಿಲ ಕದವು ಮುಚ್ಚುವ ಸಾಧ್ಯತೆಗಳಿರುತ್ತದೆ. ಹೀಗಾಗಿ ಅವಳು ಸಹಜವಾಗಿ ಅದೇ ಕಾಲದಲ್ಲಿ ಸಾಮಾಜಿಕ ಆಂದೋಲನ ಮತ್ತು ಶಿವಭಕ್ತಿಗಳ ಕೇಂದ್ರವಾಗಿ ರೂಪುಗೊಂಡಿದ್ದ ಕಲ್ಯಾಣದತ್ತ ಹೆಜ್ಜೆ ಹಾಕಿದಳು.

ಗಂಡನನ್ನು ಬಿಟ್ಟು ಬೀದಿಗೆ ಬಂದ ಏಕಾಂಗಿನಿ ಸುಂದರಿ ತರುಣಿಯ ಬಗ್ಗೆ ಸಮಾಜವಾಗಲಿ ದಾರಿಹೋಕ ರಾಗಲಿ ಹೇಗೆ ನಡೆದುಕೊಂಡಿರಬಹುದೆಂಬುದರ ಬಗ್ಗೆ ಹೆಚ್ಚು ಊಹೆಗಳ ಅಗತ್ಯವಿಲ್ಲ. ಅವಳೇನೋ –

*ಹಸಿವಾದೊಡೆ ಊರೊಳಗೆ ಭಿಕ್ಷಾನ್ನಗಳುಂಟು*
*ತೃಷೆಯಾದೊಡೆ ಕೆರೆ ಹಳ್ಳ ಬಾವಿಗಳುಂಟು*
*ಅಂಗಶೀತಕ್ಕೆ ಜೀಸಾಟ ಅರಿವೆಗಳುಂಟು*
*ಶಯನಕ್ಕೆ ಹಾಳು ದೇಗುಲಗಳುಂಟು*

*ಚನ್ನಮಲ್ಲಿಕಾರ್ಜುನಯ್ಯ, ಆತ್ಮ ಸಂಗಾತಕ್ಕೆ ನೀನೆನಗುಂಟು.*

ಬಹುಶಃ ಏಕಾಂಗಿಯಾಗಿ ಹೊರಟ ಅವಳ ಜೊತೆ ಇದ್ದವನು ಆತ್ಮದೊಳಗಿದ್ದ ಚನ್ನಮಲ್ಲಿಕಾರ್ಜುನ ಮಾತ್ರ. ಭಿಕ್ಷೆಯಿಂದ ಪ್ರಾಣವನ್ನು ಉಳಿಸಿಕೊಂಡು, ಕೆರೆ ಹಳ್ಳ ಬಾವಿಗಳ ನೀರನ್ನು ಕುಡಿಯುತ್ತ, ಜನ ಕರುಣೆಯಿಂದ ಕೊಟ್ಟ ಚಿಂದಿ ವಸ್ತ್ರಗಳನ್ನು ಧರಿಸಿ, ಹಾಳು ದೇಗುಲಗಳಲ್ಲಿ ಹಲವು ರಾತ್ರಿ ಕಳೆಯುತ್ತ ಅವಳು ಕಲ್ಯಾಣದತ್ತ ಹೊರಟಳು. ದಾರಿಯಲ್ಲಿ ಕಾಮುಕರು ಅವಳನ್ನು ಕೆಣಕಿರಲಾರರೇ ? ಕೆಣಕಿರದಿದ್ದರೆ ಆಶ್ಚರ್ಯ. ಜನ ಹುಚ್ಚಿಯೆಂದು ಹಾಸ್ಯ ಮಾಡಿರಲಾರರೇ ? ಹಾಸ್ಯ ಮಾಡದಿದ್ದರೆ ಆಶ್ಚರ್ಯ. ಅವಳು ಆಗ ಅನುಭವಿಸಿರ ಬಹುದಾದ ನೋವು ನಮ್ಮ ಊಹೆಗೂ ಮೀರಿದ್ದು. ದೈವದ ಮೇಲೆ ಇದ್ದ ನಿಷ್ಠೆ, ಪರವಶಳಾಗಿ ಹಾಡುತ್ತಿದ್ದ ಹಾಡು, ದಾರಿಯಲ್ಲಿನ ಊರುಗಳ ಕರುಣಾವಂತರಾದ ಶಿವಭಕ್ತ ಜನ ಅವಳಿಗೆ ಸಾಧ್ಯವಾದಷ್ಟು ರಕ್ಷಣೆಯನ್ನು ಒದಗಿಸಿದುವು.

ಅವಳಿಗೆ ಆದ ಕೊನೆಯ ನೋವಿನ ಅನುಭವ ಅತ್ಯಂತ ತೀವ್ರವಾದುದು, ಮತ್ತು ಅದು ಅವಳ ಅಂತಹ ಹಲವು ನೋವುಗಳಿಗೆ ಕನ್ನಡಿ ಹಿಡಿಯುವಂತಹುದೂ ಆಗಿದೆ. ವಾಸ್ತವವಾಗಿ ಅವಳು ಹೊರಟಿದ್ದು ತನ್ನ ನಿಜವಾದ ಗಂಡನ ಮನೆಗೆ, ಶ್ರೀಶೈಲಕ್ಕೆ ದಾರಿಯಲ್ಲೇ ಕಲ್ಯಾಣ. ರಾಜಧಾನಿ ಕಲ್ಯಾಣಕ್ಕೆ ಅವಳು ಹೋಗುವಲ್ಲಿ ಬಸವನನ್ನು ನೋಡುವ ಉದ್ದೇಶವಿತ್ತು ಎಂಬುದು ಖಚಿತ. ಕಲ್ಯಾಣದ ಹೊರವಲಯದಲ್ಲಿ ಅವಳು ಬರುತ್ತಿರುವಾಗ ಅಲ್ಲಿಗೆ ಆಕಸ್ಮಿಕವಾಗಿ ಕಿನ್ನರಿ ಬೊಮ್ಮಯ್ಯನೆಂಬ ಸ್ಫುರದ್ರೂಪಿ, ಕಲಾವಿದ ಶಿವಶರಣ ಬರುತ್ತಾನೆ. ಆಕೆಯ ಸೌಂದರ್ಯಕ್ಕೆ ಮೋಹಿತನಾದ ಅವನು ***"ಈಕೆ ಲಿಂಗಾನುಭಾವ ಸಂಪನ್ನೆಯಾದರೆ ಗುರು ತಾಯಿ ಎಂದು ಶರಣೆಂಬೆನು, ಅಲ್ಲಾ, ದೇಹ ಲಜ್ಜಾಭಿಮಾನ ಉಳ್ಳಡೆ ಸ್ತ್ರೀಯಾಗಿ ಕೈವಿಡಿವೆನು"*** ಎಂದು ಕೊಂಡು ಅವಳ ಹತ್ತಿರ ಬರುತ್ತಾನೆ. ಕಾಮುಕರು ಅವಳನ್ನು ಕೆಣಕಿದ್ದು ಅವಳಿಗೆ ಹೊಸ ಅನುಭವವೇನೂ ಆಗಿರಲಿಲ್ಲ. ಆದರೆ ಒಬ್ಬ ಶಿವಭಕ್ತ, ಬಸವಣ್ಣನಿಗೆ ಅತ್ಯಂತ ಆಪ್ತನೊಬ್ಬ ಹೀಗೆ ಬಂದು ಅವಳನ್ನು ಬಯಸಿದುದು ಮಾತ್ರ ಹೊಸದಾಗಿತ್ತು. ಕಿನ್ನರಯ್ಯನ ಸಂಕಲ್ಪ ಮೊದಮೊದಲು ಅಸ್ವಾಭಾವಿಕವೂ ದುಷ್ಟವೂ ಆಗಿರಲಿಲ್ಲ. ಅವಳ ಜೊತೆ ಮಾತನಾಡಿ ಅವಳ ಭಕ್ತಿ ತೋರಿಕೆಯದಾಗಿದ್ದರೆ ಮಾತ್ರ ಅವಳ ಕೈಹಿಡಿಯುವ ಬಯಕೆ ಅವನದು. ಆ ಮೊದಲ ಸಂಕಲ್ಪ ಅವನಿಂದ ಮರೆಯಾಗುತ್ತದೆ. ***"ಚನ್ನಮಲ್ಲಿ ಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರ, ಛೀ ಹೋಗಾ ಮರುಳೆ"*** ಎಂಬ ಅವಳ ಛೇಡಿಕೆಯಾಗಲಿ, ***"ಕಿನ್ನರನಂತಪ್ಪ ಸೋದರನೆನಗೆ"*** ಎಂಬ ಆಪ್ತವಾಕ್ಯವಾಗಲಿ ಅವನ ಒಳಗಿವಿಗೆ ಕೇಳಿಸದಷ್ಟು ಕಾಮಾಂಧನಾಗಿದ್ದ ಅವನು ಅವಳ ಕೈ ಹಿಡಿದು ಬಲಾತ್ಕರಿಸುತ್ತಾನೆ. ಅವನು ಆ ಕಾಲಕ್ಕೆ ಕಾಮುಕನಂತೆ ವರ್ತಿಸಿದರೂ ಶಿವಸಂಸ್ಕಾರವಿರುವ ವ್ಯಕ್ತಿಯೆಂದು ಬಹುಶಃ ತಿಳಿದ ಮಹಾದೇವಿ ತನ್ನನ್ನು ಅವನಿಗೆ ಒಪ್ಪಿಸಿಕೊಳ್ಳುತ್ತಾಳೆ. ಅವಳ ದೇಹದ ಯಾವುದೇ ಭಾಗವೂ ಲೈಂಗಿಕ ಕ್ರಿಯೆಗೆ ಪ್ರತಿಸ್ಪಂದಿಸದಿದ್ದುದನ್ನೂ ಅವಳ ಇಡೀ ದೇಹ ಶಿವಮಯವಾಗಿರುವುದನ್ನೂ ಕಿನ್ನರಯ್ಯ ಗುರುತಿಸುತ್ತಾನೆ. ತನ್ನ ತಪ್ಪಿನ ಅರಿವಾಗಿ ತೀವ್ರ ಪಶ್ಚಾತ್ತಾಪಕ್ಕೆ ಒಳಗಾಗುತ್ತಾನೆ. ಪಾಪಕ್ಕೆ ಪ್ರತಿಭಟನೆಯಿಲ್ಲದೆ ಒಪ್ಪಿಕೊಂಡು ಪಾಪವನ್ನುಗೆದ್ದ ರೀತಿ ಅದು. ಅಕ್ಕಮಹಾದೇವಿ ಅವನಿಗೆ ಕಾಮಬಾಣದ ಸ್ವರೂಪವೇ ಹಾಗೆಂದು ಹೇಳಿ ಅವನ ನಡವಳಿಕೆಯಲ್ಲಿನ ಮನುಷ್ಯ ಸಹಜ ದೌರ್ಬಲ್ಯವನ್ನು ಅವನಿಗೆ ತೋರಿಸಿ ಕ್ಷಮಿಸುತ್ತಾಳೆ. ಕಿನ್ನರಯ್ಯನಂತೂ "ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕ ನೀವು ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು ಹುಲಿನೆಕ್ಕಿ ಬದುಕಿದೆನು ಶರಣಾರ್ತಿ ಶರಣಾರ್ತಿ ತಾಯೆ" ಎಂದು ತನಗೊದಗಿದ್ದ ಅಪಾಯ ಸ್ಥಿತಿ, ಅಲ್ಲಿಂದ ಆಶ್ಚರ್ಯಕರ ರೀತಿಯಲ್ಲಿ ಹೊರಬಂದುದನ್ನು ಧ್ವನಿಪೂರ್ಣವಾಗಿ ಹೇಳುತ್ತಾನೆ. ಹುಲಿ ಮನುಷ್ಯನನ್ನು ನೆಕ್ಕಿದರೆ ಅವನ ಕತೆ ಅಲ್ಲಿಗೆ ಮುಗಿದಂತೆಯೇ. ಕಾಮವನ್ನು ಹುಲಿಗೆ ಹೋಲಿಸಿರುವುದು ಗಮನಾರ್ಹವಾಗಿದೆ. ಹುಲಿ ನೆಕ್ಕಿಯೂ ಮನುಷ್ಯ ಬದುಕಿಬರುವುದು ಎಷ್ಟು ಆಶ್ಚರ್ಯಕರವೋ ಕಿನ್ನರಯ್ಯ ಮೇಲಿನ ಸಂದರ್ಭದಿಂದ ಪಾರಾಗಿ ಬಂದುದೂ ಅಷ್ಟೇ ಆಶ್ಚರ್ಯಕರ. ***"ಹುಲಿನೆಕ್ಕಿ ಬದುಕು"*** ಎಂಬ ವಾಗ್ರೂಢಿಯು ಹನ್ನೆರಡನೆಯ ಶತಮಾನದಲ್ಲಿ ಬಳಕೆ ಯಲ್ಲಿದುದು ನಯಸೇನನ ***"ಧರ್ಮಾಮೃತ"***ದಿಂದ ಸಮರ್ಥನೆಗೊಳ್ಳುತ್ತದೆ." (ಕಿನ್ನರಯ್ಯನ ಈ ಪ್ರಸಂಗವು ಅಕ್ಕಮಹಾದೇವಿಯ ಹಾಡೊಂದರಲ್ಲಿಯೂ ಪ್ರಸ್ತಾಪ ಗೊಂಡಿದೆ).

ಮಹಾದೇವಿ ಮತ್ತು ಕಿನ್ನರಯ್ಯರು ಭೇಟಿಯಾದ ಪ್ರಸಂಗವು ಒಂದು ಶ್ರೇಷ್ಠ ನಾಟಕಕ್ಕೆ ವಸ್ತುವನ್ನು ಹುದುಗಿಸಿಕೊಂಡಿದೆ.

ಕಿನ್ನರಯ್ಯನನ್ನು ಕಂಡ ಬಳಿಕ ಅವಳು ಬಸವ, ಅಲ್ಲಮ, ಚನ್ನಬಸವ, ಮಡಿವಳ ಮಾಚಿದೇವ ಮೊದಲಾದ ಹಲವು

ಶರಣರಿದ್ದ ಸಭೆಗೆ ಬರುತ್ತಾಳೆ. ಅವಳ ಬಗ್ಗೆ ಕಲ್ಯಾಣ ನಗರದಲ್ಲಿಯೂ ಶಿವಶರಣರ ವಲಯಗಳಲ್ಲಿಯೂ ಏನೇನೋ ಕತೆಗಳು, ಅವಳ ಬಗ್ಗೆ ಪ್ರಶಂಸೆ, ಕಟಕಿ, ವ್ಯಂಗ್ಯದ ಮಾತುಗಳು ಕೇಳಿ ಬಂದಿದ್ದುವು. ಅವಳ ಭಕ್ತಿಯ ಸಾಚಾತನದ ಬಗ್ಗೆ ಸಂಪೂರ್ಣ ಅರಿವಿದ್ದರೂ ಅವಳ ಊರಿನವನೇ ಆದ, ಮತ್ತು ತನ್ನ ಪ್ರಿಯೆ ಕಾಮಲತೆಯ ಸಾವಿನ ಬಳಿಕ ಆ ಪ್ರಣಯವನ್ನು ದೈವಭಕ್ತಿಯಾಗಿ ರೂಪಾಂತರಗೊಳಿಸಲು ಯತ್ನಿಸಿ ಯಶಸ್ವಿಯಾಗಿದ್ದ ಅಲ್ಲಮನೇ ಮುಂದಾಳಾಗಿ ನಿಂತು ತುಂಬಿದ ಸಭೆಯಲ್ಲಿ ಅವಳ ವಿವಾಹ, ಚನ್ನಮಲ್ಲಿಕಾರ್ಜುನನ ಬಗ್ಗೆ ಅವಳಿಗಿರುವ ನಿಷ್ಠೆ, ಅವಳ ದಿಗಂಬರತ್ವ ಇವುಗಳನ್ನು ಕುರಿತಾದ ಮಾರ್ಮಿಕ ಪ್ರಶ್ನೆಗಳನ್ನು ಹಾಕುತ್ತಾನೆ. ಆ ಪ್ರಶ್ನೆಗಳು ಸಭೆಯ ಜನತೆಗೆ ಅವಳ ಭಕ್ತಿಯ ನಿರ್ಭರತೆಯನ್ನು ಪ್ರಮಾಣ ಮಾಡಿ ತೋರಿಸುವ ಉದ್ದೇಶದವಾಗಿದ್ದುವು.

*ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ,*
*ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ ನಾನೊಲಿದೆನಯ್ಯ,*
*ಚನ್ನಮಲ್ಲಿಕಾರ್ಜುನ ಗಂಡನೆನಗೆ,*
*ಮಿಕ್ಕಿದ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ.*

ಗಂಡನನ್ನು ಬಿಟ್ಟು ಬಂದ ಅವಳ ಮೇಲೆ ಪ್ರಚಾರಗೊಂಡ ಆರೋಪಗಳೇನು ಎಂಬುದರ ಸುಳುಹು ಮೇಲಿನ ವಚನದಲ್ಲಿದೆ. ಅವಳ ಶೀಲದ ಬಗ್ಗೆಯೇ ಹಲವರಿಗೆ ಸಂಶಯ ಬಂದಿರಲೂ ಸಾಕು. ಅಲ್ಲಮನ ಪ್ರಶ್ನೆಗಳಿಗೆ ಸೂಕ್ತ ಉತ್ತರವನ್ನು ಮಹಾದೇವಿ ಕೊಟ್ಟು ತನ್ನದು ದೈವದ ಬಗ್ಗೆ ನಿಜವಾದ ನಿರ್ಭರ ಭಕ್ತಿ ಎಂಬುದನ್ನು ರುಜುವಾತು ಮಾಡಿ ತೋರಿಸುತ್ತಾಳೆ. ಎಲ್ಲರೂ ಅವಳ ಮಾತನ್ನು ಒಪ್ಪಿಕೊಳ್ಳುತ್ತಾರೆ - ಅಲ್ಲಮನಂತೂ ಹೊಸದಾಗಿ ಒಪ್ಪಿಕೊಳ್ಳುವ ಅಗತ್ಯವಿರಲಿಲ್ಲ.

ಕಲ್ಯಾಣದಲ್ಲಿ ಬಹುಕಾಲದ ಬಳಿಕ ಬಸವ ಮತ್ತು ಇತರ ಶರಣ ಶರಣೆಯರ ಆರೈಕೆಯಲ್ಲಿ ಅವಳು ಬಹುವಾದ ಶಾಂತಿ ಸಮಾಧಾನಗಳನ್ನು ಅನುಭವಿಸಿದಳು. ದೇಹಕ್ಕೂ ಮನಸ್ಸಿಗೂ ವಿಶ್ರಾಂತಿ ದೊರಕಿತ್ತು. ಅವಳು ಏರಿದ್ದ ಆಧ್ಯಾತ್ಮಿಕ ಔನ್ನತ್ಯದ ಬಗ್ಗೆ ಎಲ್ಲರಿಗೂ ಗೌರವ. ಕೊನೆಗೊಂದು ದಿನ ಅವಳು ಕಲ್ಯಾಣದಿಂದ ಶ್ರೀ ಶೈಲಕ್ಕೆ ಹೊರಡುವ ಕಾಲ ಬಂದಿತು. ಶರಣರೆಲ್ಲ ಸೇರಿ ಅವಳಿಗೆ ಚನ್ನಮಲ್ಲಿಕಾರ್ಜುನನ ಜೊತೆ ವಿದ್ಯುಕ್ತವಾಗಿ ಸಾಂಕೇತಿಕ ಮದುವೆಯನ್ನು ಮಾಡಿ, ಮಗಳನ್ನು ತೌರುಮನೆಯಿಂದ ಗಂಡನ ಮನೆಗೆ ಕಳಿಸುವ ರೀತಿಯಲ್ಲಿ ದುಃಖದಿಂದ ಕಳಿಸಿಕೊಟ್ಟಂತೆ ಊಹಿಸಲು ಅವಕಾಶಗಳಿವೆ. ಕೆಳಗಿನ ವಚನ ಈ ಹಿನ್ನೆಲೆಯಲ್ಲಿ ಗಮನಾರ್ಹ.

*ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ,*
*ಬೆಳೆದೆನು ಅಸಂಖ್ಯಾತರ ಕರುಣದೊಳಗೆ,*
*ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ.*
*ಇಂತಪ್ಪ ತ್ರಿವಿಧಾಮೃತವನು ದಣಿಯಲೆರೆದು ಸಲಹಿದರೆನ್ನ.*
*ವಿವಾಹವ ಮಾಡಿದಿರಿ, ಸಯವಪ್ಪ ಗಂಡಂಗೆ ಕೊಟ್ಟಿರಿ.*
*ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತ ರೆಲ್ಲರೂ ನೆರೆದು ಬಂದಿರಿ.*
*ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ.*
*ಚನ್ನಮಲ್ಲಿಕಾರ್ಜುನನ ಕೈವಿಡಿದು.*
*ನಿಮ್ಮ ತಲೆಗೆ ಹೂವ ತಹೆನಲ್ಲವೆ ಹುಲ್ಲ ತಾರೆನು.*
*ಅವಧರಿಸಿ ನಿಮ್ಮಡಿಗಳೆಲ್ಲರೂ ಮರಳಿ*
*ಬಿಜಯಂಗೈವುದು ಶರಣಾರ್ಥಿ.*

ಕಲ್ಯಾಣದಿಂದ ಅವಳು ಶ್ರೀಶೈಲಕ್ಕೆ ಹೋದಾಗ ಅವಳನ್ನು ಏನಾದರೂ ಮಾಡಿ ಮತ್ತೆ ಪಡೆಯಬೇಕೆಂಬ ಆಸೆಯಿಂದ ಕಸಪಯ್ಯನಾಯಕನು ಕಳ್ಳ ಸನ್ಯಾಸಿ ವೇಷದಲ್ಲಿ ಬಂದು ಅಲ್ಲಿಯ ಕಲ್ಲುಮಠದ ಹುಲ್ಲುಮಠದ ಸ್ವಾಮಿಗಳಿಗೆ ಲಂಚ ಕೊಟ್ಟು ಅವಳ ಮೇಲೆ ಪ್ರಭಾವ ಬೀರಲು ಯತ್ನಿಸುತ್ತಾನೆ.ಅವನು ಆ ಯತ್ನದಲ್ಲಿ ವಿಫಲನೂ ಆಗುತ್ತಾನೆ. (ಶ್ರೀ ಶೈಲದಲ್ಲಿ ಹುಲ್ಲುಮಠವಿದ್ದುದಕ್ಕೆ ಶಾಸನಾಧಾರವಿದೆ). ಮಹಾದೇವಿ ತನ್ನ ಹಲವು ವಚನಗಳಲ್ಲಿ ಶ್ರೀಶೈಲದಲ್ಲಿ ತನಗಾದ ಅನುಭವಗಳನ್ನು ಹೇಳಿಕೊಂಡಿದ್ದಾಳೆ. (ನೋಡಿ. "ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೇ ನೀವು ಕಾಣಿರೇ...''). ಅಲ್ಲಿನ ಕಾಡೆಲ್ಲಾ ಕಲ್ಪತರುವಾಗಿ ಗಿಡವೆಲ್ಲ ಮರುಜೇವಣಿ ಕಡ್ಡಿಯಾಗಿ ನೀರೆಲ್ಲ ಅಮೃತವಾಗಿ ಕಲ್ಲೆಲ್ಲ ಸ್ಪರ್ಶಶಿಲೆಯಾಗಿ ಕಾಣಿಸಿತು. ಅವಳಿಗೆ ಶ್ರೀಶೈಲದಲ್ಲಿ ಎಲ್ಲೆಲ್ಲೂ ಚೆನ್ನಮಲ್ಲಿಕಾಜುನನೇ ಕಾಣಿಸುತ್ತಿದ್ದ.

*ವನವೆಲ್ಲಾ ನೀನೆ, ವನದೊಳಗಣ ದೇವತರುವೆಲ್ಲಾ ನೀನೆ,*
*ತರುವಿನೊಳಗಾಡುವ ಖಗಮೃಗವೆಲ್ಲ ನೀನೆ.*

*ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೇಕೆ ಮುಖದೋರೆ?*

ಮಹಾದೇವಿ ಶ್ರೀಶೈಲದಲ್ಲಿ ಚನ್ನಮಲ್ಲಿಕಾರ್ಜುನ ದೇವಾಲಯದಲ್ಲಿ ದೇವರ ದರ್ಶನವನ್ನು ಮಾಡಿದ್ದಕ್ಕೆ ಆ ದೇವಾಲಯದ ಪ್ರಾಕಾರದ ಒಂದು ಶಿಲ್ಪ ಸಾಕ್ಷಿಯಾಗಿದೆ. ಸಂಪೂರ್ಣ ನಗ್ನಳಾದ ಹೆಣ್ಣೊಬ್ಬಳು ಬರುತ್ತಿದ್ದಾಳೆ, ಶಿವಲಿಂಗದಿಂದ ಕೈಯೊಂದು ಮೇಲೆದ್ದು ಅಭಯವನ್ನು ನೀಡುತ್ತಿದೆ. ಈ ಚಿತ್ರ[೯] ಮಹಾದೇವಿಯಕ್ಕನದೆಂಬಲ್ಲಿ ಅನುಮಾನವಿಲ್ಲ. ಅವಳು ತನ್ನ ಕೊನೆಯ ದಿನಗಳನ್ನು ಶ್ರೀಶೈಲದ ಕದಳಿವನದಲ್ಲಿ ಕಳೆಯುತ್ತಾಳೆ. ***("ಚನ್ನಮಲ್ಲಿಕಾರ್ಜುನಯ್ಯನ ನೆಚ್ಚಿನ ಗಿರಿಯ ಸುತ್ತಿ ನೋಡುತ್ತ ಬಂದು ಕದಳಿಯ ಬನವ ಕಂಡೆ ನಾನು").*** ಕದಳಿಗೆ ಹೋಗಲು ಮಹಾದೇವಿಗೆ ಕಲ್ಯಾಣದಲ್ಲಿ ಅಲ್ಲಮನಿಂದಲೇ ಸೂಚನೆ ಬಂದಿತ್ತು. 'ಕದಳಿ'ಯು ನಾಥ ಸಂಪ್ರದಾಯದಲ್ಲಿ ಯೌಗಿಕ ಅರ್ಥಗಳನ್ನು ಪಡೆದು ಕೊಂಡಿರುವ ಶಬ್ದ. ಅದು ದೇಹಕ್ಕೆ ಆತ್ಮಕ್ಕೆ ಯೋಗಸಾಧನೆಗೆ ಸಂಕೇತ. ಶ್ರೀಶೈಲದ ದುರ್ಗಮ ಕಣಿವೆಯೊಂದರ ಗುಹೆಗಳ ಪ್ರದೇಶವು ಯೋಗಿಗಳ ಸಾಧಕರ ಅನುಸಂಧಾನಕ್ಕೆ ಪ್ರಶಸ್ತ ಜಾಗವಾಗಿದ್ದು ಅಲ್ಲಿ 'ಕದಳಿ' ಹೆಸರಿಗೆ ಯಥೇಷ್ಟವಾಗಿ ಬಾಳೆಯ ಗಿಡಗಳು ಬೆಳೆದು ಯೋಗಿಗಳು ಅದನ್ನು ತಮ್ಮ ಸಾಧನೆಗೆ ಆರಿಸಿಕೊಂಡಿರಬಹುದು. ಮುಂದೆ ಅಲ್ಲಮನೂ ಅದೇ ಕದಳಿಗೆ ಹೋಗಿ ಕೊನೆಯ ದಿನಗಳನ್ನು ಗುಹೆಯನ್ನೂ ನೋಡಿಕೊಂಡು ಬರುತ್ತಾರೆ. ಅಲ್ಲೇ ಮಹಾದೇವಿ ತನ್ನ ಬದುಕಿನ ಸಾರ್ಥಕ್ಯವನ್ನು ಕಂಡದ್ದು. ಭಗವದ್ದರ್ಶನ ಅಲ್ಲಿ[೮]. ಅವಳಿಗೆ ಆಯಿತು. ***("ಕದಳಿಯ ಬನದಲ್ಲಿ ಭವಹರನ ಕಂಡೆನು. ಭವ ಗೆದ್ದು ಬಂದ ಮಗಳೆ ಎಂದು ಕರುಣದಿಂ ತೆಗೆದು ಬಿಗಿಯಪ್ಪಿದಡೆ ಚನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು").*** ದೈವಸಾಕ್ಷಾತ್ಕಾರ ವನ್ನು ಪಡೆದ ಆಕೆ ಅಲ್ಲೇ ತನ್ನ ಕೊನೆಯುಸಿರೆಳೆದಳು.[೧೦]

ಕ್ರಿ.ಶ. ೧೧೬೫ ರಲ್ಲಿ ಕಸಪಯ್ಯನು ತನ್ನ ಅಧಿಕಾರವನ್ನು ಕಳೆದುಕೊಂಡಂತೆ ತೋರುತ್ತದೆ. ಅವನ ಅಧಿಕಾರಾವಧಿ ಕ್ರಿ.ಶ. ೧೧೪೯-೬೫ ಎಂದು ಶಾಸನಗಳಿಂದ ತಿಳಿದು ಬರುವುದರಿಂದ ಅವನು ಸುಮಾರು ಕ್ರಿ.ಶ. ೧೧೬೧-೬೨ರ ಅವಧಿಯಲ್ಲಿ ಮಹಾದೇವಿಯನ್ನು ಒತ್ತಾಯದಿಂದ ಕೈ ಹಿಡಿದಿರಬಹುದು. ಮದುವೆಯ ಕಾಲಕ್ಕೆ ಅವಳಿಗೆ ವಯಸ್ಸು ಹದಿನಾರು ಅಥವಾ ಹದಿನೆಂಟು ಎಂದು ಭಾವಿಸಿದರೆ ಅವಳ ಜನನ ಸುಮಾರು ಕ್ರಿ.ಶ. ೧೧೪೪-೪೫ ಎಂದು ಊಹಿಸಬಹುದು. ಅವಳು ಶ್ರೀಶೈಲಕ್ಕೆ ಬಂದಾಗ ಅವಳಿನ್ನೂ ರೂಪವತಿಯಾಗಿದ್ದಳೆಂಬ ಕಾರಣಕ್ಕಾಗಿ ಕಸಪಯ್ಯನಾಯಕ ಅವಳನ್ನು ಹಿಂಬಾಲಿಸಿಕೊಂಡು ಅಲ್ಲಿಗೂ ಬರುತ್ತಾನೆ. ಆಗ ಅವಳಿಗೆ ೨೫ ವರ್ಷ ವಯಸ್ಸಾಗಿತ್ತು ಎಂದು ಭಾವಿಸುವುದಾದರೆ ಆ ಘಟನೆ ನಡೆದುದು ಸು. ಕ್ರಿ.ಶ. ೧೧೭೦ರಲ್ಲಿ. ೧೧೬೫ರಲ್ಲಿ ಪದವಿಯಿಂದ ಚ್ಯುತನಾದ ಕಸಪಯ್ಯ ನಾಯಕನು ಕ್ರಿ.ಶ. ೧೧೭೨ ರಲ್ಲಿ ರಾಜದ್ರೋಹದ ಆಪಾದನೆಯನ್ನು ಹೊತ್ತು ಹತನಾದಂತೆ ಕಾಣುತ್ತದೆ. ಅಕ್ಕಮಹಾದೇವಿ ಸುಮಾರು ೧೧೭೦ರಿಂದ ಈಚೆ ಕೆಲವು ವರ್ಷ ಬದುಕಿ ಅಲ್ಲೇ ಕೊನೆಯುಸಿರೆಳೆದಳೆಂದು ತೋರುತ್ತದೆ. ತೇದಿ ಬೇಕು ಎಂದು ಬಯಸುವವರಿಗಾಗಿ ಮಾತ್ರ ಈ ಊಹೆಯ ತೇದಿಗಳು, ಮತ್ತು ಇವು ನಿಜವಾದ ತೇದಿಗಳಿಗಿಂತ ಬಹುದೂರವೇನೂ ಆಗಿರಲಾರವು.

ಇಷ್ಟು ಸದ್ಯಕ್ಕೆ ಮಹಾದೇವಿಯಕ್ಕನ ಬದುಕಿನ ವಿಶ್ವಾಸಾರ್ಹವಾದ ಐತಿಹಾಸಿಕ ಪುನಾರಚನೆ. ತುಂಬಬೇಕಾದ ಜಾಗಗಳು, ಬಿಡಿಸಬೇಕಾದ ಸಮಸ್ಯೆಗಳು, ಕೇಳಬೇಕಾದ ಪ್ರಶ್ನೆಗಳು ಈ ಪುನಾರಚನೆಯಲ್ಲಿವೆ ಎಂಬ ಬಗ್ಗೆ ಅನುಮಾನವಿಲ್ಲ.

(ಸೌಜನ್ಯ : ಸ್ಥಾವರ ಜಂಗಮ)

೧. ಶಿ.ಶಿ. ಬಸವನಾಳ (ಸಂ.) : ಪ್ರಭುಲಿಂಗಲೀಲೆ, ಧಾರವಾಡ, ೧೯೫೬, ಪ್ರಸ್ತಾವನೆ ಪು. ೯

೨. Karnataka Inscriptions. VI Ed. B.R. Gopal, No. 48

೩. ಈಗ "ಭ್ರಮರಾಂಬೆ" ಎಂಬ ಹೆಸರಿದೆ.

೪. ವಿವರಗಳಿಗೆ, ನೋಡಿ - ಎಂ. ಚಿದಾನಂದಮೂರ್ತಿ : "ಮಹಾದೇವಿಯಕ್ಕನ ಹೆಸರಿನ ಬಗ್ಗೆ ಒಂದು ಸಾಧಾರ ಕಲ್ಪನೆ" (ಇದೇ ಸಂಪುಟದಲ್ಲಿನ ಲೇಖನ)

೫. ನೋಡಿ – 'ಅಕ್ಕಮಹಾದೇವಿಯ ಗಂಡ ಕೌಶಿಕನನ್ನು ಇತಿಹಾಸದಲ್ಲಿ ಗುರುತಿಸುವ ಒಂದು ಪ್ರಯತ್ನ

೬. "ಅಯ್ಯಾ, ನಿಮ್ಮ ಶರಣರ ಬರವಿಂಗೆ ಗುಡಿ ತೋರಣವ ಕಟ್ಟುವೆ: ಅಯ್ಯಾ, ನಿಮ್ಮ ಶರಣರ ಬರವಿಂಗೆ ಮುಡುಹಿನಲ್ಲಿ ಪಟ್ಟವ ಕಟ್ಟುವೆ: ಅಯ್ಯಾ, ನಿಮ್ಮ ಶರಣರೆನ್ನ ಮನೆಗೆ ಬಂದಡೆ ಅವರ ಶ್ರೀಪಾದವನ್ನೆ ಹೃದಯದಲ್ಲಿ ಬಗಿದಿಟ್ಟುಕೊಂಬೆ ಕಾಣಾ ಚನ್ನಮಲ್ಲಿಕಾರ್ಜುನಾ";

೭. (ಸಂ) ಎಚ್. ದೇವೀರಪ್ಪ : ಉಡುತಡಿಯ ಮಹಾದೇವಿಯರ ರಗಳೆ. ಶಿವಕುಮಾರ ಪ್ರಕಾಶನ, ಬೆಂಗಳೂರು, ಪೀಠಿಕೆ. ಪು. xxxvi.

೮. ವಿವರಗಳಿಗೆ ನೋಡಿ – ಎಂ. ಚಿದಾನಂದಮೂರ್ತಿ : ಶೂನ್ಯ ಸಂಪಾದನೆಯನ್ನು ಕುರಿತು, ಮೈಸೂರು. ೧೯೬೨. ಪು. ೯೪-೭. ಇದೀ ಪ್ರಸಂಗ ಮಹಾದೇವಿಯ ಸಂಯಮದ ಸಂಕೇತ ಮಾತ್ರ: ಸ್ವಲ್ಪ ಉತ್ಪ್ರೇಕ್ಷಿತವಾಗಿ ಚಿತ್ರಣಗೊಂಡಿದೆ, ಅಷ್ಟೇ.

೯. ಬಿ.ಶಿ. ಜವಳಿಯವರ "ಮಹಾದೇವಿಯಕ್ಕನವರ ಸಾಹಿತ್ಯ" ಕೃತಿಯ ಆರಂಭದಲ್ಲಿ ಈ ಚಿತ್ರ ಪ್ರಕಟವಾಗಿದೆ.

೧೦. ಶ್ರೀ ಶೈಲದ ಕದಳಿವನದ ಗುಹೆಯಲ್ಲಿ ಶಿಲ್ಪಗಳಿರುವುದು. ಅದು ಯೋಗಿಗಳ ಸಾಧನ ಭೂಮಿಯಾಗಿತ್ತೆಂಬುದನ್ನು ದೃಢಪಡಿಸುತ್ತವೆ.

# ಅಂಗಮುದ್ರೆಯ ಮತ್ತು ಇತರೆ ಮೇರೆ ಕಲ್ಲುಗಳು

– ಸಿ.ಟಿ.ಯಂ. ಕೊಟ್ರಯ್ಯ *

**ಪೂರ್ವದ** ಇತಿಹಾಸ ಕಾಲದಲ್ಲಿ, ಒಂದು ರಾಜ್ಯ, ಪ್ರಾಂತ, ವಲಯ, ನಗರ, ಊರು, ಗ್ರಾಮಗಳಿಗೆ ಸಂಬಂಧಿಸಿದ ಎಲ್ಲೆ ಅಥವಾ ಗಡಿಗಳ ಪರಿಮಿತಿಗಳನ್ನು ಮತ್ತು ಮಠ, ಮಂದಿರ, ಮಾನ್ಯ ಹಾಗೂ ವ್ಯಕ್ತಿಗಳ ಸ್ವತ್ತುಗಳಿಗೆ ಸಂಬಂಧಿಸಿದ ಮೇರೆಗಳನ್ನು ಗುರುತಿಸಬೇಕಾಗಿ ಬಂದ ಸಂದರ್ಭಗಳಲ್ಲಿ, ಪ್ರಸಕ್ತ ಸಮಯ ಮತ್ತು ಸ್ಥಳಗಳಲ್ಲಿಯೇ ಲಭ್ಯವಿರುತ್ತಿದ್ದ ಸ್ವಾಭಾವಿಕ ಹಾಗೂ ನೈಸರ್ಗಿಕ ಕುರುಹುಗಳ ಸಹಾಯದಿಂದ ಗುರುತಿಸಿ ಹೇಳಲಾಗುತ್ತಿತ್ತು. ಆ ವಿವರಗಳನ್ನು ದಾಖಲಿಸ ಬೇಕಾದ ಪ್ರಸಂಗಗಳಲ್ಲಿ ಹಾಗೆಯೇ ನಮೂದಿಸಲಾಗುತ್ತಿತ್ತು. ಎಂದರೆ ಲಭ್ಯವಿರುತ್ತಿದ್ದ ಬೆಟ್ಟ, ಗುಡ್ಡ, ನದಿ, ತೊರೆ, ಕೆರೆ, ಬಂಡೆಗಳು, ಮುಂತಾದವುಗಳನ್ನು ಗುರುತಿಸಿಕೊಂಡು ಬಳಸಿಕೊಳ್ಳಲಾಗುತ್ತಿತ್ತು. ಈ ವಿಷಯವನ್ನು ವಿವರಿಸಿ ದೃಢಪಡಿಸುವ ಪ್ರಾಚೀನ ಆಧಾರ ಗ್ರಂಥಗಳೆಂದರೆ, ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಅರ್ಥಶಾಸ್ತ್ರ ಮುಂತಾದವುಗಳು. ಅವುಗಳಲ್ಲದೆ, ಹಲವು ಪ್ರಾಚೀನ ಶಾಸನಗಳಲ್ಲೂ ಆ ನಿಯಮಾವಳಿಗಳನ್ನು ಕುರಿತಾದ ವಿವರಣೆಗಳನ್ನು ನೋಡಬಹುದಾಗಿದೆ. ಆ ಪದ್ಧತಿಯು ಆ ಕಾಲಕ್ಕೆ ಸೂಕ್ತವಾಗಿದ್ದುದಲ್ಲದೆ, ವಾಸ್ತವ ವ್ಯಾವಹಾರಿಕತೆಗೆ ಹೊಂದಿಕೊಳ್ಳುವುದಾಗಿತ್ತು. ಏಕೆಂದರೆ ಮುಖ್ಯವಾಗಿ ಆ ಕಾಲಮಾನದಲ್ಲಿ ಜನಸಂಖ್ಯೆಯ ಪ್ರಮಾಣ ಹಾಗೂ ಅದರ ಅವಶ್ಯಕತೆಗಳು ಮಿತವಾಗಿದ್ದುದಲ್ಲದೆ, ಲಭ್ಯವಿದ್ದ ನೈಸರ್ಗಿಕ ಸಂಪನ್ಮೂಲಗಳು ಹೇರಳವಾಗಿದ್ದುವು. ಹಾಗಾಗಿ ಮೇಲಿನ ವ್ಯವಸ್ಥೆಯು ಪರಿಣಾಮಕಾರಿಯಾಗಿ ಕಾರ್ಯಪ್ರವೃತ್ತಿ ಯಾಗಿತ್ತು. ಆದರೆ ಕಾಲಾಂತರದಲ್ಲಿ, ಮುಖ್ಯವಾಗಿ ಜನಸಂಖ್ಯೆಯ ಬೆಳವಣಿಗೆಯ ಪರಿಣಾಮವಾಗಿ, ಅದರಲ್ಲೂ ನಮ್ಮ ದೇಶಕ್ಕೆ ಅನ್ಯಮತೀಯರ ಆಗಮನದಿಂದಾಗಿ, ಆ ವ್ಯವಸ್ಥೆಯಲ್ಲಿ ನ್ಯೂನತೆಗಳು ಉಂಟಾದುದಲ್ಲದೇ, ಸಂಕಲ್ಪಿತ ಉದ್ದೇಶಗಳನ್ನು ಪೂರೈಸುವಲ್ಲಿ, ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ವಿಫಲವಾದುವು. ಬಹುಶಃ ಅದನ್ನು ಸರಿಪಡಿಸುವ ಕಾರಣದಿಂದ, ಇತಿಹಾಸದ ಮಧ್ಯಯುಗದಲ್ಲಿ ಇಂತಹ ಸೀಮಾ ನಿರ್ಣಯಗಳ ಸಂದರ್ಭಗಳಲ್ಲಿ ಮಾನವನಿಂದ ನಿರ್ಮಿಸಲ್ಪಟ್ಟ ಹಾಗೂ ಕೆಲವೊಂದು ವಿಶಿಷ್ಟ ಮತ್ತು ನಿರ್ದಿಷ್ಟ ಚಿಹ್ನೆಗಳಿಂದ ಕೂಡಿದ ಸೀಮೆಯ ಕಲ್ಲುಗಳು ಅಥವಾ ಮೇರೆಯ ಕಲ್ಲುಗಳು ಬಳಕೆಯಲ್ಲಿ ಬರಬೇಕಾಯಿತು. ಆ ಮೇರೆಯ ಕಲ್ಲುಗಳಾದರೋ ವೈವಿಧ್ಯತೆಗಳಿಂದ ಕೂಡಿದ್ದು ಎಲ್ಲೆಡೆಯೂ ಕಾಣಬರುತ್ತದೆ. ಅವುಗಳ ವಿವರಣೆಗಳನ್ನು ಓದುಗರ ಅವಗಾಹನೆಗೆ ತರುವುದೇ ಪ್ರಸಕ್ತ ಲೇಖನದ ಉದ್ದೇಶ.

### ಮೇರೆಯ ಕಲ್ಲುಗಳು

ಈ ಮಾನವ ನಿರ್ಮಿತ ಸೀಮಾ ನಿರ್ಣಾಯಕ ಕಲ್ಲುಗಳಿಗೆ ಸಾಮಾನ್ಯ ಹೆಸರುಗಳೋ ಹಲವು. ದೇಶಿಯ ಭಾಷೆಗಳಲ್ಲಿ ಅವುಗಳನ್ನು ಎಲ್ಲೆಗಲ್ಲು, ಮೇರೆಗಲ್ಲು, ಸೀಮೆಗಲ್ಲು, ಶಿಲಾ ಚಿಹ್ನಾಲು, ಚತುಃಕೋಣಶಿಲ, ಶಿಲಾಸ್ತಂಭ ಮುಂತಾಗಿ ಕರೆಯಲಾಗುತ್ತಿದ್ದಿತೆಂಬುದು ಶಿಲಾಶಾಸನಗಳಿಂದ ತಿಳಿಯುತ್ತದೆ. ಅಲ್ಲದೆ ಆ ಹೆಸರುಗಳೆಲ್ಲಾ ಸೀಮೆ ಅಥವಾ ಮೇರೆಗಳನ್ನು ಗುರುತಿಸುವಲ್ಲಿ ಉಪಯೋಗದಲ್ಲಿದ್ದ ಕಲ್ಲು ಗಳೆಂಬುದು ಅವುಗಳ ಶಬ್ದಾರ್ಥಗಳಿಂದಲೇ ವೇದ್ಯವಾಗುತ್ತ ದೆಯಲ್ಲದೆ ಆ ಪದಗಳನ್ನು ಉಪಯೋಗಿಸಿರುವ ಸಂದರ್ಭಗಳೂ ಸಹ ಆ ವಿಷಯಗಳನ್ನು ಸ್ಥಿರಪಡಿಸುತ್ತವೆ. ಉದಾಹರಣೆಗೆ, ಪಶ್ಚಿಮ ಚಾಲುಕ್ಯ ವಂಶದ ಅರಸನಾದ ಮೊದಲನೆಯ ಸೋಮೇಶ್ವರನ ಆಡಳಿತ ಕಾಲದಲ್ಲಿ (ಕ್ರಿ.ಶ. ೧೦೪೯ ಡಿಸೆಂಬರ್ ೨೪ನೆಯ ತಾರೀಖು) ಸಂಸ್ಕೃತ ಭಾಷೆಯಲ್ಲಿ ಹೊರಡಿಸಲಾದ ಒಂದು ಶಿಲಾಶಾಸನವು ಮೇರೆಯ ಕಲ್ಲುಗಳ ಬಗ್ಗೆ ಈ ಕೆಳಗಿನಂತೆ ಹೇಳುತ್ತದೆ.

*..... ಮಾರ ಪಿಂಘ ಪ್ರಭೂನಾಂ ದತ್ತೈಭ್ಯೂಮಿ*
*ಪ್ರದಾನ ತದಪಿಚ ಧರಣೀನಾಂ ಚತುಸ್ಸೀಮಾ ವಾಪ್ಯಾಂ ॥*
*ಹಾಟಕೇಶ್ವರ ಭೂಮಿನಾಂ ಪಶ್ಚಿಮ.... ಮಾರ್ಗೇಯಂ*

* ೩೪೦, ಎಂ. ಬ್ಲಾಕ್, ಕುವೆಂಪುನಗರ, ಮೈಸೂರು–೦೨೩

*ಶೀಲಾಸ್ತಂಭ (:) ಸುಶೋಭಿತಂ... ತತ್ಸ್ಥಾನರ್ ಶಿಲಾ ಸ್ತಂಭಃ ಸುಸ್ಥಿರಾಚಂದ್ರ ತಾರಕಂ....*

– ಎಂದರೆ, ಮಾರಸಿಂಘನೆಂಬ ಅಧಿಕಾರಿಯು ಹಾಟಕೇಶ್ವರ ದೇವರಿಗೆ ದಾನವಾಗಿ ಕೊಟ್ಟ ಭೂಮಿಯ ನಾಲ್ಕು ಸೀಮೆಗಳಿಗೆ, ಶಿಲಾಸ್ತಂಭಗಳು ಸೀಮೆ ಅಥವಾ ಮೇರೆಯ ಕಲ್ಲುಗಳಾಗಿ ಶೋಭಿಸುತ್ತಿದ್ದುವು. ಮತ್ತು ಆ ಶಿಲಾಸ್ತಂಭಗಳು ಚಂದ್ರ ಸೂರ್ಯ ಪರ್ಯಂತ ಸ್ಥಿರವಾಗಿರಬೇಕೆಂದು ಸಹಾ ನಿರ್ದೇಶಿಸಲಾಗಿದೆ. ಅದೇ ರೀತಿಯಾಗಿ ವಿಜಯನಗರದ ಎರಡನೆಯ ಹರಿಹರನ ಕಾಲದ ಕನ್ನಡ ಶಾಸನವೊಂದು (ಕ್ರಿ.ಶ. ೧೩೭೬), ಅಗ್ರಹಾರವೊಂದನ್ನು ದಾನವಾಗಿ ಕೊಟ್ಟ ನಂತರ, ಚತುಸ್ಸೀಮಾನಿರ್ಣಯದ ಸಂದರ್ಭದಲ್ಲಿ **'ಆಲದಮರ ಆ ಸಮೀಪದಲ್ಲಿ ಸೀಮೆಕಲ್ಲು.... ಆ ಒತ್ತಿನಲ್ಲಿ ಸೀಮೆಕಲ್ಲು'** ಎಂದು ಮುಂತಾಗಿ ತಿಳಿಸುತ್ತದೆ.

ನಂತರ ಕ್ರಿ.ಶ. ೧೫೭೭ ರಲ್ಲಿ ಆರವೀಟಿ ವಂಶದ ರಾಜನಾದ ಶ್ರೀ ವೀರರಂಗರಾಯ ದೇವರಾಯ ಮಹಾರಾಯನು ರಾಜ್ಯಭಾರ ಮಾಡುತ್ತಿದ್ದ ಸಮಯದಲ್ಲಿ ತೆಲುಗು ಭಾಷೆಯಲ್ಲಿ ಹೊರಡಿಸಲಾದ ಶಿಲಾಶಾಸನವು, ಗೊರಿಜವೋಲು ಎಂಬ ಗ್ರಾಮವನ್ನು ವಿರೂಪಾಕ್ಷನಿಗೆ ಅಗ್ರಹಾರವಾಗಿ ದಾನಕೊಡುತ್ತಾ, ಆ ಗ್ರಾಮಕ್ಕೆ ಎಂಟು ದಿಕ್ಕಿನಲ್ಲೂ ಶಿಲಾಚಿಹ್ನೆಗಳನ್ನು ಏರ್ಪಡಿಸಲಾಗಿದ್ದ ವಿವರಣೆಗಳನ್ನು ಕೊಡುತ್ತದೆ.

ಹೀಗೆ ಸಾಮಾನ್ಯ ಹೆಸರುಗಳು ಹಲವು ಬಗೆಯಾಗಿ ಬಳಕೆಯಲ್ಲಿದ್ದುದು, ಶಿಲಾಶಾಸನಗಳ ಅಭ್ಯಾಸದಿಂದ ತಿಳಿಯುತ್ತದೆ. ಇನ್ನು ಕೆಲವು ಕಡೆ ಅವುಗಳಿಗೆ ಮುದ್ರೆ ಕಲ್ಲುಗಳೆಂದು ತಿಳಿಸಲಾಗಿದೆ. ಅಂದರೆ, ಈ ಮಾನವ ನಿರ್ಮಿತ ಕಲ್ಲುಗಳ ಮೇಲೆ ಕೆಲವೊಂದು ಧರ್ಮದ ಮುದ್ರೆ ಅಥವಾ ಚಿಹ್ನೆಗಳನ್ನು ಕಂಡರಿಸಲಾಗಿದ್ದರೂ ಅವುಗಳನ್ನು ಹಾಗೆಂದು ಹೆಸರಿಸದೆ ಸಂಕ್ಷಿಪ್ತವಾಗಿ ಮುದ್ರೆ ಕಲ್ಲುಗಳೆಂದು ಸಾಮಾನ್ಯ ಹೆಸರುಗಳಿಂದ ಕರೆಯುವುದು ಈಗಲೂ ರೂಢಿಯಲ್ಲಿದೆ. ಬಹುಶಃ ಮೇಲೆ ಕಾಣಿಸಿದ ಹೆಸರುಗಳೆಲ್ಲವೂ ಸಹ ಹಾಗೆ ಸಂಕ್ಷಿಪ್ತಗೊಳಿಸಿದವುಗಳಾಗಿರಲೂ ಸಾಕು.

ಇನ್ನು, ಈ ಮೇರೆಯ ಕಲ್ಲುಗಳ ಮೇಲೆ ಕಾಣ ಬರುವ ಧಾರ್ಮಿಕ ಮುದ್ರೆಗಳು ಅಥವಾ ಚಿಹ್ನೆಗಳ ಆಧಾರದ ಮೇಲೆ ನಮಗೆ ದೊರೆಯುವ ಹೆಸರುಗಳೂ ಬಹು ವಿಧ. ಮಧ್ಯಯುಗದಲ್ಲಿ ಶೈವ, ವೈಷ್ಣವ ಮತ್ತು ಜೈನ ಧರ್ಮಗಳು ಹೆಚ್ಚು ಪ್ರಚಾರದಲ್ಲಿ ಮತ್ತು ಜನಾದರಣೀಯವಾಗಿದ್ದ ವಿಷಯವು ಸರ್ವ ವಿದಿತ. ಈ ಧರ್ಮಗಳ ಚಿಹ್ನೆಗಳಿಂದ ಕೂಡಿದ ಮೇರೆಯ ಕಲ್ಲುಗಳನ್ನು ನಿರ್ಮಿಸಿ ಸೀಮಾ ನಿರ್ಣಯಕ್ಕಾಗಿ ಬಳಸಲಾಗುತ್ತಿತ್ತು. ಈ ವಿಷಯವು ಸಹ ಶಾಸನಗಳಿಂದ ತಿಳಿದು ಬರುತ್ತದೆ. ಅವುಗಳ ವಿವರಣೆಗಳೇ ಮುಂದಿನ ವಿಷಯ.

**ತ್ರಿಶೂಲದ ಕಲ್ಲು**

ಈಗ ಶೈವ ಧರ್ಮದ ಮುದ್ರೆಗಳನ್ನು ಹೊಂದಿದ್ದ ಮೇರೆಗಲ್ಲುಗಳ ಬಗ್ಗೆ ವಿವೇಚಿಸುವ. ಮೊದಲಿಗೆ ತ್ರಿಶೂಲದ ಕಲ್ಲು ಎಂಬುದು, ಹೆಸರೇ ಸೂಚಿಸುವಂತೆ ಆ ಮೇರೆಗಲ್ಲಿನ ಮೇಲೆ, ಶಿವನ ಆಯುಧಗಳಲ್ಲೊಂದಾದ ತ್ರಿಶೂಲವನ್ನು ಕಡೆದಿರುತ್ತಿದ್ದಿರಬೇಕು (sculptured) ಅಥವಾ ಕೊರೆಯಲಾಗಿರುತ್ತಿದ್ದಿರಬೇಕು (engraved). ಇದೇ ಅರ್ಥವನ್ನು ಕೊಡುವ ಕೆಲವೊಂದು ಪ್ರಭೇದಗಳೂ ಕಾಣಬರುತ್ತವೆ. ಉದಾಹರಣೆಗೆ, 'ತ್ರಿಶೂಲಾಂಕಿತ ಪಾಷಾಣ' ಎಂಬ ಪದ ಪ್ರಯೋಗವು ಅರಸ ಹರಿಹರರಾಯನ ಕಾಲದ ಶಾಸನವೊಂದರಲ್ಲಿ ಕಾಣಬರುತ್ತದೆ. ತಮಿಳುನಾಡಿನ ಪುದುಕೋಟೆಯ ಶಾಸನವೊಂದರಲ್ಲಿ ತಮಿಳು ಪದವನ್ನು ಉಪಯೋಗಿಸಿ, ಇಂತಹವುದೇ ಮೇರೆಯ ಕಲ್ಲಿಗೆ ತಿರುಚುಳಿಕ್ಕಲ್ ಎಂದು ತಿಳಿಸಲಾಗಿದೆ. ತ್ರಿಸಂಧಿಕಲ್ಲು, ತ್ರಿಕೂಟದ ಮೂರು ಕಲ್ಲು, ತ್ರಿಶೂಲಾಂಕಿತ ಪಾಷಾಣ, ತಿರುಚುಳಿಕ್ಕಲ್, ತ್ರಿಸಂಧಿಕಲ್ಲು, ತ್ರಿಕೂಟಕಲ್ಲು, ತ್ರಿಕೋಣದ ಮೂರು ಕಲ್ಲು – ಈ ಎಲ್ಲ ಪದಗಳೂ ಲಿಂಗ ಮುದ್ರೆಯ ಕಲ್ಲುಗಳಿಗೆ ಕರೆಯಲಾಗುತ್ತಿದ್ದ ಬೇರೆ ಬೇರೆ ಹೆಸರುಗಳೆಂದು ಒಂದು ಕಡೆ ತಿಳಿದು ಬರುತ್ತವೆ. ಈ ವಿಷಯವನ್ನು ದೃಢಪಡಿಸುವಲ್ಲಿ ಕೊಳ್ಳೆಗಾಲ ತಾಲ್ಲೂಕಿನ ತಗರಾಪುರ ಗ್ರಾಮದಲ್ಲಿ ದೊರೆತ ಶಾಸನದ ಪಾಠವು ಸಹಾಯವಾಗುತ್ತದೆ.

'......ರಾಯರ (ವಿಜಯನಗರದ ಕೃಷ್ಣರಾಯ) ನಿರೂಪದಿಂ.... ಸಾಳುವ ಗೋವಿಂದ ರಾಜಗಳು... ಸೋಮಯ್ಯ ದೇವವೊಡೆಯರಿಗೆ ದಾನಾರ್ಥವಾಗಿ ಶಿಲಾ ಸ್ಥಾಪನವ ಮಾಡಿಕೊಟ್ಟ ತಗವೂರು ಗ್ರಾಮದ ಚತುಸ್ಸೀಮೆಯ ವಿವರ. ಮೂಡಲು ಕುಂತೂರ ಚಿಲಕವಾಡಿಯ ತಗವೂರ ತ್ರಿಸಂಧಿಕಲ್ಲು ೧, ಪುರದ ಚಿಲಕವಾಡಿಯ ತ್ರಿಸಂಧಿಕಲ್ಲು ೧, ವೊಳೆಗೆರೆಯ ಕೇತದೇವರಕಲ್ಲು ೧, ಬಾಲಿಹಳ್ಳಿಯ ಕಟ್ಟೆಯ

ಕಲ್ಲು ೧, ಬೋಗೆ ಕೆರೆಯ ಮೂಡಣ ಕೆರೆಯ ಕಲ್ಲು ೧, ಕೆಂಗಡೂರ ಕೊಮ್ಮಂಗೆರೆಯ ಹಳ್ಳದ ಕಲ್ಲು ೧, ಬೊಗೆ ಕೆರೆಯ ಮೂಡಣ ಕೆರೆಯ ಕಲ್ಲು ೧, ಕೆಂಗದೂರ ಮೂಲಂಗ್ಗಿಯ ತಗವೂರ ತ್ರಿಸಂಧಿ ಕಲ್ಲು ೧, ಕುಂತೂರ ಗುಡ್ಡದ ಹುಟ್ಟು ಕಲ್ಲು ೧, ಇಂತಿ ಅಷ್ಟ ದಿಕ್ಕಿನೊಳಗಣ ಮೂವತ್ತಯ್ದು ಲಿಂಗಮುದ್ರೆಯ ಕಲ್ಲೊಳಗಾದ ತಗವೂರ ಗ್ರಾಮದ... ಮಾಡಿದ ಧರ್ಮ ಸಾಧನ.

ಅಂದರೆ, ದಾನವಾಗಿ ಕೊಡಲ್ಪಟ್ಟ ತಗವೂರು ಗ್ರಾಮಕ್ಕೆ ಮೇರೆಗಳನ್ನು ಸೂಚಿಸುವ ಸಂದರ್ಭದಲ್ಲಿ ತ್ರಿಸಂಧಿಕಲ್ಲು ಎಂಬ ಪದವನ್ನು ಮೂರು ಬಾರಿಯು, ಇತರ ಕಲ್ಲುಗಳನ್ನೂ ಸಹ ಹೆಸರಿಸಿದ ನಂತರ, ಒಟ್ಟಿನಲ್ಲಿ ಎಂಟು ದಿಕ್ಕುಗಳಲ್ಲಿ ಮೂವತ್ತೈದು ಲಿಂಗಮುದ್ರೆಯ ಕಲ್ಲುಗಳನ್ನು ಬಳಸಲಾಗಿದ್ದಿತೆಂದು ಹೇಳುತ್ತದೆ. ಹೀಗಾಗಿ ತ್ರಿಸಂಧಿಕಲ್ಲು ಎಂಬುದು ಸಹ ಲಿಂಗ ಮುದ್ರೆಯ ಕಲ್ಲಿಗೆ ಇದ್ದ ಇನ್ನೊಂದು ಹೆಸರು ಎಂದು ಪರಿಗಣಿಸಬೇಕಾಗುತ್ತದೆ.

**ಲಿಂಗಮುದ್ರೆಯ ಕಲ್ಲುಗಳು**

ಇವು ಸಾಮಾನ್ಯವಾಗಿ ಪ್ರಚಲಿತದಲ್ಲಿರುವ ಮೇರೆಯ ಕಲ್ಲುಗಳು. ಈ ಲಿಂಗ ಮುದ್ರೆಯ ಕಲ್ಲುಗಳ ಮುಖವೊಂದರ ಮೇಲ್ಭಾಗದಲ್ಲಿ ಕಾಣಬರುವ ಚಿಹ್ನೆಗಳೆಂದರೆ: ಶಿವಲಿಂಗ, ಅದರ ಎದುರಿಗೆ ಅಥವಾ ಕೆಳಗೆ ನಂದಿ, ಶಿವಲಿಂಗದ ಒಂದು ಪಕ್ಕದಲ್ಲಿ ತ್ರಿಶೂಲ ಮತ್ತೊಂದು ಪಕ್ಕದಲ್ಲಿ ಡಮರು, ನಂತರ ಸೂರ್ಯ ಮತ್ತು ಚಂದ್ರ. ಈ ಚಿಹ್ನೆಗಳು ಕೆಲವು ಬಾರಿ ಉಬ್ಬು ಕೆತ್ತನೆ (bas-relief)ಯಿಂದಾಗಿ ರೂಪಗೊಂಡಿರುತ್ತಿದ್ದರೆ, ಇನ್ನು ಕೆಲವೆಡೆ, ರೇಖಾವಿನ್ಯಾಸ (line carving)ಗಳಾಗಿರುತ್ತಿದ್ದವು.

ಕೆಲವು ಸಂದರ್ಭಗಳಲ್ಲಿ ಲಿಂಗಮುದ್ರೆಯ ಕಲ್ಲುಗಳ ನ್ನೊಳಗೊಂಡ ಮೇರೆಯ ಕಲ್ಲುಗಳ ಮೇಲೆ, ಕೆಲವು ಅಕ್ಷರಗಳನ್ನು ಸಹ ಬರೆಯುವ ಪದ್ಧತಿ ಇದ್ದುದಾಗಿ ತಿಳಿ ಯುತ್ತದೆ. ಈಗ ಹಂಪೆಯ ಪುರಾತತ್ವ ಸಂಗ್ರಹಾಲಯದಲ್ಲಿ ಒಂದು ಲಿಂಗ ಮುದ್ರೆಯ ಕಲ್ಲಿದೆ. ಇದು ಸುಮಾರು ಆರು ಅಡಿ ಎತ್ತರದ, ಚೌಕಾಕಾರದ ಸ್ತಂಭವಾಗಿದ್ದು, ಅದರ ಒಂದು ಪಾರ್ಶ್ವದ ಮೇಲೆ ಉಬ್ಬು-ಕೆತ್ತನೆಯಲ್ಲಿ ಚಿಹ್ನೆಗಳನ್ನು ಕಡೆಯಲಾಗಿದೆ. ಮಧ್ಯದಲ್ಲಿ ಶಿವಲಿಂಗವಿದೆ. ಸೂರ್ಯ ಮತ್ತು ಡಮರು ಎಡಭಾಗದಲ್ಲಿದ್ದರೆ ಮತ್ತು ತ್ರಿಶೂಲಗಳನ್ನು ಬಲ ಭಾಗದಲ್ಲಿ ಕಾಣಿಸಲಾಗಿದೆ. ಶಿವಲಿಂಗದ ಕೆಳಗೆ ಮಾಮೂಲು ಭಂಗಿಯಲ್ಲಿ ಮಲಗಿರುವ (Couchant) ನಂದಿಯನ್ನು ಕಾಣಬಹುದು. ಇವೆಲ್ಲವುಗಳ ಕೆಳಗೆ, ಹಳೆಗನ್ನಡ ಅಕ್ಷರಗಳಲ್ಲಿ:

೧. ಶ್ರೀ ವೀರು
೨. ಪಾಕ್ಷಾ

ಎಂದು ಕೊರೆಯಲಾಗಿದೆ. ಬಹುಶಃ ಇಲ್ಲಿ ಕಡೆಯಲಾಗಿರುವ ಶಿವಲಿಂಗವು ಶ್ರೀ ವಿರೂಪಾಕ್ಷನನ್ನು ಪ್ರತಿನಿಧಿಸುವಂತಹು ದಾಗಿರಬೇಕು. ಇಲ್ಲವೆ ಈ ಒಂದು ಮೇರೆಯ ಕಲ್ಲು, ಹಂಪೆಯ ಶ್ರೀ ವಿರೂಪಾಕ್ಷ ದೇವರಿಗೆ ಕೊಟ್ಟಂತಹ ಭೂಮಿಗೆ ಸಂಬಂಧಿಸಿದ ಲಿಂಗ ಲಾಂಛನಗಳನ್ನೊಳಗೊಂಡ ಮೇರೆಯ ಕಲ್ಲಾಗಿದ್ದಿರಬೇಕು.

ಇದೇ ಸಂಗ್ರಹಾಲಯದಲ್ಲಿ ಇನ್ನೊಂದು ಲಿಂಗ ಮುದ್ರೆಯ ಕಲ್ಲು ಇದೆ. ಇಲ್ಲಿ ಎಲ್ಲಾ ಚಿಹ್ನೆಗಳನ್ನು ರೇಖಾ ವಿನ್ಯಾಸದಲ್ಲಿ ತೋರಿಸಲಾಗಿದೆ. ಇಲ್ಲಿ ಶಿವಲಿಂಗವು ಎಡಗಡೆ ಮತ್ತು ಅದರ ಎದುರಿಗೆ ಮಲಗಿರುವ ನಂದಿಗಳಿದ್ದರೆ, ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರರನ್ನು ಕೊರೆಯಲಾಗಿದೆ (ಇಲ್ಲಿ ಡಮರುವಾಗಲೀ, ತ್ರಿಶೂಲವಾಗಲೀ ಇರುವುದಿಲ್ಲ). ಈ ಚಿಹ್ನೆಗಳ ಕೆಳಗೆ ಎರಡು ಸಾಲುಗಳಲ್ಲಿ '**ಶ್ರೀ ಸಿಂಗೇಶ್ವರನ ಮಟ**' ಎಂದು ಉಳಿಯಿಂದ ಬರೆಯಲಾಗಿದೆ. ಅಂದರೆ ಈ ಲಿಂಗಮುದ್ರೆಯ ಕಲ್ಲು ಶ್ರೀ ಶೃಂಗೇಶ್ವರ ಮಠ ಅಥವಾ ಭೂಮಿಯನ್ನು ನಿರ್ದೇಶಿಸಲು ಉಪಯೋಗಿ ಸಲ್ಪಟ್ಟಂಥಾ ಮೇರೆಯ ಕಲ್ಲುಗಳಲ್ಲೊಂದಾಗಿರ ಬೇಕು.

ಇನ್ನು ಈ ರೀತಿಯ ಲಿಂಗಮುದ್ರೆಯ ಕಲ್ಲುಗಳನ್ನು ಮೇರೆ ಕಲ್ಲುಗಳನ್ನಾಗಿ ಉಪಯೋಗಿಸುತ್ತಿದ್ದರೆಂಬುದನ್ನು ಖಚಿತ ಪಡಿಸುವುದಕ್ಕಾಗಿ ಕೆಳಗಿನ ಶಾಸನಾಧಾರಗಳನ್ನು ಉದ್ಧರಿಸಬಹುದು. ಮುಂಡರಗಿ ತಾಲ್ಲೂಕಿನ ಮೇವುಂಡಿ ಗ್ರಾಮದಲ್ಲಿ ದೊರೆತಿರುವ ಹೊಯ್ಸಳರಾಜ ಎರಡನೆಯ ವೀರ ಬಲ್ಲಾಳನ ಕಾಲದ (ಕ್ರಿ.ಶ. ೧೯೯೬) ಶಾಸನದಲ್ಲಿ ಈ ರೀತಿ ಇದೆ:

...ಬಿಲ್ಲೇಶ್ವರ ದೇವರ್ಗ್ಗೆ.... ಬಿಟ್ಟ ಭೂಮಿ..... ಅದಕ್ಕೆ ಸೀಮೆ ನಾಲ್ಕು ದೆಸೆಗಳೊಳು ಲಿಂಗ ಮುದ್ರೆಯ ನಟ್ಟ ಕಲ್ಲು.

ವಿಜಯನಗರದ ಕೃಷ್ಣರಾಯ ಮಹಾರಾಯನ ಕಾಲದ (ಕ್ರಿ.ಶ. ೧೫೧೭) ಶಾಸನವೊಂದು, ಆರು ಲಿಂಗಮುದ್ರೆಯ

ಕಲ್ಲುಗಳೊಳಗಾದ ಗ್ರಾಮವನ್ನು ದಾನವಾಗಿಕೊಟ್ಟ ವಿಷಯವನ್ನು ತಿಳಿಸುತ್ತದೆ.

'......ಅಂತೂ ೬ ಲಿಂಗ ಮುದ್ರೆಯ ಕಲ್ಲಿನೊಳಗಾದ ಆ ಗ್ರಾಮದ..... ಕೊಟ್ಟ..... ಮಾಡಿದ ಧರ್ಮ ಶಾಸನಂ ॥'

ಬಳ್ಳಾರಿ ತಾಲೂಕಿಗೆ ಸೇರಿದ ಚಿಟಕಿನಹಾಳು ಎಂಬ ಗ್ರಾಮದಲ್ಲಿ ದೊರೆತಿರುವ ವಿಜಯನಗರದ ಅಚ್ಯುತರಾಯ ಮಹಾರಾಯನ ರಾಜ್ಯಭಾರ ಸಮಯದ ಶಾಸನದಲ್ಲಿ, ಸದರಿ ಚಿಟಕಿನಹಾಳು ಗ್ರಾಮವನ್ನು ಜೆಂತಗಲ್ಲಿನ ಪ್ರಸನ್ನ ವಿರೂಪಾಕ್ಷ ದೇವರಿಗೆ ದಾನವಾಗಿ ಸಮರ್ಪಿಸುವ ಸಂದರ್ಭದಲ್ಲಿ ತಾಮ್ರ ಶಾಸನವನ್ನು ಮತ್ತು ಶಿಲಾಶಾಸನವನ್ನು ಹಾಕಿಸಿ, ಗ್ರಾಮದ ಚತುಃಸೀಮೆಗೆ ಲಿಂಗಮುದ್ರೆಯ ಕಲ್ಲುಗಳನ್ನು ಹಾಕಿಸಿ, ದಾನ ಕೊಟ್ಟುದಾಗಿ ವೇದ್ಯವಾಗುತ್ತದೆ.

ಈಗ, ಕ್ರಿ.ಶ. ೧೫೧೨ ರಲ್ಲಿ ಇಮ್ಮಡಿ ಚಿಕ್ಕರಾಜ ಒಡೆಯರವರು, ಸಾಲೂರು ಶಾಂತ ದೇವರಿಗೆ ಕೊಳ್ಳೆಗಾಲ ತಾಲ್ಲೂಕಿನ ಕುಂತೂರು ಗ್ರಾಮವನ್ನು ದಾನವಾಗಿ ಕೊಟ್ಟ ಸಂದರ್ಭದಲ್ಲಿ ಲಭ್ಯವಿರುವ ವಿವರಣೆಗಳು ಇನ್ನಷ್ಟು ಕುತೂಹಲಕಾರಿಯಾಗಿವೆ ಎಂಬುದು ಕೆಳಗೆ ಉಲ್ಲೇಖಿಸಿರುವ ಶಾಸನದ ಪಠ್ಯದಿಂದ ವೇದ್ಯವಾಗುತ್ತವೆ.

'.....ಯಿಂಮಡಿ ಚಿಕ್ಕರಾಯ ಒಡೆಯರು ಸಾಲೂರು ಶಾಂತದೇವರಿಗೆ ಕೊಟ್ಟ ಧರ್ಮ ಶಾಸನ.... ಕುಂತೂರು ಗ್ರಾಮದ..... ಚತುಸ್ಸೀಮೆ..... ನೈರುತ್ಯ ಮುಖವಾದ ಲಿಂಗಮುದ್ರೆಯ ಕಲ್ಲು...... ಪಡುವಣ ವಾಮಲಿಂಗ ಮುದ್ರೆಯ ಕಲ್ಲು.... ..... .......'

*ಪಡುವ ಮುಖವಾದ ಲಿಂಗಮುದ್ರೆಯ ಕಲ್ಲು*
*ಬಡಗ ಮುಖವಾದ ಲಿಂಗಮುದ್ರೆ ಕಲ್ಲು*
*ಮೂಡ ಮುಖವಾದ ಲಿಂಗಮುದ್ರೆ ಕ್ಲಲು*
*ಈಶಾನ್ಯ ಮುಖವಾದ ಲಿಂಗಮುದ್ರೆ ಕಲ್ಲು*
*ಆಗ್ನೇಯ ಮುಖವಾದ ಲಿಂಗಮುದ್ರೆ ಕಲ್ಲು*
*ತೆಂಕ ಮುಖವಾದ ಲಿಂಗಮುದ್ರೆಯ ಕಲ್ಲು*
*ಹುಟ್ಟುಗಲ್ಲಿನ ಲಿಂಗಮುದ್ರೆಯ ಕಲ್ಲು*
*ನೈರುತ್ಯ ಮುಖವಾದ ಲಿಂಗಮುದ್ರೆಯ ಕಲ್ಲು*
*ವಾಯುವ್ಯ ಮುಖವಾದ ಲಿಂಗಮುದ್ರೆಯ ಕಲ್ಲು*

ಮುಂತಾಗಿ ಹೀಗೆ ೪೮ ಕ್ಕಿಂತಲೂ ಹೆಚ್ಚಾಗಿ ನೆಡಲ್ಪಟ್ಟ ಲಿಂಗಮುದ್ರೆಯ ಕಲ್ಲುಗಳನ್ನು ಹೆಸರಿಸಲಾಗಿದೆ.

ಇದೇ ರೀತಿಯ ಮುದ್ರೆಗಳುಳ್ಳ ಮೇರೆಯ ಕಲ್ಲುಗಳಿಗೆ, ಕೆಲವು ಸಮಯಗಳಲ್ಲಿ ಲಿಂಗ ಲಾಂಛನದ ಕಲ್ಲು ಎಂದು ಕರೆಯಲಾಗುತ್ತಿತ್ತೆಂಬುದು, ಗದುಗಿನ ತ್ರಿಕೂಟೇಶ್ವರ ದೇವಸ್ಥಾನದಲ್ಲಿ ದೊರೆತಿರುವ ಕಾಳಚೂರ್ಯ ಸಂಕಮದೇವರಾಜನ ಶಾಸದಿಂದ ತಿಳಿಯುತ್ತದೆ.

ಅಲ್ಲದೆ ಇವುಗಳಿಗೆ ಲಿಂಗಮುದ್ರೆಸ್ತಂಭವೆಂಬ ಹೆಸರಿದ್ದ ವಿಷಯ ಸಹ ಗೊತ್ತಾಗಿದೆ. ಹಾಗೆಯೇ ಲಿಂಗಮುದ್ರಿಕೆಯ ಕಿನ್ನರಿಗಲ್ಲು ಎಂಬ ಪದವು ಬಳಕೆಯಲ್ಲಿದ್ದ ಸಂಗತಿಯನ್ನು ಮುಳುಗುಂದದ ಶಾಸನವೊಂದು ಹೇಳುತ್ತದೆ.

### ಬಸವನ ಕಲ್ಲು

ಹೆಸರೇ ಸೂಚಿಸುವಂತೆ, ಇದೂ ಸಹ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ಮೇರೆಕಲ್ಲು. ಈಗಾಗಲೇ ವೇದ್ಯವಾಗಿರುವ ಪ್ರಕಾರ, ಈ ವರ್ಗದ ಮೇರೆ ಕಲ್ಲುಗಳಿಗೂ ಕೆಲವು ಹೆಸರುಗಳು ಪ್ರಚಲಿತವಿದ್ದುದಾಗಿ ತಿಳಿದು ಬರುತ್ತದೆ. ನಂದಿಯ ಕಲ್ಲು, ಬಸವ ಮುದ್ರೆಯ ಕಲ್ಲು, ಬಸವನ ಕಲ್ಲು, ನಂದಿಯ ಕಂಭ, ಇವೇ ಮುಂತಾಗಿ ಈ ವರ್ಗದ ಮೇರೆ ಕಲ್ಲುಗಳ ಅವಾಂತರ ಪ್ರಕಾರಗಳು.

ಈ ಹೆಸರಿನ ಕಲ್ಲುಗಳು, ಸಾಮಾನ್ಯವಾಗಿ ನಾಲ್ಕು ಪಾರ್ಶ್ವಗಳುಳ್ಳ ಸ್ತಂಭಾಕಾರಗಳಲ್ಲಿದ್ದು, ಮೇಲ್ಭಾಗದ ತುದಿಯಲ್ಲಿ ನಂದಿಯನ್ನು (couchant bull) ಸಂಪೂರ್ಣವಾಗಿ (in round) ಕಡೆದಿರುತ್ತಾರೆ. ಹೀಗೆ ಮೇಲ್ಭಾಗದ ತುದಿಯಲ್ಲಿ ನಂದಿಗಳಿರುವ ಕೆಲವು ಮೇರೆ ಕಲ್ಲುಗಳು, ಹಂಪೆಯ ಪುರಾತತ್ವ ಸಂಗ್ರಹಾಲಯದಲ್ಲಿ ನೋಡಲು ಸಿಗುತ್ತದೆ. ಈ ಬಸವನ ಕಲ್ಲುಗಳೊಂದರಲ್ಲಿ, ಬಸವನ ಕಲ್ಲುಗಳೊಂದರಲ್ಲಿ, ಬಸವನ ಆಕೃತಿಯ ಕೆಳಗೆ, ಮುಂದಿನ ಮುಖದ ಮೇಲೆ, ಒಂದು ಮನುಷ್ಯನಾಕೃತಿಯನ್ನೂ ಕಡೆಯಲಾಗಿದೆ. ಇದು ಬಹುಶಃ ದಾನಿಯ ಪ್ರತಿರೂಪ ಇರಲು ಸಾಕು. ಏಕೆಂದರೆ ಈ ದಾನಿಯು ಅಂಜಲಿ ಬದ್ಧನಾಗಿ ವಿನೀತ ಭಾವದಲ್ಲಿ ಸಮಭಂಗಿಯಲ್ಲಿ ನಿಂತಿರುವುದೇ ಆ ಸೂಚನೆಗೆ ಆಧಾರ.

ಇನ್ನೊಂದು ಬಸವನ ಕಲ್ಲಿಗೆ ದಾನಿಯನ್ನು ಮುಂದಿನ ಭಾಗದಲ್ಲಿ ತೋರಿಸದೆ, ಬಸವನ ಎಡಭಾಗದಲ್ಲಿ, ಬಸವನ ಕೆಳಗೆ ಕಡೆಯಲಾಗಿದೆ. ಇದೇ ರೀತಿಯ ಮೂರನೆಯ ಬಸವನ ಕಲ್ಲಿನಲ್ಲಿ ದಾನಿಯನ್ನಾಗಲೀ ಭಕ್ತನನ್ನಾಗಲೀ ತೋರಿಸದೆ, ಬಸವನ ಎಡಪಾರ್ಶ್ವದ ಮೇಲಿನ ಭಾಗದಲ್ಲಿ,

ಶಿವಲಿಂಗವನ್ನು ಕಡೆಯಲಾಗಿದೆ. ಇವಾವುಗಳ ಮೇಲೆ ಅಕ್ಷರಗಳಾಗಲಿ, ಶಾಸನಗಳಾಗಲಿ ಇಲ್ಲ. ಈ ಬಗೆಯ ಬಸವನ ಕಲ್ಲು ಈಗಲೂ ಹಂಪೆಯ ತೇರು ಬೀದಿಯ ಮಠಗಳ ಮುಂದೆ ಕಾಣಸಿಗುತ್ತವೆ. ಆದುದರಿಂದ, ಇಂತಹ ಮೇರೆ ಕಲ್ಲುಗಳನ್ನು ಶೈವ ಮಠಗಳು ಮತ್ತು ದೇವಸ್ಥಾನಗಳ ಮೇರೆಗಳನ್ನು ನಿರ್ದೇಶಿಸುವುದಕ್ಕಾಗಿ ಉಪಯೋಗಿಸುತ್ತಿದ್ದರೆಂದು ಹೇಳಬಹುದು.

ಹೀಗೆ ನಂದಿಕಲ್ಲು ಅಥವಾ ಬಸವನ ಕಲ್ಲುಗಳನ್ನು ಮೇರೆಗಲ್ಲುಗಳಾಗಿ ಉಪಯೋಗಿಸುತ್ತಿದ್ದರೆಂಬುದನ್ನು ಕೆಳಗಿನ ಶಾಸನದಿಂದ ಖಚಿತಪಡಿಸಿಕೊಳ್ಳಬಹುದು.

*'... ಚತುಃ ಸೀಮೆಯ ವಿವರ....*
*ಬಸವ ಮುದ್ರೆಯ ಕಲ್ಲಿದ.... ನಡೆವ*
*ಹೆದ್ದಾರಿಯ ಮರದ ಒತ್ತಿನಲು ಬಸವನ ಕಲ್ಲು*
*....ಆ ಬಸವನ ಕಲ್ಲಂ ಪಡುವ ವಿಡಿದು*
*....ಶಾಸನ ಕಲ್ಲಂ ಬಡಗ ಮುಂತಾಗಿ.....'*

ಮತ್ತು ಕ್ರಿ.ಶ. ೧೫೩೪ ರಲ್ಲಿ ಅಚ್ಯುತರಾಯ ಮಹಾರಾಯನು ವಿಜಯನಗರದಲ್ಲಿ ರಾಜ್ಯವಾಳುತ್ತಿರುವ ಕಾಲದಲ್ಲಿ ಬುಕ್ಕೇಶ್ವರ ದೇವರಿಗೆ, ಬಳ್ಳಾರಿ ತಾಲೂಕಿನ ದೊಂಡವಟಿ ಎಂಬ ಗ್ರಾಮವನ್ನು ದಾನವಾಡಿ ಕೊಡುವಾಗ,

'...ದೊಂಡವಟಿಯ ಗ್ರಾಮವನ್ನು...... ಏಕ ಭೋಗವಾಗಿ ಚತುಸ್ಸೀಮೆಗೆ ಲಿಂಗ ಮುದ್ರೆಯ ಕಲ್ಲನ್ನೂ, ನಂದಿಯ ಕಲ್ಲನ್ನೂ ಹಾಕಿಸಿ, ಕೊಡ ಹೇಳಿ....' ಎಂಬುದಾಗಿ ಶಾಸನವು ತಿಳಿಸುತ್ತದೆ. ಇಲ್ಲಿ ಲಿಂಗಮುದ್ರೆಯ ಕಲ್ಲನ್ನೂ, ನಂದಿಯ ಕಲ್ಲನ್ನೂ, ಅಂದರೆ ಎರಡು ವಿಧದ ಕಲ್ಲುಗಳನ್ನೂ ಸೀಮೆ ಅಥವಾ ಗಡಿಗಳನ್ನು ಗುರುತಿಸುವಲ್ಲಿ ಉಪಯೋಗಿಸಿರುವುದನ್ನು ಗಮನಿಸಬೇಕು.

ಕೆಲವು ಸಮಯಗಳಲ್ಲಿ, ಹಲವು ಕಾರಣಗಳಿಗಾಗಿ ಮಾನವ ನಿರ್ಮಿತ ಮೇರೆಯ ಕಲ್ಲುಗಳ ಜೊತೆಯಲ್ಲಿ ನೈಸರ್ಗಿಕವಾಗಿ ಉಪಸ್ಥಿತವಿದ್ದ ಕಲ್ಲು ಮುಂತಾದವುಗಳನ್ನೂ ಸಹ ಮೇರೆಗಳನ್ನು ಗುರುತಿಸುವಲ್ಲಿ ಬಳಸಲ್ಪಡುತ್ತಿದ್ದ ವಿಷಯವು ನಿದರ್ಶನಕ್ಕೆ ಬಂದಿದೆ. ವಿಜಯನಗರದ ಅಚ್ಯುತರಾಯ ಮಹಾರಾಯನು ಕ್ರಿ.ಶ. ೧೫೩೧ ರಲ್ಲಿ ಲೇಪಾಕ್ಷಿಯ ವೀರಭದ್ರಸ್ವಾಮಿಗೆ ಚಲುವಿಂಡ್ಲ ಎಂಬ ಗ್ರಾಮವನ್ನು ದಾನವಾಗಿ ಕೊಡುತ್ತಾ ಹೊರಡಿಸಲಾದ ಶಾಸನವು ಮೇರೆಗಳನ್ನು ಕೆಳಗಿನಂತೆ ವಿವರಿಸುತ್ತದೆ.

*'...ಚಲುವಿಂಡ್ಲ ಗ್ರಾಮದ ಹೊಲಮೇರೆ.... ಚಿಕ್‌ಬೆಂಚಿ ಮೇರೆ... ಒಂಟಿ ಗುಂಡು ಮೇರೆ.... ಕಪ್ಪಲಬೆಂಚಿ ಮೇರೆ.... ಅಲ್ಲಿಂದಂ ಬಡಗಲು ಚಿಕ್ಕಪ್ಪಿಲ್ಲಿ ಗುಂಡ್ಲು ಮೇರೆ.... ಬಡಗಲು ಶಾಸನದ ನಿಲ್ಲುಗಲ್ಲು ಮೇರೆ.... ಹುಟ್ಟುಗಲ್ಲು ಮೇಲೆ ಹಾಕಿದ ಆ ಶಾಸನದ ಕಲ್ಲು ಮೇರೆ... ಹಿಟ್ಟುಗಲ್ಲು ಬಂಡೆ ಮೇರೆ.... ಭಾವಿಯ ಬಂಡೆಯ ಶಾಸನ ಮೇರೆ, ಕರಿಯ ಬೆಟ್ಟದ ಬಂಡೆಯ ಮೇರೆ.... ಚಿಕ್ಕಕರಿಯ ಕಲ್ಲು ಮೇರೆ.... ಗದ್ದೆಯ ಗುಂಡು ಮೇರೆ..... ಬೆಟ್ಟದ ಬಂಡೆ ಮೇಲೆ.... ಚಿಕ್ಕ ಹುಟ್ಟುಗಲ್ಲು ಮೇರೆ.... ಅರೆಶಾಸನ ಮೇರೆ.... ಹಿರಿಯ ಗುಂಡಿನ ಶಾಸನ ಮೇರೆ.... ಪಂಟಗಲ್ಲು ಶಾಸನ ಮೇರೆ....* ಮುಂತಾಗಿ. ಬಹುಶಃ ದಾನ ಕೊಡುವ ಸಮಯದಲ್ಲಿ ಸಾಕಷ್ಟು ಮೇರೆಯ ಕಲ್ಲುಗಳನ್ನು ತಯಾರು ಮಾಡಲು ಸಮಯವಿಲ್ಲದ ಕಾರಣ ಒಂದೆರಡು ಮಾನವ ನಿರ್ಮಿತ ಮೇರೆ ಕಲ್ಲುಗಳೊಂದಿಗೆ, ಉಪಸ್ಥಿತವಿದ್ದ ಸ್ವಾಭಾವಿಕ ಗುರುತುಗಳನ್ನೂ ಸಹ ಉಪಯೋಗ ಮಾಡಿಕೊಂಡಿರಬೇಕು. ಹಾಗೆಯೇ ಕೆಲವು ಬಾರಿ ಶಾಸನದ ಕಲ್ಲುಗಳನ್ನೂ ಸಹ ಉಪಯೋಗಿಸಲಾಯಿತೆಂಬುದು ಮೇಲಿನ ಉದಾಹರಣೆಯಿಂದ ತಿಳಿಯುತ್ತದೆ.

### *ಮೇರೆಯ ಕಲ್ಲುಗಳನ್ನು ನೆಡುವ ವಿಧಾನ*

ಮೇಲೆ ವಿವರಿಸಿದ ಮೇರೆಯ ಕಲ್ಲುಗಳನ್ನು ನೆಡುವಾಗ ಅಥವಾ ಸ್ಥಾಪನೆ ಮಾಡುವಾಗ ಕೆಲವೊಂದು ಧಾರ್ಮಿಕ ವಿಧಿವಿಧಾನಗಳನ್ನು ಅನುಸರಿಸಲಾಗುತ್ತಿತ್ತು. ಅಂತಹ ಕ್ರಮಗಳನ್ನು ಯಾವಾಗಲೂ ಅನುಸರಿಸಲಾಗುತ್ತಿತ್ತೊ ಇಲ್ಲವೋ ಎಂಬುದನ್ನು ಈಗ ಖಚಿತವಾಗಿ ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಈ ವಿಷಯವನ್ನು ಸಮರ್ಥಿಸುವ ಸಾಹಿತ್ಯಾಧಾರಗಳು ಅಷ್ಟೊಂದಾಗಿ ದೊರೆಯುತ್ತಿಲ್ಲ. ಆದರೂ ಹಿಂದೂ ಸಮಾಜವು ಪ್ರತಿಯೊಂದು ಕಾರ್ಯಕ್ಕೂ ವಿಧ್ಯುಕ್ತ ವಿಧಾನಗಳನ್ನು ನಿಗದಿಪಡಿಸಿರುವುದನ್ನು ಗಣನೆಗೆ ತೆಗೆದುಕೊಂಡಲ್ಲಿ ಈ ಮೇರೆಯ ಕಲ್ಲುಗಳನ್ನು ಸ್ಥಾಪನೆ ಮಾಡುವಾಗಲೂ ಸಹ ಒಂದು ವಿಧ್ಯುಕ್ತ ವಿಧಾನವನ್ನು ಅನುಸರಿಸುತ್ತಿದ್ದರೆಂದು ಹೇಳಬಹುದು. ಬಹುಶಃ ದಾನವನ್ನು ಕೊಡುವಾಗಿನ ಮತ್ತು ಮೇರೆಯ ಕಲ್ಲುಗಳನ್ನು ನೆಡವ

ಸಂದರ್ಭಗಳಲ್ಲಿ ಲಭ್ಯವಿರುತ್ತಿದ್ದ ಸಮಯ, ಸಲಕರಣೆಗಳು ಮತ್ತು ಇತರ ಅನುಕೂಲತೆಗಳನ್ನು ಆಧರಿಸಿ ಈ ಸ್ಥಾಪನಾ ವಿಧಾನಗಳನ್ನು ಅನುಸರಿಸುತ್ತಿದ್ದಿರಬೇಕು. ಶಿಲಾಶಾಸನವೊಂದರಿಂದ ತಿಳಿದು ಬರುವಂತೆ ಈ ಮೇರೆಯ ಕಲ್ಲುಗಳನ್ನು ಸ್ಥಾಪನೆ ಮಾಡುವ ಸಮಯದಲ್ಲಿ ನವನಿಧಿಗಳಲ್ಲಿ ಹಾಕಿ, ಸ್ಥಾಪನೆ ಮಾಡುತ್ತಿದ್ದರು.

ವಿಜಯನಗರದ ಮೊದಲನೇ ದೇವರಾಯ ಮಹಾರಾಯನ ನಿರೂಪದಿಂದ (ಕ್ರಿ.ಶ. ೧೪೧೯) ಹರಪನಹಳ್ಳಿ ತಾಲ್ಲೂಕಿನ ರಾಜಬಾವನ ಹಳ್ಳಿಯ ಮಹಾಜನರು ಹಿರಿಯಣ್ಣನೆಂಬವನ ಮುಖಂಡತ್ವದಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಅದನ್ನು ಹರಿಯ ಸಮುದ್ರವೆಂದು ಕರೆದು, ಆ ಪುರವನ್ನು ಶ್ರೋತ್ರಿಯ ದಾನವಾಗಿ ಕೊಡುತ್ತಾ, ಸೀಮೆಯ ವಿವರಣೆಗಳನ್ನು ತಿಳಿಸುತ್ತಾ ಮತ್ತು ಸೀಮೆಯ ಕಲ್ಲುಗಳನ್ನು ನೆಟ್ಟ ವಿವರಣೆಗಳನ್ನು ಶಾಸನ ಈ ಮುಂದಿನಂತೆ ಹೇಳುತ್ತದೆ.

*'...ತೆಂಕಲು ರಾಜಗೊಂಡನ ಹಳ್ಳಿಯ ಗುಡ್ಡದ ಒತ್ತಿನಲು ಉಪನಿಧಿಗಳು ಹಾಕಿ ನೆಟ್ಟಿಹ ವಾಮನ ಮುದ್ರೆಯ(ಕಲ್ಲು).... ತೆಂಕಣ ಭಾಗದಲು ಉಪನಿಧಿಗಳು ಹಾಕಿ ನೆಟ್ಟಿಹ ವಾಮನ ಮುದ್ರೆ.... ಕಲ್ಲಿಂ ಬಡಗಲು ಪಡುವಲು ಕೊಟ್ಟೂರ ದಾರಿಯ ಗುಡ್ಡದ ಹುಟ್ಟರೆಯ ಮೇಲೆ ಹೋದ ವಾಮನ ಮುದ್ರೆಯ ಸರಿತದಲು ಉಪನಿಧಿಗಳು ಹಾಕಿದ ವಾ(ಮನ)ಮುದ್ರೆಯ ಕಲ್ಲುಗಳಿಂ...ಕೊಟ್ಟ ಶ್ರೋತ್ರಿಯ ದಾನ ಶಿಲಾಶಾಸನಂ...'* ಇಲ್ಲಿ ಮೇರೆಯ ಕಲ್ಲುಗಳನ್ನು ಸ್ಥಾಪಿಸುವಾಗ ಅನುಸರಿಸುತ್ತಿದ್ದ ಒಂದು ವಿಧಾನವು ತಿಳಿದು ಬರುತ್ತದೆಯಲ್ಲವೇ ?

*ಮೇರೆಗಳ ಪರಿಪಾಲನೆ*

ಈ ಮೇರೆಯ ಕಲ್ಲುಗಳ ಮೇಲೆ ಧಾರ್ಮಿಕ ಚಿಹ್ನೆಗಳನ್ನು ತೋರಿಸುವುದರಿಂದ ಅಂಥ ದಾನ ಕಾರ್ಯಗಳಿಗೆ ಧರ್ಮದ ಸಮ್ಮತಿ ಮತ್ತು ವಿಧಿಗಳನ್ನು ನಿಗದಿಪಡಿಸಿದಂತೆ ತಿಳಿಯಲಾಗುತ್ತಿತ್ತು. ಆ ದಾನವನ್ನೊಳಗೊಂಡ ಏರ್ಪಾಟಿಗೆ ವಿರೋಧವಾಗಿ ನಡೆಯುವುದು ಧರ್ಮ ವಿರೋಧಿ ಕಾರ್ಯವೆಂದು ಪರಿಗಣಿಸಲಾಗುತ್ತಿತ್ತು. ಅಲ್ಲವೆ ಅದು ಸಮಾಜ ವಿರೋಧಿ ಕಾರ್ಯವೆಂದು ಪರಿಗಣಿಸಲಾಗುತ್ತಿತ್ತು. ಆದರೂ ಕೆಲವೊಂದು ಬಾರಿ ದಾನಶಾಸನ ನಿರ್ದೇಶಿತ ಮೇರೆಗಳನ್ನು ಜನರು ಮೀರಿದ ಉದಾಹರಣೆಗಳು ಕಾಣಬರುತ್ತವೆ. ಮತ್ತೆ ಕೆಲವು ಬಾರಿ ಪ್ರವಾಹ ಮುಂತಾದ ಪ್ರಕೃತಿ ವಿಕೋಪಗಳಿಂದ, ದಾನ ಶಾಸನಾಂತರ್ಗತ ಸೀಮಾ ನಿರ್ಣಯವು ವ್ಯತ್ಯಸ್ತವಾದ ನಿದರ್ಶನಗಳೂ ಇವೆ. ಇಂತಹ ಪ್ರಸಂಗಗಳಲ್ಲಿ ಸ್ಥಳೀಯ ಅಧಿಕಾರಿಗಳು, ರಾಜ ಅಥವಾ ಜನನಾಯಕರು ಸ್ಥಳದಲ್ಲಿಯೇ ವಿಚಾರ ವಿನಿಮಯ ಮಾಡುತ್ತಿದ್ದರು. ಆ ನಂತರ ಸರಿಯಾದ ನಿರ್ಧಾರಗಳನ್ನು ಕೈಕೊಂಡು ಮೊದಲಿನಂತೆಯೇ ಮೇರೆಗಳನ್ನು ಪುನಃ ಗುರುತಿಸಿ ದಾನ ಶಾಸನವು ಪರಿಪಾಲಿತವಾಗುವಂತೆ ಪುನಃ ಏರ್ಪಾಡು ಮಾಡುತ್ತಿದ್ದರು. ಈ ಪದ್ಧತಿಯನ್ನು ನಿವೇದಿಸುವ ಕೆಲವು ಉದಾಹರಣೆಗಳನ್ನು ಈಗ ನೋಡೋಣ.

ಸುಮಾರು ಕ್ರಿ.ಶ. ೧೪೦೦ ರಲ್ಲಿ ಹೊರಡಿಸಲಾದ ಒಂದು ಶಿಲಾಶಾಸನದ ಪ್ರಕಾರ, ಕೊಲಹಳ್ಳಿಯ ತಂಮಡಿ ನಾಗಯ್ಯನೆಂಬುವನು ಚತುಃಸೀಮೆ ಜಲ ಪಾಷಾಣ ನಿಧಿ ನಿಕ್ಷೇಪಗಳೊಂದಿಗೆ ಧಾರಾಪೂರ್ವಕವಾಗಿ ಕೊಟ್ಟಂತ ಹಲಸಿನ ಹಳ್ಳಿಯ ದಾನವನ್ನು ಸೇರದೆ ಇರುಳಿನಲ್ಲಿ ದುರುದ್ದೇಶ ಪೂರ್ವಕವಾಗಿ ಬೇರೆ ಲಿಂಗ ಮುದ್ರೆಯ ಕಲ್ಲು ನೆಟ್ಟನು. *'...ಅದಕ್ಕೆ ಮಹಂತು ನಾಡು (ಅಧಿಕಾರಿಗಳ ಹೆಸರುಗಳು) ವಿಚಾರ ಮಾಡಿ ಅನ್ಯಾಯದಲ್ಲಿ ನೆಟ್ಟಲಿಂಗ ಮುದ್ರೆಯ ಕಲ್ಲು ಸಲ್ಲದೆಂದು... ನಿರ್ಧರಿಸಿ, ಮೊದಲಿನಂತೆ ಧರ್ಮವನ್ನು ಪಾಲಿಸಿಕೊಂಡು ಹೋಗುವಂತೆ ಏರ್ಪಾಟು ಮಾಡಿದರು.'*

ತಮಿಳುನಾಡಿನ ಚಂಗಲ್‌ಪಟ್ ಜಿಲ್ಲೆಯ ನಾಗಲಾಪುರದಲ್ಲಿ, ವಿಜಯನಗರದ ಕೃಷ್ಣರಾಯ ಮಹಾರಾಯನ ಕಾಲದ (ಕ್ರಿ.ಶ. ೧೫೨೫) ಶಾಸನದಲ್ಲಿ, ಎಲ್ಲೆ '**ಕಲ್ಲುಗಳನ್ನು ಕಿತ್ತು ಹಾಕಿದ ದುರ್ಜನರು ಮೂವರಿಗೆ ತಕ್ಕ ಕಟ್ಟು ಮಾಡಿ, ಅವರ ಮೇಲಣ ಲೆಕ್ಕದ ಹೊನ್ನನ್ನು ಕೊಂಡು ಗುಡಿಗೆ ಕೊಡಿಸುವುದು**' ಎಂದು ನಿರ್ಣಯಿಸಿ ರುವುದು ತಿಳಿದು ಬರುತ್ತದೆ. ಹೀಗೆ ಮೇರೆಗಲ್ಲಿನೊಳಗಾದ ಕಟ್ಟಲೆಗಳನ್ನು ಮೀರಿದವರಿಂದ ಅದನ್ನು ಸರಿಪಡಿಸುವುದಲ್ಲದೆ, ತಪ್ಪಿತಸ್ಥರಿಂದ ದಂಡದ ಹಣವನ್ನು ಸಹ ಪಡೆಯುವ ಪದ್ಧತಿಯು ಪ್ರಚಲಿತದಲ್ಲಿತ್ತು.

ಇನ್ನೊಂದು ಉದಾಹರಣೆಯಲ್ಲಿ ತಿರುವಿಡೈ ಮರುಡೂರು ಗ್ರಾಮದ ದೇವಸ್ಥಾನಗಳಿಗೆ ಆ ಮೊದಲೇ ದಾನವಾಗಿ ಕೊಟ್ಟ ಭೂಮಿಗಳನ್ನು ಸರಕಾರವೇ ತಿಳಿಯದೇ

ಮತ್ತು ಅನಿಚ್ಛೆಯಿಂದ ವಶಪಡಿಸಿಕೊಂಡಿತು. ಆ ಕ್ರಮದ ವಿರುದ್ಧವಾಗಿ ಪ್ರಜೆಗಳು ರಾಮರಾಜ ವಿಠಲದೇವ ಮಹಾರಾಜನಿಗೆ ಬಿನ್ನಿವಿಸಿಕೊಳ್ಳಲಾಗಿ, ತುಲೈನಯನಾರ ಮತ್ತು ಮುತ್ತಿರವಾಂಗಿ ಇಳಿಂಗಯರ್ (ಮುದ್ರೆಗಳನ್ನು ಪರೀಕ್ಷಿಸುವ) ಅಧಿಕಾರಿಗಳನ್ನು ಸ್ಥಳಕ್ಕೆ ಕಳುಹಿಸಿ, ವಿಚಾರಿಸಲಾಯಿತು. ನಂತರ ಅವರ ಸಲಹೆಯ ಪ್ರಕಾರ, ಭೂಮಿಗಳನ್ನು ದೇವಸ್ಥಾನಗಳಿಗೆ ಬಿಟ್ಟುಕೊಡಲಾಯಿತು.

ಚೋಳದೇಶದ ಮೂರನೆಯ ಕುಲ್ಲೋತುಂಗ ಚೋಳ ರಾಜನ ಶಾಸನವೊಂದು ತಮಿಳುನಾಡಿನ ಶ್ರೀರಂಗಂ ಪುಣ್ಯ ಕ್ಷೇತ್ರದ ರಂಗನಾಥಸ್ವಾಮಿ ದೇವಸ್ಥಾನದಲ್ಲಿದ್ದು ಅದು ತಿಳಿಸುವುದೇನೆಂದರೆ, ಕಾವೇರಿ ನದಿಯ ಒಂದು ಶಾಖೆಯಾದ ಕೊಲ್ಲೆಡಂ ನದಿಯು ಪ್ರವಾಹದಿಂದ ತುಂಬಿ ಹರಿಯುವಾಗ ದಡದ ಮೇಲಿದ್ದ, ದೇವಸ್ಥಾನಗಳಿಗೆ ಸೇರಿದ ಭೂಮಿಗಳ ಕೆಲ ಭಾಗಗಳ ಮೇರೆಗಳು ವ್ಯತ್ಯಸ್ತಗೊಂಡವು. ಅದರಿಂದಾಗಿ ಎರಡು ದೇವಸ್ಥಾನಗಳ ಆಡಳಿತಗಾರರ ಮಧ್ಯೆ ವಿವಾದಕ್ಕೆಡೆಯಾಯಿತು. ಆಗ ರಾಜನು ಈ ವಿವಾದವನ್ನು ಇತ್ಯರ್ಥಗೊಳಿಸುವುದಕ್ಕಾಗಿ ಒಬ್ಬ ಅಧಿಕೃತ ವ್ಯಕ್ತಿಯನ್ನು ನೇಮಿಸಿದನು. ಅವನು ಸ್ಥಳೀಯ ಜನರನ್ನು ಮತ್ತು ಅಧಿಕಾರಿಗಳನ್ನು ವಿಚಾರಿಸಿ, ಹೊಸತಾಗಿ ಮೇರೆಯ ಕಲ್ಲುಗಳನ್ನು ನೆಡುವುದಕ್ಕೆ ಏರ್ಪಾಟು ಮಾಡಿದನೆಂಬುದು ವೇದ್ಯವಾಗುತ್ತದೆ.

ದಾನ ಕೊಡುವಾಗ ಮತ್ತು ದಾನವಾಗಿ ಕೊಟ್ಟಂಥಾ ಭೂಮಿ ಮುಂತಾದವುಗಳನ್ನು ಸರಿಯಾಗಿ ಪಾಲಿಸಿಕೊಂಡು ಹೋಗುವ ಉದ್ದೇಶದಿಂದ ಮೇಲೆ ವಿವರಿಸಿದಂತಹ ಧಾರ್ಮಿಕ ಏರ್ಪಾಟುಗಳು, ಕಟ್ಟುಪಾಡುಗಳು, ನಿಬಂಧನೆಗಳು ಇದ್ದರೂ, ಅವುಗಳನ್ನು ಮೀರಿ ನಡೆಯುವುದು ಸಾಮಾನ್ಯ ವಿಷಯವಾಗಿದ್ದಿರಬೇಕು. ದಾನ ಶಾಸನಗಳ ಕೊನೆಯಲ್ಲಿ ಬರುವ ದಾನಗಳನ್ನು ಪಾಲಿಸಿಕೊಂಡು ನಡೆಯುವುದರಿಂದ ಬರುವ ಪುಣ್ಯ ಮತ್ತು ದಾನವನ್ನು ಮೀರಿ ನಡೆಯುವುದರಿಂದ ಒದಗುವ ದುಷ್ಫಲಗಳ ವಿವರಣೆಗಳೇ ಈ ವಿಷಯವನ್ನು ಸಮರ್ಥಿಸುತ್ತವೆ.

ವಿಜಯನಗರ ಸಾಮ್ರಾಜ್ಯದ ಪತನಾನಂತರ ದೇಶದಲ್ಲಿ ಉಂಟಾದ ಅರಾಜಕತೆಯಿಂದಾಗಿ, ಈ ಮಧ್ಯಯುಗದ ಏರ್ಪಾಡುಗಳೆಲ್ಲ ಬಹುತೇಕವಾಗಿ ಕಾಣದಾದವು. ಆಗ ಈ ಮೇರೆಯ ಕಲ್ಲುಗಳು ಸಹ ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡವು. ಅಲ್ಲೊಂದು ಇಲ್ಲೊಂದು ಈಗ ಕಾಣಬಂದರೂ ಅವು ಕುತೂಹಲಕಾರಿ ವಸ್ತುಗಳಾಗಿ ಪರಿಗಣಿಸಲ್ಪಟ್ಟುವು. ಅವುಗಳ ಮೇಲಿರುವ ಧಾರ್ಮಿಕ ಚಿಹ್ನೆಗಳಿಂದಾಗಿ ಕೆಲವಡೆ ಅವುಗಳು ಪೂಜೆಗೆ ಒಳಗಾದವು. ಆದರೆ ಅವುಗಳ ಮಧ್ಯಯುಗದಲ್ಲಿ ನಿರ್ವಹಿಸಿದ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳು ಜನಮನದಿಂದ ಅಳಿಸಿ ಹೋಗುತ್ತಲಿವೆ.

ಇಂಗ್ಲಿಷರ ಆಡಳಿತ ಆರಂಭವಾದಂದಿನಿಂದ ಮೇರೆಗಳನ್ನು ಗುರತಿಸುವಲ್ಲಿ ಬೇರೆಯೇ ಪದ್ಧತಿಗಳು ಜಾರಿಯಲ್ಲಿ ಬಂದು, ಮೇಲೆ ವಿವರಿಸಲಾದಂತಹ ಮಧ್ಯ ಯುಗದ ಮೇರೆಗಲ್ಲುಗಳು ಪುರಾತತ್ವ ಸಂಗ್ರಹಾಲಯಗಳನ್ನು ಸೇರಬೇಕಾಯಿತು. ಅಲ್ಲಾದರೋ ಅವು ತಮ್ಮ ಹಿಂದಿನ ಪಾತ್ರವನ್ನು ವೀಕ್ಷಕರಿಗೆ ಸಾರಿ ಹೇಳುತ್ತ ಪ್ರದರ್ಶಿತವಾಗಿವೆ.

❑

---

ಲೇಸೆನಿಸಿಕೊಂಡು ಅಯ್ದು ದಿವಸ ಬದುಕಿದಡೇನು ?<br>
ಲೇಸೆನಿಸಿಕೊಂಡು ನಾಲ್ಕು ದಿವಸ ಬದುಕಿದಡೇನು ?<br>
ಲೇಸೆನಿಸಿಕೊಂಡು ಮೂರು ದಿವಸ ಬದುಕಿದಡೇನು ?<br>
ಲೇಸೆನಿಸಿಕೊಂಡು ಎರಡು ದಿವಸ ಬದುಕಿದಡೇನು ?<br>
ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ !<br>
ಅಜಕಲ್ಪಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ !!<br>
ಎಂದುದಾಗಿ ಕೂಡಲಸಂಗನ ಶರಣರ ವಚನದಲ್ಲಿ<br>
ಲೇಸೆನಿಸಿಕೊಂಡು ಒಂದು ದಿವಸ ಬದುಕಿದಡೇನೊ !

– *ಬಸವಣ್ಣ*



# ಶಿವಶರಣರು : ಸಮತೆ ಮತ್ತು ಸೌಹಾರ್ದತೆ

– ಡಾ. ಚನ್ನಕ್ಕ ಪಾವಟೆ *

*ಸುವರ್ಣ ಮಾಧ್ಯಮ*

ಜಾಗತಿಕ ಸಾಂಸ್ಕೃತಿಕ ಇತಿಹಾಸದಲ್ಲಿ ಸುವರ್ಣ ಮಾಧ್ಯಮವೆನಿಸಿದುದು ಶರಣ ಸಂಸ್ಕೃತಿ. ಹನ್ನೆರಡನೆಯ ಶತಮಾನದ ಕಾಲ ಮಾನವೀಯತೆ, ಸಮಾನತೆ, ಸರ್ವತೋಮುಖ ಸೌಹಾರ್ದತೆಗೆ ಪರ್ವಕಾಲ. ಮಾನವತೆಯನ್ನು ಅರಿವು, ಸನ್ಮಾರ್ಗ, ಸುಸಂಸ್ಕಾರದತ್ತ ಎಳಸಿದ, ಹೊಸ ಮನ್ವಂತರವನ್ನು ಪಾಲನೆಗೈದ, ಸಮಸ್ತ ಮಾನವಕುಲಕೆ ಮಹದುಪಕಾರಗೈದ ಕಾಲವೆನಿಸಿದ ಮಾನವಕುಲದ ಧಾರ್ಮಿಕ ಜೀವನದಲ್ಲಿ ಬೇರುಬಿಟ್ಟ ಜಡತೆಯನ್ನು ಪ್ರತಿಭಟಿಸಿ, ವಿವೇಕಯುತ ಅನುಭವಶೀಲ ನೆಲೆಯಲ್ಲಿ ನಿಲ್ಲಿಸಿದುದು ಶಿವಶರಣರು ಕೈಕೊಂಡ ಅನುಪಮ ಸಾಧನೆ. ಧರ್ಮದ ಹೆಸರಿನಲ್ಲಿ ನೆಲೆಗೊಂಡಿದ್ದ ಕರ್ಮಠತನ, ಬಹುದೈವೋಪಾಸನೆ, ಅಂಧಶ್ರದ್ಧೆ, ಡಾಂಭಿಕತೆ, ಪಟ್ಟಭದ್ರ ಶೋಷಣೆ, ವರ್ಣಭೇದ ಘುಂತಾದ ಉಚ್ಚ ನೀಚ ಅರ್ಥರಹಿತ ಅನಿಷ್ಟಗಳ ವಿರುದ್ಧ ಹೋರಾಟ ನಡೆಸಿ ಅವುಗಳ ಮೂಲಬೇರನ್ನೇ ಸಡಲಿಸಿದ್ದು ಅವರು ಸಮಾಜಕ್ಕೆ ನೀಡಿದ ಮಹತ್ವದ ಸಾಧನೆ. ಅವರು ಜೀವನದಲ್ಲಿ ಪಡೆದ ಸಮಾನತೆ ಹಾಗೂ ಸೌಹಾರ್ದತೆಯ, ವಿಶ್ವಬಂಧುತ್ವದ ಪಕ್ವಫಲ.

ಶಿವಶರಣರ ಪ್ರಮುಖಕಾರ್ಯ ಕನ್ನಡ ನೆಲದ, ಸಮಗ್ರ ಮಾನವಕುಲದ ಸಮಗ್ರ ಪರಿವರ್ತನೆಯ ಆಂದೋಲನ – ಪಂಪಾದಿ ಜೈನಕವಿಗಳು ಅಂದಂದಿನ ಪ್ರಭು ವರ್ಗದವರನ್ನು ಆಶ್ರಯಿಸಿ ಅವರ ಕೀರ್ತಿಯನ್ನು ಆಕಾಶದೆತ್ತರಕ್ಕೆ ಬೆಳಗಿಸಿದರೆ, ವಚನಕಾರರು ಅಂಥ ರಾಜತ್ವವನ್ನೇ ಧಿಕ್ಕರಿಸಿ ಬದುಕಿನಲ್ಲಿ ಬರಹದಲ್ಲಿ ಜನಪರ ಕಾಳಜಿಗೆ ಮಾನ್ಯತೆ ದೊರಕಿಸಿಕೊಟ್ಟವರು. **'ಪಂಡಿತರೆ ತಗುಳ್ಚಿ ಬಿಚ್ಚಳಿಸಬೇಕೆಂಬ'** ಚಂಪೂ ಮಾರ್ಗ ಸಂಪ್ರದಾಯದ ಆಸೆ ತ್ಯಜಿಸಿ **'ಜನ ಬದುಕಬೇಕೆಂಬ'** ಮೂಲ, ಮುಖ್ಯೋದ್ದೇಶತೆಯಿಂದ ವಚನ ಸಾಹಿತ್ಯ ರಚನೆಗೆ ಪ್ರೇರಣೆ ನಿಡಿದರು. ದಲಿತರು, ಶೋಷಿತರು, ಕೆಳವರ್ಗದವರು, ಅದರಲ್ಲೂ ಮಹಿಳೆಯರು ಮೊದಲ ಬಾರಿ ವಾಸ್ತವಕ್ಕೆ ಸ್ಪಂದಿಸಿ ಸಾಹಿತ್ಯದ ಮುಖಾಂತರ ತಮ್ಮ ಅನಿಸಿಕೆಯನ್ನು ಸ್ಪಷ್ಟಪಡಿಸಿದ್ದು ಇದೇ ಸಂದರ್ಭದಲ್ಲಿ. ಅರಮನೆ ರಾಜಾಶ್ರಯಗಳಲ್ಲಿ ಮಲೆತುನಿಂತ ಪಂಡಿತರ ಕಪಿಮುಷ್ಟಿಯಿಂದ ಪಾರಾಗಿ ಬಂದ ಕನ್ನಡ ಸಾಹಿತ್ಯ ಸಹಜವಾಗಿ ಉಸಿರಾಡಿದ್ದು; ಜನಸಾಮಾನ್ಯರ ನೋವುಗಳಿಗೆ ಸ್ಪಂದಿಸಿದ್ದು, ದುಡಿವರ್ಗದ ಜನರ ತೊಡಲ್ನುಡಿಯಾಗಿ ಹೊರಹೊಮ್ಮಿ ವಚನಸಾಹಿತ್ಯ ಅಂದರೆ ಜನತಾಸಾಹಿತ್ಯ, ಜನಪರ ಸಾಹಿತ್ಯವೆನಿಸಿದುದು ಗಮನಾರ್ಹ. ರಾಜಶಾಹಿ, ಪುರೋಹಿತ ಶಾಹಿ ವರ್ಗಗಳನ್ನು ಧಿಕ್ಕರಿಸಿದ್ದು, ಹಳೆಯ ಮೌಲ್ಯಗಳ ಉಚ್ಚರಿಸಿ, ಹೊಸ ಮೌಲ್ಯಗಳ ಸ್ಥಾಪನೆ ಶರಣರ ಆಶಯವೆನಿಸಿತ್ತು. ವ್ಯಕ್ತಿಗತ ಪ್ರಸಾದ ಸಿದ್ಧಿಯ ಪ್ರತಿಪಾದನೆಗಿಂತ ಸಮಾಜಗತ ಪ್ರಸಾದ ಸಿದ್ಧಿಯ ಪ್ರತಿಪಾದನೆಗೆ ಅವಕಾಶವಿತ್ತುದು ಮಹತ್ತರ ಹೆಜ್ಜೆ ಎನಿಸಿದೆ.

*ಸೌಹಾರ್ದತೆಯ ದಿಟ್ಟಹೆಜ್ಜೆ*

ರಾಜಭಂಡಾರ ಪ್ರಭುವರ್ಗ ಅಥವಾ ಪುರೋಹಿತ ವರ್ಗದ್ದಲ್ಲ. ಇದು ಸಮಾಜಕ್ಕೆ, ಸಮಾಜದ ಸತ್ಪ್ರಜೆಗಳಿಗೆ ಸಲ್ಲತಕ್ಕದ್ದು. ಪರಮಾವಧಿಕಾರದ ಹೆಸರಿನಲ್ಲಿ ರಾಜಭೋಗಕ್ಕೆ, ಧಾನಧರ್ಮದ ಹೆಸರಿನಲ್ಲಿ ಪುರೋಹಿತರ ಭೋಗಕ್ಕೆ ವಿನಿಯೋಗಿಸಲ್ಪಡುತ್ತಿದ್ದ ರಾಜಭಂಡಾರವನ್ನು ಶರಣರು ಸತ್ಪ್ರಜೆಗಳ ಸಲುವಾಗಿ ವಿನಿಯೋಗಿಸಿದ್ದು, ಪ್ರಭುಸತ್ತೆಯ ಮೌಲ್ಯಕ್ಕೆ ಬದಲಾಗಿ ಪ್ರಜಾಸತ್ತೆಯ ಮೌಲ್ಯ ಪ್ರತಿಪಾದಿಸಿದ್ದು ಶರಣರ ಸಮತೆ ಸೌಹಾರ್ದತೆಯ ದಿಟ್ಟಹೆಜ್ಜೆ. ರಾಜಭಂಡಾರ ಕೆಲವೇ ಪ್ರತಿಷ್ಠಿತ ವ್ಯಕ್ತಿಗಳ ಸೊತ್ತಲ್ಲ; ಅದು ಸರ್ವಭಕ್ತರ ಆಸ್ತಿ. ಅದರ ಮೇಲೆ ಎಲ್ಲರ ಹಕ್ಕು ಇದೆ. ಈ ಲೋಕ ಪರಶಿವನ ವಿಶ್ವಸನ್ನಿಧಿ. ನಾವು ಅದರ ಸದ್ಭಕ್ತರು ಎಂಬ ನಿಲವು ಶರಣರಲ್ಲಿ ಸೌಹಾರ್ದ ಮನೋಭಾವವನ್ನು ಜನಮನದಲ್ಲಿ ಅಚ್ಚಿಸಲು ಸಾಧ್ಯವಾಯಿತು.

ವರ್ಣಭೇದ, ಭಾರತಿಯ ಸಮಾಜದ ಒಂದು ಅಭಿಶಾಪ. ಸ್ಪರ್ಶ, ಅಸ್ಪೃಶ್ಯರೆಂಬ ಎರಡು ವರ್ಗಗಳ ಸಂಘರ್ಷ

* ಪ್ರಾಧ್ಯಾಪಕರು, ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೫೮೦೦೦೩.

ಅನಾದಿಕಾಲದ್ದು. ಶರಣರ ವಚನದುದ್ದಕ್ಕೂ ಈ ಸ್ಥಾವರ ವ್ಯವಸ್ಥೆಯನ್ನು ಅಲುಗಿಸುವ ಪ್ರಯತ್ನ ನಡೆದಿದೆ. ಕರಿಕಾಲ ಚೋಳನ ಅರಮನೆಯಲ್ಲಿ ಉಣ್ಣದ ಪರಿಶಿವ ಮಾದಾರ ಚೆನ್ನಯ್ಯನ ಗುಡಿಸಲಲ್ಲಿ ಅಂಬಲಿ ಮಜ್ಜಿಗೆಯ ರುಚಿ ಸವಿದದ್ದು, ಇದನ್ನು ತಿಳಿದ ಚೋಳ ಅವನ ಕೇರಿಗೆ ಪಾದಚಾರಿಯಾಗಿ ಬರುವುದು, ಚನ್ನಯ್ಯನ ಪಾದಕ್ಕೆ ಬಿದ್ದು, *'ಶರ್ವನೊಡನುಂಡ ನಿಮ್ಮ ಜಾತಿಗಾಂ ಸರಿಯೇ ? ಸರ್ವಜ್ಞ, ನಿಮ್ಮ ಶರ್ಪಿಂಗೆನ್ನ ಶಿರ ಸರಿಯೇ ?'* ಎಂದು ನುಡಿಯುವುದು, ತನ್ನ ಪಟ್ಟಗಜದ ಮೇಲೆ ಮಂಡಿತನಾದ ಚನ್ನಯ್ಯನ ಮೆರವಣಿಗೆ ಮಾಡುವುದು ಜಾತಿಭೇದ ನಿರ್ಮೂಲನದ ಪ್ರತಿಪಾದನೆಯಾಗಿದೆ.

### *ಚಲನಶೀಲ ಮೌಲ್ಯ ಪ್ರತಿಪಾದನೆ*

ಇಲ್ಲಿ ನಾವು ಗಮನಿಸಬೇಕಾದುದು ರಾಜಸತ್ತಾಯುಗದ ಸ್ಥಗಿತ ಮೌಲ್ಯವನ್ನು ಚಲನಶೀಲ ಮೌಲ್ಯದ ಪ್ರತೀಕರೆನಿಸಿದ ಶರಣರು ಪ್ರಶ್ನಿಸತೊಡಗಿದ್ದು *'ಅರಸನ ಮನೆಯಲ್ಲಿ ಅರಸಿಯಾಗಿಪ್ಪುದಕ್ಕಿಂತ ಶಿವಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸು'* ಎಂದು ಸಾರಿದ್ದು. *'ರಾಜಪ್ರಭುತ್ವದ ಮುಂದೆ ಅಂದು ನುಡಿಸಬೇಕಿದ್ದ ಪಂಚಮಹಾವಾದ್ಯವನ್ನು ಉತ್ತಮನಾದ ಹೊಲೆಯನ ನಾಯಿಯ ಮುಂದೆ ನುಡಿಸಬೇಕೆಂಬ'*, ಸ್ಥಗಿತ ವ್ಯವಸ್ಥೆಯ ಶ್ರೇಷ್ಠ ಪುರುಷನಿಗಿಂತ, ಚಲನಶೀಲ ವ್ಯವಸ್ಥೆಯ ಕನಿಷ್ಠ ಪ್ರಾಣಿಯೇ ಮೇಲೆಂದು ವಾದಿಸಿದ್ದು ಸೌಹಾರ್ದತೆಯ ಕ್ಷಕಿರಣ.

ಯಾವುದನ್ನು ಉತ್ತಮ ವರ್ಣೀಯರು ಸಾಧಿಸಲು ಅಸಾಧ್ಯವಾಗಿತ್ತೊ ಅಂತಹ ಸಾಮಾಜಿಕ ಪರಿವರ್ತನೆಯನ್ನು ಬಸವಣ್ಣನವರ ಸಮಕಾಲೀನರು ಸಾಧಿಸಿದರು. ಇಲ್ಲಿಯವರೆಗೆ ಉತ್ತಮರೆನಿಸಿಕೊಂಡವರು ಅಸ್ಪೃಶ್ಯರ ನೆರಳು ಬಿದ್ದೀತೆಂದು ದೂರ ಸರಿಯುತ್ತಿದ್ದರೆ. ಈಗ ಈ ಅಸ್ಪೃಶ್ಯರು ತಲೆ ಎತ್ತಿ ಗೌರವ, ಪ್ರತಿಷ್ಠೆ ಧೈರ್ಯದಿಂದ ಬದುಕುವಂತಾಯಿತು. ಮಾನಸಿಕ ತಳಮಳ ಉನ್ನತ ವರ್ಗದವರ ಪೈಶಾಚಿಕ ತುಳಿತ, ಪರಂಪರಗತವಾಗಿ ಬಂದ ಕೀಳರಿಮೆಯನ್ನು ಕಿತ್ತು, ಸ್ವತಂತ್ರ ಬದುಕನ್ನು ಸರಳವಾದ ಉಸಿರಾಟವನ್ನು ಪಡೆಯುವಂತಾಯಿತು. ಬೆನ್ನಿಗೆ ಕಸಬರಿಗೆ ಕೊರಳಿಗೆ ಕಟ್ಟಿಕೊಂಡ ಕುಡಿಕೆಗೆ ಬದಲಾಗಿ ಇಷ್ಟಲಿಂಗವು ಕುಲಗೋತ್ರವನ್ನು ಬದಿಗಿರಿಸಿ ಸರ್ವರ ಎದೆಯನ್ನು ಅಲಂಕರಿಸಿದ್ದು, ಹಣೆಯ ಮೇಲಿನ ಮೂರು ಬೆರಳಿನ ವಿಭೂತಿ ಮೇಲು ಕೀಳನ್ನು ಹೊಡೆದೋಡಿಸಿ ಸರ್ವರನ್ನು ಒಂದೇ ತಳಗಟ್ಟಿನ ಮೇಲೆ ನಿಲ್ಲಿಸುವಂತಾಯಿತು. ಇಲ್ಲಿ ಗಮನಿಸಬೇಕಾದ ಒಂದಂಶ ಬಹಿರಂಗದ ಪರಿಶುದ್ಧತೆಗಿಂತ ಅಂತರಂಗದ ಶುದ್ಧಿಗೆ ಹೆಚ್ಚಿನ ಮಹತ್ವ ನೀಡಿದುದು.

### *ಜ್ಞಾನ ದೇವನಿತ್ತ ಪರಮನಿಧಿ*

ಜ್ಞಾನವೆಂಬುದು ಮಾನವಕುಲಕ್ಕೆ ದೇವನಿತ್ತ ಪರಮನಿಧಿ. ಅದನ್ನು ಯಾರಿಂದಲೂ ಕದಿಯಲಾಗದು. ಜ್ಞಾನಪೂರ್ಣವಾದ ಮನ ಅರಿವಿನ ಅನುಭವಕ್ಕೆ ಚಾಲನೆ ನೀಡುತ್ತದೆ. ಅರಿವಿನ ಉದ್ದೀಪನ ಸಮಸ್ಯೆಯ ಮೂಲ ಗುರುತಿಸಿ ವಾಸ್ತವ ಪ್ರಶ್ನೆಯನ್ನು ಎಚ್ಚರಿಸುತ್ತದೆ. ಇದರ ಪರಿಣಾಮ ಕಾಣದ ಸ್ವರ್ಗ ನರಕಗಳಿಂದ, ವಾಸ್ತವ ಕ್ರಿಯಾಕರ್ಮಗಳ ದಯೆ ಧರ್ಮಗಳ ಕಡೆಗೆ ಮುನ್ನಡೆಯುತ್ತಿದೆ. ಅರಿವು ಅರ್ಥವಾದಾಗ ವೇದವೆಂಬುದು ಓದಿನ ಮಾತಾಗುತ್ತದೆ. ಪುರಾಣ ಪುಂಡರಗೋಷ್ಠಿಯಾಗುತ್ತಿದೆ. ವೇದಶಾಸ್ತ್ರಗಳು ನುಚ್ಚು ತೌಡುಗಳೆನಿಸುತ್ತವೆ. ಶತಶತಮಾನಗಳಿಂದ ಮೇಲ್ವರ್ಗದವರು ಬಿತ್ತಿದ ಬೀಜ ಎಷ್ಟು ವಿಷ ಎಂಬುದು ಅರಿವಿಗೆ ಬರುತ್ತಿದೆ. ಇದರ ಪರಿಣಾಮವೇ ದಲಿತರಿಗೆ, ತುಳಿಯಲ್ಪಟ್ಟವರಿಗೆ ಅರಿವು ಮೂಡಿದ್ದೊಂದೇ ತಡ, ಅನುಭವ ಮಂಟಪದಲ್ಲಿ ಮೊದಲ ಬಾರಿಗೆ ಬಾಯಿ ಬಂದುದು. ಅಲ್ಲಿಯ ಅನುದಿನದ ಆಧ್ಯಾತ್ಮಿಕ ಚರ್ಚೆ ಜ್ಞಾನವಂತ ವರ್ಗಕ್ಕೆ ಉಪಯೋಗವಾಗದೇ ದನಕಾಯುವ, ಹಗ್ಗ ಹೊಸೆವ, ಸತ್ತ ದನವನೆಳೆವ, ಕೆರ ಹೊಲೆವ, ಹೊಳೆದಾಟುವ ಎಲ್ಲ ಜನಪರ ವರ್ಗದವರಿಗೆ ಸದುಪಯೋಗ ವಾಗಿದ್ದು, ಬದುಕಿಗಂಟಿಕೊಂಡು ಬಂದಿದ್ದ ಮೌಢ್ಯವನ್ನು ಹೊಡೆದೋಡಿಸಿದ್ದು, ಇದು ಇಲ್ಲಿಯವರೆಗೆ ತಮ್ಮ ಕಪಿಮುಷ್ಟಿಯಲ್ಲಿ ಬಂಧಿಸಿಕೊಂಡು ಬಂದ ಪುರೋಹಿತಶಾಹಿ ಮತ್ತು ಪಟ್ಟಭದ್ರ ಹಿತಾಸಕ್ತಿಗಳಿಗೆ ಬಿಸಿ ತುಪ್ಪವಾಗಿದ್ದರೆ ಸಾಕು. ಬಸವಾದಿ ಪ್ರಮಥರ ಸದ್ಭಾವ, ಸಮಾಜದ ಅತ್ಯಂತ ಕೆಳಗಿನ ಸ್ಥರದ ವ್ಯಕ್ತಿಗಳೊಂದಿಗೆ ಭಾವನಾತ್ಮಕ ಮತ್ತು ಕ್ರಿಯಾತ್ಮಕ ಏಕತೆ, ಸಮಾನತೆ, ಸೌಹರ್ದತೆ, ಮಾನವೀಯತೆಯನ್ನು ಪ್ರತಿಪಾದಿಸಿದ್ದು ಮಾನವ ಇತಿಹಾಸದಲ್ಲಿಯೇ ಅಪೂರ್ವ ಘಟನೆ.

ಇದಕ್ಕೆ ಅವರು ಅವಲಂಬಿಸಿದ ಲಕ್ಷ್ಮಣರೇಖೆ ಜ್ಞಾನ ಸಂಪಾದನೆ. ವ್ಯವಸ್ಥೆಯ ಸ್ಥಗಿತ ಆಮೂಲಾಧ್ಯಂತ ಪರಿಶೋಧನೆ ಬದುಕಿನಲ್ಲಿ ಅಳವಡಿಸಿಕೊಂಡ ವೃತ್ತಿಗೌರವ, ಮನಮುಟ್ಟಿ ದುಡಿವ ದುಡಿತ, ಮನಮುಟ್ಟಿ ಮಾಡುವ ದಾಸೋಹದ ಮಾಟ, ಕೂಡಲ ಸಂಗಮನ ಶರಣರ ಅನುಭವದ ಭವದ ಕೇಡಿಗೆ ಕಾರಣವಾಯಿತು. *'ದುಡಿಮೆಯೇ ದೇವರು', 'ಕರ್ತವ್ಯವೇ*

*ಕರ್ತಾರನ ಪೂಜೆ',* ಎಂಬುದು ಪಂಚಾಕ್ಷರಿ ಮಂತ್ರವಾಯಿತು. ಶರಣರು ಪರಮಾತ್ಮನನ್ನರಿಸಿದ್ದು ಕಾಯಕದಲ್ಲಿ *'ಕಾಯಕದಿಂದ ಬಂದ ಕಾರೆಯಸೊಪ್ಪು ಲಿಂಗಕ್ಕೆ ಶ್ರೇಷ್ಠ ಬೋನ*ವಾಗಬೇಕಿದ್ದರೆ ಅದರ ಹಿಂದಿನ ಬೆವರ ಮಹತ್ವ ಅರಿಯಬೇಕು.

ಅರಿವಿನ ಬೇರಿನಿಂದ ಸಂಘರ್ಷದ ಸರಮಾಲೆಯಲ್ಲಿ ಸಂದೇಹಗಳ ಲೌಕಿಕಾಟದಲ್ಲಿ ವಿಚಾರ ರೂಪುಗೊಳ್ಳುತ್ತಿದೆ. ಅದರಲ್ಲೂ ದುಡಿದ ವರ್ಗದಲ್ಲಿ ಶೋಷಿತರಲ್ಲಿಯ ಶೋಷಿತೆಯೆನಿಸಿದ ಮಹಿಳಾ ವರ್ಗಕ್ಕೆ ದೊರೆತ ಸ್ವಾತಂತ್ರ್ಯ ಇತಿಹಾಸದಲ್ಲಿಯೇ ಚಿರಂತನವಾಗಿ ಉಳಿಯುವಂತಹುದು. ಅವಳ ಸುಂದರ ಬದುಕಿನಲ್ಲಿ ಅದೊಂದು ನೂತನ ಅನುಭವ. ನಿಷ್ಕ್ರಿಯೆಗೊಂಡ ಬದುಕಿನಲ್ಲಿ ಚಿಲುಮೆ ಪುಟಿದೆದ್ದಂತೆ. ಅವರ ಸಾಧನೆ, ಅರಿವು, ಅಕ್ಷರ ಸಂಸ್ಕೃತಿಯ ಬಗೆಗಿನ ಅದಮ್ಯ ಆಸಕ್ತಿ, ಕಾಯಕದ ಪರಿಕಲ್ಪನೆ, ಆರ್ಥಿಕಾಭಿವೃದ್ಧಿ, ಮೂಢನಂಬಿಕೆ ಅನಿಷ್ಟ ಸಂಪ್ರದಾಯಗಳ ಉಚ್ಚಾಟನೆ ಹೀಗೆ ಅವರ ಭಾಷೆಯೇ ವಚನವೆನಿಸಿ ಬದುಕಿನ ಸಿದ್ಧಾಂತವೆನಿಸಿತು. ಮಹಿಳೆಯರ ಶೋಷಣೆಯ ಮುಖ್ಯ ಕಾರಣ ಆರ್ಥಿಕ ಅಸಮಾನತೆ, ಶಿಕ್ಷಣದ ಕೊರತೆ ಎಂಬುದನ್ನು ಮನಗಂಡ ಶರಣರು ಆಕೆಯನ್ನು ಕಾಯಕ ಜೀವಿಯನ್ನಾಗಿಸಿದ್ದು ವ್ಯಕ್ತಿ ಗೌರವವನ್ನು ತಂದುಕೊಟ್ಟಿತು. ಅಂತೆಯೇ ಆಯ್ದಕ್ಕಿ, ಕನ್ನಡಿ ಕಾಯಕಬಾಚಿ, ನೀರು ಹೊರುವ, ಕಾಯಕಗಳು ನಮಗೆ ಇಂದಿಗೂ ಪ್ರಸ್ತುತವಾಗುತ್ತಿವೆ. ಉದಾತ್ತ ವಿಚಾರ ಆಂತರಿಕ ವಿಕಾಸಗಳು ಯಾವುದೇ ಜಾತಿಯ ಗುತ್ತಿಗೆಯಲ್ಲ ಎಂಬುದನ್ನು ಶಿವಶರಣರು ಸಿದ್ಧಮಾಡಿ ತೋರಿಸಿದರು. ಶತಮಾನಗಳಿಂದ ತುಳಿಯಲ್ಪಟ್ಟ ಶೂದ್ರ ಜನತೆಗೆ ಬದುಕುವ ಅವಕಾಶ ಲಭಿಸಿತು. ಅಧ್ಯಾತ್ಮದಲ್ಲಿ ಪಂಡಿತರು, ಮೇಲ್ವರ್ಗದವರು ಸಾಧಿಸಲಾಗದ್ದನ್ನು ಶೂದ್ರ ಹಣೆಪಟ್ಟಿ ಕಟ್ಟಿಕೊಂಡವರು ತಮ್ಮ ಲಲಾಟಲಿಪಿಯನ್ನ ಬರೆಸಿ ತಮ್ಮ ಅನುಪಮ ಸಾಧನೆಯಿಂದ ಹಿರಿಯ ಮಾಹೇಶ್ವರರೆನಿಸಿದರು. ಮಾದಾರ ಚೆನ್ನಯ್ಯ, ಮಹಾದೇವಿಯಕ್ಕನಂತವರು ಕಥಾನಾಯಕರಾದರು. ಸಾಕ್ಷರತೆಯ ಒಂದು ಪದ ಕಿವಿಯ ಮೇಲೆ ಬಿದ್ದರೆ ಕಾದಸೀಸೆ ಸುರಿಸಿಕೊಳ್ಳುತ್ತಿದ್ದರು ಧರ್ಮಶಾಸ್ತ್ರ ಪಾರಂಗತರಾದರು. ಮಹಿಳಾ ಸಮುದಾಯವಂತೂ ಸ್ತ್ರೀತ್ವರ ಅರಿವಿನಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ ಮುಡಿಯ ಮಲ್ಲಿಗೆಯೆನಿಸಿದರು. ವಿಚಾರಗಳ ಪರಿಪಕ್ವತೆ, ಭಾವನೆಯ ಅಭಿವ್ಯಕ್ತಿ, ಗುಣವಿಶಿಷ್ಟತೆ, ಸಮಕಾಲೀನ ಮೌಲ್ಯ ಹೆಚ್ಚಿಸುವಂತಾಯಿತು.

*ಸಾರ್ಥಕ ಪ್ರಯೋಗ*

ಜೀವನವನ್ನು ಸಮಗ್ರ ದೃಷ್ಟಿಯಿಂದ ನೋಡಿದ ಶರಣರಿಗೆ ಅದೇ ಅವರ ಅನುಭವರಂಗವಾಯಿತು. ಶರಣರು ಜೀವನವನ್ನು ದಿಟ್ಟತನದಿಂದ ಎದುರಿಸಿದರು. ಬಹಿರಂಗದ ಭೌತಜೀವನದ ಸಮಸ್ಯೆಗಳಿಗೆ ಎದೆಯೊಡ್ಡಿದಂತೆ ಅಂತರಂಗದ ಅಭೌತ ಅನಿಸಿಕೆಗಳನ್ನು ತಮ್ಮ ವಿಚಾರದ ಮೂಸೆಯಲ್ಲಿ ಕರಗಿಸಿ ಅನುಭವದ ಒರೆಗೆ ಹಚ್ಚಿದರು. ಜೀವ ಜಗತ್ತುಗಳನ್ನು ಸತ್ಯಲಿಂದು ಒಪ್ಪಿ, ಜೀವನ ಒಂದು ಕನಸೆಂದರೂ ಅದರ ವೈಶಿಷ್ಟ್ಯ ಮೆರೆದು ಮನುಷ್ಯ ಜೀವನದ ಸಾರ್ಥಕ ಪ್ರಯೋಗಕ್ಕೆ ಅನುವು ಮಾಡಿಕೊಟ್ಟರು. ಹೀಗಾಗಿ ಅವರ ಬದುಕು, ಬದುಕಿನ ಚಿಂತನಪರ ದೃಷ್ಟಿ ಇಂದಿಗೂ ತುಂಬ ಪ್ರಸ್ತುತವೆನಿಸಿವೆ. ಸಮತೆ ಸೌಹಾರ್ದತೆ ತಳಹದಿಯ ಸಮಾಜ ನಿರ್ಮಾಣಕ್ಕೆ ಭದ್ರ ತಳಹದಿ ಹಾಕಿವೆ.



---

**ಶಿವಶರಣನು ನಿದ್ದೆಗೈದಡೆ ಜಪ ಕಾಣಿರಣ್ಣ !**
**ಶಿವಶರಣನು ಎದ್ದಿದ್ದರೆ ಶಿವರಾತ್ರಿ, ಕಾಣಿರಣ್ಣ !**
**ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣ !**
**ಶಿವಶರಣನು ನಡೆದುದೇ ಪಾವನ ಕಾಣಿರಣ್ಣ !**
**ಶಿವಶರಣನು ನುಡಿದುದೇ ಶಿವತತ್ತ್ವ ಶಿವಮಂತ್ರ, ಕಾಣಿರಣ್ಣ !**
**ಶಿವಶರಣನ ಮನವೇ ಲಿಂಗ ಕಾಣಿರಣ್ಣ !**
**ಶಿವಶರಣನ ಕಾಯವೇ ಕೈಲಾಸ ಕಾಣಿರಣ್ಣ !**
**ಗುಹೇಶ್ವರಾ, ನಿಮ್ಮ ಶರಣನ ಚಾರಿತ್ರವು ವಿಪರೀತವು.**

– *ಅಲ್ಲಮಪ್ರಭು*

# ವೀರಶೈವ ಕ್ಷೇತ್ರಗಳು

– ಡಾ. ಬಿ.ಎಸ್. ಸ್ವಾಮಿ *

**ಬ**ಹಳ ಹಿಂದಿನಿಂದಲೂ ಕರ್ನಾಟಕ ಹಲವಾರು ಪುಣ್ಯಕ್ಷೇತ್ರಗಳಿಂದ ತುಂಬಿ ತುಳುಕಾಡುತ್ತಿದೆ. ಅನೇಕ ವೀರಶೈವ ವಿಭೂತಿ ಪುರುಷರು, ಶರಣರು, ಮಹಾಮಹಿಮರು, ಅವತಾರ ಪುರುಷರು ಉದಿಸಿ ತಮ್ಮ ಪಾದಧೂಳಿಯಿಂದ ಕರ್ನಾಟಕವನ್ನು ಪಾವನಗೊಳಿಸಿದ್ದಾರೆ. ಧರ್ಮ ಪ್ರಚಾರ ಮಾಡಿ, ಭಕ್ತರನ್ನು ಉದ್ಧರಿಸಿ, ಕೊನೆಯಲ್ಲಿ ಲಿಂಗೈಕ್ಯ ಹೊಂದಿದ್ದಾರೆ. ಅವುಗಳನ್ನು ಗದ್ದುಗೆಗಳೆಂದು ಕರೆದರು.

'ಗದ್ದುಗೆ' ಎಂದರೆ ವೀರಶೈವ ಸ್ವಾಮಿಗಳ ಸಮಾಧಿಯ ಮೇಲೆ ಒಂದು ಚಪ್ಪಡಿ ಹಾಕಿ ಅದರ ಮೇಲೆ ಒಂದು ಕಂಭವನ್ನು ಸ್ಥಾಪಿಸುವುದು ಎಂದರ್ಥ. ಕರ್ನಾಟಕ ಶರಣರ ಗದ್ದುಗೆಗಳ ಆಗರ. ಶರಣರು ಅಮರತ್ವ ಹೊಂದಿದಾಗ ಅವರನ್ನು **"ನಿರ್ವಯಲಾದರು"** ಎಂದು ಹೇಳಿ ಸಮಾಧಿ ಮಾಡುವರು. ಅದೇ **'ಗದ್ದುಗೆ'**. ಕಾಲಕ್ರಮೇಣ ಸಮಾಧಿಯ ಮೇಲೆ ಲಿಂಗ ಸ್ಥಾಪಿಸಿ ಲಿಂಗೈಕ್ಯರಾದರು. 'ಲಿಂಗ ರೂಪ' ತಾಳಿದರು ಎಂದು ಹೇಳುವರು. ಆಮೇಲೆ ಲಿಂಗದ ಮುಂದೆ ಒಂದು ಬಸವನನ್ನೂ ಪ್ರತಿಷ್ಠಾಪನೆ ಮಾಡುವರು. ಇದಕ್ಕೆ ಗುಡಿಗೋಪುರ ಕಟ್ಟಿದಾಗ ದೇವಾಲಯವಾಗಿ ಪರಿಣಮಿಸುವುದು. ಅದು ಜಾಗೃತ ಸ್ಥಾನವಾಗಿ, ಪವಿತ್ರ ಕ್ಷೇತ್ರ, ಪುಣ್ಯಕ್ಷೇತ್ರವೆಂದು ಕರೆಸಿಕೊಂಡು, ಭಕ್ತಾದಿಗಳು ದೇವಾಲಯ, ಮಠಗಳನ್ನು ನಿರ್ಮಾಣ ಮಾಡಿ ಪೂಜೆ-ಪುರಸ್ಕಾರ ಸಾಗುವಂತೆ ಮಾಡಿ ಭಕ್ತಿಯಿಂದ ನಮನ ಸಲ್ಲಿಸುತ್ತಾರೆ. ಈ ಪುಣ್ಯಕ್ಷೇತ್ರಗಳಿಂದ ಮನುಷ್ಯನಿಗೆ ಶಾಂತಿ, ನೆಮ್ಮದಿ, ಆನಂದ ದೊರೆಯುತ್ತದೆ.

ಗದ್ದುಗೆಗಳಲ್ಲಿ ಹಲವಾರು ವಿಧಗಳುಂಟು. ಅವುಗಳೆಂದರೆ ತೋರು ಗದ್ದುಗೆ, ಉರಿಗದ್ದುಗೆ, ಜಲಗದ್ದುಗೆಗಳೆಂದು. ಜನಪದ ಕವಿಗಳು ಜಲಗದ್ದುಗೆಯನ್ನು "ಪಾತಾಳಬಾವಿ" ಎಂದೂ ಕರೆಯುವರು.

ಸತ್ತ ಮೇಲೆ ಸಮಾಧಿ ಮಾಡುವುದು ಒಂದು ವಿಧ. ಜೀವಂತವಾಗಿ ಸಮಾಧಿಯಾಗುವುದು ಮತ್ತೊಂದು ವಿಧ. ಜೀವಂತ ಸಮಾಧಿ ಎಂದರೆ ಕಾಯ ಸಮೇತ ಕೈಲಾಸ ಸೇರಿದರೆಂದು ಅರ್ಥ. ಉದಾಹರಣೆಗೆ ತೋಂಟದ ಸಿದ್ಧಲಿಂಗೇಶ್ವರ, ಚಿತ್ರದುರ್ಗ ಜಿಲ್ಲೆಯ ನಾಯಕನ ಹಟ್ಟಿಯ ತಿಪ್ಪೇರುದ್ರಸ್ವಾಮಿ, ಎಡೆಯೂರು ಸಿದ್ಧಲಿಂಗೇಶ್ವರ, ಎಳ್ಳಿಶ್ವರ(?)ಸ್ವಾಮಿ, ಸಿದ್ಧರಾಮ, ಪಾಲ್ಕುರಿಕೆ ಸೋಮನಾಥ, ಮರುಳಸಿದ್ಧೇಶ್ವರ (ಕುಪ್ಪೂರು) ಚಂದ್ರಗುಂಡ ದೇಶಿಕರು (ಕೋಲಾರ ಜಿಲ್ಲೆಯ ಗೂಳೂರು) ತೋಪಿನ ಮಠದ ಶಿವಯೋಗಿಗಳೇ ಮುಂತಾದವರು ಜೀವಂತ ಸಮಾಧಿ ಹೊಂದಿದವರು.

**'ಉರಿಗದ್ದುಗೆ'** ಶರಣರು ಕುಳಿತುಕೊಳ್ಳುವ ಪವಿತ್ರ ತಾಣ. ಅದರ ಮೇಲೆ ಭತ್ತವೋ, ಜೀರಿಗೆಯನ್ನೋ ಎಸೆದರೆ ಅವು ಅವಲಾಗುತ್ತವೆ ಎಂದು ಹೇಳುವರು. ಅದರ ಮೇಲೆ ಗುರುಗಳು ಕುಳಿತು ತಮ್ಮ ಪೀಠದ ಕರ್ತವ್ಯವನ್ನು ನೆರವೇರಿಸುವರು. ಇದು ಭಕ್ತಾದಿಗಳು ಕುಳಿತುಕೊಳ್ಳುವುದಕ್ಕಿಂತ ಎತ್ತರದಲ್ಲಿರುತ್ತದೆ. ಇದರ ವಿನ್ಯಾಸ ಹೀಗೇ ಇರಬೇಕೆಂಬ ನಿಯಮವಿಲ್ಲ. ಇದನ್ನು ಯಾರು ತುಳಿಯುವುದಿಲ್ಲ. ಇದು ಗುರುಗಳ ಮಹತ್ತನ್ನು ಎತ್ತಿ ಹಿಡಿಯುತ್ತದೆ. ಭಕ್ತಾದಿಗಳು ಪೂಜ್ಯಭಾವನೆಯಿಂದ ಪೂಜಿಸುವರು.

ಕೆಲವು ಶರಣರು **'ಜಲ ಸಮಾಧಿ'** ಹೊಂದುವುದೂ ಉಂಟು. ಸಿದ್ಧರಾಮ ಕೆರೆಯಲ್ಲಿ ಐಕ್ಯನಾದರೆ, ಬಸವಣ್ಣನವರು ಕೂಡಲ ಸಂಗಮದಲ್ಲಿ ಐಕ್ಯವಾದರು. ಮಲೆಯ ಮಾದೇಶ್ವರರೂ ಹಾಗೆಯೇ ಜಲೈಕ್ಯರಾದರು ಎಂಬುದು (ಕಂಸಾಳೆ ಗುಡ್ಡರ) ಕಲಾವಿದರ ಅಭಿಪ್ರಾಯ. ಆಮೇಲೆ ಅದರ ಮೇಲೆ ಸೋಪಾನಗಳನ್ನು ನಿರ್ಮಿಸಿ ಗುಡಿಗೋಪುರಗಳನ್ನು ಕಟ್ಟಿದ್ದಾರೆ.

ಕೆಲವು ಶರಣರು ಹಲವಾರು ಕಡೆ ಪರ್ಯಟನೆ ಮಾಡಿ, ಅಲ್ಲಲ್ಲಿ ತಪ, ಅನುಷ್ಠಾನವೆಸಗಿ ಪವಿತ್ರಗೊಳಿಸಿದ್ದಾರೆ. ಅವೇ **'ತೋರು ಗದ್ದುಗೆ'**ಗಳು. ಕರ್ತೃ ಗದ್ದುಗೆಗೆ ಹೋಗಲು ಆಗದವರು ಇಲ್ಲಿ ಬಂದು ತಮ್ಮ ಪೂಜೆಯನ್ನು ಸಲ್ಲಿಸುತ್ತಾರೆ. ಸ್ಮೃತಿಗೋಸ್ಕರ ಆದ ಗದ್ದುಗೆಗಳೇ ತೋರುಗದ್ದುಗೆಗಳು. ಮಾದೇಶ್ವರ, ತೋಂಟದ ಸಿದ್ಧಲಿಂಗೇಶ್ವರ ಮುಂತಾದವರ ತೋರು ಗದ್ದುಗೆಗಳನ್ನು ಅನೇಕ ಸ್ಥಳಗಳಲ್ಲಿ ಕಾಣಬಹುದು.

* ಆರ್.ಪಿ.ಸಿ. ಲೇ ಔಟ್, ವಿಜಯನಗರ, ಬೆಂಗಳೂರು – ೫೬೦ ೦೪೦

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಪುಣ್ಯಕ್ಷೇತ್ರದ ಬಗೆಗೆ ವಿಶ್ಲೇಷಣೆ ನೀಡುತ್ತಾ "ಹಿಂದೂ ಧರ್ಮದಲ್ಲಿ ಕ್ಷೇತ್ರ ಮಹಾತ್ಮ್ಯವು ಎಲ್ಲ ಪುರಾಣೇತಿಹಾಸಗಳಲ್ಲಿಯೂ ನಿರೂಪಿತವಾಗಿದೆ. ಭಗವದ್ಗೀತೆಯ ಮೊದಲನೇ ಶ್ಲೋಕವೇ "ಧರ್ಮಕ್ಷೇತ್ರೇ ಕುರುಕ್ಷೇತ್ರೇ" ಎಂಬ ಕ್ಷೇತ್ರ ಮಹಾತ್ಮ್ಯದಿಂದ ಆರಂಭವಾಗಿದೆ. **'ಬಂದ ಕಾಲದ ಗುಣವೋ, ನಿಂದ ನೆಲದ ಗುಣವೋ'** ಎಂಬ ರಾಘವಾಂಕ ಕವಿಯ ಮಾತಲ್ಲಿ ನೆಲಕ್ಕೆ ಒಂದು ಗುಣ, ಶಕ್ತಿ ಇದೆ ಎಂಬುದು ವ್ಯಕ್ತವಾಗುತ್ತದೆ.

ಇವೆಲ್ಲವೂ ತೀರ್ಥಕ್ಷೇತ್ರಗಳ ಮಹಿಮೆಯನ್ನೇ ನಿರೂಪಿಸುತ್ತವೆಯಲ್ಲವೇ ? ವೀರಶೈವ ಕ್ಷೇತ್ರಗಳಲ್ಲಿ ಲಿಂಗಗಳಾಗಿರಬಹುದು, ಜ್ಯೋತಿರ್ಲಿಂಗವಾಗಿರಬಹುದು. ಶರಣರು, ವಿರಕ್ತರು ಮಹಾಮಹಿಮರು ಆಗಿಹೋಗಿರಬಹುದು. ಅವರುಗಳಲ್ಲಿ ವೀರಶೈವರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಹಲವಾರು ವೀರಶೈವ ಕ್ಷೇತ್ರಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿವಶರಣರ ವೀರಶೈವ ಕ್ಷೇತ್ರಗಳಿಲ್ಲ. ಇಲ್ಲಿ ಬಳ್ಳಾರಿಯ ಅಲ್ಲಿಪುರ ತಾತನವರು ತಿರುಗಾಡಿ ಹೋಗಿದ್ದಾರೆ. ಧರ್ಮಸ್ಥಳದ ಮಂಜುನಾಥನಿಗೆ ನಡೆದುಕೊಳ್ಳುವ ಅನೇಕ ವೀರಶೈವರಿದ್ದಾರೆ. ಕರ್ನಾಟಕದಲ್ಲಿ ಅನೇಕ ವೀರಶೈವ ಕ್ಷೇತ್ರಗಳಿದ್ದರೂ ಪ್ರಮುಖವಾದ ಕೆಲವು ಕ್ಷೇತ್ರಗಳ ಪಕ್ಷಿನೋಟವನ್ನು ನೀಡಲಾಗಿದೆ.

## ೧. ಮೈಸೂರು ಜಿಲ್ಲೆ

**ಗುರುಮಲ್ಲೇಶ್ವರ ಗದ್ದುಗೆ :** ನಂಜನಗೂಡಿನ ತಾಲ್ಲೂಕಿನ ದೇವನೂರಿನಲ್ಲಿದೆ. ಶಿವಮೊಗ್ಗ ಜಿಲ್ಲೆಯ ನ್ಯಾಮತಿಯ ಶರಣ ಬಸವಯ್ಯನವರು ಶಿವಮ್ಮ, ಶರ್ವಾಣಮ್ಮ ಎಂಬ ಪತ್ನಿಯರೊಡಗೂಡಿ ಮೈಸೂರಿಗೆ ಬಂದರು. ಆಗ ಮುಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯಭಾರ ಮಾಡುತ್ತಿದ್ದರು. ಶರ್ವಾಣಮ್ಮನಿಗೆ ಒಂದು ಗಂಡು ಮಗುವಾಯಿತು. ಅದಕ್ಕೆ **'ಗುರುಮಲ್ಲೇಶ್ವರ'** ಎಂದು ನಾಮಕರಣ ಮಾಡಿದರು. ಗುರಮಲ್ಲೇಶ್ವರರು ಭಕ್ತ ಸುಬ್ಬಯ್ಯನ ಪ್ರಾರ್ಥನೆಯಂತೆ ಆತನ ಹೆಂಡತಿಗೆ ಹಿಡಿದಿದ್ದ ಭೂತವನ್ನು ತಮ್ಮ ಮಂತ್ರ ಶಕ್ತಿಯಿಂದ ಬಿಡಿಸಿ ಕಾಪಾಡಿದರು. ಅನೇಕ ಪವಾಡಗಳನ್ನು ಎಸಗಿ ದೇವನೂರಿನಲ್ಲಿ ಮಠವೊಂದನ್ನು ನಿರ್ಮಿಸಿ, ದಾಸೋಹ ಕಾರ್ಯ ಮಾಡುತ್ತಾ, ಶಾಲಿವಾಹನ ಶಕ ೧೮೨೧ರ ಜೇಷ್ಠ ಬಹುಳ ತೃತೀಯ ಸೋಮವಾರದ ದಿನ ಲಿಂಗೈಕ್ಯರಾದರು. ಈಗಲೂ ಅವರ ಗದ್ದುಗೆ ಪುಣ್ಯಸ್ಥಳವೆನಿಸಿ ಭಕ್ತಾದಿಗಳಿಂದ ಪೂಜಿಸ ಕೊಳ್ಳುತ್ತಿದೆ.

**ನಂಜನಗೂಡು :** ನಂಜುಂಡೇಶ್ವರನಲ್ಲಿ ಪರಶುರಾಮ ತನ್ನ ತಾಯಿ ಕೊಂದ ಪಾಪವನ್ನು ಕಳೆದುಕೊಂಡನೆಂಬ ಪ್ರತೀತಿ ಇದೆ. ಇಲ್ಲಿ ವೀರಶೈವ ಮಠವಿದೆ. ನಂಜನಗೂಡಿನ ಶ್ರೀಕಂಠೇಶ್ವರ (ನಂಜುಂಡೇಶ್ವರ) ಕರ್ನಾಟಕದ ಅತಿದೊಡ್ಡ ಪ್ರಸಿದ್ಧ ದೇವಾಲಯ.

**ಕೆಂಡಗಣ್ಣ ಸ್ವಾಮಿ ಗದ್ದುಗೆ :** ಹುಣಸೂರು ತಾಲ್ಲೂಕಿನಲ್ಲಿ ಕೆಂಡಗಣ್ಣ ಸ್ವಾಮಿಯವರ ಗದ್ದುಗೆ ಇದೆ. ಕೆಂಡಗಣ್ಣ ಸ್ವಾಮಿಗಳು ಧಾರವಾಡ ಜಿಲ್ಲೆ ಸಿಗ್ಗಾವಿಯಲ್ಲಿ ಶ್ರೀಶೈಲ ರಾಜೇಂದ್ರ ಬಂಕಾಪುರದ ಕಾಶಿಯಮ್ಮ ಅವರ ಪುತ್ರ. ರಾಜಮನೆತನದಲ್ಲಿ ಬೆಳೆದ. ಅರವತ್ತು ಅಂಕಣ ಅರಮನೆ ವೈರಿಗಳಿಂದ ಸುಟ್ಟು ಹೋಗಲು ವಿರಕ್ತಿ ಉಂಟಾಗಿ ನಂಜನಗೂಡು ನಂಜುಂಡೇಶ್ವರ ದೇವಾಲಯದ ಮುಂಭಾಗದ ನದಿಯ ಹತ್ತಿರ ಮಠವನ್ನು ನಿರ್ಮಿಸಿಕೊಂಡಿದ್ದರು. ಒಂದೇ ಸಾರಿ ಇಬ್ಬರು ಭಕ್ತರ ಮನೆಯಲ್ಲಿ ಬಿನ್ನಹ ತೀರಿಸಿದರು. ಇವರ ಬಗ್ಗೆ ವೈಷ್ಣವರು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಚಾಡಿ ಹೇಳುವರು. ಆಗ ಅವರು ಬಂದು ಗೆದ್ದುಗೆಗೆ ಬೆಂಕಿ ಹಾಕಿ ಅದರ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ಆಗ ಅವರು ಅದರ ಮೇಲೆ ಕುಳಿತಾಗ ಕಣ್ಣುಗಳು ಕೆಂಪಾದವು. ಅಂದಿನಿಂದ **'ಕೆಂಡಗಣ್ಣ ಸ್ವಾಮಿ'** ಎಂಬ ಹೆಸರಾಯಿತು. ಹುಣಸೂರಿಗೆ ೧೮ ಮೈಲಿ ದೂರದಲ್ಲಿ ಇವರ ಗದ್ದುಗೆಯಿದೆ.

**ಸುತ್ತೂರು :** ಸುತ್ತೂರಿನಲ್ಲಿ ಶ್ರೀ ಶಿವರಾತ್ರಿ ಸ್ವಾಮಿಗಳ ಗದ್ದುಗೆ ಇದೆ. ಮಾದೇಶ್ವರರು ಇಲ್ಲಿ ರಾಗಿ ಬೀಸುವ ಪವಾಡವೆಸಗಿ, ದನಗಳಿಗೆ ಆಶೀರ್ವದಿಸಿ ಆರೋಗ್ಯವಂತರಾಗಿ ಮಾಡಿದರು.

**ತೋಪಿನಮಠ ಶಿವಯೋಗಿಗಳು :** ತೋಪಿನ ಮಠದ ಷಡಕ್ಷರ ಶಿವಯೋಗಿಗಳು ತಿರುಮಕೂಡಲು ನರಸೀಪುರಕ್ಕೆ ಆರು ಮೈಲು ದೂರದಲ್ಲಿ ಶಿವಕ್ಯ ಹೊಂದಿದರು. ಇವರು ವಾಕ್‌ಸಿದ್ಧಿ ಪಡೆದಿದ್ದರು. ಹೆಂಗಸರ ಮುಖವನ್ನು ನೋಡುತ್ತಿರಲಿಲ್ಲ. ಶರಣಮ್ಮ ಎಂಬವರು ಗುರುಗಳ ದರ್ಶನ ಮಾಡಬೇಕೆಂದರೂ ಒಪ್ಪಲಿಲ್ಲ. ಆಕೆಯ ಅಣ್ಣ ಬಂದು ಗುರುಗಳಲ್ಲಿ ದರ್ಶನ ಕೊಡಬೇಕೆಂದು ಬೇಡಿಕೊಂಡ. ಆಗ ಗುರುಗಳು 'ಸೋಮವಾರ ಹತ್ತು ಘಂಟೆಗೆ ನಾವು ಪೂಜೆಯಲ್ಲಿರುತ್ತೇವೆ. ಗಂಟೆ ಬಾರಿಸಿದಾಗ ಬನ್ನಿ' ಎಂದರು. ಹಾಗೆಯೇ ಗಂಟೆ ಬಾರಿಸಲು ಶರಣಮ್ಮ ಅಂತರಂಗದಲ್ಲಿ ಬಂದು ಅವರ ಪಾದ ದರ್ಶನ ಮಾಡಿ, ಅಂಗೈನ

ಲಿಂಗದಲ್ಲೇ ದೃಷ್ಟಿ ನೆಟ್ಟು ಶಿವನೊಳಗಾದರು. ಇದೂ ಒಂದು ಪುಣ್ಯ ಸ್ಥಳವಾಗಿದೆ.

ತಲಕಾಡಿನಲ್ಲಿ ೩೦ ಕ್ಕೂ ಹೆಚ್ಚು ದೇವಾಲಯಗಳಿವೆ. ಇವು ಗಂಗ ಹಾಗೂ ಚೋಳರ ಹೊಯ್ಸಳ, ಮೈಸೂರು ಅರಸರುಗಳ ಕಾಲದ್ದು. ಪಂಚಲಿಂಗೇಶ್ವರ ದೇವಾಲಯಗಳಾದ ಅರ್ಕೇಶ್ವರ, ಮರುಳೇಶ್ವರ, ಮಲ್ಲಿಕಾರ್ಜುನೇಶ್ವರ, ವಾಸುಕೀಶ್ವರ, ವೈದ್ಯ ನಾಥೇಶ್ವರ ದೇವಾಲಯಗಳು ಪ್ರಸಿದ್ಧಿ. ಹನ್ನೆರಡು ವರ್ಷಗಳಿಗೊಮ್ಮೆ ಪಂಚಲಿಂಗ ದರ್ಶನವಾಗುತ್ತದೆ. ಮರಳಲ್ಲಿ ಹೂತು ಕೊಳ್ಳುವ ದೇವಾಲಯಗಳನ್ನು ಬಿಡಿಸಿ ಪೂಜೆ ಸಲ್ಲಿಸುತ್ತಾರೆ.

**ಕಂಬಳ ಸ್ವಾಮಿಗಳ ಗದ್ದುಗೆ** : ಮಲ್ಲನ ಮೂಲೆಯಲ್ಲಿ ಕಂಬಳಿ ಸ್ವಾಮಿಗಳ ಗದ್ದುಗೆ ಇದೆ.

ಯಳಂದೂರಿನಲ್ಲಿ ಷಡಕ್ಷರನ ಗದ್ದುಗೆ ಇದೆ.

## ೨. ಚಿಕ್ಕಮಗಳೂರು ಜಿಲ್ಲೆ

**ಮುಲ್ಲಯ್ಯನ ಗಿರಿ** : ಸೀತಾಳ ಮಲ್ಲಯ್ಯ ಶರಣರು ಐಕ್ಯವಾದ ಸ್ಥಳ. ಸೀತಾಳ ಮಲ್ಲಿಕಾರ್ಜುನ ಮಠವಿದೆ. ಇಲ್ಲಿ ಬಿಸಗ್ನಿ ಮಠದ ಪ್ರಭುಲಿಂಗ ಶಿವಾಚಾರ್ಯ ಸ್ವಾಮಿಗಳು ಕುದಿವ ನೀರಿನಲ್ಲಿ ಸ್ನಾನ ಮಾಡಿದರಂತೆ. ಅವರ ಗದ್ದುಗೆ ಇದೆ.

**ನಿರ್ವಾಣಸ್ವಾಮಿ ಮಠ** : ಕಾವಿಕಲ್ ಮಠ, ಫಲಹಾರ ಸ್ವಾಮಿ ಮಠ, ಚನ್ನದೇವರ ಮಠ, ಪರದೇಶಪ್ಪನ ಮಠ, ವೀರಶೈವ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ರೇಣುಕಾ ಶಿವಾಚಾರ್ಯರು ಸ್ಥಾಪಿಸಿದ ಬಾಳೆಹೊನ್ನೂರು ಮಠ, ಆಣೂರು ಮಠ, ಇಂದಾವರ ಗ್ರಾಮದಲ್ಲಿ ಚಾಕಿ ಮಠ, ಚೆನ್ನಗೊಂಡನಹಳ್ಳಿಯ ಹೊಸಮಠ, ಚೇರುಗುಂಡಿ ಮಠ, ವಸ್ತಾರೆ ಕೆಳಗೂರು ಮಠ, ಶಿವಾನಂದರ ಸಮಾಧಿಯು ಅಜ್ಜಂಪುರದಲ್ಲಿದೆ. ಚಕ್ಕೆರೆ ಪುಡಿಯಲ್ಲಿ ಶರಣರ ಗದ್ದುಗೆಗಳು, ಕಡೂರಿನಲ್ಲಿ ಯಳನಾಡು ಮಠ ನರಸಿಂಹರಾಜ ಪುರದಲ್ಲಿ ವೀರಭದ್ರೇಶ್ವರ ದೇವಾಲಯ, ಮೂಡಿಗೆರೆ ತಾಲ್ಲೂಕಿನಲ್ಲಿ ಹಾಂದಿಹೊಸಮಠ, ಮುಗುವಳ್ಳಿಯ ಹತ್ತಿರ ಸಪ್ಪೆದೇವರ ಮಠ, ಆರದನಹಳ್ಳಿಯಲ್ಲಿ ಶಂಕರದೇವರ ಮಠ, ದೊಡ್ಡ ಕುರುಬರ ಹಳ್ಳಿಯ ಜಬಾಲಿಪುರ ಮಠ, ಮೂಡಿಗೆರೆ ರುದ್ರಾಕ್ಷಿಮಠ, ಸಿಂದಗೆರೆ ಕದಡಿ ಗವಿಮಠ, ಹುಲಿಕೆರೆದೊಡ್ಡ ಮಠ, ಹುಲಿಗೆರೆ ಪಂಚಪೀಠಗಳಲ್ಲೊಂದಾದ ಶ್ರೀಶೈಲ ಪೀಠದ ಶಾಖಾಮಠದ ದೊಡ್ಡ ಮಠದಲ್ಲಿ ಶ್ರೀ ಮರುಳಸಿದ್ಧ ಶಿವಾಚಾರ್ಯರು ಶಿವೈಕ್ಯವಾದ ಸ್ಥಳ ಮುಂತಾದವು ಇವೆ.

ಉತ್ತರ ಕರ್ನಾಟಕದಿಂದ ಬಂದ ಶಿವಶರಣರೊಬ್ಬರು ಕರಡಿ ಗವಿಮಠದಲ್ಲಿ ಅನುಷ್ಠಾನ ಮಾಡಿ ಗದ್ದುಗೆಯಾದರು. ತರೀಕೆರೆ ತಾಲ್ಲೂಕು ಬಾಳೆಹೊನ್ನೂರು ಶಾಖಾಮಠವೇ ಹಾಲುಸ್ವಾಮಿ ಮಠ, ಕಡೂರು ತಾಲ್ಲೂಕು ಕಂಚುಕಲ್ ದೊಡ್ಡಮಠ, ಹೆಣ್ಣೆ ಮಠವು ತರೀಕೆರೆ ತಾಲ್ಲೂಕು ಅಜ್ಜಂಪುರದಲ್ಲಿದೆ. ಇದು ಶ್ರೀಶೈಲ ಶಾಖಾಮಠ. ಕಡೂರು ತಾಲ್ಲೂಕಿನ ಎಣ್ಣೆ ಹೊಳೆಮಠ, ಶರಣೆ ಅಕ್ಕನಾಗಮ್ಮ ಐಕ್ಯವಾದ ಸ್ಥಳ, ನುಲಿಯ ಚಂದಯ್ಯ ಅನುಷ್ಠಾನ ಮಾಡಿದ ಸ್ಥಳ, ಹುಬ್ಬಳ್ಳಿ ಮೂರು ಸಾವಿರ ಮಠದ ಶಾಖಾಮಠ, ಯಗಟಿಪುರದಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ತುರುವನಹಳ್ಳೀಯಲ್ಲಿ ಗುರು ನಿರ್ವಾಣಸ್ವಾಮಿ ಮಠ, ವಪ್ಪುಣಸೆ ಮರುಳಸಿದ್ದೇಶ್ವರ ಮಠವು ತರೀಕೆರೆ ತಾಲ್ಲೂಕಿನಲ್ಲಿದೆ. ಹೊಗರೆಖಾನ್ ಗವಿಮಠದಲ್ಲಿ ಸಿದ್ದೇಶ್ವರಸ್ವಾಮಿ ಗದ್ದುಗೆ ಇದೆ.

## ೩. ಕೊಡಗು ಜಿಲ್ಲೆ :

ಕೊಡಗಿನಲ್ಲಿ ಲಿಂಗರಾಜ ೧೮೨೦ ರಲ್ಲಿ ಕಟ್ಟಿಸಿದ ಓಂಕಾರೇಶ್ವರ ದೇವಾಲಯ, ಸೋಮವಾರಪೇಟೆ ತಾಲ್ಲೂಕಿನಲ್ಲಿ ನಂಜುಂಡೇಶ್ವರ ದೇವಾಲಯ, ಸೋಮೇಶ್ವರ, ಬಸವೇಶ್ವರ ದೇವಾಲಯಗಳಿವೆ. ಪವಿತ್ರ ಕಾವೇರಿ ಉಗಮ ಸ್ಥಳವಿರುವುದು ಇಲ್ಲಿಯೇ.

## ೪. ಬಳ್ಳಾರಿ ಜಿಲ್ಲೆ :

**ಕೊಟ್ಟೂರು ಬಸವೇಶ್ವರ** : ಕೂಡ್ಲಿಗಿ ತಾಲ್ಲೂಕಿನ ಹೊಸಪೇಟೆಗೆ ೪೦ ಮೈಲಿ ದೂರದಲ್ಲಿನ ಕೊಟ್ಟೂರಿನಲ್ಲಿ ಬಸಪ್ಪ ಸ್ವಾಮಿ ಎಂಬವರು ಸಮಾಧಿಯಾದ ಸ್ಥಳವೇ ಕೊಟ್ಟೂರು ಬಸವೇಶ್ವರ ದೇವಾಲಯ. ಇವರ ಕಾಲ. ಕ್ರಿ.ಶ. ೧೭ನೇ ಶತಮಾನ. ಇವರು ಜನರ ರೋಗ ವಾಸಿ ಮಾಡಿ, ಮಕ್ಕಳಿಲ್ಲದವರಿಗೆ ಸಂತಾನ ಭಾಗ್ಯ ಕರುಣಿಸಿದ್ದಾರೆ. ಕಣ್ಣಿಲ್ಲದವರಿಗೆ ದೃಷ್ಟಿ ನೀಡಿದ್ದಾರೆ. ಅನೇಕ ಪವಾಡಗಳೆಸಗಿ ದೇವರಾಗಿ ಮೆರೆಯುತ್ತಿದ್ದಾರೆ.

ಉಜ್ಜಯಿನಿಯಲ್ಲಿ ವೀರಶೈವ ಪಂಚಪೀಠಗಳಲ್ಲಿ ಒಂದಾದ ಧರ್ಮಸಿಂಹಾಸನ ಮಠ ಹಾಗೂ ಮರುಳಸಿದ್ದೇಶ್ವರ ದೇವಾಲಯವಿದೆ.

**ಪಂಪಾಕ್ಷೇತ್ರ** : ಹಂಪಿಯಲ್ಲಿರುವ ಹೇಮಕೂಟ ಪರ್ವತದಲ್ಲಿ ವಿರೂಪಾಕ್ಷ, ಪಂಪಾಬಿಕೆ, ಭುವನೇಶ್ವರಿ ದೇವಾಲಯಗಳಿವೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಇನ್ನೂ ಅನೇಕ ದೇವಾಲಯಗಳು ನಿರ್ಮಿತವಾಗಿವೆ. ಇಲ್ಲಿ

ಮಹಾಕವಿ ಹರಿಹರ, ರಾಘವಾಂಕ, ಚಾಮರಸ, ವಿರೂಪಾಕ್ಷ ಪಂಡಿತ ಮೊದಲಾದ ಶರಣ ಕವಿಗಳು ಆಗಿಹೋಗಿದ್ದಾರೆ. ಹೊಸಪೇಟೆಯ ಹತ್ತಿರ ಜಂಬುನಾಥದಲ್ಲಿ ಜಂಬುನಾಥೇಶ್ವರ ದೇವಾಲಯವಿದೆ. ಕುರುಗೋಡಿನಲ್ಲಿ ಬೃಹದಾಕಾರದ ವೃಷಭ ವಿಗ್ರಹವಿದೆ. ಸೊಂಡೂರಿನಲ್ಲಿ ಸುಬ್ರಹ್ಮಣ್ಯ ದೇವಾಲಯವಿದೆ. ಲೇಪಾಕ್ಷಿದಲ್ಲಿ ವೀರಭದ್ರ ದೇವಾಲಯವಿದೆ. ಗವಿಸಿದ್ಧೇಶ್ವರ ತಪೋಭೂಮಿ ಇದೆ. ಕಾನಾಮಡು ದಾಸೋಹ ಮಠ, ಬಳ್ಳಾರಿ ಪಟ್ಟಣದಲ್ಲಿ ಮರಿಸ್ವಾಮಿಗಳ ಮಠವಿದೆ. ಎಮ್ಮೆ ಬಸವ ಎಂಬ ಕಾಲಜ್ಞಾನಿಯು ಇದ್ದ ಜಿಲ್ಲೆ ಇದು.

**ಎರ್ರಿತಾತ** : ಬಳ್ಳಾರಿ ತಾಲ್ಲೂಕಿನ ಚಳ್ಳಕುರ್ಕಿಯಲ್ಲಿ ಎರ್ರಿ ತಾತ ಶಿವಯೋಗಿಗಳ ಜೀವಂತ ಸಮಾಧಿ ಇದೆ. ಇವರು ೧೮೭೧ ರಲ್ಲಿ ಬಂದು ೨೫ ವರ್ಷಗಳು ಜೀವಿಸಿದ್ದು ಅನೇಕ ಪವಾಡಗಳನ್ನೆಸಗಿದ್ದಾರೆ. ಸತ್ತ ಎಮ್ಮೆ ಬದುಕಿಸಿದರು. ನದಿಯ ಪ್ರವಾಹದಲ್ಲಿ ಅಚಲವಾಗಿ ಕುಳಿತು ಪವಾಡವೆಸಗಿದವರು.

**ಮೈಲಾರದ ಬಸವಲಿಂಗ ಶರಣರು** : ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಮೈಲಾರ ಗ್ರಾಮದಲ್ಲಿ ನಿಷ್ಠಾವಂತ ವರ್ತಕ ಬಸವಪ್ಪ ಶೆಟ್ಟಿ ಎಂಬವರು ಇದ್ದರು. ಒಮ್ಮೆ ಹಾಲವರ್ತಿ ಚೆನ್ನವೀರ ಸ್ವಾಮಿಗಳು ಲಿಂಗನಾಯಕನ ಹಳ್ಳಿಗೆ ಬಂದರು. ಬಸವಪ್ಪಶೆಟ್ಟರು ಇವರ ಶಿಷ್ಯರಾಗಿ ಶಿವಾನುಭವ ದರ್ಪಣ, ಗುರುಕರಣ ತ್ರಿವಿಧ, ಲಿಂಗಪೂಜಾವಿಧಾನ ಇತ್ಯಾದಿ ಕೃತಿಗಳನ್ನು ರಚಿಸಿ ಕೈವಲ್ಯ ಹೊಂದಿದರು. ಇಲ್ಲಿ ಮೈಲಾರ ಬಸವಲಿಂಗರ ಗದ್ದುಗೆಯಿದೆ.

## ೫. ಬೀದರ್ ಜಿಲ್ಲೆ :

**ಹಾರಕೂಡ ಬಸವ ಶಿವಯೋಗಿಗಳು** ೧೮೫೨ ರಲ್ಲಿ ಗುಲ್ಬರ್ಗಕ್ಕೆ ೧೮ ಮೈಲಿ ದೂರದ ಮಗ್ಗ ಎಂಬ ಊರಿನ ಮಠದ ಚನ್ನಯ್ಯ-ಶಿವಯ್ಯ ಅವರ ಮಗನಾಗಿ ಜನಿಸಿದರು. ಬಸವ ಕಲ್ಯಾಣ ತಾಲ್ಲೂಕಿನ ಹಾರಕೂಡ ಗ್ರಾಮದ ಬಸವಲಿಂಗ ಸ್ವಾಮಿಗಳು ತಮ್ಮ ಮಠಕ್ಕೆ ಇವರನ್ನು ಸ್ವಾಮಿಗಳನ್ನಾಗಿ ಮಾಡಿದರು. ಇವರು ಹಾರಕೂಡದಲ್ಲಿ ಗದ್ದುಗೆಯಾದರು.

**ಬಸವಕಲ್ಯಾಣ** : ಕಲ್ಯಾಣದಲ್ಲಿ ಚಾಲುಕ್ಯರು ಆಳಿದರೂ ಕಳಚುರಿಯ ಬಿಜ್ಜಳ ಆಳುತ್ತಿದ್ದಾಗ ಬಸವಣ್ಣ ಮಂತ್ರಿಯಾಗಿ, ಕ್ರಾಂತಿಕಾರಿಯಾಗಿ ಧರ್ಮ ಪ್ರಚಾರಕನಾಗಿ ಗುರುತಿಸಿಕೊಂಡ. ಬಸವಣ್ಣ ಹಾಗೂ ಅನೇಕ ಶರಣರ ಪಾದಧೂಳಿನಿಂದ ಕಲ್ಯಾಣ ಪಾವನವಾಯಿತು. ಪರುಷ ಕಟ್ಟೆಯಲ್ಲಿ ಪ್ರಭುದೇವರು ಪ್ರವಚನ ಮಾಡುತ್ತಿದ್ದರಂತೆ. ಬಸವಣ್ಣನವರು ಜನರ ಕಷ್ಟಸುಖಗಳನ್ನು ವಿಚಾರಿಸಲು ಇಲ್ಲಿ ಕುಳಿತುಕೊಳ್ಳುತ್ತಿದ್ದರಂತೆ. ಇಲ್ಲಿ ವೀರಶೈವ ಮಠಗಳಿವೆ. ಅಲ್ಲಮಪ್ರಭುಗಳು ವಾಸವಾಗಿದ್ದ ಸ್ಥಳವೇ ಪ್ರಭುದೇವರ ಗದ್ದುಗೆ. ಮೋಳಿಗೆ ಮಾರಯ್ಯ, ಹರಳಯ್ಯ, ಅಕ್ಕನಾಗಮ್ಮನ ಗವಿ, ಬಸವಣ್ಣನ ಮಹಾಮನೆ, ಅಕ್ಕನಾಗಮ್ಮನ ಗವಿಯ ಹಿಂದೆ ಇದ್ದಿತೆಂಬ ಪ್ರತೀತಿ. ತ್ರಿಪುರಾಂತಕ ಕೆರೆಯ ಸುತ್ತಮುತ್ತ ನುಲಿಯ ಚಂದಯ್ಯನ ಗವಿ, ಮಡಿವಾಳ ಮಾಚಯ್ಯನ ಹೊಂಡ, ರುದ್ರಮುನಿ ಗವಿ, ಅನುಭವ ಮಂಟಪ, ಉರಿಲಿಂಗಪೆದ್ದಿ ಮಠ ಮುಂತಾದವುಗಳಿವೆ. ಹಲಸೂರಿನಲ್ಲಿ ವೀರಭದ್ರೇಶ್ವರ ದೇವಾಲಯವಿದೆ.

**ಭಾಲ್ಕಿ** : ೧೩ನೇ ಶತಮಾನದಲ್ಲಿದ್ದ ಶಾಂತಲಿಂಗೇಶ್ವರ ಮಹಾಸ್ವಾಮಿಗಳವರು ಭಾಲ್ಕಿ ತಾಲ್ಲೂಕಿನ ಹುಲಿಕುಂಟೆಯಲ್ಲಿ ಮಠ ಸ್ಥಾಪಿಸಿದ್ದಾರೆ. ಖಟಕ ಚಿಂಚೋಳಿಯ ಶರಣ ಮಡಿವಾಳಪ್ಪ ೧೯ನೇ ಶತಮಾನದಲ್ಲಿ ಪ್ರಸಿದ್ಧರಾಗಿದ್ದರು. ಭಾಲ್ಕಿಯಲ್ಲಿ ಭಾಲ್ಕೇಶ್ವರ ದೇವಾಲಯ, ಕುಂಬಾರ ಗುಂಡಯ್ಯ-ಕೇತಲದೇವಿಯರ ಸ್ಮಾರಕವಾಗಿ ಕುಂಭೇಶ್ವರ ದೇವಾಲಯ, ಶರಣ ಉರಿಲಿಂಗಿ ಪೆದ್ದಿಯ ಮಠಗಳಿವೆ. ನಾವದಿಗಿಯ ರೇವಪ್ಪಯ್ಯ ಶರಣರು ಬಸವಣ್ಣನವರ ಪರಮಭಕ್ತರಾಗಿದ್ದರು. ಸಿದ್ಧೇಶ್ವರ ಗ್ರಾಮದಲ್ಲಿ ಸಿದ್ಧೇಶ್ವರ ದೇವಾಲಯವಿದೆ.

**ಬಸವತೀರ್ಥ** : ೧೨ನೇ ಶತಮಾನದ ಶಿವಶರಣರ ತಪಸ್ಸಿನ ಕೇಂದ್ರ, ಬಸವಣ್ಣನವರೂ ಇಲ್ಲಿ ತಂಗಿದ್ದರೆಂದು ಅಭಿಪ್ರಾಯವಿದೆ.

**ಮೋಳಖೇರಾ** : ಇಲ್ಲಿ ಮೋಳಿಗೆ ಮಾರಯ್ಯನ ಗವಿ ಇದೆ. ಕರಕನಹಳ್ಳಿಯಲ್ಲಿನ ಬಕ್ಕಪ್ರಭುಗಳೆಂಬ ಶಿವಯೋಗಿಗಳಿದ್ದರು. ಚಿಟಗುಪ್ಪಾದಲ್ಲಿ ಕರಿಬಸವಪ್ಪನವರ ಶಿಷ್ಯ ಮಡಿವಾಳಪ್ಪನ ಐಕ್ಯಸ್ಥಳವಿದೆ. ಬೆಳಖೇರಾದಲ್ಲಿ ಶರಣರ ಗದ್ದುಗೆಗಳಿವೆ.

## ೬. ಗುಲ್ಬರ್ಗ ಜಿಲ್ಲೆ

**ಶರಣ ಬಸವೇಶ್ವರ ಗದ್ದುಗೆ** : ಗುಲ್ಬರ್ಗದಲ್ಲಿದೆ. ಮಕ್ಕಳಿಲ್ಲದವರು ಸಾವಿರ ರೂಪಾಯಿ ಕಾಣಿಕೆ ಕೊಡುವೆ ಎಂದರೆ ಮಕ್ಕಳಾಗುವುವು ಎಂಬ ನಂಬಿಕೆ ಸುತ್ತಮುತ್ತಣ ಜನರಿಗೆ. ಅದಕ್ಕೇ **'ಸಾವಿರ ರೂಪಾಯಿ ಶರಣ ಬಸಪ್ಪ'** ಎಂಬ ಖ್ಯಾತಿ. ಶರಣ ಬಸವೇಶ್ವರರು ಹೊತ್ತಿಸಿದ ನಂದಾದೀಪ ಇನ್ನೂ ಪ್ರಜ್ವಲಿಸುತ್ತಿದೆ. ಅವರು ಆರಂಭಿಸಿದ ದಾಸೋಹ ಈಗ ಇಲ್ಲವಾಗಿದೆ. ಪ್ರತಿವರ್ಷ

ಇಲ್ಲಿ ಜಾತ್ರೆ ನಡೆಯುತ್ತದೆ. ಶರಣಬಸಪ್ಪನವರು ಅರಳಗುಂಡಿಗೆ ಎಂಬ ಊರಲ್ಲಿ ಆದಯ್ಯ-ಮಡಿಯಮ್ಮ ದಂಪತಿಗಳಿಗೆ ಮಗುವಾಗಿ ಜನಿಸಿದರು. ತಂದೆ-ತಾಯಿಯರು ಮಗುವಿಗೆ ಬಸಪ್ಪ ಎಂದು ನಾಮಕಾರಣ ಮಾಡಿದರು. ಬೆಳೆದು ದೊಡ್ಡವರಾದ ಬಸಪ್ಪನಿಗೆ ಮಹಾದೇವಿ ಎಂಬಾಕೆಯೊಡನೆ ವಿವಾಹವಾಯಿತು. ಕೃಷಿಯಿಂದ ಜೀವನ ಸಾಗುತ್ತಿತ್ತು. ಇವರು ಬಾಳುವುದನ್ನು ಸೋದರರು ನೋಡಿ ಸಹಿಸದವರಾದರು. ಇವರಿಂದ ದೂರವಾದರಲ್ಲದೆ ಸಾಲದ ಹೊರೆಯನ್ನು ಹೊರಿಸಿದರು. ಬಸಪ್ಪ ಸಾಲ ತೀರಿಸುವ ಹೊತ್ತಿಗೆ ಹೆಂಡತಿ-ಮಗ ಕೈಲಾಸವಾಸಿಯಾದರು. ಸನ್ಯಾಸ ಕೈಗೊಂಡ ಬಸಪ್ಪ ಗುಲ್ಬರ್ಗಕ್ಕೆ ಬಂದರು. ಅಲ್ಲಿ ಪವಾಡಗಳಿಂದ ಮೆರೆದರು. ಬ್ರಾಹ್ಮಣ ಹೆಣ್ಣು ಮಗಳಿಗೆ ಇಪ್ಪತ್ತೊಂದು ತಿಂಗಳಾದರೂ ಹೆರಿಗೆ ಆಗದಿರಲು ಇವರ ಕೃಪೆಯಿಂದ ಆಕೆಗೆ ಪ್ರಸವಾಯಿತು. ಕುರುಡನಿಗೆ ಕಣ್ಣು ಬಂತು. ದೆವ್ವ ಹಿಡಿದವಳಿಗೆ ದೆವ್ವ ಬಿಟ್ಟಿತು. ಒಂದು ದಿನ ದಾಸೋಹಕ್ಕೆ ತುಪ್ಪ ಇಲ್ಲದಿರಲು ಬಾವಿಯ ನೀರನ್ನೇ ಹಾಕು ಅದು ತುಪ್ಪವಾಗಿ ಪರಿಣಮಿಸಿತು. ಹೀಗೆ ಹಲವಾರು ಪವಾಡಗಳನ್ನೆಸಗಿ, ಅಲ್ಲೇ ಗದ್ದುಗೆಯಾದರು. ಅದೇ ಇಂದು ಶರಣ ಬಸವೇಶ್ವರ ದೇವಾಲಯ ಎಂದು ಪ್ರಸಿದ್ಧಿಯಾಗಿದೆ.

**ಷಣ್ಮುಖಸ್ವಾಮಿ ಗದ್ದುಗೆ :** ವಚನ ಸಾಹಿತ್ಯದಲ್ಲಿ ಶರಣ ಷಣ್ಮುಖಸ್ವಾಮಿಗಳ ಹೆಸರು ದೊಡ್ಡದು. ಗುರು ಅಖಂಡೇಶ್ವರರ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಗುಲ್ಬರ್ಗ ಜಿಲ್ಲೆಯ ಜೇವರಗಿಯ ಮಲ್ಲಿಶೆಟ್ಟಪ್ಪ ಮತ್ತು ದೊಡ್ಡಮಾಂಬೆಯರ ಮಗನಾಗಿ ೧೬೩೯ ರಲ್ಲಿ ಜನಿಸಿದರು. ಇವರಿಗೆ ಧಾರ್ಮಿಕ ಒಲವು ವೈರಾಗ್ಯ ಅಪಾರವಾಗಿತ್ತು. ಗುರು ಅಖಂಡೇಶ್ವರರು ದೀಕ್ಷೆ ನೀಡಿ ಜೆವರ್ಗಿ ಮಠಕ್ಕೆ ಪಟ್ಟ ಕಟ್ಟಿದರು. ೧೭೧೧ ರಲ್ಲಿ ಷಣ್ಮುಖ ಸ್ವಾಮಿಗಳು ಇಲ್ಲೇ ಬಯಲಾದರು. ಇಂದಿಗೂ ಈ ಶರಣರ ಗದ್ದುಗೆಯು ರಾರಾಜಿಸುತ್ತುದೆ. ಪ್ರಸಿದ್ಧ ವೀರಶೈವ ಕ್ಷೇತ್ರವಾಗಿ ಮೆರೆಯುತ್ತಿದೆ.

ನೆಲೋಗಿಯಲ್ಲಿ ಕೋಲು ಶಾಂತಯ್ಯನ ಗದ್ದುಗೆ ಇದೆ. ಹೊಸ ಗುಂಟಿಯಲ್ಲಿ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ಇದ್ದ. ಕೋಳಕೂರಿನಲ್ಲಿ ಸೊಪ್ಪಸಿದ್ಧಮಠವಿದೆ. ಸೊನ್ನದಲ್ಲಿ ಸಿದ್ಧಲಿಂಗ ಶಿವಯೋಗಿಗಳ ಮಠವಿದೆ. ಶಹಪುರ ತಾಲ್ಲೂಕಿನ ಶಿರವಾಳ-ಸಿರಿಯಾಳ ಶೆಟ್ಟಿಯ ಹುಟ್ಟೂರು ಎಂಬ ಪ್ರತೀತಿ.

ಶಹಪುರ ಶರಣರ ಬೀಡು. ಕೋಳೂರು ಕೊಡಗೂಸು (ಚನ್ನಕ್ಕ) ಶರಣ ಸಗರ ಬ್ರಹ್ಮಯ್ಯ, ಸಗರ ನಾಚಯ್ಯ, ಶಿರವಾಳದ ಸಿದ್ಧಫಕೀರೇಶ್ವರ, ಇಟಗಿಯ ನಿಜಗುಣ ಶಿವಯೋಗಿ ಮುಂತಾದವರು ಇಲ್ಲಿಯವರೇ. ಕ್ಷೇತ್ರಫಲದಲ್ಲಿ ಕ್ಷೇಮಲಿಂಗೇಶ್ವರ ದೇವಾಲಯವಿದೆ. ಗುಪ್ತ ನಾರಸಿಂಹ, ಲಕ್ಷ್ಮೀ, ಸರ್ವ, ಭಾವನಾಶ, ರುದ್ರ ಹಾಗೂ ರಾಮ ತೀರ್ಥಗಳಿವೆ.

**ಚಿಂಚೋಳಿ**ಯಲ್ಲಿ ಮಹಾಂತೇಶ್ವರ ಮಠವಿದೆ. ಮಹಾಂತೇಶ್ವರರು ತಪೋನಿಷ್ಠರಾಗಿದ್ದು ಜನರಿಗೆ ಉಪಕಾರವೆಸಗಿದರು. ಶೋರಾಪುರ ತಾಲ್ಲೂಕಿನ ಕೊಡೆಕಲ್ಲಿನಲ್ಲಿ ಚನ್ನಬಸವಣ್ಣನ ಮಂದಿರವಿದೆ. ಮುದನೂರು ದೇವರ ದಾಸಿಮಯ್ಯನ ಹುಟ್ಟೂರು. ಕೆಂಭಾವಿಯಲ್ಲಿ ಭೋಗಣ್ಣನೆಂಬ ಶರಣನಿದ್ದ.

**ಗುಲ್ಬರ್ಗ** ಹತ್ತಿರ ನಂದೂರು ಮಠ, ಕೋರಿಸಿದ್ಧೇಶ್ವರ ಮಠ, ಸಾವಳಿಗೆಯ ಶಿವಲಿಂಗೇಶ್ವರ, ಕಡಕೋಳ ಮಡಿವಾಳಪ್ಪನ ಐಕ್ಯಸ್ಥಲ ಕೃಷ್ಣಾಪುರದ ಹತ್ತಿರವಿದೆ. ಆಂದೋಲಿಯ ಕರುಣೇಶ್ವರ, ಗೂಗಲ್ಲು ಪರಪ್ಪಯ್ಯ ಮುಂತಾದ ಶರಣರ ಆಗರ ಗುಲ್ಬರ್ಗ ಜಿಲ್ಲೆ.

**ಚರಬಸವೇಶ್ವರರು :** ಶೀಲವಂತಯ್ಯ ಅಮ್ಮವ್ವೆಯರಿಗೆ ಅನವಾರದ ಚೆನ್ನವೀರಸ್ವಾಮಿಗಳ ಆಶೀರ್ವಾದದಿಂದ ಇಳಿವಯುಸ್ಸಿನಲ್ಲಿನ ಬಸವನೆಂಬ ಮಗ ಜನಿಸಿದ. ಆತನೇ ಚರಬಸವ. ಈತನಿಗೆ ಸೂಗಮ್ಮನವರೊಡನೆ ವಿವಾಹವಾಯಿತು. ಜವಳಿ ವ್ಯಾಪರದಿಂದ ಜೀವನ ಸಾಗುತ್ತಿತ್ತು. ಇವರು ಕಳ್ಳರನ್ನು ಪರಿವರ್ತಿಸಿದರು. ನೀರಿನ ಪವಾಡವೆಸಗಿದರು. ಶಹಪುರದಲ್ಲಿ ಭಕ್ತರ ಮನೆಯಲ್ಲಿ ನೀರಿನಲ್ಲಿ ದೀಪ ಉರಿಸಿದರು. ಚರಬಸವೇಶ್ವರರೆಂದು ಖ್ಯಾತರಾಗಿ ೧೮೭೭ ರಲ್ಲಿ ಶಿವೈಕ್ಯರಾದರು.

**ಚನ್ನ ವೃಷಭೇಂದ್ರ ಸ್ವಾಮಿಗಳು :** ಗುಲ್ಬರ್ಗ ಜಿಲ್ಲೆ ಜೇವರ್ಗಿ ತಾಲ್ಲೂಕಿನ ಮಾಣಗೇರಿಯಲ್ಲಿ ೧೮೫೯ ರಲ್ಲಿ ಜನಿಸಿದರು. ಇವರು ದೆವ್ವ ಹಿಡಿದವರಿಗೆ ದೆವ್ವ ಬಿಡಿಸಿದರು. ಭೀಮಣ್ಣ ಎಂಬವನು ಇವರ ಪಾದಸ್ಪರ್ಶದಿಂದ ಗಂಗೆ ಉದ್ಭವಿಸಿದುದನ್ನು ಕಂಡ. ಅವರು ಅನೇಕ ಪವಾಡವೆಸಗಿ, ಧರ್ಮಪ್ರಚಾರ ಮಾಡಿ ೧೯೫೯ ರಲ್ಲಿ ಲಿಂಗೈಕ್ಯರಾದರು.

**ಅಬ್ಬೆ ತುಮಕೂರಿನ ವಿಶ್ವಾರಾಧ್ಯರು :** ಜೇವರ್ಗಿ

ತಾಲ್ಲೂಕು ಗಂವ್ಹಾರದಲ್ಲಿ ೧೮೬೨ ರಲ್ಲಿ ಜನಿಸಿ, ಶರಣರಾಗಿ ಮೆರೆದರು.

**ಚರಲಿಂಗೇಶ್ವರರು** : ಕಲ್ಬುರ್ಗಿ ಜಿಲ್ಲೆಯ ವರ್ತೂರು ಗ್ರಾಮದಲ್ಲಿ ೧೮೬೨ ರಲ್ಲಿ ಜನಿಸಿದರು. ಇವರು ಜನರಿಗೆ ಧರ್ಮೋಪದೇಶ ನೀಡಿ, ಔಷಧ ಕೊಡುತ್ತಿದ್ದರು. ಇವರು ೧೯೧೭ ರಲ್ಲಿ ಶಿವೈಕ್ಯರಾದರು.

**ಜಡೆಯ ಸಿದ್ಧಬಸವ ಶಿವಯೋಗಿಗಳು** : ಇವರು ಬೆಳಗಾಂ ಜಿಲ್ಲೆಯ ಚಿಕ್ಕಳ್ಳಿಯಲ್ಲಿ ೧೮೬೮ ರಲ್ಲಿ ಜನಿಸಿದರು. ಶಹಪುರದ ಮೇಲಗಿ ಗಲ್ಲಿಯ ಜಡೆಮಠಕ್ಕೆ ಮರಿಯಾಗಿ ೧೯೬೩ ಶಿವೈಕ್ಯರಾದರು.

## ೭. ಚಾಮರಾಜನಗರ ಜಿಲ್ಲೆ

**ಮಾದೇಶ್ವರ ಕ್ಷೇತ್ರ** : ಮಾದೇಶ್ವರರು ಕೊಳ್ಳೆಗಾಲಕ್ಕೆ ಐವತ್ತು ಕಿ.ಮೀ. ದೂರದ ಬೆಟ್ಟದ ವಜ್ರಮಲೆಯಲ್ಲಿ ಗದ್ದುಗೆ ಹೊಂದಿದ್ದಾರೆ. ಕ್ರಿ.ಶ. ೧೫೦೦ ರ ಸುಮಾರಿಗೆ ಇದ್ದವರು. ಇವರ ಬಾಲ್ಯ ಸುತ್ತೂರು ಕುಂತೂರುಗಳಲ್ಲಿ ಕಳೆಯಿತು. ಕುಂತೂರಿನ ಪ್ರಭುಸ್ವಾಮಿಗಳು ಇವರ ದೀಕ್ಷಾಗುರು. ಅನೇಕ ಊರುಗಳ ಪರ್ಯಟನೆ ಮಾಡಿ ಹಲವಾರು ಪವಾಡಗಳನ್ನೆಸಗಿದರು. ಗೊದ್ದ, ಗೋಸಂಬೆಗಳನ್ನು ನೀರಲ್ಲಿ ಅದ್ದಿ ಹೂವು ಮಾಡಿದರು. ಸೋರೆ ಬುರುಡೆಯಲ್ಲಿದ್ದ ನೀರನ್ನು ನಂಜರಾಜ ಒಡೆಯರ ಚತುರಂಗ ಬಲಕ್ಕೆ ನೀಡಿ, ದಾಹ ಇಂಗಿಸಿದರು. ಜುಂಜೇಗೌಡನಿಂದ ಹಾಲರುವೆ ಸೇವೆ ಮಾಡಿಸಿಕೊಂಡರಲ್ಲದೆ ಒಂದು ಅಂಕಣ ದೇವಾಲಯವನ್ನು ಕಟ್ಟಿಸಿಕೊಂಡರು. ಶ್ರವಣವನ್ನು ಭಸ್ಮ ಮಾಡಿದರು. ಜಿಮುಣ ಬೇವಿನ ಕಾಳಿಯನ್ನು ನಾಶ ಮಾಡಿದರು. ಇಕ್ಕೇರಿ ದೇವಮ್ಮನ ಗರ್ವ ಮುರಿದರು. ಮೂಗಯ್ಯನೆಂಬ ಭಕ್ತನಿಂದ ಎಣ್ಣೆ, ಮಜ್ಜನ ಸೇವೆಯನ್ನು ಮಾಡಿಸಿಕೊಂಡರು. ಕಾರಯ್ಯ, ಬಿಲ್ಲಯ್ಯ ಮೊದಲಾದ ಕಾಡು ಜನರಿಗೆ ವೀರಶೈವ ಧರ್ಮ ಬೋಧಿಸಿ ಅವರನ್ನೆಲ್ಲಾ ಸುಸಂಸ್ಕೃತರೂ, ನಾಗರಿಕರೂ ಆಗುವಂತೆ ಮಾಡಿದರು. ಆನೆಮಲೆ, ಜೇನುಮಲೆ, ಕಾನಮಲೆ, ಗುತ್ತಮಲೆ, ಗುಲಗಂಜಿಮಲೆ, ಏಳುಮಳೆ ಎಪ್ಪತ್ತೇಳು ಮಲೆಯ ನಡುವಿನ ವಜ್ರಮಲೆಯಲ್ಲಿ ತಪವೆಸಗಿ ಲಿಂಗವಾಗಿದ್ದಾರೆ. ಇವರ ಕಥೆಯನ್ನು ಕಂಸಾಳೆ ಕಲಾವಿದರು (ಮಾದೇಶ್ವರ ಗುಡ್ಡರು) ಏಳುರಾತ್ರಿ ಹಾಡುತ್ತಾರೆ. ದೀಪಾವಳಿ, ಉಗಾದಿ ಮುಂತಾದ ಹಬ್ಬಗಳಲ್ಲಿ ಜಾತ್ರೆ ಆಗುತ್ತದೆ. ಎಲ್ಲ ಕೋಮಿನವರೂ ಈತನಿಗೆ ನಡೆದುಕೊಳ್ಳುತ್ತಾರೆ.

ಇಲ್ಲೇ ಸಾಲೂರು ಮಠವು ಇದ್ದು ವೀರಶೈವ ಧರ್ಮ ಪ್ರಚಾರ ಮಾಡುತ್ತಿದೆ. ಜ್ಞಾನಾನ್ನ ದಾಸೋಹವನ್ನು ನಡೆಸುತ್ತಿದೆ.

ಶಂಭುಲಿಂಗನಬೆಟ್ಟ ಕೊಳ್ಳೇಗಾಲ ತಾಲ್ಲೂಕಿನ ಚಿಲಕವಾಡಿಯಲ್ಲಿದ್ದು ನಿಜಗುಣರ ಇಷ್ಟದೈವ ಶಂಭುಲಿಂಗನ ದೇವಾಲಯವಿದೆ. ಮುಪ್ಪಿನ ಷಡಕ್ಷರಿಗಳ ಗವಿಯೂ ಈ ಬೆಟ್ಟದಲ್ಲಿದೆ. ಕುಂತೂರಿನಲ್ಲಿ ಮಾದೇಶ್ವರರ ಗುರುಗಳಾದ ಪ್ರಭುಲಿಂಗದೇವರ ಬೆಟ್ಟವಿದ್ದು ಅಲ್ಲಿ ಪ್ರಭುದೇವರು ಐಕ್ಯರಾಗಿದ್ದಾರೆ. ಹರದನಹಳ್ಳಿಯಲ್ಲಿ ಗೋಸಲಸಿದ್ದೇಶ್ವರ, ಚನ್ನಬಸವೇಶ್ವರ, ಸಿದ್ಧಲಿಂಗೇಶ್ವರ ಮಠಗಳಿವೆ. ದಿವ್ಯಲಿಂಗೇಶ್ವರ ದೇವಾಲಯವಿದೆ.

**ಸಿದ್ಧೇಶ್ವರ ಕ್ಷೇತ್ರ** : ಕೊಳ್ಳೆಗಾಲ ತಾಲ್ಲೂಕು ಮಧುವನ ಹಳ್ಳಿಗೆ ಮೂರು ನಾಲ್ಕು ಕಿಲೋಮೀಟರ್ ದೂರದಲ್ಲಿದೆ. ಸಿದ್ಧೇಶ್ವರದ ಉತ್ತರ ಕಡೆಯಿಂದ ಬಂದವರೆಂದು ಹೇಳುತ್ತಾರೆ. ಸಿದ್ಧೇಶ್ವರ ಬೆಟ್ಟದಲ್ಲಿ ತಪ ಮಾಡಿ ಐಕ್ಯವಾಗಿದ್ದಾರೆ. ಮಕ್ಕಳಿಲ್ಲದವರಿಗೆ ಮಕ್ಕಳ ಫಲ ನೀಡಿದ್ದಾರೆ. ಅನೇಕ ಪವಾಡವೆಸಗಿದ್ದಾರೆ. ವರ್ಷಕ್ಕೊಮ್ಮೆ ಉಗಾದಿ ಜಾತ್ರೆ, ಕೊಂಡೋತ್ಸವ ನಡೆಯುತ್ತವೆ.

## ೮. ತುಮಕೂರು ಜಿಲ್ಲೆ

**ಗುಬ್ಬಿಯಲ್ಲಿ ಚನ್ನಬಸವೇಶ್ವರ ಶಿವಯೋಗಿಗಳ** ಸಮಾಧಿ ಇದೆ. ಗುಬ್ಬಿಯಪ್ಪಗಳ ದೇವಸ್ಥಾನವೆಂದೇ ಪ್ರಸಿದ್ಧಿ. ಇಲ್ಲಿ ಓಹಿಲಯ್ಯನ ಗುಡಿ ಇದೆ. ಆಚಾರ್ಯ ಅಮರ ಗೊಂಡಾರ್ಯ, ಮಲ್ಲಣ್ಣ ಮಲ್ಲೇಶ್ವರ ಭಕ್ತ, ಗುರುಭಕ್ತಯ್ಯನ ಮಗ ದೇಶಿಕ ಪಟ್ಟವರ್ಧನ, ಮಲ್ಲಿಕಾರ್ಜುನ ಪಂಡಿತ, ಇವನ ಮಗ ನಾಗನಾಥಾ ಚಾರ್ಯ, ಸಪ್ಪೆಯಮ್ಮ ಎಂಬ ಶರಣೆ, ಮಲ್ಲಣಾರ್ಯ, ಶಾಂತೇಶ ಮುಂತಾದವರು ಇದ್ದ ಸ್ಥಳ. ಗುಬ್ಬಿಯ ಕೆರೆಯ ಮಡುವಿನ ದಡದಲ್ಲಿ ಅಡವಿಸ್ವಾಮಿಗಳ ಮಠವಿದೆ.

**ತೋಂಟದ ಸಿದ್ಧಲಿಂಗೇಶ್ವರರ ಗದ್ದುಗೆ** : ಹರದನಹಳ್ಳಿಯ ಗೋಸಲ ಚನ್ನಬಸವೇಶ್ವರ ದೃಷ್ಟಿಗೆ ಮಗುವೊಂದು ಗೋಚರವಾಯಿತು. ಮುಂದೆ ಅದು ತೋಂಟದ ಸಿದ್ಧಲಿಂಗೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. **'ಷಟ್‌ಸ್ಥಲಜ್ಞಾನ ಸಾರಾಮೃತ'** ಎಂಬ ವಚನಗಳನ್ನು ಸೃಷ್ಟಿಸಿದ ಶಿವಯೋಗಿಯ ಕಾಲ ಸುಮಾರು ಕ್ರಿ.ಶ. ೧೫೦೦. ಇವರು ಮಾಡಿದ ಪವಾಡಗಳು ಹಲವಾರು. ಹರದನಹಳ್ಳಿಯಲ್ಲಿ ಜಲದಲ್ಲಿ ದೀಪವನ್ನು ಉರಿಸಿದರು. ಅರುಣಾದ್ರಿ, ಕುಂಬಳೇಶ್ವರಕ್ಕೆ ಹೋಗಿ

ಮಹಿಮೆಯನ್ನು ಪ್ರದರ್ಶಿಸಿದರು. ತ್ರ್ಯಂಬಕೇಶ್ವರಕ್ಕೆ ಹೋಗಿ ಶಿವಲಿಂಗದೊಡನೆ ಮಾತಾಡಿದರು. ಮಹಾಬಲೇಶ್ವರದಲ್ಲಿ ಕೃಷ್ಣಾನದಿ ಬತ್ತುವಂತೆ ಮಾಡಿ, ಮತ್ತೆ ಪ್ರವಾಹ ಬರುವಂತೆ ಮಾಡಿದರು. ಉತ್ತುಂಗಯೋಗಿಯ ಗರ್ವವನ್ನು ಮುರಿದು ತತ್ತ್ವವನ್ನು ಉಪದೇಶಿಸಿದ. ಉಳುವಿಗೆ ಹೋಗಿ ಅಲ್ಲಿ ವೈಷ್ಣವ ಜನಾರ್ಧನಜೀಯನೊಡನೆ ವಾದಿಸಿ ಜಯ ಪಡೆದರು. ಕಾರ್ಕಳ ಪಟ್ಟಣದಲ್ಲಿ ಶ್ರವಣನೆಂಬವನನ್ನು ಗೆದ್ದು, ತುಮಕೂರು ಜಿಲ್ಲೆಯ ನಾಗಿಣಿ ನದಿ ತೀರದ ಕಗ್ಗೆರೆಗೆ ಬಂದು ಅಲ್ಲಿ ಹೂದೋಟದಲ್ಲಿ ತಪಸ್ಸು ಮಾಡಲು ದೇಹದ ಸುತ್ತಾ ಹುತ್ತ ಬೆಳೆಯಿತು. ಬೋಳ ಬಸವೇಶನಿಗೆ ದೀಕ್ಷೆ ನೀಡಿ, ಕಲ್ಲುಮಠದಲ್ಲಿ ಶಿವಯೋಗ ನಿದ್ರಾಮುದ್ರೆಯಲ್ಲಿ ಅಂತರ್ಮುಖಿಯಾಗಿ ಸಮಾಧಿ ಹೊಂದಿದರು. ಈಗ ಇದು ಎಡೆಯೂರು ಕ್ಷೇತ್ರವೆಂದು ಪ್ರಸಿದ್ಧಿ ಹೊಂದಿ ದಿನ ನಿತ್ಯ ಸಾವಿರಾರು ಭಕ್ತಾದಿಗಳನ್ನು ಆಕರ್ಷಿಸುತ್ತಿದೆ. ದೇವರೆಂದೇ ಪೂಜಿಸಿ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಇಲ್ಲಿ ಜಾತ್ರೆಯೂ ನಡೆಯುತ್ತದೆ.

**ಸಿದ್ಧಗಂಗೆ** : ಸಿದ್ಧಗಂಗಾ ಮಠವು ಜ್ಞಾನಾನ್ನ ದಾಸೋಹಕ್ಕೆ ಹೆಸರಾದುದು. ಗಂಗೆಯುದಿಸಿದ ತಾಣ. ಹಳೆ ನಿಜಗಲ್ಲಿನಲ್ಲಿ ವೀರಭದ್ರ ದೇವಾಲಯವಿದೆ. ಇದು ಗೋಸಲ ಸಿದ್ದೇಶ್ವರರು ತಪವೆಸಗಿದ ತಾಣ. ಗೂಳೂರು ಸಿದ್ಧವೀರ, ಪರ್ವತೇಶ್ವರ, ವಿರಕ್ತ ತೋಂಟದಾರ್ಯ ಕವಿಗಳಿದ್ದ ಸ್ಥಳ. ಚಿಕ್ಕನಾಯಕನಹಳ್ಳಿ ತಾಲ್ಲೂಕು ದಬ್ಬೇಘಟ್ಟದಲ್ಲಿ ಮಹಾಲಿಂಗೇಶ್ವರ ದೇವಾಲಯ, ದೊಡ್ಡ ಬಿದರೆಯಲ್ಲಿ ಪಾತಾಳ ಲಿಂಗೇಶ್ವರ, ಮಲ್ಲಿಕಾರ್ಜುನ ದೇವಾಲಯ ಪಂಕಜನಹಳ್ಳಿಯಲ್ಲಿದೆ. ಗೋಡೆಕೆರೆಯಲ್ಲಿ ಸಿದ್ದರಾಮೇಶ್ವರ ದೇವಾಲಯವಿದೆ.

**ಗೋಸಲಸಿದ್ದೇಶ್ವರ** : ಕೊರಟಗೆರೆ ತಾಲ್ಲೂಕಿನ ಸಿದ್ಧರ ಬೆಟ್ಟದಲ್ಲಿ ಗೋಸಲಸಿದ್ದೇಶ್ವರರ ಗದ್ದುಗೆ ಇದೆ. ಗುಹಾಂತರ ದೇವಾಲಯವಿದ್ದು ಇದರೊಳಗೆ ಲಿಂಗವಿದೆ. ದೇವಾಲಯ ತಪ್ಪಲಲ್ಲಿ ಒಂದು ಬಾವಿಯಾಕಾರದ ಚಿಲುಮೆ ಇದೆ. ಇಲ್ಲಿ ಸುವರ್ಣಮುಖಿ ನದಿ ಹುಟ್ಟುವುದೆಂದು ಹೇಳುತ್ತಾರೆ. ವೀರಶೈವರು ಈ ಗದ್ದುಗೆಯನ್ನು ಭಕ್ತಿಯಿಂದ ಪೂಜಿಸುತ್ತಾರೆ. ಮಠಕೂರು ನಂಜುಂಡ ಶಿವಯೋಗಿಗಳು ಸಿದ್ಧಗಂಗೆಯ ಅಟವೀಶ್ವರ ಸೇವೆ ಮಾಡಿ ತಮ್ಮ ೯೬-೭೭ನೇ ವಯಸ್ಸಿನಲ್ಲಿ ಉಸ್ಕೂರಿನಲ್ಲಿ ಶಿವೈಕ್ಯರಾಗಿ ಗದ್ದುಗೆಯಾದರು. ಇವರು ಕವಿ, ಕಲಾವಿದರು, ಶರಣರಾಗಿ ಮೆರೆದರು.. ಮೈದಾಳದಲ್ಲಿ ಈ ಶರಣರ ಗದ್ದುಗೆ ಇದೆ. ಇವರು ಅಟವೀಶ್ವರ ಗೀತಾಂಜಲಿ, ಮಾರ್ಕಂಡೇಯ ವಿಳಾಸ, ಸುರಭಾಂಡೇಶ್ವರಾಖ್ಯಾನ, ಹಾಲಾಹಲ ಭಕ್ಷಣೆಯ ಕಥೆ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

**ಕುಪ್ಪೂರು ಗದ್ದುಗೆ** : ತುಮಕೂರು ಜಿಲ್ಲೆಯ ನಿಡುವಳ್ಳಿ ಬಸವಲಿಂಗಾರಾಧ್ಯ ಸಿದ್ದಾಂಬೆಯರೆಂಬ ದಂಪತಿಗಳಿಗೆ ಮರುಳಸಿದ್ಧನೆಂಬ ಮಗನಾಗಿ ಜನಿಸಿದ. ಬಿದಿರೆಯ ದೊಡ್ಡ ಮಠದ ಪ್ರಭುಗಳು ದೀಕ್ಷಾ ಸಂಸ್ಕಾರ ಮಾಡಿದರು. ಮುಂದೆ ನಿಡುವಳ್ಳಿ ಮಠದ ಅಧಿಕಾರಿಯಾಗಿ, ವೀರಶೈವ ಧರ್ಮ ಪ್ರಚಾರಮಾಡಿ, ಕುಪ್ಪೂರಲ್ಲಿ ಗದ್ದುಗೆಯಾದರು. ಮಗುವನ್ನು ಬದುಕಿಸಿದರು. ಭೂತ ಹಿಡಿದವರಿಗೆ ಭೂತವನ್ನು ಬಿಡಿಸಿದರು. ಬರಗಾಲದಲ್ಲಿ ಬೆತ್ತದಿಂದ ಬಂಡೆ ನಡುವೆ ಚುಚ್ಚಲು ನೀರು ಉದ್ಭವಿಸಿತು. ಅದೇ ಮರುಳ ಸಿದ್ಧೇಶ್ವರ ದೊಣೆಯಾಯಿತು.

## ೯. ಬೆಂಗಳೂರು ಜಿಲ್ಲೆ

**ಸರ್ಪಭೂಷಣ ಶಿವಯೋಗಿಗಳು** : ಬೆಂಗಳೂರು ಜಿಲ್ಲೆಯ ಚಿಕ್ಕ ಬಾಣಾವಾರದ ಶರಣ ದಂಪತಿಗಳಾದ ಮಲ್ಲಿಕಾರ್ಜುನಪ್ಪ ಹಾಗೂ ಚನ್ನಮ್ಮನವರ ಮಗುವಾಗಿ ೧೭೯೫ ರಲ್ಲಿ ಜನಿಸಿದ ಸಪ್ಪಣ್ಣ ತಿಪ್ಪಶೆಟ್ಟರ ಮಠದ ಗುರುಸ್ವಾಮಿಗಳಿಂದ ದೀಕ್ಷೆ ಪಡೆದು ಪಟ್ಟಾಧಿಕಾರ ಸ್ವೀಕರಿಸಿದರು. ದೇಶಪರ್ಯಟನೆಯಿಂದ ಜ್ಞಾನವನ್ನು ಪಡೆದರು. ಆ ಸಂದರ್ಭಗಳಲ್ಲಿ ಹಲವಾರು ಪರಿವರ್ತನಾ ಕಾರ್ಯಗಳನ್ನು ಎಸಗಿದರು. ಹೊಲೆಯರ ಕೆಂಪನಿಂದ ನಮಸ್ಕಾರ ಸ್ವೀಕರಿಸಿದರು ಎಂದರೆ ಅಂದಿನ ದಿನಗಳಲ್ಲಿ ಅಸ್ಪೃಶ್ಯತಾ ನಿವಾರಣೆಯ ಬಗೆಗೆ ಅವರೆಷ್ಟು ಕಾಳಜಿ ವಹಿಸಿದ್ದರು ಎಂಬುದು ವ್ಯಕ್ತವಾಗುವುದು. ಕನ್ನಡದಲ್ಲಿ "ಕೈವಲ್ಯ ಕಲ್ಪವಲ್ಲರಿ" ಸಂಸ್ಕೃತದಲ್ಲಿ 'ಜ್ಞಾನ ಶತಕಂ' ಎಂಬ ಕೃತಿಗಳನ್ನು ರಚಿಸಿದರು. ಮಹಾ ಶರಣರಾಗಿ, ಕವಿಯಾಗಿ, ಆಧ್ಯಾತ್ಮ ಲೋಕಕ್ಕೆ ಮಹಾತತ್ತ್ವಜ್ಞಾನಿಯಾಗಿ, ಸಂಗೀತ ಲೋಕಕ್ಕೆ ವಾಗ್ಗೇಯಕಾರರಾಗಿ, ಬೆಂಗಳೂರಿನಲ್ಲಿ ಗದ್ದುಗೆಯಾಗಿದ್ದಾರೆ.

**ಪಾಲ್ಕುರಿಕೆ ಸೋಮನಾಥ** : ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ ಕಲ್ಯದಲ್ಲಿ ಪಾಲ್ಕುರಿಕೆ ಸೋಮನಾಥನ ಸಮಾಧಿ ಇದೆ. ಈತ ಆಂಧ್ರದ ಓರಂಗಲ್ಲಿನ ಕಾಕತೀಯ ರಾಜರ ಅಸ್ಥಾನ ಕವಿಯಾಗಿದ್ದ. ಈ ಕಲ್ಯದಲ್ಲಿ ತಾರಕಾಸುರನ ಮಕ್ಕಳು ತಪಸ್ಸು ಮಾಡಿ ಈಶ್ವರನಿಂದ ವರ ಪಡೆದರು. ಈಶ್ವರ ಇಲ್ಲಿ ಕಲ್ಲೇಶ್ವರನೆಂಬ ಹೆಸರಿನಿಂದ ನೆಲೆಗೊಂಡ. ಇಲ್ಲಿ ಚನ್ನಮ್ಮನೆಂಬ ಶರಣೆ ಅರವತ್ತನಾಲ್ಕು ಶೀಲಗಳನ್ನು ಆಚರಿಸಿಕೊಂಡು ವ್ರತಾಚರಣೆಯಲ್ಲಿದ್ದಳು. ಆಕೆಯನ್ನು ನೋಡಲು ಬಂದ

ಪಾಲ್ಕುರಿಕೆ ಸೋಮನಾಥ ಇಲ್ಲೇ ಐಕ್ಯನಾದ. ಈತ ಕವಿ, ಶರಣ. ಪಾಲ್ಕುರಿಕೆ ಸೋಮನಾಥನ ಮಗ ಗುರುಲಿಂಗಾರ್ಯನ ಗದ್ದುಗೆಯೂ ಇಲ್ಲಿದೆ.

ಶಿವಗಂಗೆಯಲ್ಲಿ ಗಂಗಾಧರೇಶ್ವರ, ಹೊನ್ನಮ್ಮ ದೇವಾಲಯಗಳಿವೆ. ಇದಕ್ಕೆ **'ದಕ್ಷಿಣ ಕಾಶಿ'** ಎಂದು ಕರೆವರು. ಇಲ್ಲಿ ಒಂದು ವೀರಶೈವ ಮಠ, ವೀರಭದ್ರ ದೇವಾಲಯ, ಪಾತಾಳಗಂಗೆ ಇದೆ.

ರಾಮನಗರ-ಕನಕಪುರದ ಮಧ್ಯೆ ರೇವಣ ಸಿದ್ದೇಶ್ವರ ಬೆಟ್ಟವಿದೆ. ಇಲ್ಲಿ ರೇವಣಸಿದ್ದೇಶ್ವರರು ಲಿಂಗರೂಪ ತಾಳಿದ್ದಾರೆ.

ಬೆಂಗಳೂರು ನಗರದಲ್ಲಿ ಗವಿಗಂಗಾಧರೇಶ್ವರ, ಕಾಡು ಮಲ್ಲೇಶ್ವರ, ಅಲಸೂರಿನ ಸೋಮೇಶ್ವರ, ಬಸವಣ್ಣ ದೇವಾಲಯಗಳು ಮುಖ್ಯವಾಗಿವೆ. ಇವುಗಳಿಗೆಲ್ಲಕ್ಕೂ ವೀರಶೈವರು ನಡೆದುಕೊಳ್ಳುತ್ತಾರೆ.

**ಕನಕಪುರ ದೇಗುಲ ಮಠ :** ದೇಗುಲ ಮಠ ಕನಕಪುರದಲ್ಲಿ ರಾರಾಜಿಸುತ್ತಿದೆ. ಇದರ ಹತ್ತಿರವೇ ಅರ್ಕಾವತಿ ನದಿ ಹರಿಯುತ್ತಿದೆ. ಮಠದ ಮಠದ ಆಗ್ನೇಯಕ್ಕೆ ಶ್ರೀಮಠದ ಪೀಠಾಧಿಕಾರಿಗಳ ಹತ್ತು ಗದ್ದುಗೆಗಳಿವೆ. ಹಲವಾರು ಕಾಣೆಯಾಗಿವೆ. ನಿರ್ವಾಣ ಸ್ವಾಮಿಗಳೇ ಆದಿಯಾಗಿ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರೆಗೆ ಹದಿನಾಲ್ಕು ವಿರಕ್ತ ಪೀಠಾಧಿಕಾರಿಗಳು ಶೋಭಿಸಿದ್ದಾರೆ. ಮೂಲ ದೇಗುಲ ಮಠವನ್ನು ದೊಡ್ಡಮಠವೆಂದು ಕರೆದರೆ, ಗವಿಮಠವು, ಈ ಮಠದ ಅಂಗವಾಗಿದ್ದು, ದೇವಲಿಂಗ ಸ್ವಾಮಿಗಳು, ನಾಗಲಿಂಗ ಸ್ವಾಮಿಗಳು, ನಿರ್ವಾಣ ಮಹಾಸ್ವಾಮಿಗಳು, ಮಹಾಲಿಂಗ ಸ್ವಾಮಿಗಳು ಮೆರೆದಿದ್ದಾರೆ. ಇದು ಜ್ಞಾನದಾಸೋಹ ಮಠವಾಗಿ ಪ್ರಸಿದ್ಧವಾಗಿದೆ.

ಆದಿಗುರು ನಿರ್ವಾಣಸ್ವಾಮಿಗಳು ಶಿವಯೋಗ ನಿಷ್ಠೆಯುಳ್ಳ ವಿರಕ್ತರು. ಲಿಂಗಭೋಗೋಪಿಗಳು, ವೈರಾಗ್ಯ ಮೂರ್ತಿಗಳು, ಶಿವಜ್ಞಾನ ಸಂಪತ್ತುಳ್ಳವರೂ, ಅಣಿಮಾದಷ್ಟ ಸಿದ್ಧಿಗಳನ್ನು ಸಾಧಿಸಿದವರು. ಲೌಕಿಕ ಬಯಸದವರಾಗಿದ್ದರು. ಸಾಧಕರಿಗೆ ದಾರಿದೀಪವಾಗಿದ್ದರು. ಮನದ ಸಂಕಲ್ಪ ವಿಕಲ್ಪಗಳನ್ನು ಅಳಿದವರು. ಪ್ರಾಣಿಗಳಲ್ಲಿ ದಯೆಯನ್ನು ತೋರಿದವರು. ಅವರ ದಿವ್ಯಮೂರ್ತಿ ಸ್ವರೂಪ ಶಿವತೇಜಸ್ಸಿನಿಂದ ಉಜ್ವಲವಾಗಿತ್ತು. ಪರಿಪೂರ್ಣವಾದ ಶಿವಜ್ಞಾನ ಸಂಪತ್ತು, ಜ್ಞಾನ ಸಂಪತ್ತು, ಜ್ಞಾನಕ್ರಿಯಾ ಸಮನ್ವಯ ದೃಷ್ಟಿ, ನಡೆನುಡಿಗಳ ಹೊಂದಾಣಿಕೆ, ವಿಶಾಲದೃಷ್ಟಿ, ಸದ್ಭಕ್ತಿ ಭಾವಗಳಿಂದಾದ ನಿರ್ಮಲ ಚರಿತ್ರೆ ಇವು ಅವರ ವ್ಯಕ್ತಿತ್ವವನ್ನು ರೂಪಿಸಿದ್ದರು.

ಪುಣ್ಯಪುರುಷರ ದರುಶನ ಮಾಡಿ ಕೃತಾರ್ಥರಾಗಲು ಈ ಕ್ಷೇತ್ರ ಒಂದು ರೀತಿಯಲ್ಲಿ ದೇವರ ಬೀಡಾಗಿ 'ದೇಗುಲಮಠ' ಎಂದು ಹೆಸರಾಯಿತು. ನೂರೊಂದು ವಿರಕ್ತರಲ್ಲಿ ಒಬ್ಬರಾದ ನಿರ್ವಾಣ ಸ್ವಾಮಿಗಳೇ ಈ ಮಠದ ಆದಿ ಗುರುಗಳು.

ಫಿರಂಗಿ ಸ್ವಾಮಿಗಳು ಐಕ್ಯವಾದ ಮಾಗಡಿ ತಾಲ್ಲೂಕಿನ ಅಂಕನಹಳ್ಳಿಮಠ, ಸೋಲೂರು ಹೋಬಳಿಯ ಬಂಡೇಮಠ, ಬೆಟ್ಟಳ್ಳಿಮಠ, ಆನೇಕಲ್ಲು ತಾಲ್ಲೂಕಿನ ಶ್ರೀಮದ್ ರಾಜಾಪುರ ಸಂಸ್ಥಾನ ಮಠ, ವಿಭೂತಿಪುರ ಮಠ ಮುಂತಾದವು ಪ್ರಮುಖವಾದವು.

ನಂದಿಬೆಟ್ಟದಲ್ಲಿ ನಂದೀಶ್ವರ ದೇವಾಲಯವಿದೆ.

## ೧೦. ಧಾರವಾಡ ಜಿಲ್ಲೆ

**ಬಸವೇಶ :** ಧಾರವಾಡ ಜಿಲ್ಲೆ ನವಲಗುಂದದ ದಕ್ಷಿಣಕ್ಕೆ ನಾಗರಹಳ್ಳಿ ಇದೆ. ಶ್ರೀಮಂತ ದ್ಯಾಮಪ್ಪ ಹೊಸೂರು-ದೇವಮ್ಮ ಶರಣರಿಗೆ ನಂದೀವ್ರತದಿಂದ ಬಸವೇಶ ಎಂಬ ಮಗು ಜನಿಸಿತು. ಬಾಲ್ಯದಲ್ಲೇ ಈತ ಪವಾಡ ಮಾಡುತ್ತಿದ್ದ. ಮಣಕವಾಡ ಗ್ರಾಮದ ವೀರಪ್ಪ ಕುಂದಗೋಳ ಅವರ ಮಗಳಾದ ಅಡಿವೆವ್ವಾವನ್ನು ಮದುವೆ ಆದ. ಚನ್ನವೀರಸ್ವಾಮಿಗಳಿಂದ ಉಪದೇಶವಾಯಿತು. ಇವರ ಅನುಗ್ರಹ, ಪಂಪಾ ವಿರೂಪಾಕ್ಷನ ದರ್ಶನದಿಂದ ಜೀವನದಲ್ಲಿ ಅಪೂರ್ವ ಬದಲಾವಣೆಯಾಯಿತು. ಅನೇಕರ ರೋಗ ನಿವಾರಣೆ ಮಾಡಿದರು. ಎಮ್ಮೆಯನ್ನು ಕರೆಯುವಂತೆ ಮಾಡಿದರು. ೧೯೨೨ ರಲ್ಲಿ ಐಕ್ಯರಾದರು.

ಮುಂಡರಗಿ ಅನ್ನದಾನೀಶ್ವರರು ಗದುಗಿನ ತೋಂಟದಾರ್ಯರ ಮರಿಗಳಾಗಿದ್ದರು. ಇವರು ವಾಕ್‌ಸಿದ್ಧಿ ಪಡೆದಿದ್ದರು. ಮುಂಡರಗಿಯಲ್ಲಿ ಇವರ ಗದ್ದುಗೆ ಇದೆ.

ಹುಬ್ಬಳ್ಳಿಯಲ್ಲಿ ಸಿದ್ಧಾರೂಢ ಮಠ, ಹಾವೇರಿಯಲ್ಲಿ ಸಿದ್ಧೇಶ್ವರ ದೇವಾಲಯ, ರಾಣೇಬೆನ್ನೂರು ತಾಲ್ಲೂಕಿನ ಚೌಡದಾನಪುರದಲ್ಲಿ ರುದ್ರಮುನಿ, ವೀರಭದ್ರ ದೇವಾಲಯಗಳಿವೆ, ಅಂಬಿಗರ ಚೌಡಯ್ಯ ಈ ಊರಿನ ಶರಣ, ಐರಣಿಯಲ್ಲಿ ಕೊಟ್ಟೂರೇಶ್ವರ ಮಠ, ನವಲಗುಂದದಲ್ಲಿ ಗವಿಮಠ, ಧಾರವಾಡದಲ್ಲಿ ಮುರುಘಾಮಠ ಪ್ರಸಿದ್ಧಿ. ಲಕ್ಷ್ಮೇಶ್ವರದಲ್ಲಿ ಸೋಮೇಶ್ವರ

ದೇವಾಲಯ, ಲಕ್ಕುಂಡಿಯಲ್ಲಿ ಮಲ್ಲಿಕಾರ್ಜುನ, ನನ್ನೇಶ್ವರ, ಮಣಿಕೇಶ್ವರ, ಕುಂದಗೋಳದಲ್ಲಿ ಶಂಭುಲಿಂಗ ದೇವಾಲಯವಿದೆ.

**ಫಕೀರ ಸ್ವಾಮಿಗಳ ಮಠ :** ಶಿರಹಟ್ಟಿ ತಾಲ್ಲೂಕಿನಲ್ಲಿ ಫಕೀರ ಸ್ವಾಮಿಗಳ ಗದ್ದುಗೆ, ಅವ್ವಲಿಂಗನ ಮಠದ ವಾಯುವ್ಯಕ್ಕೆ ಎರಡು ಫರ್ಲಾಂಗ್-ದೂರದಲ್ಲಿದೆ. ಇಲ್ಲಿ ಆರು ಜನ ಫಕೀರರ ಸಮಾಧಿಗಳಿವೆ. ಈ ಮಠವು ಮುಸಲ್ಮಾನರ ಶೈಲಿಯಲ್ಲಿದೆ. ಈ ಮಠಕ್ಕೆ ಹಿಂದೂ–ಮುಸ್ಲಿಮರಿಬ್ಬರೂ ನಡೆದುಕೊಳ್ಳುವುದು ಒಂದು ವಿಶೇಷ.

**ಹಾನಗಲ್ಲ ಶಿವಕುಮಾರ ಸ್ವಾಮಿಗಳು :** ರಾಣೆಬೆನ್ನೂರು ತಾಲ್ಲೂಕಿನ ಜೋಯಿಸರಹಳ್ಳಿಯ ಬಸವಯ್ಯ, ನೀಲಮ್ಮ ಎಂಬ ಶರಣರಿಗೆ ೧೮೬೭ ರಲ್ಲಿ ಮಗನಾಗಿ ಜನ್ಮ ತಾಳಿದರು ಶಿವಕುಮಾರ ಸ್ವಾಮಿಗಳು. ಮಗು ಹಾಲು ಕುಡಿಯದಿದ್ದುದರಿಂದ ಹಾಲಯ್ಯ ಎಂದು ಕರೆದರು. ತಾಯಿ ಮಗನನ್ನು ಮದುವೆಯಾಗಬೇಕೆಂದು ಕೇಳಲು ಆತನ ಒಪ್ಪದೆ ಎಳಂದೂರು ಬಸವಲಿಂಗ ಸ್ವಾಮಿಗಳ ಶಿಷ್ಯರಾದರು. ಧಾರವಾಡ ಜಿಲ್ಲೆಯ ಹಾನಗಲ್ಲು ವಿರಕ್ತ ಮಠಾದಿಕಾರಿಯಾಗಿ, ಅನ್ನಜ್ಞಾನ ದಾಸೋಹ ನಡೆಸಿ, ಧರ್ಮಪ್ರಚಾರ ಮಾಡಿ ಶಿವನೊಳಗೊಂದಾದರು.

**ಮೂರು ಸಾವಿರ ಮಠ :** ಹುಬ್ಬಳ್ಳಿಗೆ ಮೊದಲು ಹೊಬಳ್ಳಿ ಎಂಬ ಹೆಸರಿತ್ತು. ಆಗ ಅದೊಂದು ಚಿಕ್ಕ ಗ್ರಾಮ. ಇಲ್ಲಿ ಗುರು ಸಿದ್ದೇಶ್ವರರು ಇದ್ದರು. ೧೨ನೇ ಶತಮಾನದ ಶರಣರು ಕಲ್ಯಾಣ ಕ್ರಾಂತಿಯಾದ ಮೇಲೆ ಹೊರಬಂದಾಗ ಅವರಿಗೆ ಆಶ್ರಯ ನೀಡಿದರು. ವಚನ ಸಾಹಿತ್ಯದ ತಾಳೆಯೋಲೆಯನ್ನು ಕಾಪಾಡಿದರು. ಅಮೇಲೆ ಅವರನ್ನು ಮುಂದೆ ಬೀಳ್ಕೊಟ್ಟರು. ಚನ್ನಬಸವಣ್ಣನವರು ಗುರು ಸಿದ್ದೇಶ್ವರನನ್ನುದ್ದೇಶಿ **"ನೀವು ಜಗದ್ಗುರುವಾಗಿ ಶೂನ್ಯಸಿಂಹಾಸನ ಸ್ಥಾಪನೆ ಮಾಡಿ"** ಎಂದು ಪ್ರೋತ್ಸಾಹಿಸಿ ಹೊರಟರು. ಮೂರು ಸಾವಿರ ವಿರಕ್ತರಿಗೆ ಈ ಮಠ ಆಶ್ರಯವಿತ್ತುದುದರಿಂದ ಮೂರು ಸಾವಿರ ಮಠವಾಯಿತು. ಮೂರು ಸಾವಿರದಪ್ಪನವರಿಗೆ ಅಧಿಕಾರವಹಿಸಿ ಗುರುಸಿದ್ದೇಶ್ವರರು ಜೀವಂತ ಸಮಾಧಿಯಾದರು.

## ೧೧. ಉತ್ತರ ಕನ್ನಡ ಜಿಲ್ಲೆ

**ಗೋಕರ್ಣದಲ್ಲಿ** ಮಹಾಬಲೇಶ್ವರ ದೇವಾಲಯವಿದೆ. ವೀರಶೈವ ಮಠಾಚಾರ್ಯರಾದ ಶ್ರೀ ನೀಲಕಂಠಾಚಾರ್ಯರು ಈ ಕ್ಷೇತ್ರದಲ್ಲಿದ್ದರು.

**ಚನ್ನಬಸವಣ್ಣನವರ ಗದ್ದುಗೆ :** ಕಾರವಾರ ಜಿಲ್ಲೆಯ ಉಳವಿಯಲ್ಲಿ ಚನ್ನಬಸವಣ್ಣನವರ ಗದ್ದುಗೆ ಇದೆ. ಕಲ್ಯಾಣದ ಕ್ರಾಂತಿಯಾದ ಮೇಲೆ ಚನ್ನಬಸವಣ್ಣನವರ ಮುಂದಾಳತ್ವದಲ್ಲಿ, ಅನೇಕ ಶರಣರು ಉಳುವಿಗೆ ಬಂದರು. ಇವರೆಲ್ಲ ಇಲ್ಲಿ ಉಳಿದುಕೊಂಡಿದುದಕ್ಕೆ 'ಉಳವಿ' ಎಂಬ ಹೆಸರಾಯಿತು.

ಹರಳಯ್ಯನ ಚಿಲುಮೆ, ನಾಗಮ್ಮನ ಗವಿ, ಆಕಳ ಗವಿಗಳಿವೆ.

ಬನವಾಸಿಯಲ್ಲಿ ಮಧುಕೇಶ್ವರ ದೇವಾಲಯವಿದೆ. ಇಲ್ಲೆ ಮಾಯೆಯು ನೃತ್ಯ ಮಾಡಿ ಅಲ್ಲಮನನ್ನು ಮಾಯೆಗೊಳಗಾಗಿಸಬೇಕೆಂದು ಪ್ರಯತ್ನಿಸಿ ಸೋತಳು. ಅಲ್ಲಮನ ದೇವಾಲಯವೂ ಇಲ್ಲಿದೆ. ಸ್ವಾದಿಯಲ್ಲಿ ಸದಾಶಿವ ಮಂದಿರವಿದೆ.

## ೧೨. ಬಿಜಾಪುರ ಜಿಲ್ಲೆ

**ಬಾಲಲೀಲ ಮಹಾಂತ ಶಿವಯೋಗಿಗಳ ಗದ್ದುಗೆ :** ೧೭೮೦ರ ಬಾಲಲೀಲ ಮಹಾಂತ ಶಿವಯೋಗಿಗಳು ಬಾಲಲೀಲೆ ಮಾಡಿ ಬಾಲಲೀಲ ಮಹಾಂತ ಶಿವಯೋಗಿಗಳಾಗಿ ಮೆರೆದರು. ವಿಜಾಪುರ ಜಿಲ್ಲೆಯ ಆಲಮಟ್ಟಿ (ಎಡನಾಳ)ಯ ಮಲ್ಲಿಕಾರ್ಜುನ, ಅನ್ನಪೂರ್ಣಾಂಬೆಯರ ಮಗನಾಗಿ ಜನಿಸಿದರು. ಮಗುವಿಗೆ ಮಹಾಂತಲಿಂಗ ಎಂದು ನಾಮಕರಣ ಮಾಡಿದರು. ಎಂಟು ವರ್ಷದ ಬಾಲಕ ವೈರಾಗ್ಯ ತಾಳಿ, ಮನೆ ಬಿಟ್ಟು ಹೊರಟ. ಲಿಂಗನಾಯಕನ ಹಳ್ಳಿಯ ಚನ್ನವೀರಸ್ವಾಮಿ ಮಠಕ್ಕೆ ಬಂದು ದೀಕ್ಷೆ ಪಡೆದ. ಮಹಾಂತ ಶಿವಯೋಗಿಗಳು ಭಕ್ತರನ್ನು ತಿದ್ದಿ ಒಳ್ಳೆಯ ಮಾರ್ಗಕ್ಕೆ ಎಳೆಯುತ್ತಾ ಬಂದರು. ಗುದ್ದಲಿಯ ಸ್ಪರ್ಶದಿಂದ ನೀರು ಬರುವಂತೆ ಮಾಡಿದರು. ಶ್ರೀಶೈಲದವರೆಗೆ ಹೋಗಿ ಬಂದು ಚಿತ್ರದುರ್ಗದ ಕಲ್ಮಠದ ಅಧಿಕಾರ ವಹಿಸಿಕೊಂಡರು. ಮುಗ್ಧಮಗುವಿನ ವೇಷ ಧರಿಸುವುದು, ತೊಟ್ಟಿಲಲ್ಲಿ ಮಲಗುವುದು ಇವರ ಬಾಲಲೀಲೆಗಳಾಗಿದ್ದು. ಇವರು ಕೈವಲ್ಯ ದರ್ಪಣ, ತತ್ತ್ವಪದಗಳನ್ನು ರಚಿಸಿದರು. ಮುಳಗುಂದ ಮಠಕ್ಕೆ ಬಂದು ೧೭೮೧ ರ ಸಿದ್ದಾರ್ಥ ಸಂವತ್ಸರ ಮಾಘ ಶುದ್ಧ ೧೩ರ ಸೋಮವಾರ ಮುಂಜಾನೆ ಬಯಲಾದರು.

**ಸಾರವಾಡ ಚಿಕ್ಕಪ್ಪಯ್ಯ :** ಸಾರವಾಡ ವಿಜಾಪುರದಿಂದ ೯ ಮೈಲು ದೂರದಲ್ಲಿದೆ. ಸಾರವಾಡದ ಚಿಕ್ಕಪ್ಪಯ್ಯ ವೀರಯ್ಯನವರ ಮಗ, ಕಾಲಜ್ಞಾನ–ತತ್ತ್ವಪದ ಬರೆದು ೧೭೭೫ ರಲ್ಲಿ ತಮ್ಮ ೭೪ನೇ ವಯಸ್ಸಿನಲ್ಲಿ ಲಿಂಗೈಕ್ಯರಾದರು.

**ಘನಮಠಾರ್ಯರು** : ಘನಮಠಾರ್ಯರು ಆಂಧ್ರ ಪ್ರದೇಶದ ಅನ್ತಾಪುರ ಜಿಲ್ಲೆ ಪುಟ್ಲೂರು ತಾಲ್ಲೂಕಿನ ದಾರೂರುಮು (ದೋರ್ವಾಡ)ವಿನ ಹಿರೇಮಠದ ವೀರಯ್ಯ-ವೀರಮ್ಮ ದಂಪತಿಗಳಿಗೆ ೧೮೨೬ ರಲ್ಲಿ ಜನಿಸಿದರು. ಇವರ ಮೊದಲ ಹೆಸರು ನಾಗಭೂಷಣ. ಇವರು ಸಂಗಮ್ಮ ಶರಣೆಯೊಡನೆ ವಿವಾಹವಾದರು. ಕೆಲವು ದಿನಗಳಲ್ಲೇ ಸಂಸಾರವನ್ನು ತ್ಯಜಿಸಿ ಮನೆಬಿಟ್ಟು ಹೊರಟರು. ವಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಎಲಗೋಡು ಎಂಬ ಹಳ್ಳಿಗೆ ಬಂದು ಕನ್ನಡ, ಸಂಗೀತ, ವಚನಾಭ್ಯಾಸ ಮಾಡಿದರು. ಧರ್ಮ ಪ್ರಚಾರ ಮಾಡಿದರು. ಕೃಷಿ ದೀಪಿಕೆ, ಜನಪದ ಶೈಲಿಯ ಹಾಡುಗಳನ್ನು ಬರೆದರು. ಸಂತೇಕಲ್ಲೂರಲ್ಲಿ ಶಿವೈಕ್ಯರಾದರು.

**ವೀರೇಶ್ವರ ಶರಣರು** : ವಿಜಾಪುರ ಜಿಲ್ಲೆಯ ನಾಲತ್ವಾಡದ-ದೊಡ್ಡಾರ್ಯ ರುದ್ರಾಂಬೆಯರ ಮಗನಾಗಿ ೧೭೭೦ ರಲ್ಲಿ ಜನಿಸಿದರು. ವೀರೇಶ್ವರರು ವೀರಮಹೇಶ್ವರ ಮನೆತನದ ಗುರುದೇವಿ ಎಂಬಾಕೆಯೊಡನೆ ವಿವಾಹವಾದರು. ಜಂಗಮ ದಾಸೋಹದಿಂದ ಸಂತೋಷಪಡುತ್ತಿದ್ದರು. ಶಿಕ್ಷಕ ವೃತ್ತಿಯನ್ನು ಬಿಟ್ಟು ಅಧ್ಯಾತ್ಮಕ್ಕೆ ಹೊರಳಿದರು. ಪ್ರಾಣಿಹಿಂಸೆ ಮಾಡಬಾರದು, ಬಲಿ ಕೊಡಬಾರದು ಎಂಬುದನ್ನು ಸಾರಿದರು. ೧೯೨೦ ರಲ್ಲಿ ಸೊಲ್ಲಾಪುರದ ಸಿದ್ಧರಾಮನ ದೇವಾಲಯದ ಮುಂದೆ ಗದ್ದುಗೆಯಾದರು.

**ನೀರಲಕೇರಿ ಬಸವಲಿಂಗ ಶರಣರು** ವಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕು ಗುಡದೂರಲ್ಲಿ ಜನಿಸಿದರು. ಇವರ ಸಾಧನೆ, ಸಿದ್ಧಿ, ಜನಸೇವೆ, ರಾಯಚೂರು ಜಿಲ್ಲೆ ಲಿಂಗಸಗೂರು ತಾಲ್ಲೂಕಿನ ನೀರಲಕೇರಿ ಮತ್ತು ಐದನಾಳುಗಳಲ್ಲಿ ಆಯಿತು. ಇವರು ೧೮೮೧ ರಲ್ಲಿ ರಾಚಯ್ಯ-ಮಹಾದೇವಮ್ಮನ ಮಗನಾಗಿ ಜನಿಸಿ, ಚಿತ್ತರಗಿ ಮಹಾಂತ ಸ್ವಾಮಿಗಳಲ್ಲಿ ವಿದ್ಯಾಭ್ಯಾಸ, ಯೋಗಾಭ್ಯಾಸ ಮಾಡಿ, ಶರಣತತ್ತ್ವ ಅನುಸರಿಸಿ ೧೮೭೨ ಐಕ್ಯರಾದರು.

## ೧೩. ಬಾಗಲಕೋಟೆ ಜಿಲ್ಲೆ

**ಉತ್ತೂರಜ್ಜ** ಮುಧೋಳ ತಾಲ್ಲೂಕಿನ ಬಾಲಕೇರಿ ಗ್ರಾಮದಲ್ಲಿ ಚೆನ್ನಯ್ಯ ಸಾವಂತ್ರವ್ವರ ಮಗನಾಗಿ ಜನಿಸಿದರು. ಸಂಸಾರದಲ್ಲಿದ್ದರೂ ಅಂಟಿಕೊಳ್ಳದೆ ಆಧ್ಯಾತ್ಮ ಹಾದಿಯಿಂದ ದೇವಮಾನವರಾಗಿ ಪವಾಡವೆಸಗಿದರು. ೧೯೯೧ ರಲ್ಲಿ ಉತ್ತೂರಲ್ಲಿ ಶಿವೈಕ್ಯರಾದರು.

**ಹಾದವಮುನಿ ಶರಣರು** : ಇವರ ಕಾಲ ೧೯೦೦ ಹುನಗುಂದ ತಾಲ್ಲೂಕಿನ ಹಿರೇಬಾಗೇವಾಡಿಯಲ್ಲಿ ವೀರಪ್ಪ-ವೀರಮ್ಮರ ಮಗನಾಗಿ ಮಗನಾಗಿ ಜನಿಸಿದರು. ಅಯ್ಯಪ್ಪ ಕೋರಿಯವರ ಮಗಳಾದ ಆಮದಮ್ಮನೊಡನೆ ವಿವಾಹ ವಾಯಿತು. ಯಾರ ಹೊಲದಲ್ಲಾದರೂ ಕಳೆಯಿದ್ದರೆ ಕೀಳುತ್ತಿದ್ದರು. ಗರಿಕೆ ತೆಗೆಯುತ್ತಿದ್ದರು. ಇವರು ಸಾಲಿಮಠದ ರಾಜೋಟೇಶ್ವರ ಸ್ವಾಮಿಗಳಿಂದ ದೀಕ್ಷೆ ಪಡೆದರು. ಇವರು ಅನುಷ್ಠಾನ, ಮೌನವ್ರತ, ಬಡವರಿಗೆ ದಾಸೋಹ ಮಾಡುತ್ತಾ ೧೯೯೧ ರಲ್ಲಿ ಲಿಂಗೈಕ್ಯರಾದರು.

**ವಿಜಯ ಮಹಂತ ಶಿವಯೋಗಿಗಳು** : ಹಾಸನ ಜಿಲ್ಲೆ ಹೊಳಕೇರಿ ಹತ್ತಿರದ ಸಸಿವಾಳ ಗ್ರಾಮದ ವೀರಪ್ಪ ದೇವರು ಗೌರಮ್ಮನವರ ಮಗನಾಗಿ ೧೭೭೨ ನೇ ಇಸವಿಯಲ್ಲಿ ಮಳೆಯಪ್ಪ ಜನಿಸಿದ. ಚಿಕ್ಕಂದಿನಲ್ಲೇ ಏಕಾಂತ, ಬಳ್ಳಾರಿಯಲ್ಲಿ ತಪವೆಸಗಿದರು. ಇವರನ್ನು ಚಿತ್ತರಗಿ ಮಹಂತ ಶಿವಯೋಗಿಗಳು ತಮ್ಮ ಮಠಕ್ಕೆ ಮರಿ ಮಾಡಿಕೊಂಡರು. ಅವರೇ ವಿಜಯ ಮಹಂತ ಶಿವಯೋಗಿಗಳು - ಇವರು ಅನೇಕ ಪವಾಡವೆಸಗಿ ಇಳಕಲ್ಲಿನಲ್ಲಿ ಲಿಂಗೈಕ್ಯರಾದರು.

**ಮುಧೋಳದಲ್ಲಿ** ಬ್ರಹ್ಮಗಡ್ಡೀಮಠ, ಮಹಾಲಿಂಗಪುರದಲ್ಲಿ ಮಹಾಲಿಂಗೇಶ್ವರ ದೇವಾಲಯ, ಮಾಚಕನೂರಿನಲ್ಲಿ ಹೊಳೆ ಬಸವೇಶ್ವರನ ದೇವಸ್ಥಾನಗಳಿವೆ.

**ಬಾಗೇವಾಡಿ** ಬಸವಣ್ಣ ಹುಟ್ಟಿದ ಸ್ಥಳ. ಇಲ್ಲಿ ರೇವಣಸಿದ್ಧ ದೇವಾಲಯ, ಗಣಪತಿ, ಮಲ್ಲಿಕಾರ್ಜುನ, ಸಂಗಮೇಶ್ವರ, ಅಕ್ಕನಾಗಮ್ಮನ ಗವಿ, ಬಸವಣ್ಣನ ದೇವಾಲಯವಿದೆ. ಬನಶಂಕರಿ ದೇವಾಲಯ, ಶಿವಯೋಗ ಮಂದಿರವಿದೆ. ಹಾಟಕೇಶ್ವರ, ಭೈರವೇಶ್ವರ, ಪಿನಾಕನಾಥ ರಾಮಲಿಂಗ ಕಪಿಲೇಶ, ಮಲ್ಲಿಕಾರ್ಜುನ, ಮಾಕುಭೇಶ್ವರ, ವೀರಭದ್ರ, ಕೋಣೆ ಶಂಕರ ದೇವಾಲಯಗಳಿವೆ.

**ಬಾಗಲಕೋಟೆ** : ಬಾಗಲಕೋಟೆಯಲ್ಲಿ ಕಲಾದಗಿಯ ಗುರುಲಿಂಗೇಶ್ವರ ಮಠ, ಮೋಟಗಿ ಬಸವೇಶ್ವರ ಗುಡಿ, ಕೊತ್ತಲೇಶ ಗುಡಿ,ಪೂಜ್ಯ ಮಳೇಂದ್ರ ಸ್ವಾಮಿಗಳು ಸ್ಥಾಪಿಸಿದ ಚರಂತಿಮಠ, ಮಲ್ಲಾಪುರದಲ್ಲಿ ದುರುದುಂಡೇಶ್ವರ ಮಠ, ಇಲಾಳದಲ್ಲಿ ಬಮ್ಮಯ್ಯನೆಂಬ ಶರಣ ಐಕ್ಯನಾಗಿದ್ದಾನೆ. ಅರಭಾವಿ ಶಿವಯೋಗಿಗಳು, ಮೃತ್ಯುಂಜಯ ಅಪ್ಪಗಳ ಪಾದಧೂಳಿಯಿಂದ ಪವಿತ್ರವಾದ ಮುಧೋಳ. ಮುಚಖಂಡಿ ವೀರಭದ್ರೇಶ್ವರ ದೇವಾಲಯ, ಬೀಳಗಿಯಲ್ಲಿ ಸಿದ್ದೇಶ್ವರ ದೇವಾಲಯ, ಕಮತಗಿಯ ಹೊಳೆ ಹುಚ್ಚೇಶ್ವರ ಮಠ, ಬನಹಟ್ಟಿಯ ಕಾಡಸಿದ್ದೇಶ್ವರ, ಕಡಪಟ್ಟಿ ಬಸವೇಶ್ವರ ಗುಡಿ, ಮಹಾಲಿಂಗ ಪುರದಲ್ಲಿ ಮಹಾಲಿಂಗೇಶ್ವರ ಮಠ ಮುಂತಾದವುಗಳಿಂದ

ಕೂಡಿದೆ. ಕೂಡಲಸಂಗಮ ಬಸವಣ್ಣ ಐಕ್ಯವಾದ ಸ್ಥಳ. ರಕ್ಕಸತಂಗಡಿಯಲ್ಲಿ ಬಸವಣ್ಣನವರ ಹೆಂಡತಿ ನೀಲಾಂಬಿಕೆಯ ಸಮಾಧಿ ಇದೆ. ಕೂಡಲ ಸಂಗಮದಲ್ಲಿ ಬಸವಣ್ಣ ಈಶಾನ ಗುರುಗಳಿಂದ ವಿದ್ಯಾಭ್ಯಾಸ ಮಾಡಿದ. ಇಲ್ಲಿ ಅವರ ಸಮಾಧಿಯೂ ಇದೆ. ಸಂಗಮೇಶ್ವರ ದೇವಾಲಯವಿದೆ, ಕೃಷ್ಣ-ಮಲಪ್ರಭಾ ನದಿಗಳ ಸಂಗಮವಿದೆ.

## ೧೪. ಬೆಳಗಾಂ ಜಿಲ್ಲೆ

ಶ್ರೀ ರೇವಣಸಿದ್ದೇಶ್ವರ ಮಠ, ಮುಗಳವಾಡ, ರಾಮದುರ್ಗ ತಾಲ್ಲೂಕಿನ ಗೊಡಚಿಯ ವೀರಭದ್ರ ದೇವಸ್ಥಾನ, ನಿಡಸೋಸಿ ಮಠ, ಚಿಕ್ಕೋಡಿ .ತಾಲ್ಲೂಕಿನ ಎಡೂರ ವಿರೂಪಾಕ್ಷ ದೇವಾಲಯ, ಅರಭಾವಿ, ಮರಡಿಮಠ, ತಮಗ ಕ್ಷೇತ್ರ; ಬೆಳಗಾವಿ ನಗರದಲ್ಲಿನ ಶಿವಮಂದಿರ, ಕಪಿಲೇಶ್ವರ, ಇದನ್ನು ದಕ್ಷಿಣ ಕಾಶಿ ಎಂದೇ ಕರೆಯಲಾಗುವುದು. ಭಾರತದ ೧೨ ಜ್ಯೋತಿರ್ಲಿಂಗಗಳ ದರ್ಶನ ಮಾಡಿ ಕಪಿಲೇಶ್ವರನಿಗೆ ಪೂಜೆ ಸಲ್ಲಿಸಿದಾಗಲೇ ಈ ಕ್ಷೇತ್ರ ಯಾತ್ರೆ ಸಂಪೂರ್ಣವಾಗುವುದೆಂಬ ಪ್ರತೀತಿ. ಅಥಣಿಯ ಅಮೃತಲಿಂಗೇಶ್ವರ ಅತ್ಯಂತ ಪ್ರಸಿದ್ಧವಾದುದು. ಮುರಗೋಡ ಪಕ್ಕದ ಸೋಗಲ ಸೋಮೇಶ್ವರ, ಹೂಲಿಯಸ್ವಾಮಿ ಮಠ, ಮುನವಳ್ಳಿ ಪಂಚಲಿಂಗೇಶ್ವರ ಮಠ, ರಾಯಭಾಗ ತಾಲ್ಲೂಕಿನ ಚಿಂಚಿಲಿ ಮಾಯಮ್ಮ, ಪಂಚಬಾಳೆಕುಂದ್ರಿ, ಖಾನಾಪುರ ತಾಲ್ಲೂಕಿನ ಅಸೋಗಾ ಕ್ಷೇತ್ರದಲ್ಲಿನ ಈಶ್ವರ ದೇವಾಲಯ, ಮುರಗೋಡದ ಚಿದಂಬರೇಶ್ವರ, ಘಟಪ್ರಭಾ ನದಿಯ ದಂಡೆಯಲ್ಲಿನ ಮರಡಿಮಠ, ಅಮ್ಮಣಗಿ ಮಲ್ಲಯ ಮಂದಿರ, ಆಡಿಮಲ್ಲಿಕಾರ್ಜುನ ದೇವಾಲಯ ಮುಂತಾದವುಗಳು ವೀರಶೈವ ಧಾರ್ಮಿಕ ಕ್ಷೇತ್ರಗಳು.

**ಅಥಣಿ ಶಿವಯೋಗಿಗಳು** : ಇವರು ೨೦ನೆಯ ಶತಮಾನದ ವಿಭೂತಿ ಪುರುಷರು, ಬೆಳಗಾವಿ ಜಿಲ್ಲೆಯ ಅಥಣಿಯಲ್ಲಿ ರಾಚಯ್ಯ-ನೀಲಮ್ಮ ದಂಪತಿಗಳ ಮೂರನೆಯ ಮಗನಾಗಿ ಮುರುಘೇಂದ್ರ ಶಿವಯೋಗಿಗಳು ಜನಿಸಿದರು. ಇವರ ತಾಯಿಯವರ ಕನಸಿನಲ್ಲಿ "ಮುರುಘೇಂದ್ರರನ್ನು ತಮಗೆ ಅರ್ಪಿಸಬೇಕು" ಎಂದು ಗುರುಗಳು ತಿಳಿಸಿದಾಗ ತಾಯಿಯು ತಮ್ಮ ಮಗನನ್ನು ಗುರುಗಳಿಗೆ ಅರ್ಪಿಸುವರು. ಆಗ ಆಕೆಯ ಹೊಟ್ಟೆಯ ಶೂಲ ಮಾಯವಾಯಿತು. ಮುರುಘೇಂದ್ರ ಶಿವಯೋಗಿಗಳು ಜನರ ರೋಗವನ್ನು ಪರಿಹರಿಸಿ, ಬಡತನ ಬಯಲು ಮಾಡಿದರು. ಎಣ್ಣೆಯಿಲ್ಲದ ದೀಪ ಉರಿಸಿದರು. ಗಚ್ಚಿನ ಮಠದಲ್ಲಿ ಗದ್ದುಗೆಯಾದರು.

**ಸಾವಳಗಿ ಶಿವಲಿಂಗೇಶ್ವರ** : ಕಲ್ಬುರ್ಗಿ ಜಿಲ್ಲೆಯ ಕೊಳ್ಳೂರು ಗ್ರಾಮದಲ್ಲಿ ಲಿಂಗಬಸಪ್ಪ-ಮಲ್ಲಮ್ಮನವರ ಮಗನಾಗಿ ಜನಿಸಿದವರೇ ಶಿವಲಿಂಗ. ಶಿವಧ್ಯಾನದಲ್ಲಿ ತೊಡಗಿದ್ದಾಗ ಕಾಳಗವೆಂಬ ಬ್ರಹ್ಮರಾಕ್ಷಸ ಇವರ ಪಾದಗಳ ಮೇಲೆ ಬಿದ್ದು ಶಾಪ ವಿಮೋಚನೆ ಪಡೆದು ಗುರು ಮಠ ಸೇರಿ ಅವರ ಸೇವೆ ಮಾಡತೊಡಗಿದ. ಹೊಲೆಯರ ಲಿಂಗಮ್ಮನಿಗೆ ದೀಕ್ಷೆ ನೀಡಿದರು. ಮಕ್ಕಳಿಲ್ಲದವರಿಗೆ ಮಕ್ಕಳ ಫಲ ನೀಡಿದರು. ದಿಲ್ಲಿಯ ಔರಂಗಜೇಬ, ಬಾದಶಹನು ನೀರಿನ ಮೇಲೆ ನಮಾಜು ಮಾಡಿದರೆ, ಇವರು ಅಂತರಿಕ್ಷದಲ್ಲಿ ಪದ್ಮಾಸನ ಹಾಕಿ ಪ್ರಾರ್ಥನೆ ಮಾಡಿದರು. ಹಿರೇ ಸಾವಳಿಗೆಯಲ್ಲಿ ಘೋರ ತಪವೆಸಗಿ ಗೋಕಾಕ ಜಿಲ್ಲೆ ಸಾವಳಿಗೆಯಲ್ಲಿ ಐಕ್ಯರಾದರು.

**ಅಂಕಲಗಿ ಅಡವಿ ಸ್ವಾಮಿಗಳು** : ಗೋಕಾಕ ತಾಲ್ಲೂಕಿನ ಅಂಕಲಗಿ ಗ್ರಾಮದವರು ೧೮೧೮ ರಲ್ಲಿ ಜನಿಸಿ ಅನೇಕ ಪವಾಡವೆಸಗಿ ೧೯೫೬ ರಲ್ಲಿ ಶಿವೈಕ್ಯರಾದರು.

**ಹಾವೇರಿ ಶಿವಬಸವ ಸ್ವಾಮಿಗಳು** : ಅಥಣಿ ತಾಲ್ಲೂಕು ಸಪ್ತಸಾಗರದ ಗ್ರಾಮದಲ್ಲಿ ೧೭೭೯ ರಲ್ಲಿ ಜನಿಸಿ, ೮೯ ವರ್ಷಗಳ ತುಂಬು ಜೀವನ ಸಾಗಿಸಿ, ಮುಕ್ತಿಗಾಗಿ ಶ್ರಮಿಸಿ ಶಿವೈಕ್ಯರಾದರು.

**ಮುರಗೋಡ ಮಹಂತ ಶಿವಯೋಗಿಗಳು** : ಬೆಳಗಾಂ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಕದಮ್‌ಪುರದಲ್ಲಿ ೧೭೭೪ರಲ್ಲಿ ಜನಸಿದರು. ಇವರು ಹೆಣ್ಣನ್ನು ಪಾರ್ವತಿ ಎಂದು ಕಾಣುತ್ತಿದ್ದರು. ಬೇರೆ ಧರ್ಮಗಳನ್ನು ಪ್ರೀತಿಸುತ್ತಿದ್ದರು. ಅಂತರ್ಜಾತಿ ವಿವಾಹ ಮಾಡಿಸಿದರು. ೧೯೭೨ರಲ್ಲಿ ಲಿಂಗೈಕ್ಯರಾದರು.

**ಪ್ರಭುದೇವರ ಗದ್ದುಗೆ** : ಬೆಳಗಾವಿ ಹತ್ತಿರದ ಶಿವಪುರದಲ್ಲಿ ಪ್ರಭುದೇವರ ಅನಿಮಿಷರಿಂದ ಪಡೆದ ಇಷ್ಟಲಿಂಗವನ್ನು ಪೂಜೆ ಮಾಡಿ ಅನುಷ್ಠಾನಕ್ಕೆ ಕುಳಿತರು. ಇದು ಇಂದು ಜಾಗ್ರತಾ ಸ್ಥಳವಾಗಿದೆ. ಇದೊಂದು ತೋರುಗದ್ದುಗೆ.

ಅರಭಾವಿಯಲ್ಲಿ ದುರದುಂಡೇಶ್ವರ ಸ್ವಾಮಿಗಳ ಗದ್ದುಗೆ. ನಿಡಸೋಸಿಯಲ್ಲಿ ಶಿವಲಿಂಗೇಶ್ವರ ಮಹಾತ್ಮರ ಗದ್ದುಗೆ ಇದೆ.

## ೧೫. ಚಿತ್ರದುರ್ಗ ಜಿಲ್ಲೆ

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನಾಯಕನ ಹಟ್ಟಿಯಲ್ಲಿ ತಿಪ್ಪೇರುದ್ರ ಸ್ವಾಮಿಗಳ ಗದ್ದುಗೆ ಇದೆ. ಇವರು ಅಂದಿನ ಪಾಳೆಯಗಾರರ ಧರ್ಮ ಗುರುಗಳಾಗಿದ್ದರು. ಆಗ ಹಟ್ಟಿ ಮಲ್ಲಪ್ಪ ನಾಯಕನೆಂಬ ಪಾಳೆಯಗಾರ ಆಳುತ್ತಿದ್ದ. ಆ ಊರಿನಲ್ಲಿ ನೀರಿನ

ಅಭಾವವಿತ್ತು. ಕೆರೆಯನ್ನು ಕಟ್ಟಿಸಬೇಕೆಂದು ದನಕಾಯುವರನ್ನು, ವಡ್ಡರ ಹುಡುಗರನ್ನು ಹಿಡಿದು ಕೆಲಸ ಆರಂಭಿಸಿದರು. ಎಲ್ಲರೂ ಮರಳ ರಾಶಿ ಮಾಡುತ್ತಿದ್ದರು. ತಿಪ್ಪೇರುದ್ರಸ್ವಾಮಿಗಳು ತಮ್ಮ ದಂಡವನ್ನು ಮರಳ ಗುಡ್ಡೆಯನ್ನು ಮುಟ್ಟಿಸಿದಾಗ ಯಾರು ಯಾರು ಎಷ್ಟು ಶ್ರಮದಿಂದ ಕೆಲಸ ಮಾಡಿದರೋ ಅಷ್ಟು ಹಣ ದೊರೆಯುತ್ತಿತ್ತು. ಶಿಷ್ಯರಿಂದ ಬಂದ ಹಣದಿಂದ ಊರಲ್ಲಿ ಐದು ಕೆರೆಗಳನ್ನು ನಿರ್ಮಿಸಿದರು. ವೀರಶೈವ ಧರ್ಮ ಪ್ರಚಾರ ಮಾಡಿದರು. ಅನೇಕ ಪವಾಡಗಳನ್ನು ಮಾಡಿ ಅನೇಕ ಭಕ್ತರನ್ನು ಸಂಪಾದಿಸಿಕೊಂಡಿದ್ದರು. ಕೆಲವು ಕಾಲವಿದ್ದು ಜೀವಂತ ಸಮಾಧಿ ಹೊಂದಿದರು. ಅದೇ ತಿಪ್ಪೇರುದ್ರಸ್ವಾಮಿಗಳ ಗದ್ದುಗೆ. ಇದು ಈಗ ತಿಪ್ಪೇರುದ್ರಸ್ವಾಮಿ ದೇವಾಲಯವಾಗಿದೆ. ನಾಯಕರು (ಜೇಡರು), ವೀರಶೈವರು ಇವರಿಗೆ ನಡೆದುಕೊಳ್ಳುತ್ತಾರೆ ಇಲ್ಲಿ. ಜಾತ್ರೆಯೂ ನಡೆಯುತ್ತದೆ.

ಜಗಳೂರು ತಾಲ್ಲೂಕಿನಲ್ಲಿ ಕಲ್ಲುಮಠ, ತೋಟದ ಸ್ವಾಮಿ ಮಠದ ಗದ್ದುಗೆ ಇದೆ.

### ೧೬. ದಾವಣಗೆರೆ ಜಿಲ್ಲೆ :

**ದಾವಣಗೆರೆ** : ವೀರಭದ್ರ ದೇವಾಲಯ, ಈಶ್ವರ ದೇವಾಲಯ, ಶಿವಶರಣ ಬಂಕೇಶ್ವರರ ಸಮಾಧಿ ಇದೆ.

### ೧೭. ಕೊಪ್ಪಳ ಜಿಲ್ಲೆ :

**ದೊಡ್ಡ ಬಸವಾರ್ಯ** : ಧಾರವಾಡ ಜಿಲ್ಲಾ ನಿಡಗುಂದಿ ಗ್ರಾಮದ ಬಸವಲಿಂಗಯ್ಯ-ಗುರುಬಸಮ್ಮ ಶರಣ ದಂಪತಿಗಳಿಗೆ ಕಡುತಿನಿಮ ಚನ್ನಬಸವ ಸ್ವಾಮಿಗಳ ಆಶೀರ್ವಾದದಿಂದ ದೊಡ್ಡ ಬಸವಯ್ಯ ಎಂಬ ಮಗ ಜನಿಸಿದ. ಪೂಜಾರಿಗಳು ವಿರೂಪಾಕ್ಷ ದೇವಾಲಯದ ಬಾಗಿಲು ಮುಚ್ಚಿ ಹೋಗಲು ಇದ್ದಕ್ಕಿದ್ದಂತೆ ಬಾಗಿಲು ತೆರೆದು ವಿರೂಪಾಕ್ಷನ ದರ್ಶನವಾಯಿತು. ತೀರ್ಥ ಕೊಟ್ಟು ಲಕ್ಕವ್ವೆ ಎಂಬ ರೋಗಿಗೆ ರೋಗ ವಾಸಿ ಮಾಡಿದರು. ಕಳ್ಳರನ್ನು ಪರಿವರ್ತಿಸಿದರು. ಸಜ್ಜಲ ಗುಡ್ಡದ ಶರಣಮ್ಮನಿಗೆ ದೀಕ್ಷೆ ನೀಡಿದರು. ೧೮೪೫ ರಲ್ಲಿ ಗುಡದೂರಲ್ಲಿ ಗದ್ದುಗೆಯಾದರು.

**ಗುಡದೂರು** ಬಸವಯ್ಯ ತಾತ ವಾಕ್‌ಸಿದ್ಧಿ ಪಡೆದಿದ್ದರು. ಭಸ್ಮದಿಂದ ರೋಗ ಪರಿಹಾರ ಮಾಡುತ್ತಿದ್ದರು. ಗವಿಸಿದ್ದೇಶ್ವರನಿಗೆ ಮೇಲಿಂದ ಕೆಳಗೆ ನಮಸ್ಕಾರ ಮಾಡಿ ಬರುತ್ತಿದ್ದರು. ಇವರು ಜನರಿಗೆ ದೆವ್ವ-ಭೂತ, ಹುಚ್ಚು ಬಿಡಿಸಿದ್ದಾರೆ. ಮಕ್ಕಳಿಲ್ಲದವರಿಗೆ ಮಕ್ಕಳ ಫಲ ಕರುಣಿಸಿದ್ದಾರೆ.

### ೧೮. ಗದಗ ಜಿಲ್ಲೆ :

**ಜಗದ್ಗುರು ತೋಂಟದಾರ್ಯ ಮಠದ ೯ನೇ ಜಗದ್ಗುರು** ಶ್ರೀಮದರ್ಧನಾರೀಶ್ವರ ಸ್ವಾಮಿಗಳು ಕೆಳದಿಯಲ್ಲಿ ಮಲ್ಲಾಂಬೆಗೆ ಪುತ್ರ ಸಂತಾನ ಕರುಣಿಸಿದರು.

### ೧೯. ಹಾವೇರಿ ಜಿಲ್ಲೆ :

ಗುದ್ದಲೀಶ್ವರರು ಹಾವೇರಿಯ ಹೊಸರತ್ತಿ ಗ್ರಾಮದಲ್ಲಿ ಗುದ್ದಲೀಶ್ವರ ಮಠವನ್ನು ಮಾಡಿ ಅಲ್ಲೇ ಗದ್ದುಗೆಯಾಗಿದ್ದಾರೆ.

### ೨೦. ರಾಯಚೂರು ಜಿಲ್ಲೆ :

ನಾರದ ಗಡ್ಡೆಯಲ್ಲಿ ವೈರಾಗ್ಯ ಚನ್ನಬಸವ ಸ್ವಾಮಿಗಳ ಗದ್ದುಗೆ ತುಂಬಾ ಪ್ರಸಿದ್ಧವಾದುದು. ಇದನ್ನು ಮರ್ಚೇಡಿನ ವಿರೂಪಾಕ್ಷರಾಯ ಕಟ್ಟಿಸಿದ. ೧೮ನೇ ಶತಮಾನದ ಆದಿಯಲ್ಲಿ ಬೀದರ್ ಜಿಲ್ಲೆಯಿಂದ ಬಂದ ಇವರು ಅನೇಕ ಪವಾಡಗಳನ್ನೆಸಗಿ ಧರ್ಮ ಪ್ರಸಾರ ಮಾಡಿ ಗದ್ದುಗೆಯಾದರು.

ಅಮರೇಶ್ವರ ಕ್ಷೇತ್ರ ಲಿಂಗಸಗೂರು ತಾಲ್ಲೂಕಿನಲ್ಲಿ ಪ್ರಸಿದ್ಧವಾದುದು. ೫೦೦ ವರ್ಷಗಳ ಹಿಂದೆ ಅಮರೇಶ್ವರರು ತಪವೆಸಗಿ ಸಮಾಧಿಸ್ಥರಾದರು. ಅದೇ ಅಮರೇಶ್ವರ. ವರ್ಷಕ್ಕೊಮ್ಮೆ ಇಲ್ಲಿ ಫಾಲ್ಗುಣ ಮಾಸದ ಹುಣ್ಣಿಮೆ ದಿನ ಜಾತ್ರೆ ನಡೆಯುತ್ತದೆ. ಸಜ್ಜಲ ಗುಡ್ಡದಲ್ಲಿ ಶರಣಮ್ಮನವರ ಸಮಾಧಿ ಇದೆ.

ಯಲ್ಬುರ್ಗಿ ತಾಲ್ಲೂಕಿನ ಇಟಗಿಯಲ್ಲಿ ಮಹಾದೇವ ದೇವಾಲಯ, ಸೋಮಪುರದಲ್ಲಿ ಶರಣ ಬಸವೇಶ್ವರ ಮಠ, ಚಿಕೇನಕೊಪ್ಪದಲ್ಲಿ ಚೆನ್ನವೀರ ಶರಣರು, ಕರ್ಮಾಡಿಯಲ್ಲಿ ವೀರಭದ್ರೇಶ್ವರ ದೇವಾಲಯ, ಎಡಿಯಾಪುರದ ಸಿದ್ಧಲಿಂಗೇಶ್ವರ, ಕೋನಾಪುರದಲ್ಲಿ ಶರಣ ಬಸವೇಶ್ವರ ಜಾತ್ರೆ, ಮುಧೋಳದಲ್ಲಿ ತ್ರಿಲಿಂಗೇಶ್ವರ ಜಾತ್ರೆ ನಡೆಯುತ್ತದೆ.

ಗಂಗಾವತಿ ತಾಲ್ಲೂಕಿನ ಹಿರೇಜಂತಕಲ್ಲಿನ ಹತ್ತಿರ ವಿರೂಪಾಕ್ಷೇಶ್ವರ ದೇವಾಲಯ, ನವಲಿ ಗ್ರಾಮದಲ್ಲಿ ಭೋಗಾಪುರೇಶ ದೇವಾಲಯವಿದೆ. ಸಿಂಧನೂರು ತಾಲ್ಲೂಕಿನ ಒಳ ಬಳ್ಳಾರಿಯಲ್ಲಿ ಮಲ್ಲಿಕಾರ್ಜುನ ದೇವಾಲಯ ಹಾಗೂ ವೀರಶೈವ ಮಠವಿದೆ. ಮುಕ್ಕುಂದದಲ್ಲಿ ಕವವೀರಯ್ಯ ಶರಣನ ಸಮಾಧಿ ಇದೆ.

ದೇವರ ಗುಡಿ ೧೨ನೇ ಶತಮಾನದ ಶಿವಶರಣರ ಧಾರ್ಮಿಕ ಆಂದೋಲನಕ್ಕೆ ಸಂಬಂಧಿಸಿದ ಮಹತ್ವದ ಸ್ಥಳ. ವಚನಕಾರ ಚಿಕ್ಕಯ್ಯ ಪಂಡಿತ ಇಲ್ಲಿಯ ಮಠಾಧಿಪತಿಯಾಗಿದ್ದ. ಜಾಲಹಾಳದಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ.

## ೨೧. ಹಾಸನ ಜಿಲ್ಲೆ :

ಅರಸೀಕೆರೆ ತಾಲ್ಲೂಕಿನಲ್ಲಿ ಕೋಡಿಹಳ್ಳಿ ಮಠವಿದೆ. ಬೇಲೂರಿನಲ್ಲಿ ರಾಘವಾಂಕನ ಗದ್ದುಗೆ ಇದೆ.

## ೨೨. ಮಂಡ್ಯ ಜಿಲ್ಲೆ :

ಕೃಷ್ಣರಾಜ ಪೇಟೆಗೆ ೫ ಮೈಲಿ ದೂರದ ಬೆಟ್ಟ. ನದಿ ಪ್ರದೇಶದಲ್ಲಿ ೧೫ನೇ ಶತಮಾನದ ಸ್ವತಂತ್ರ ಸಿದ್ಧಲಿಂಗೇಶ್ವರ ತಪೋಭೂಮಿ ಇದೆ.

## ೨೩. ಶಿವಮೊಗ್ಗ ಜಿಲ್ಲೆ :

ಕೆಳದಿಯಲ್ಲಿ ರಾಮೇಶ್ವರ, ಪಾರ್ವತಿ, ವೀರಭದ್ರ ದೇವಾಲಯಗಳಿವೆ. ಇಕ್ಕೇರಿಯಲ್ಲಿ ಅಘೋರೇಶ್ವರ ದೇವಾಲಯ ವಿದೆ. ಇದು ಪ್ರಭುದೇವರು, ಅಕ್ಕಮಹಾದೇವಿಯವರ ಪಾದಧೂಳಿಯಿಂದ ಪಾವನವಾದ ತಾಣ.

ಇದುವರೆಗೆ ವೀರಶೈವ ಕ್ಷೇತ್ರಗಳ ಬಗೆಗೆ, ಅದರಲ್ಲೂ ಕರ್ನಾಟಕದ ಕೆಲವು ಪ್ರಮುಖ ವೀರಶೈವ ಕ್ಷೇತ್ರಗಳ ಬಗೆಗೆ ಒಂದು ಅವಲೋಕನ ಮಾಡಿಯಾಯ್ತು. ಕರ್ನಾಟಕದಲ್ಲಿ ಅನೇಕ ಶರಣರು ಆಗಿಹೋಗಿದ್ದಾರೆ. ಆದರೆ ಅವರ ಗದ್ದುಗೆಗಳು ಶಾಶ್ವತವಾಗಿ ಉಳಿದು, ಶರಣರು, ಮಹಾಪುರುಷರು ದೇವರೆಂದು ಪೂಜಿಸಿಕೊಂಡು, ದೇವಾಲಯ ಕಟ್ಟಿಸಿಕೊಂಡು ಮೆರೆಯುತ್ತಿದ್ದಾರೆ. ಇವರು ಐಕ್ಯವಾದ ಸ್ಥಳಗಳು ಪುಣ್ಯಕ್ಷೇತ್ರವಾಗಿ ಮೆರೆಯುತ್ತಿವೆ. ಈ ಶರಣರ ಆದರ್ಶಗಳು ನಮ್ಮನ್ನು ಸದಾ ಬೆಳಕಿನೆಡೆಗೆ, ಜ್ಞಾನದೆಡೆಗೆ ಕೊಂಡೊಯ್ಯುತ್ತಿವೆ. ಉತ್ತಮ ಮಾರ್ಗದಲ್ಲಿ ನಡೆಯಲು ಸಹಾಯವಾಗುತ್ತಿದೆ. ವೀರಶೈವರಿರುವ ಊರಿನಲ್ಲಿ ಸಾಮಾನ್ಯವಾಗಿ ಒಂದು ಮಠ ಇಲ್ಲವೇ ಒಂದು ಶಿವಾಲಯವಿರುತ್ತದೆ. ಕರ್ನಾಟಕದ ಒಂದೊಂದು ಮಠದ, ದೇವಾಲಯದ, ಶರಣರ ಬಗೆಗೆ ಬರೆಯುತ್ತಾ ಹೋದರೆ ಒಂದೊಂದು ಹೊತ್ತಗೆಯೇ ಆಗುತ್ತದೆ. ಈ ಲೇಖನದಲ್ಲಿ ವೀರಶೈವ ಕ್ಷೇತ್ರಗಳ ಬಗೆಗೆ ಸಮಗ್ರ ಪರಿಚಯ ಮಾಡುವುದು ಬಹಳ ಕಷ್ಟದ ಕೆಲಸವೇ ಸರಿ. ಪ್ರಮುಖವಾದ ಕೆಲವು ಕ್ಷೇತ್ರಗಳ ಪರಿಚಯವನ್ನು ಟಿಪ್ಪಣಿ ರೂಪಿನಲ್ಲಿ ಬರೆದರೆ, ಮತ್ತೆ ಕೆಲವುಗಳನ್ನು ಹಾಗೆಯೇ ಹೆಸರಿಸಲಾಗಿದೆ.

ಭಕ್ತಾದಿಗಳು ತೀರ್ಥಕ್ಷೇತ್ರಕ್ಕೆ ಹೋಗುವ ಉದ್ದೇಶ, ಅದರ ದರ್ಶನದಿಂದ ಪಾಪ ಪರಿಹಾರವಾಗಲೀ, ಕಷ್ಟವಾಗಲಿ, ತಮ್ಮ ಅಭಿಷೇಗಳು ನೆರವೇರಲಿ ಎಂದು. ಮಕ್ಕಳಾಗದವರು ಮಕ್ಕಳ ಫಲ ಬೇಡಲು, ದೆವ್ವ ಹಿಡಿದವರು ದೆವ್ವ ಬಿಡಿಸಲೆಂದು. ತಮ್ಮ ಬೇಡಿಕೆ ಈಡೇರಿದರೆ, ಆತನಿಗೆ ಹರಕೆ ಕಟ್ಟಿಕೊಂಡಿರುವುದನ್ನು ತೀರಿಸಲು ಕಾಣಿಕೆ ರೂಪದಲ್ಲಿ ತಂದೊಪ್ಪಿಸುವರು. ಕೆಲವು ದೇವರುಗಳನ್ನು ಮನೆ ದೇವರೆಂದು ವರ್ಷಕ್ಕೊಮ್ಮೆ, ಹಬ್ಬ, ಜಾತ್ರೆ, ಅಥವಾ ಬಿಡು ದಿನಗಳಲ್ಲಿ ಬಂದು ಪೂಜಿಸಿ ಹೋಗುತ್ತಾರೆ. ಎಷ್ಟುದೂರವಿರಲಿ, ಕೈಲಿ ಹಣವಿರಲಿ ಇಲ್ಲದಿರಲಿ ಸಾಲ ಸೋಲ ಮಾಡಿಯಾದರೂ ಆ ದೇವರ ಸೇವೆಯನ್ನು ಮಾಡುತ್ತಾರೆ.

ಯಾವ ಶುಭಕಾರ್ಯ ಮಾಡಬೇಕಾದರೂ, ತಮ್ಮ ಇಷ್ಟ ದೇವರಿಂದ ಪ್ರಸಾದ ಕೇಳಿ ಬಲಗಡೆ ಹೂ ಬಿದ್ದರೆ ಮಾತ್ರ ಮುಂದುವರಿಯುತ್ತಾರೆ. ಅದು ಮನೆ ಕಟ್ಟುವುದಿರಬಹುದು, ಮದುವೆ ವಿಷಯವಿರಬಹುದು ಆತನ ಅಥವಾ ಆಕೆಯ ಅಪ್ಪಣೆ ಇಲ್ಲದೆ ಮಾಡುವುದಿಲ್ಲ.

ಪವಿತ್ರ ಕ್ಷೇತ್ರಗಳೆಂದರೆ ದೇವಿಯ ಕ್ಷೇತ್ರವಾಗಿರಬಹುದು, ದೇವನ ಕ್ಷೇತ್ರವಾಗಿರಬಹುದು. ಆದಿಶಕ್ತಿ, ಪಾರ್ವತಿ ಮುಂತಾದ ದೇವಿಯ ಕ್ಷೇತ್ರಗಳಿರಬಹುದು. ಮುಡುಕುತೊರೆ ಮಲ್ಲಿಕಾರ್ಜುನ–ಪಾರ್ವತಿ, ಶ್ರೀಶೈಲ ಮಲ್ಲಿಕಾರ್ಜುನ–ಭ್ರಮರಾಂಬೆ, ವಿರೂಪಾಕ್ಷ–ಪಂಪಾವತಿ, ನಂಜುಂಡೇಶ್ವರ–ದೇವಿರಮ್ಮ ಹೀಗೆ ನಾನಾ ಹೆಸರುಗಳಲ್ಲಿ ಈಶ್ವರ–ಪಾರ್ವತಿಯರ ಮೆರೆಯುತ್ತಿರುವುದನ್ನು ಕಾಣಬಹುದು. ವೀರಶೈವರೇ ಅಲ್ಲದೆ ಬೇರೆ ಎಲ್ಲ ಜನಾಂಗಗಳು ಇವರುಗಳಿಗೆ ನಡದುಕೊಳ್ಳುತ್ತಾರೆ. ವೀರಶೈವ ಕ್ಷೇತ್ರಗಳು ಬರೇ ಕರ್ನಾಟಕದಲ್ಲೇ ಅಲ್ಲ; ಹೊರ ರಾಜ್ಯಗಳಲ್ಲಿ ಇರುವುದನ್ನು ಕಾಣಬಹುದು. ಆಂಧ್ರ ಪ್ರದೇಶ, ಮಹಾರಾಷ್ಟ್ರ, ತಮಿಳುನಾಡು, ಹೆಚ್ಚಿಗೆ ಹೇಳಬೇಕೆಂದರೆ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ಶೈವ ಕ್ಷೇತ್ರಗಳು, ಶಕ್ತಿದೇವತೆಗಳ ಆರಾಧನೆಯನ್ನು ಮಾಡುವುದನ್ನು ಕಾಣುತ್ತೇವೆ. ಇಂತ ಕ್ಷೇತ್ರಗಳಿಗೂ ವೀರಶೈವರು ನಡೆದುಕೊಳ್ಳುವರು. ಆದ್ದರಿಂದ ಒಂದು ರೀತಿಯಲ್ಲಿ ಅಂಥ ಕ್ಷೇತ್ರಗಳೂ ವೀರಶೈವ ಕ್ಷೇತ್ರಗಳೇ. ಉದಾಹರಣೆಗೆ ಕಾಶಿ, ಶ್ರೀಶೈಲ, ಜ್ಯೋತಿರ್ಲಿಂಗಗಳು ಮೊದಲಾದವುಗಳು. ಕಾವೇರಿ, ಗಂಗಾ, ತುಂಗಾ ಮುಂತಾದ ನದಿಗಳನ್ನು ಭಕ್ತಿಯಿಂದ ಪೂಜಿಸುವರು. ಅದರಲ್ಲಿ ಮಿಂದರೆ ಪಾಪ ಪರಿಹಾರವಾಗುತ್ತದೆಂಬ ನಂಬಿಕೆಯೂ ನಮ್ಮ ಜನರಲ್ಲಿ ಬೆಳೆದುಬಂದಿದೆ. ಶಿವ–ಪಾರ್ವತಿ, ಶಕ್ತಿದೇವತೆಗಳಾದ ಬನಶಂಕರಿ, ಚಾಮುಂಡಿ, ಸುಬ್ರಹ್ಮಣ್ಯ, ಗಣಪತಿ, ಶಾರದೆ, ಲಕ್ಷ್ಮಿ ಮುಂತಾದ ದೇವತೆಗಳನ್ನು ವೀರಶೈವರು ಪೂಜಿಸುತ್ತಾ ಬರುತ್ತಿದ್ದಾರೆ. ವೀರಶೈವ ಇಷ್ಟಲಿಂಗವೇ ಸಾಕೆಂದು ಸಾರಿದರೂ ದೇಗುಲಲಿಂಗಕ್ಕೆ ಎರಗುವುದು ಮುಂದುವರಿಯುತ್ತಲೇ ಇದೆ.

❑

# ಶರಣರ ವಚನ ಸಂಪದ

ಮನವ ಮರೆದು ಮಾಡಿದಡೆ ಲಿಂಗರೂಪಾಯಿತ್ತು
ಧನವ ಮರೆದು ಮಾಡಿದಡೆ ಜಂಗಮರೂಪಾಯಿತ್ತು
ತನುವ ಮರೆದು ಮಾಡಿದಡೆ ಪ್ರಸಾದರೂಪಾಯಿತ್ತು
ಇಂತೀ ತ್ರಿವಿಧವನರಿದು ಮಾಡಿದಡೆ ಬಯಲರೂಪಾಯಿತ್ತು
ಇಂತೀ ತ್ರಿವಿಧವನರಿದು ಮಾಡಿದಡೆ ಬಯಲರೂಪಾಯಿತ್ತು
ಮನವರಿಯನಾಗಿ ಲಿಂಗವನರಿತ
ಧನವನರಿಯನಾಗಿ ಜಂಗಮವನರಿತ
ತನುವನರಿಯನಾಗಿ ಪ್ರಸಾದವನರಿತ
ಈ ತ್ರಿವಿಧ ಸುಖವ ಮರೆದವನಾಗಿ ಬಯಲೆಂದರಿತ
ಮನವನೇ ಲಿಂಗ ಒಳಕೊಂಡಿತ್ತು.
ಧನವನೇ ಜಂಗಮ ಒಳಕೊಂಡಿತ್ತು.
ತನುವನೇ ಪ್ರಸಾದ ಒಳಕೊಂಡಿತ್ತು.
ಇಂತೀ ತ್ರಿವಿಧ ರೂಪನು ಒಳಗೊಂಡಿತ್ತು ಗುಹೇಶ್ವರ.

★ ★

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ
ಅವು ಜಗಕಿಕ್ಕಿದ ವಿಧಿ.
ನಿನ್ನೊಡವೆಯೆಂಬುದು ಗುರು ಲಿಂಗ ಜಂಗಮಕ್ಕೆ
ದಾಸೋಹ ಮಾಡುವ ಜ್ಞಾನರತ್ನ
ಅಂತಪ್ಪ ದಿವ್ಯರತ್ನವ ಕೆಡಗುಡದೆ
ಆ ರತ್ನವ ನೀನಲಂಕರಿಸಿದೆಯಾದಡೆ
ನಮ್ಮ ಗುಹೇಶ್ವರ ಲಿಂಗದಲ್ಲಿ
ನಿನ್ನಿಂದ ಬಿಟ್ಟು ಸಿರಿವಂತರಾರು ಇಲ್ಲಿ ಕಾಣಾ ಎಲೆ ಮನವೆ.

– ಅಲ್ಲಮಪ್ರಭು

ಭಕ್ತ ಶಾಂತನಾಗಿರಬೇಕು,
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು
ಭೂತಹಿತವಹ ವಚನವ ನುಡಿಯಬೇಕು,
ಜಂಗಮದಲ್ಲಿ ನಿಂದೆಯಿಲ್ಲದೆ,
ಸಕಲ ಪ್ರಾಣಿಗಳ ತನ್ನಂತೆ ಭಾವಿಸೂದು ಮಾಡಬೇಕು,
ತನುಮನಧನವ ಗುರುಲಿಂಗ ಜಂಗಮಕ್ಕೆ ಸವೆಸಲೀಬೇಕು,
ಅಪಾತ್ರದಾನವ ಮಾಡಲಾಗದು
ಸಕಲೇಂದ್ರಿಯಗಳ ತನ್ನ ವಶವ ಮಾಡಬೇಕು
ಇದೇ ಮೊದಲಲ್ಲಿ ಬೇಹ ಶೌಚ ನೋಡಾ.
ಲಿಂಗವ ಪೂಜಿಸಿ ಪ್ರಸಾದವ ಪಡೆವರೆ ಎನಗಿದೇ ಸಾದನ
ಕೂಡಲಚೆನ್ನಸಂಗಮದೇವಾ.

– ಚನ್ನಬಸವಣ್ಣ

# ಕನಕಪುರ ತಾಲ್ಲೂಕು ಪರಿಸರದ ಕೆಲವು ವೀರಭದ್ರ ಕ್ಷೇತ್ರಗಳು

– ಎಂ.ಜಿ. ನಾಗರಾಜ್ *

ವೀರಭದ್ರ ನಮ್ಮ ಸಂಸ್ಕೃತಿಯ ಶೌರ್ಯದ ಪ್ರತೀಕ. ಶೌರ್ಯದ ಅರ್ಥವಂತಿಕೆಯ 'ವೀರ' ಎಂಬ ಶಬ್ದ ಹಾಗು ಮಂಗಳರೂಪ ಎನಿಸುವ 'ಭದ್ರ' ಎಂಬ ಶಬ್ದ ಸೇರಿ 'ವೀರಭದ್ರ' ಎಂಬ ಸಂಯುಕ್ತ ಶಬ್ದ ಒದಗಿದೆ. ಮಂಗಳಕರ ವೀರನಾದ ಕಾರಣ ಇವನು ಜೀವರಕ್ಷಕ, ದುಷ್ಟಶಿಕ್ಷಕ ಸಂಕೇತವಾಗಿದ್ದಾನೆ. ಅಂತೇ ಅವನದು ಜಂಗಮಲೀಲೆ, ಚೈತನ್ಯಶೀಲ ಚರ್ಯಾಶಕ್ತಿ. ಇವನ ಹೆಸರಿನ ಕನ್ನಡ ರೂಪವನ್ನು ಡಾ. ಶ್ರೀ ಜಚನಿ ಅವರು 'ಚನ್ನಮಲ್ಲ' (ಮಲ್ಲ=ವೀರ, ಚನ್ನ=ಭದ್ರ=ಶುಭ) ಎಂದು ಪ್ರತಿಪಾದಿಸಿದ್ದಾರೆ. ವೇದ, ಉಪನಿಷತ್ತು, ಪುರಾಣ, ಆಗಮ, ಕಾವ್ಯ, ಶಾಸನ, ಜಾನಪದ, ಶಿಲ್ಪ, ಚಿತ್ರಕಲೆ, ಇತಿಹಾಸ, ಸಂಪ್ರದಾಯ, ಸ್ತೋತ್ರ, ಪುರಾಣ, ಕಥೆ ಪಡಬು, ವಚನ, ತಾರಾವಳಿ ಇತ್ಯಾದಿ ವಿವಿಧ ಮಾಧ್ಯಮಗಳಲ್ಲಿ ಅವನ ವ್ಯಕ್ತಿತ್ವದ ವರ್ಣನೆ ಇದೆ. ಹೀಗಾಗಿ ಅವನಂಥ ವ್ಯಕ್ತಿತ್ವ ನಮ್ಮ ಸಂಸ್ಕೃತಿಯಲ್ಲಿದ್ದು, ಪರಂಪರೆಯಲ್ಲಿ ಅವನ ಪಾತ್ರಕ್ಕೆ ಅಲಂಕಾರಿಕ ಭಾವನೆಗಳೂ ಅಡಕಗೊಂಡು ಇಳೆ–ಬಾನೆತ್ತರದ ಮೂರ್ತಿಯಾಗಿ ಅವನು ಕಾಣಬರುತ್ತಾನೆ, ಅವನನ್ನು ಋಗ್ವೇದ : 'ಸ ವೀರೋ ದಕ್ಷ ಸಾದನೋ ವಿಯುಸ್ತಂಭರೋದಸೀ' – ದಕ್ಷ ಶಿಕ್ಷಕ ವೀರಭದ್ರ ಭೂಮ್ಯಾಕಾಶಗಳೆತ್ತರ ಮೀರಿನಿಂತ ಎಂದರೆ; ಯಜುರ್ವೇದ : 'ನಮಃ ಶೂರಾಯ ಚಾವಭಿಂದತೇ ಚ' – ದಕ್ಷಯಜ್ಞಮರ್ದನ ಶೂರನಿಗೆ ನಮನ ಎಂದಿದೆ; ಶರಭೋಪನಿಷತ್ತು, ವಿಷ್ಣುವಿನ ಕಮಲಪುಷ್ಪಾರ್ಚನೆಯಿಂದ ಸಂಪ್ರೀತನೆಂದಿದೆ, ಎಂದೆಲ್ಲ ಡಾ. ಶ್ರೀ ಜ.ಚ.ನಿ. ಹೆಕ್ಕಿ ಹೇಳಿದ್ದಾರೆ. ಅಂಥ ಒಂದು ಮೂರ್ತಿಯ ಆರಾಧನೆ, ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಬಗೆಯು ಕನಕಪುರ ತಾಲೂಕು ಪರಿಸರದಲ್ಲಿ ಬಿಂಬಿತವಾಗಿರುವುದನ್ನು ಮುಂದಿರುವ ವಿವರಗಳ ಮೂಲಕ ಮಂಡಿಸಲಾಗಿದೆ.

**ಶ್ರೀ ದೇಗುಲ ಮಠದಲ್ಲಿ ವೀರಭದ್ರ ಹಲಗೆ :** ಕನಕಪುರ ತಾಲೂಕಿನ ಹಲವಾರು ವೀರಭದ್ರ ಕ್ಷೇತ್ರಗಳಲ್ಲಿ ಆಚಾರ ವಿಚಾರಗಳಲ್ಲಿ ದೇಗುಲಮಠದ ನಿರ್ದೇಶನವೂ ಕಾಣಬರುತ್ತದೆ.



ಆ ವೀರಭದ್ರೋತ್ಸವ–ಜಾತ್ರೆಗೆ ಇಲ್ಲಿನ ಗುರುಗಳಿಗೆ ಬಿನ್ನಹವಿಟ್ಟು ಊರಿನವರು ಕರೆದೊಯ್ಯುತ್ತಾರೆ. ಮಠದ ಮುಂದೆಯೆ ಮಡಿವಾಳ ಮಾಚಯ್ಯನ ದೇಗುಲವಿದೆ. ಮಡಿವಾಳ ಮಾಚಯ್ಯ ವೀರಭದ್ರನ ಅವತಾರ ಎಂಬ ಪಾರಂಪರಿಕ ನಂಬುಗೆಯೂ ಇದೆ. ಕಂನ್ನೆಲ್ಲಿ ವೀರಭದ್ರನಿಗೂ (ಬೆಂಗಳೂರು ತಾ.) ಮಡಿವಾಳ ಮಾಚಯ್ಯನ ಸಂಬಂಧದ ಕತೆ ಇದೆ. ಗೊಡಚಿ ವೀರಭದ್ರ (ಧಾರವಾಡ ಜಿಲ್ಲಾ)ನಿಗೂ ಮಡಿವಾಳ ಮಾಚಯ್ಯನ ಸಂಬಂಧವಿದ್ದು, ಬಿಜ್ಜಳನ ಸೈನ್ಯಕ್ಕೆ ಕಾಳಗಕೊಟ್ಟ ಮಾಚಯ್ಯನ ನೆಲೆ ಗೊಡಚಿ ಎಂದಿದೆ. ಹೀಗೆಯೇ ಕಾನಕಾನ ಹಳ್ಳಿಯ ಮಡಿವಾಳರ ಮೀಸಲು ಮಲ್ಲಿಗೆ ಸಂಬಂಧದಲ್ಲಿ ಕಲ್ಯಾಣದ ಬಸವಣ್ಣನ ಸಾಕ್ಷಿಯ ಸಂಕೇತವು ೧೨ನೇ ಶತಮಾನದಲ್ಲಿ ಶಾಸನೋಕ್ತವಿದೆ; ಅದರ ಸಾಧನೆಯ ಸಾಫಲ್ಯ ದೇಗುಲ ಮಠದ

* ಅನರ್ಘ್ಯ ಶ್ರೀ ಜ.ಚ.ನಿ. ಕೃಪ, ೨೨೧, ೬೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–೫೬೦ ೦೧೦



ಮಡಿವಾಳ ಮಾಚಯ್ಯನ ವಿಗ್ರಹ ಮತ್ತು ದೇಗುಲ





ದೇಗುಲ ಮಠದ ಸ್ತಂಭಗಳಲ್ಲಿ ಶರಣರ ಶಿಲ್ಪಗಳು, ದೇವಶಿಲ್ಪಗಳು ಮತ್ತು ಕಂಬದ ಬಸವ

ಗುರುಗಳದೆ ಎಂಬ ಸೂಚನೆ ಒದಗುವ ಕಾರಣಕ್ಕೆ ಮಡಿವಾಳ ಮಾಚಯ್ಯನ ದೇಗುಲದ ಅಸ್ತಿತ್ವವೆ ಇಲ್ಲಿ ಸಾಕ್ಷಿಯಾಗಿ ಕಾಣುವಂತಿದೆ. ಮಡಿವಾಳ ಮಾಚಯ್ಯ ದೇಗುಲದ ಆಚಾರ ವಿಚಾರದ ಸಾಕ್ಷಿಗೆ ದೇಗುಲ ಮಠದ ಗುರುಗಳನ್ನೆ ಆಧರಿಸಲಾಗಿದೆ. ಹೀಗಾಗಿ ವೀರಭದ್ರ ಹಲಗೆಯ ಪೂಜೆಯು ದೇಗುಲ ಮಠದ ಗದ್ದುಗೆ ಮಂಟಪದಲ್ಲಿಯು ನಡೆಯುತ್ತದೆ; ಅಲಂಕೃತಮೂರ್ತಿಮಾಡಿ ಪೂಜೆ ಕೊಡುವುದಿದೆ. ಯಡಿಯೂರಿನಲ್ಲಿಯೂ ತೋಂಟದ ಸಿದ್ಧಲಿಂಗ ಯತಿ ಗದ್ದುಗೆಯ ಮುಂಬದಿಯಲ್ಲಿ ವೀರಭದ್ರ ಫಲಕವಿಟ್ಟು ವೀರಭದ್ರ ಸಾಕ್ಷಿ ಎಂದು ಗದ್ದುಗೆ ಪೂಜಾದಿಗಳು ನಡೆಯುತ್ತವೆ. ಅಲ್ಲದೆ ಮೊದಲಿಗೆ ಕನಕಪುರದ ಈ ಚಿಕ್ಕಮಠದ ಬಳಿ ಹಳೆಯ ಸಂಗಮೇಶ್ವರ ದೇಗುಲವಿದ್ದು, ವೀರಭದ್ರನ ಆರಾಧನೆಯೂ ನಡೆಯುತ್ತಿತ್ತೆನ್ನಲಾಗಿದೆ. ಈ ಅಂಶಗಳು ಕಲ್ಯಾಣ ಬಸವೇಶ್ವರನ ಸಾಕ್ಷಿಯಾಗಿ ಮಡಿವಾಳರ ಮಲ್ಲಿಗೆ ಮೀಸಲು ಸಮಸ್ಯೆಯನ್ನು ಬಗೆಹರಿಸಿದ ಸಂಕೇತವಾಗುತ್ತವೆ ಹಾಗು 'ದೇಗುಲಮಠ' ಎಂಬ ಹೆಸರಿಗೂ ಪೂರಕ ಅಂಶಗಳನ್ನು ಒದಗಿಸುವಂತಿವೆ. ಇದಲ್ಲದೆ ಶ್ರೀ ದೇಗುಲಮಠದ ಶಾಸನದ ಬಳಿ ಇರುವ ಸ್ತಂಭಶಿಲ್ಪಗಳಲ್ಲಿ (ಉಬ್ಬುಶಿಲ್ಪ) ಹಾಗು ಕಂಬದ ಬಸವ ಇರುವ ಗದ್ದುಗೆ ಸೂಚಿತ ಮಂಟಪದ ಸ್ತಂಭಶಿಲ್ಪಗಳಲ್ಲಿ ಇಷ್ಟಲಿಂಗಪೂಜಾನಿರತ ವ್ಯಕ್ತಿ ಹಾಗು ಮುನಿಗಳ ಶಿಲ್ಪಗಳು, ಲಿಂಗಾರಾಧನೆಯ ಪುರುಷಾಮೃಗ ಶಿಲ್ಪಗಳು ವಿಜಯನಗರ ಕಾಲದ ಚಹರೆಗಳಲ್ಲಿವೆಯಂತೆ ಕಾಣಬರುತ್ತವೆ. ಈ ಸ್ತಂಭಗಳಲ್ಲಿ ಕೆಲವು ದೇಗುಲಸ್ತಂಭ ಗಳಾಗಿದ್ದುದೂ ಸೂಚಿತಗೊಳ್ಳುವಂತಿದೆ. ಮಠಾಂತರ್ಗತ ದೇಗುಲಗಳು ಅನೇಕ ಕಡೆ ಕಂಡುಬರುವಂತೆ (ನಿರಂಜನ ಪೀಠವಾದ ಕೊಡಗಿನ ದೊಡ್ಡ ಕೊಡ್ಲಿ ಕಲ್ಲುಮಠ, ಮಾದಾಪುರ ಮಠ, ಸಿದ್ದೇಶ್ವರಮಠ ಇತ್ಯಾದಿ) ಒಂದು ಕಾಲಕ್ಕೆ ಅಂಥ ವಾಸ್ತುರಚನೆ ಇಲ್ಲಿಯೂ ಇದ್ದು ಕಾಲಾಂತರದಲ್ಲಿ ಮಾರ್ಪಾಡುಗಳಾಗಿರುವಂತಿದೆ.

ದೇಗುಲ ಮಠದಲ್ಲಿರುವ ಎರಡು ವೀರಭದ್ರ ಹಲಗೆಗಳಲ್ಲಿ (ಮುಖ್ಯವಾದ) ಒಂದರಲ್ಲಿ ವಿಶಿಷ್ಟ ಲಕ್ಷಣವೂ ಇದೆ. ವೀರಭದ್ರನ ಉಭಯಪಾದಗಳು ಎಡಪಾರ್ಶ್ವೋದಯದಲ್ಲಿದ್ದು, ಸ್ಥಾನಕ



ಮಠದ ವೀರಭದ್ರ ಹಲಗೆಗಳು



ಮಠದ ಅಲಂಕೃತ ವೀರಭದ್ರ

ಭಂಗಿಯ ವೀರಭದ್ರನ ಹಿಂಗೈಗಳಲ್ಲಿ ತ್ರಿಶೂಲ, ಡಮರು ಮುಂಗೈಗಳಲ್ಲಿ ಓರೆನೀಳಖಡ್ಗ, ಡಾಲು, ಎಡಭುಜದಿಂದ ಇಳಿಬಿದ್ದು ಬಲಸೊಂಟದವರೆಗಿರುವ ರುಂಡಮಾಲೆ, ಹಣೆಯಪೂರಿತ ಭಾಗದಲ್ಲಿ ಶಿವಲಿಂಗ, ಶಿರದ ಮೇಲೆ ನಾಗಹೆಡೆಯಾಸರೆ ಇರುವುದು ಎಂದಿನ ಶಿಲ್ಪಲಕ್ಷಣಗಳೇ ಆಗಿವೆ. ಪ್ರಣಾಮ ಸ್ಥಾನಕ ಭಂಗಿಯ ದಕ್ಷಪ್ರಸೂತಿಯರೂ ಇದ್ದಾರೆ – ಮುಖ್ಯವಾಗಿ ಎರಡು ಪಾದಗಳ ನಡುವೆ ಹೆಡೆನಾಗನಿರುವುದು, ಮನಃಸಂಯಮಿ, ಮನಃಕುಂಡಲಿನಿಯೋಗದ ವೀರಭದ್ರನನ್ನು ಸಂಕೇತಿಸುವಂತಿದೆ. ಢಾಲುವಿನ ಕೆಳಗೆ ದಕ್ಷರುಂಡದ ಬದಲು ನಾಗಹೆಡೆಯನ್ನು ಒತ್ತಿಹಿಡಿದಿರುವ ಮನಃಕುಂಡಲಿನಿ ಯೋಗದ ವೀರಭದ್ರ ಶಿಲ್ಪಗಳು (ಸವದತ್ತಿ ಅಂಕನಾಥೇಶ್ವರ ಗುಡಿಯ ವೀರಭದ್ರ, ಕುಣಿಗಲ್ ತಾ. ವೀರಣ್ಣಗುಡಿಯ ಉತ್ಸವ ವೀರಭದ್ರಮೂರ್ತಿ ಇತ್ಯಾದಿ) ಕಾಣಬರುವಲ್ಲಿ ಶ್ರೀ ದೇಗುಲಮಠದ ಹಲಗೆಯಲ್ಲಿ ವೀರಭದ್ರ ಪಾದಗಳ ನಡುವೆ ನಾಗ ಹೆಡೆಯ ಶಿಲ್ಪವನ್ನು ಹೊಂದಿರುವುದು ವಿಶೇಷ. ಉಗಾದಿ ಸಮಯದಲ್ಲಿ, ಮಠದ ಮುಂದಿರುವ ಮಡಿವಾಳ ಮಾಚಯ್ಯನ ದೇಗುಲದ ವಾರ್ಷಿಕ ಉತ್ಸವಾದಿಗಳು ನಡೆಯುವಲ್ಲಿ, ಈ ವೀರಭದ್ರ ಹಲಗೆಯನ್ನು ಮಾಚಯ್ಯನ ಗುಡಿಗೆ ಒಯ್ದು, ಪೂಜಾದಿಗಳನ್ನು ನೆರವೇರಿಸುತ್ತಾರೆ. ಇವೆಲ್ಲ ದೇಗುಲಮಠದ ಗುರು ಸಾನ್ನಿಧ್ಯದಲ್ಲಿ ನಡೆಯುತ್ತವೆ.

ಈ ಹಲಗೆಯ ಮುಂದೆ ಶಿವಲಿಂಗ ಹಾಗು ಬಸವಣ್ಣನನ್ನು ಇರಿಸಿ, ವೀರಭದ್ರಲಿಂಗ ಸಂಕೇತವಾಗಿ ಪೂಜೆ ನಡೆಸುತ್ತಾರೆ. ಇವೆಲ್ಲ ಶಿವನಹಳ್ಳಿ ವೀಗಭದ್ರ ಗುಡಿಯಲ್ಲಿ ವೀರಭದ್ರ ಹಾಗು ವೀರಭದ್ರ ಶಿವಲಿಂಗಗಳಿರುವುದು, ದೇಗುಲಮಠದ ಗುರು ಸಮಕ್ಷಮದಲ್ಲಿ ಅಲ್ಲಿ ಪೂಜಾಚರಣೆ ನಡೆಯುವುದು ಸಂವಾದಿ–ಸಮಸ್ಪಂದನೆಯ ಆಚರಣೆಗಳಂತೆ ಕಾಣುತ್ತವೆ.

ವಿರುಪಸಂದ್ರದಲ್ಲಿ ಕಂಬದ ಬಸವ (ಬಸವೇಶ್ವರ) ಇದ್ದು ಗುಡಿಕಟ್ಟಡವೂ ಇದೆ. ಕಂಬದ ಮೇಲೆ ಸ್ಥಾನಕ ವೀರಪುರುಷನ ಉಬ್ಬು ಶಿಲ್ಪವಿದ್ದು ಕೈಗಳಲ್ಲಿ ಆಯುಧಗಳಿವೆ (ಒಂದು ಆಯುಧ: ಖಡ್ಗವೆಂಬುದು ಸ್ಪಷ್ಟವಿದೆ). ಇದು 'ವೀರಗಲ್ಲು', 'ಜಟ್ಟಿಕಲ್ಲು' ಎನ್ನುವುದಕ್ಕಿಂತ ಬಸವ ಸ್ತಂಭದಲ್ಲಿರುವ ಕಾರಣ, ವೀರಭದ್ರನ ಸಾಂಕೇತಿರೂಪವೆನ್ನಬಹುದು (ಗದಗ ಜಿಲ್ಲೆಯ ಲಕ್ಕುಂಡಿಯಲ್ಲಿ ವೀರಗಲ್ಲಿನ ವೀರನನ್ನು ವೀರಭದ್ರ ಸ್ವರೂಪದಲ್ಲಿ ಕೆತ್ತನೆ ಮಾಡಿರುವುದನ್ನು; ಬೆಂಗಳೂರು ಸರ್ಕಾರಿ ಮ್ಯೂಸಿಯಂನಲ್ಲಿರುವ ವೀರಗಲ್ ವೀರನನ್ನು, ಚತುರ್ಭುಜನನ್ನಾಗಿಸಿ, ದಕ್ಷ ಸಂಕೇತವಾದ ಟಗರನ್ನು ಮೂಡಿಸಿ ವೀರಭದ್ರನನ್ನಾಗಿ ಶಿಲ್ಪದಲ್ಲಿ ಮೂಡಿಸಿರುವುದನ್ನು



ಕಂಬದ ಬಸವ ಮತ್ತು ವೀರನ ಶಿಲ್ಪ

ಕಾಣಬಹುದು.) ಕಂಬದ ಬಸವ ಸಾಮಾನ್ಯವಾಗಿ ಮಠದ ಗಡಿಮುದ್ರೆಯಶಿಲೆಯಾಗಿ ಅಥವಾ ಗುರುಗದ್ದುಗೆ ಸಾನ್ನಿಧ್ಯವನ್ನು ಸೂಚಿಸುವಲ್ಲಿ ವಿರುಪಸಂದ್ರದ ಈ 'ವೀರಪುರುಷ' – ವೀರಭದ್ರ ಸಂಕೇತವಾಗಿರಬಹುದೆನಿಸುತ್ತದೆ. ದೇಗುಲ ಮಠದ ವೀರಭದ್ರ ಹಲಗೆ. ಮಡಿವಾಳ ಮಾಚಯ್ಯ ದೇಗುಲ ಹಾಗು ತತ್ಸಬಂಧೀ ಮಲ್ಲಿಗೆ ಮೀಸಲು ಕತೆ ಇವನ್ನೆಲ್ಲ ಸಮನ್ವಯಗೊಳಿಸಿದರೆ; ಹೊಳೆ ಪ್ರವಾಹದಲ್ಲಿ ಮಠವೂ ಕೊಚ್ಚಿ ಹೋಗಿದ್ದ ಸಂದರ್ಭವನ್ನು ತಾಳೆ ಹಾಕಿದರೆ; ಉಗಾದಿಯ ನಂತರ ೨೦ ದಿವಸಕ್ಕೆ ವಿರುಪಸಂದ್ರದಲ್ಲಿ ಆದಿ ನಿರ್ವಾಣಸ್ವಾಮಿಗಳ ಜೊತೆಗೆ ಬಂದರೆನ್ನಲಾದ ನಾಲ್ಕು ಶಕ್ತಿದೇವತೆಯರಲ್ಲಿ ಕೊಲ್ಲಾಪುರದಮ್ಮನೂ ಒಬ್ಬಳಾಗಿ ಅವಳಿಗೆ ಮಠದಿಂದ (ಮಡಿಲಕ್ಕಿ ತುಂಬಿ) 'ಸೋಗಲು' ವ್ಯವಸ್ಥೆ ಮಾಡುವುದು; ದೇಗುಲ ಮಠದ ಗುರುಗಳನ್ನು ಬಿನ್ನಹವಿಟ್ಟು ವಿರುಪಸಂದ್ರಕ್ಕೆ ಆ ಸಮಯದಲ್ಲಿ ಕರೆಸುವುದು; ವಾರ್ಷಿಕ

ಪಾದಪೂಜೆ ಮಾಡಿ ಗುರುಗಳ ಪಲ್ಲಕ್ಕಿ ಉತ್ಸವ ನಡೆಸುವುದು; ಉಭ ಶುಭ ಕೇಳಲು ಮಠಕ್ಕೆ ಬರುವುದು ಮತ್ತು ಅಲ್ಲಿನ ಶಕ್ತಿ ದೇವಿಗೆ (ಎಳೆವಾರದಲ್ಲಿ ಮರ ತಂದು ರಾಶಿ ಹಾಕಿ) ಆ ಸಮಯದಲ್ಲಿ ಕೊಂಡ ಹಾಕಿ ಹಾಯುವುದು; ಆಂಜನೇಯಗುಡಿ ಎದುರು ಬಸವಣ್ಣ, ಎಲ್ಲಮ್ಮ ಇರುವುದು. ಇವೆಲ್ಲ ವೀರಭದ್ರ ಸಮಯಾಚಾರದ ಅನ್ವಯಮಾಡಿಕೊಂಡಿರುವ ಸಂಕೇತವಾಗಿ ಕಾಣುತ್ತದೆ. ರೈಸರು ಸರಿಯಾಗಿಯೇ ಓದಿರುವ ಅಂದಿದ್ದ ಶಾಸನವು ವಿರುಪಸಂದ್ರದಲ್ಲಿ ಇದ್ದ ಮಠವನ್ನು ಪ್ರಸ್ತಾಪಿಸಿದೆ. ಹೀಗಾಗಿ ದೇಗುಲಮಠದ ನೆಲೆ ಒಂದು ಕಾಲಕ್ಕೆ ಅಲ್ಲಿ ಇದ್ದದ್ದು ನಂತರ ಹೊಳೆಪ್ರವಾಹದ ಕಾರಣ ಪಡುವಣಕ್ಕೆ ಬಂದು ವಿಸ್ತಾರಗೊಂಡರೂ ತನ್ನ ಗಡಿ ಗುರುತಿನ ಸ್ತಂಭ ಬಸವನನ್ನು (ಗುರುಗದ್ದುಗೆಯ ಶಾಖಾಮಠದ ನೆಲೆ !) ವೀರಸಂಯುಕ್ತವಾಗಿ ಮೂಡಿಸಿರುವಂತಿದೆ. ಬಹುಶಃ ಒಂದು ಕಾಲಕ್ಕೆ ವೀರಭದ್ರನ ಗುಡಿಯೂ ಅಲ್ಲಿದ್ದು. ಮಠವೂ ಅಲ್ಲಿದ್ದಿರುವ ಸೂಚನೆಗಳು ಒದಗುತ್ತವೆ. ಇಂದು ಅಲ್ಲಿ ಅನ್ಯಮತೀಯರೇ ಇದ್ದರೂ ದೇಗುಲದ ಮಠದ ಗುರುಗಳನ್ನೇ ಕರೆಸುವ ಕಾರಣ ಹಿಂದಿನಿಂದ ನಡೆದು ಬಂದ ಪರಂಪರೆಯ ಸಾಕ್ಷಿ ಎನಿಸುತ್ತದೆ. ರೈಸರು ಓದಿದ್ದ ಶಾಸನ ಇಂದು ಅಲ್ಲಿ ಪತ್ತೆಯಾಗುತ್ತಿಲ್ಲ. ಇರಲಿ. ಒಟ್ಟಾರೆ ದೇಗುಲ ಮಠಕ್ಕೆ ಅವಿಭಾಜ್ಯವಾಗಿ ಸಂಬಂಧಗೊಂಡ ವಿರುಪಸಂದ್ರ, ಒಂದು ಕಾಲದ (ವೀರಭದ್ರ ಸಂಕೇತದ) ವೀರಸಂದ್ರ ವಾಗಿತ್ತೆನಿಸುತ್ತದೆ. ಕಾಲಾಂತರದಲ್ಲಿ 'ವಿರುಪಸಂದ್ರ' ವೆಂದು ಜನಪದ ನಾಲಿಗೆಯ ರೂಪಾಂತರದಲ್ಲಿ ಒದಗಿರುವಂತಿದೆ.* ವೀರಭದ್ರನೂ ತ್ರಿನೇತ್ರನೆಂದಿರುವಲ್ಲಿ 'ವಿರೂಪಾಕ್ಷ' ಹೆಸರು ಅವನಿಗೂ ಅನ್ವಯವಾಗಿ ವಿರುಪಸಂದ್ರವು ಅವನ ಹೆಸರಿನ ಸಂಬಂಧವನ್ನು ಹೊಂದಿರಬಹುದು. (ಇಂದು ಈ ಗ್ರಾಮ 'ಲಕ್ಷ್ಮೀಪುರ'ದ ನೆರೆಗಿದ್ದು ಅದರ ವಿಸ್ತರಣವಾಗಿ ಆ ಹೆಸರಿನಲ್ಲಿ ತನ್ಮಯವಾಗಿಬಿಡುವ ಸಂದರ್ಭವಾಗಿರ ಲೂಬಹುದು.)

ಕಾನಕಾನಹಳ್ಳಿ ತಾಲೂಕಿನಲ್ಲಿ ಸಾತನೂರು ಹೋಬಳಿ ಎಡೆಮಾರನಹಳ್ಳಿ ವೀರಭದ್ರ, ದೊಂತೂರು ವೀರಭದ್ರ, ಮೂರುಕಣಿ (ಮೂರ್ಕಣ್ಣಿ) ವೀರಭದ್ರ, ಇರ್ಪಸಂದ್ರ ವೀರಭದ್ರ, ಬನ್ನಿಮುಕ್ಕೊಡ್ಲು ಹೋಬಳಿ ಸಂತೆಕೋಡಿಹಳ್ಳಿ ವೀರಭದ್ರ, ಬನ್ನಿಮುಕ್ಕೊಡ್ಲು ವೀರಭದ್ರ, ಸಾತನೂರು ಹೋಬಳಿ ಅಚ್ಚಲು ವೀರಭದ್ರ, ದೊಡ್ಡಮುದವಾಡಿ – ಚಿಕ್ಕಮುದವಾಡಿ ಮಾರ್ಗದ ಕರ್ಚಿಕೊಪ್ಪ ವೀರಭದ್ರ, ಕೋಟಹಳ್ಳಿ (ರಾಮನಗರ–ಕನಕಪುರ ಮಾರ್ಗ) ವೀರಭದ್ರ, ಗಾಣಾಳು ವೀರಭದ್ರ, ಹೊರಳುಗಲ್ಲು ವೀರಭದ್ರ, ಆಡನಕುಪ್ಪೆ ವೀರಭದ್ರ ಕ್ಷೇತ್ರಗಳು ಗಮನಾರ್ಹವಾಗಿವೆ. ಮೇಕೆದಾಟು ಬಳಿಯ ಮಡಿವಾಳ ಶಿವನಂಕಾರೇಶ್ವರ ('ಅಂಕ' ಎಂದರೆ ಯುದ್ಧ, ಜಟ್ಟಿ ಎಂಬ ಅರ್ಥಗಳಲ್ಲಿರುವಲ್ಲಿ ವೀರಭದ್ರಾವತಾರಿ ಮಡಿವಾಳ ಮಾಚಯ್ಯ ದೊರೆ ಬಿಜ್ಜಳನೊಡನೆ ಮಾಡಿದ ಯುದ್ಧ ಸಂದರ್ಭವನ್ನು ನೆನಪಿಸುವ ಸಾಂಕೇತಿಕ ಹೆಸರಿನಂತಿದೆ; ಸವದತ್ತಿಯ ಅಂಕನಾಥೇಶ್ವರ ದೇಗುಲದಲ್ಲಿ ಪುನಃಕುಂಡಲಿನಿಯೋಗ ಶಕ್ತಿಯು ವೀರಭದ್ರಮೂರ್ತಿ ಇರುವುದೂ ಈ ಸಂದರ್ಭದಲ್ಲಿ ಮತ್ತೆ ನೆನಪಿಗೆ ಬರುತ್ತದೆ). ಕನಕಪುರ ತಾ. ಗಡಿಗ್ರಾಮ ಹಲಗೂರು (ಈಗ ಮಂಡ್ಯ ಜಿಲ್ಲೆ) ವೀರಭದ್ರನೂ ಪ್ರಸಿದ್ಧವಿದ್ದಾನೆ.

ಗಾಣಾಳು, ಹೊರಳುಗಲ್ಲು, ಹಾಗು ಶಿವನಹಳ್ಳಿ ವೀರಭದ್ರರು ಸಾವನದುರ್ಗದಿಂದ ವಲಸೆ ಬಂದವರೆಂಬ ಐತಿಹ್ಯವಿದೆ. ಚನ್ನಪಟ್ಟಣ ತಾ. ಹುಚ್ಚಯ್ಯನ ದೊಡ್ಡಿಯ 'ಮಲ್ಲಿನಾಥನ ಕುದುರೆ', 'ತ್ರಿಶೂಲ' ಶಿಲ್ಪಗಳ ಕುರಿತೂ ಇದೇ ಬಗೆ ಐತಿಹ್ಯವಿದೆ. ಅಂದರೆ 'ಸಾವನದುರ್ಗ' ಪ್ರದೇಶದ ವೀರಭದ್ರನ ಒಕ್ಕಲುಗಳು ಬಹುಶಃ ಕ್ರಿ.ಶ. ೧೬೩೮ರ ಇಮ್ಮಡಿ ಕೆಂಪೇಗೌಡ– ರಣದುಲ್ಲಾಖಾನ್ ನಡುವಣ ಯುದ್ಧದ ಸಂದರ್ಭದಲ್ಲಿ ಮಾಗಡಿ ಪತನವಾಗಲು ಹಲವಾರು ವೀರಭದ್ರ ಒಕ್ಕಲುಗಳು ಕನಕಪುರ, ಚನ್ನಪಟ್ಟಣದತ್ತ ವಲಸೆ ಬಂದಾಗ ಇಲ್ಲಿನ ವೀರಭದ್ರರಲ್ಲಿ ಸಾವನದುರ್ಗದ ವೀರಭದ್ರನನ್ನೂ ಸಮೀಕರಿಸಿಕೊಂಡು ಆರಾಧಿಸುತ್ತ ಬಂದಿರುವಂತೆ, ಶಿವನಹಳ್ಳಿ ವೀರಭದ್ರನನ್ನು ಶಾಸನೋಕ್ತವಾಗಿ ಸಾವಂದಿ ವೀರಭದ್ರನೆಂದು ಹೇಳಿರುವುದು ಈ ದಿಸೆಯಲ್ಲಿ ಒಂದು ಗಮನಾರ್ಹ ಸೂಚನೆ ಎನಿಸುತ್ತದೆ. ಜೊತೆಗೆ ಈ ಗ್ರಾಮಗಳು ಇರುವ ಅನುಕ್ರಮ ನೆಲೆಗಳೂ ಈ ಹಿಂದಿನ ಮಾತುಗಳನ್ನು ಪುಷ್ಟೀಕರಿಸುವಂತಿದೆ.

### ಶಿವನಹಳ್ಳಿ ವೀರಭದ್ರ

ಕನಕಪುರ ತಾಲೂಕಿನ ಈ ಪ್ರಸಿದ್ಧ ವೀರಭದ್ರನ ದೇಗುಲವು ವಾಸ್ತುಶಿಲ್ಪ, ಹಾಗು ಆಚಾರ ವೈವಿಧ್ಯಗಳಿಂದ ಕೂಡಿದೆ. ಈ ವೀರಭದ್ರ ಕೊಡಗಿನ ದೊರೆಗಳಿಂದಲೂ ಮಾನಿತನಾದವ. ರಥಸಪ್ತಮಿ ಸಮಯದಲ್ಲಿ ಇವನಿಗೆ ಒಂದು ವಾರ ಜಾತ್ರೆ. ಒಮ್ಮೆ ಕೊಡಗಿನ ದೊರೆ ಕುದುರೆ ಮೇಲೇರಿ ಸಾಗುತ್ತಿದ್ದಾಗ ಈ ಶಿವನಹಳ್ಳಿ ಸ್ಥಳದಲ್ಲಿ ಖಾಯಿಲೆ ಬಿದ್ದನಂತೆ. ಆ ದೊರೆ ಶಿವನಳ್ಳಿ ವೀರಭದ್ರನಿಗೆ ಹರಸಿಕೊಂಡನಂತೆ. ಖಾಯಿಲೆ ವಾಸಿ ಆಯ್ತು. ಆಗ ಅರ್ಚಕನಿಗೆ, ಈ ದೇವರಿಗೆ ಎಷ್ಟು ಮಾನ್ಯಬೇಕು? ಕುದುರೆ ಸಾಗುವಷ್ಟು ದೂರ ಬರೆಯುವೆ ಎಂದ.

* ಮಠ ಹಾಗು ವಿರುಪಸಂದ್ರದ ಕೆಲವು ವಿವರಗಳನ್ನು ಶ್ರೀ ದೇಗುಲಮಠದ ಪೂಜ್ಯ ಶ್ರೀ ಮನಿಪ್ರ ಮುಮ್ಮಡಿ ಮಹಾಲಿಂಗಸ್ವಾಮಿಗಳವರಿಂದ ಪಡೆದಿದ್ದೇನೆ; ಊರಿನ ದೇವಾಚರಣೆಗಳ ಸಂಬಂಧದ ಕೆಲವು ವಿವರಗಳನ್ನು ವಿರುಪಸಂದ್ರದ ಶ್ರೀ ನಾಗರಾಜ್ ಅವರಿಂದ ಪಡೆದಿದ್ದೇನೆ.

ಅದಕ್ಕೆ ಪೂಜಾರಿ ತನಗೆ ಸಾಗು ಮಾಡುವಷ್ಟು ಭೂಮಿ ಸಾಕು ಎಂದು, ಉಳಿದದ್ದನ್ನೂ ಹಾಗೆಯೇ ಬಿಟ್ಟನಂತೆ. ಶಿವನಹಳ್ಳಿಯ ವೀರಭದ್ರನಿಗೆ ಕೊಡಗಿನಲ್ಲಿರುವಂತೆ ದೇವರಿಗೆ ದೇವರಕಾಡು ಹಾಗು ದೇವರಕೆರೆ ರೂಪಿಸುವ ಪದ್ಧತಿಯಂತೆ, ಇಲ್ಲಿಯೂ (ಗುಂಡು ತೋಪು) ಕಾಡು ಹಾಗು ಕೆರೆಯು ಮೀಸಲಿರುವಲ್ಲಿ; ಕೊಡಗಿನ ದೊರೆ ಕೊಟ್ಟ ವೀರಭದ್ರ ಹಲಗೆ ಎಂದು ಕೊಂಡಹಾಯುವಲ್ಲಿ ಅದನ್ನು ಹೊತ್ತುದಾಟುವ ಪರಂಪರಾಗತ ರೂಢಿ ಇರುವಲ್ಲಿ, ಮೇಲಿನ ಐತಿಹ್ಯದಲ್ಲಿ ತಥ್ಯಾಂಶ ಕಾಣುವಂತಿದೆ. ಬಹುಶಃ ಹಾಲೇರಿ ವಂಶದರಸ ದೊಡ್ಡವೀರರಾಜೇಂದ್ರ ಒಡೆಯನ ಕಾಲದಲ್ಲಿ ನೂರಂಬಾಡಿಮಠ ಅಥವಾ ಓಣಿಪುರದ ಮಠದ ಮೂಲಕ ಈ ದಾನಗಳು ಒದಗಿರುವಂತಿದೆ.

೧ ಸುಬ ಶ್ರೀಮತು ಕಾಳಯುಕ್ತ ಸಂವತ್ಸರದ ಮಾರ್ಗಶಿರ ಬ ೨ ಉ
೨ ಶಿವಪ್ಪ ಗೌಡನವರ ಮಗ ಅಮ್ರುತ ವೀರಪ್ಪವೊಡೆರು
೩ ಸಿವನಹಳ್ಳಿಲು ನೆಲೆಸಿದ ಸಾವಂದಿ ವೀರೇಸ್ವರರಿಗೆ ಕೊ
೪ ಟ್ಟ ಮಠದ ಸಾಧನ

ಇಲ್ಲಿ (ಸಹ + ಆವಂತಿ > ಸಾವಂತಿ) 'ಸಾವಂದಿ' ಎನ್ನುವಲ್ಲಿ ಪ್ರಜ್ವಲತೆಯನ್ನು ಸಹಜವಾಗಿ ಹೊಂದಿರುವವ ಅಂದರೆ ಅಗ್ನಿರೂಪ ಶಿವ ಅಥವಾ ಕೆಂಡೋತ್ಸವದ ವೀರಭದ್ರ ಎಂದೂ ಅರ್ಥೈಸಬಹುದಾಗಿದೆ. ಈ ಶಾಸನವನ್ನು ಮಠದ ಶಾಸನ (ಮಠಧರ್ಮಶಾಸನ)ವಾಗಿ ಕೊಟ್ಟಿರುವಲ್ಲಿ ಇಲ್ಲಿ ಮಠವಿದ್ದ ಸೂಚನೆಯನ್ನು ಸ್ಪಷ್ಟವಾಗಿ ನೀಡಿದೆ. ಈ ಶಾಸನೋಕ್ತ ಬರಹವು, ದೇಗುಲದಿಂದ ಸುಮಾರು ಪೂರ್ವಕ್ಕೆ ಒಂದುವರೆ ಮೈಲಿ ದೂರದಲ್ಲಿ, ತೆಂಗಿನ ತೋಟದ ಬಳಿ ಮುದ್ರೆಗುಂಡು ಬಂಡೆಯಮೆಲೆ ಲಿಂಗಮುದ್ರೆ, ಸೂರ್ಯ, ಚಂದ್ರ ಚಿಹ್ನೆ ಸಹಿತವಾಗಿ ಈಗ ತುಸು ಸವೆದುಹೋಗಿರುವ ಮೇಲಿನ ೪ ಸಾಲಿನ ಶಾಸನವು ದೇಗುಲ ಸಂಬಂಧಿಯಾಗಿ ಇದೆ. ಕೆರೆ, ದೇಗುಲ ಗುಂಡುತೋಪು ಎಲ್ಲ ಸೇರಿ ಆರು ಎಕರೆ ವಿಸ್ತೀರ್ಣವಾಗುತ್ತದೆ. ಇಲ್ಲಿಂದ ಪಶ್ಚಿಮಕ್ಕೆ ಕಣ್ಣಳತೆಯಲ್ಲಿರುವ 'ಹಿತ್ತಲಗುಡ್ಡೆ'ಯು ಊರಿನ ಮೊದಲಿನ ಹಿತ್ತಲು ಮನೆದಳದ ಪ್ರದೇಶವಾಗಿದ್ದುದರ ಸೂಚನೆ ನೀಡುತ್ತದೆ. ಇದಕ್ಕೆ ಪೋಷಕವಾಗಿ ವೀರಭದ್ರ ಗುಡಿಯ ಕಿರು ಹೆಬ್ಬಾಗಿಲು ಮುಂಗೋಪುರ ಸಹಿತವಾಗಿ ಪೂರ್ವಕ್ಕಿದೆ ಹೆಬ್ಬಾಗಿಲು ಈಗ ಉತ್ತರಕ್ಕಾಗಿದೆ; ದೇವರೂ ಪೂರ್ವಾಭಿಮುಖಿಯೆ. ಮುದ್ರೆಗುಂಡಪ್ಪನ ಗುಡ್ಡೆ



ಶಿವನಹಳ್ಳಿ ವೀರಭದ್ರ ಗುಡಿಯಲ್ಲಿ ಕಿರಿಯ ಶ್ರೀಗಳು ಬಂಡೆಗಳ್ಳ ಶಾಸನ ಮತ್ತು ದೇಗುಲದ ಹೊರನೋಟ

ಎಂದಿರುವ ಆಲದ ಮರಗಳ ಬಳಿಯ ಬಂಡೆಗಳ ಮೇಲೆ ಲಿಂಗಮುದ್ರೆಗಳಿದ್ದು ಪೂಜೆಗೊಳ್ಳುತ್ತವೆ. ಇಲ್ಲಿನ ನಾಲ್ದಿಸೆಯ ಗಡಿ ಲಿಂಗಮುದ್ರೆಗಳಿಗೆ ಒಂದೇ ದಿನ ಪೂಜೆ, ಮುಗಿಸಬೇಕಾದ ಸಂಪ್ರದಾಯವಿದೆ. ಇಲ್ಲಿ ಒರಳು ಕಲ್ಲುಗಳೂ ಕಾಣಬರುತ್ತವೆ. ಅದು ದೇವರ 'ಪರ' ಮಾಡುವ ಇಲ್ಲಿನ ಸಂಕೇತವಾಗಿರಬಹುದು.

**ಮೂರ್ತಿಲಕ್ಷಣ ಮತ್ತು ದೇಗುಲ ವಾಸ್ತು ಪರಿಸರ:** ಉತ್ತರ ಮುಖಿ ಹೆಬ್ಬಾಗಿಲ ಎಡಬದಿಗೆ ಸುಮಾರು ೫೦ ಅಡಿ ಉದ್ದ, ೫ ಅಡಿ ಅಗಲ, ೫ ಅಡಿ ಆಳದ ನೀಳ ಅಗ್ನಿಕೊಂಡದ ರಚನೆ ಇದೆ. ಉತ್ತರದ ಹೆಬ್ಬಾಗಿಲ ಗೋಪುರದ ಮುಂಬದಿಗೆ ಬೃಹತ್ ಬಸವಣ್ಣನ ಸಿಮೆಂಟ್–ಗಾರೆಯಚ್ಚಿನ ವಿಗ್ರಹವಿದೆ. ಉತ್ತರ ಹೆಬ್ಬಾಗಿಲ ಮುಂಗೋಪುರವು ನಾಲ್ಕು ಕೋಷ್ಠಗಳ ರಾಯಗೋಪುರದಂತಿದ್ದು ಅದಕ್ಕೆ ಆನೆ, ವಿಷ್ಣು, ಮಾರ್ಕಂಡೇಯ,

ಬಸವಣ್ಣ ಬೇಡರಕಣ್ಣಪ್ಪ ಮುಂತಾದವರ ಗಾರೆಯಚ್ಚಿನ ವಿಗ್ರಹಗಳನ್ನು ಹೊಂದಿಸಲಾಗಿದೆ. ಒಂದನೇ ಕೋಷ್ಠದಲ್ಲಿ ವೀರಭದ್ರ-ಪ್ರಸೂತಿ, ಎರಡನೇ ಕೋಷ್ಠದ ಮೂರುಮುಖಗಳಲ್ಲಿ ಕಾರ್ತಿಕೇಯ, ಮೂರನೇ ಕೋಷ್ಠದಲ್ಲಿ ಮತ್ಸ್ಯ, ನಾಗಕನ್ಯೆ, ನಾಲ್ಕನೇ ಕೋಷ್ಠದಲ್ಲಿ ರಾಕ್ಷಸರು, ಶಿವಲಿಂಗ, ಇತ್ಯಾದಿ ಶಿಲ್ಪಗಳು ಕಾಣಬರುತ್ತವೆ. ಬ್ಯಾರೆಲ್ ಸ್ವರೂಪದ (Barell Shaped) ರಚನೆಯು ಗೋಪುರದ ಮುಖದಲ್ಲಿ ಕಾಣಬರುತ್ತದೆ. ಒಳಗೆ ದೀಪಸ್ತಂಭ ಮಂಟಪ ಪಾರ್ಶದಲ್ಲಿದೆ. ದ್ರಾವಿಡ ಶೈಲಿಯ ಕಟ್ಟಡವಾದರೂ ಮುಖಮಂಟಪಗಳ ಸ್ತಂಭಗಳೊಡನಿದ್ದು, ನವರಂಗ ಎಂದರೂ, ಆಧುನಿಕ ಅನುಕೂಲಕ್ಕೆ ತಕ್ಕಂತೆ ಮಾರ್ಪಾಡುಗಳನ್ನು ಮಾಡಿಕೊಳ್ಳಲಾಗಿದೆ. ಆಯತ ಅಂಕಣದಲ್ಲಿ ಉತ್ಸವಮೂರ್ತಿಸ್ಥಾನ, ಗುರುಪಾದಪೂಜಾ ನೆಲೆಗಳಿದ್ದು ಸುಖನಾಸಿಯಲ್ಲಿನ ಬಸವಣ್ಣ, ಗರ್ಭಗೃಹದ ವೇದಿಕೆ ಮೇಲಿನ



ಶಿವನಹಳ್ಳಿ ಸಾವಂದಿ ವೀರಭದ್ರ

ಶಿಲಾಪ್ರಭಾವಳಿಯೊಳಗಣ ವೀರಭದ್ರ ಹಾಗು ಶಿವಲಿಂಗಕ್ಕೆ (ವೀರಭದ್ರ ಲಿಂಗ) ಅಭಿಮುಖನಾಗಿದ್ದಾನೆ. ಗರ್ಭಗೃಹದ ಬಾಗಿಲುವಾಡದ ಲಲಾಟದಲ್ಲಿ ಶಿವಲಿಂಗದ ಉಬ್ಬುಶಿಲ್ಪವಿದೆ: ಬುಡದಲ್ಲಿ ದ್ವಯದ್ವಾರಭದ್ರೆ, ದ್ವಾರಭದ್ರರ ಶಿಲ್ಪಗಳಿವೆ. ಗರ್ಭಗೃಹದಲ್ಲಿ ವೀರಭದ್ರನ ಬಲಬದಿಗೆ ಸು. ೧ ೧/೨ ಎತ್ತರದ, ೧ ಅಡಿ ವ್ಯಾಸದ ತ್ರಪು ಸಾಕಾರದ ಲಿಂಗವಿದೆ. ಸುಖನಾಸಿಯ ಮುಂದೆ ನವರಂಗ ಮಂಟಪವೂ ಇದೆ. ದೇಗುಲದ ವಿಮಾನ ಗೋಪುರವು ದ್ರಾವಿಡ ಶೈಲಿಯ ಕರ್ನಾಟಕದ ಬಗೆಯದಾಗಿದೆ. ಗರ್ಭಗುಡಿಯ ವೀರಭದ್ರ ಸುಮಾರು ೪ ಅಡಿ ಎತ್ತರದ ತ್ರಿನೇತ್ರಮೂರ್ತಿಯಾಗಿದೆ: ಪೂರಿತಭಾಗದಲ್ಲಿ ಶಿವಲಿಂಗವಿದೆ. ಹಿಂಗೈಗಳಲ್ಲಿ ಬಾಣ, ಬಿಲ್ಲು, ಬಲಮುಂಗೈಯಲ್ಲಿ ಖಡ್ಗ, ಎಡ ಮುಂಗೈ ಢಾಲುವಿನ ಮೇಲೆ ಕಲಾತ್ಮಕವಾಗಿ ವಿಶ್ರಾಂತವಾಗಿದೆ.

ಎಡಭುಜದಿಂದ ಬಲಸೊಂಟದವರೆಗೆ ೧೯ ರುಂಡಗಳ ಮಾಲೆ ಇದೆ. ಬಲಸೊಂಟದಲ್ಲಿ ಬಾಕು, ನಡುವಿನಲ್ಲಿ ನರಸಿಂಹರೂಪು, ಕಾಲಿಗೆ ಗಗ್ಗರ ಹೊಂದಿದ ಹಾವುಗೆ ಮೇಲೆ ನಿಂತ ವೀರಭದ್ರನಾಗಿದ್ದಾನೆ. ಎಡಪಾದ ಪಾರ್ಶ್ವೋದಯ ಸ್ಥಾನಕ ದ್ವಿಭಂಗಿಯ ಕರಂಡಮಕುಟಧಾರಿ ಈ ವೀರಭದ್ರನ ಬಲಬದಿಗೆ ಪ್ರಣಾಮಭಂಗಿಯ ದಕ್ಷ, ಎಡಕ್ಕೆ ಪೂಜಾ ಪರಿಕರಗಳೊಡನಿರುವ ಪ್ರಸೂತಿ ಇದ್ದಾರೆ. ಈ ಶಿಲ್ಪ ವಿಜಯನಗರ ಕಾಲದ ಶೈಲಿಯಲ್ಲಿದೆ. ಬಲಕ್ಕೆ ಪಾಣಿಪಟ್ಟ ರಹಿತ ತ್ರಪುಸಾಕಾರದ ವೀರಭದ್ರಲಿಂಗವಿರುವುದು ಪ್ರಾಚೀನ ಸಂಪ್ರದಾಯದ ಲಕ್ಷಣವಾಗಿದೆ. ಈ ಗುಡಿಯ ಭಾಗವಾಗಿರುವ ಗಣಪತಿ ಗುಡಿಯಲ್ಲಿ ಹರಕೆಯಾಗಿ ಬಂದ ವೀರಭದ್ರ ಹಲಗೆಗಳು ವೈವಿಧ್ಯಮಯವಾಗಿವೆ. ಮೇಲೆ ಸೂಚಿಸಿದ ವೀರಭದ್ರ ಲಕ್ಷಣಗಳನ್ನು ಸಾಮಾನ್ಯವಾಗಿ ಹೊಂದಿರುವ ಶಿಲ್ಪಗಳನ್ನೂ ಹೊಂದಿ, ಕೆಲವು ಶಾಂತ ಭಂಗಿಯಲ್ಲಿ, ಕೆಲವು ವೀರಭಂಗಿಯಲ್ಲಿರುವ ವೀರಭದ್ರ ಶಿಲ್ಪಗಳಂತಿವೆ. ಸಾಮಾನ್ಯವಾಗಿ ವೀರಭದ್ರ ಚಹರೆಗಳನ್ನು ಹೊಂದಿರುವ ಭದ್ರಕಾಳಿ ಇಲ್ಲಿ ಕಮಲದ ಮೊಗ್ಗು ಹಿಡಿದ ಅಥವಾ ಅಭಯಹಸ್ತೆಯಾಗಿ ಶಾಂತ ಪ್ರಸನ್ನಳಾಗಿ ವೀರಭದ್ರನ ಸೌಮ್ಯಕಾರಿಣಿಯಾಗಿರುವಂತೆ ಶಿಲ್ಪಗೊಳಿಸಲಾಗಿದೆ. ಇವುಗಳಲ್ಲಿ ಬಹಳ ವಿಶಿಷ್ಟವಾದ ಒಂದು ಹಲಗೆಯಲ್ಲಿ, ಬೀಜಾಕ್ಷರ ಬಿಂದುಗಳಂತೆ, ವೀರಭದ್ರನ ಎಡಹಸ್ತದಲ್ಲಿನ ಡಾಲುವಿನಲ್ಲಿ ೩೬ ಮನೆಗಳಲ್ಲಿ ಸಂಕೇತಗಳಿವೆ: ತೊಡೆಗಳ ಮೇಲೆ ೧೦೧ (!) ಮನೆಗಳ ಬಿಂದುಗಳು ಕಾಣುತ್ತವೆ. ಎಡಕ್ಕೆ ಪ್ರಣಾಮಭಂಗಿಯ





ಶಿವನಹಳ್ಳಿಯ ಬೀಜಾಕ್ಷರ ವೀರಭದ್ರ ಹಲಗೆ

ದಕ್ಷ, ಬಲಕ್ಕೆ ಖಡ್ಗ ಹಾಗು ಡಾಲುಧಾರಿಣಿ ಸ್ಥಾನಕ ಭದ್ರಕಾಳಿಯ ಶಿಲ್ಪವು ಕಿರೀಟವನ್ನು ಹೊಂದಿದೆ. ಬಹುಶಃ ಇಲ್ಲಿಯ ೩೬ ಬಿಂದುಗಳು ವೀರಶೈವದ ಮುವತ್ತಾರು ತತ್ತ್ವಗಳ, ೧೦೧ ಬಿಂದುಗಳು ಏಕೋತ್ತರ ಶತಸ್ಥಲ ಸಂಕೇತವಾಗಿದೆ ಎಂದು ಭಾವಿಸಿದರೆ, ವೀರಶೈವರಲ್ಲಿಯ ವೀರಭದ್ರ ಒಕ್ಕಲೊಂದು ಇಂಥ ಶಿಲ್ಪವನ್ನು ದೇಗುಲಕ್ಕೆ ಹರಕೆಯಾಗಿ ಒಪ್ಪಿಸಿರುವ ಸಂದರ್ಭವಾಗಿ

ಕಾಣುತ್ತದೆ. ಹಾಗು ಮನಃಕುಂಡಲಿನಿಯೋಗಿ ವೀರಭದ್ರನನ್ನು ಪರಿಭಾವಿಸಿದಂತೆ ತೋರುತ್ತದೆ. ನಾಲ್ಕು ತಲೆಮಾರುಗಳಿಂದ ಪೂಜೆ ನಡೆಸಿಕೊಂಡು ಬಂದಿರುವ ಅರ್ಚಕರ ಹಳೇಹಟ್ಟಿ ಮನೆಯಲ್ಲಿರುವ ಪಂಚಲೋಹದ ಎತ್ತರದ ಹಾವುಗೆ ವೀರಭದ್ರ ಫಲಕ ಘನಹಲಗೆಗಳಲ್ಲಿ ಕೊಡಗಿನ ದೊರೆದತ್ತವಾದ ವೀರಭದ್ರ. ಷಡ್ಭುಜ ಶಿಲ್ಪವಾಗಿ ಗಮನ ಸೆಳೆಯುತ್ತಾನೆ. ಒಂದು ಹಲಗೆಯ ವೀರಭದ್ರನ ಹಿಂಗೈಗಳಲ್ಲಿ ಬಾಣಬಿಲ್ಲು; ನಖಗಳಾವೃತ ಹಸ್ತ ಕಿರುಶೂಲ ಹಾಗು ಬಾಕು. ಮುಂಗೈಗಳಲ್ಲಿ ಖಡ್ಗ ಮತ್ತು ಸೊಂಟಮಟ್ಟಕ್ಕೆ ಹಿಡಿದಿರುವ ಡಾಲು, ಸೊಂಟಚೂರಿ ಹಾಗು



ಗಂಟೆ, ಇವೆ. ಪಾದಗಳ ನಡುವೆ ದಕ್ಷರುಂಡವಿದೆ. ಬಲಕ್ಕೆ ಸ್ಥಾನಕ ಪ್ರಣಾಮ ಭಂಗಿಯ ಟಗರುದಲೆಯ ದಕ್ಷ, ಎಡಕ್ಕೆ ಖಡ್ಗ, ಡಾಲು ಹಿಡಿದ ಭದ್ರಕಾಳಿ ಶಿಲ್ಪಗಳಿವೆ. ಹುರಿ ಮೀಸೆ ಹಾಗು ತ್ರಿನೇತ್ರವಿದೆ. ವೀರಭದ್ರನಿಗೆ ಮಂಡಿ ಮಟ್ಟದಲ್ಲಿ ರುಂಡಮಾಲೆ ಇದ್ದು, ಶಿರದಲ್ಲಿ ಕರಂಡ ಕಿರೀಟವಿದೆ. ಕೊರಳಿಗೆ ಕರಡಿಗೆಯನ್ನು ನೇತು ಬಿಡಲಾಗಿದೆ: ಆದರೆ ಕೊಡಗಿನ (ಹಲಗೆ) ವೀರಭದ್ರ ಘನ ಶಿಲಾಫಲಕದಲ್ಲಿಯೂ ತದ್ವತ್ ಚಹರೆಗಳಿದ್ದರೂ ಅದು ಕೈ ಶೂಲ, ಕಿರಿ ಬಾಕುಗಳನ್ನು ಹೊಂದಿ ಹೆಚ್ಚು ಅಂದದ ಆಕರ್ಷಕ ಶಿಲ್ಪವಾಗಿದೆ. ಶಿರದ (ರಾಜಕಿರೀಟ ಚಹರೆಯ) ಕರಂಡ



ಮುಕುಟದ ಮುಂದಿರುವ 'ಕೆಂಪುರತ್ನ' (ಮಣಿ!) ದಿಂದಾಗಿ ಅದರ ಗುರುತು ಹತ್ತುತ್ತದೆ ಹಾಗು ಇನ್ನೊಂದು ಹಲಗೆಗಿಂತ ಇದು ಚಿಕ್ಕದು. ಈ ಫಲಕವನ್ನೆ ಕೊಂಡಹಾಯುವಲ್ಲಿ,

ಕೊಡಗು ರಾಜದಾನಿತ ವೀರಭದ್ರ ಹಲಗೆಗಳು

ಹಬ್ಬಗಳಲ್ಲಿ, ಉಭ ಶುಭಕಾರ್ಯಗಳಲ್ಲಿ ಶಿವನಹಳ್ಳಿ ವೀರಭದ್ರನ ಉತ್ಸವಮೂರ್ತಿ ಎಂದು ಈ ಕೊಡಗಿನ ಹಲಗೆಯನ್ನೆ ಒಯ್ಯುತ್ತಾರೆ. (ಉಳಗನಹಳ್ಳಿ, ದಬ್ಬಗೊಳ, ಗಾಣಾಳು, ಸೀರಣಗುಪ್ಪೆ, ಸೀಗೆಕೋಟೆ ಮುಂತಾದ ಕಡೆಯ ಕೊಂಡಗಳಿಗೆ ಒಯ್ಯುತ್ತಾರೆ). ರಾಜದಾನಿತವೆಂಬ ಪರಂಪರೆಯ ಕಾರಣವಾಗಿ ಈ ಹಲಗೆಗೆ ಪ್ರಾಮುಖ್ಯ ಒದಗಿರಬಹುದು. ಈ ಪರಂಪರಾಗತ ರೂಢಿಯನ್ನು ಸತ್ಯ ಎಂದು ಭಾವಿಸಿದರೆ, ಬಹುಶಃ ಕೊಡಗಿನ ಕಕ್ಕಬೆ – ನಾಪೋಕ್ಲು ಬಳಿಯ ಇಗ್ಗುತಪ್ಪ ದೇಗುಲದ ಮೇಲೆ ಧಾಳಿಮಾಡಿ, ಮಲೆಯಾಳಿ ಸೈನಿಕರು ಬೆಂಕಿಕೊಟ್ಟ ಸಮಯದಲ್ಲಿಯೋ, ಅಲ್ಲಿಯ ಕಡಿಯತ್ತು ನಾಡಿನ ಮೇಲೆ ಟೀಪು ಧಾಳಿಮಾಡಿದ ಸಮಯದಲ್ಲಿಯೊ, ನೂರಂಬಾಡಿಮಠಕ್ಕೆ ರಾಜದತ್ತವಾಗಿದ್ದ ವೀರಭದ್ರ ಹಲಗೆಯನ್ನೂ ರಕ್ಷಣೆಗಾಗಿ ಇಲ್ಲಿ ತಂದಿಟ್ಟು ಅದು ಹಾಗೆಯೇ ಇಲ್ಲಿ ಉಳಿಯಿತೇ! ಅಥವಾ ದೊಡ್ಡವೀರರಾಜೇಂದ್ರನೇ ಇದನ್ನೂ ಶಿವನಹಳ್ಳಿ ವೀರಭದ್ರನಿಗೇ ಮೀಸಲಾಗಿರಲಿ ಎಂದು ಆಣತಿ ಮಾಡಿದನೋ ಎಂಬುದು



ಸ್ಪಷ್ಟವಿಲ್ಲ. ಆದರೆ ಕೊಡಗಿನ ಮಠದ ಜನರ ಪೈಕಿ ಕೆಲವರು ಇಲ್ಲಿ ಉಳಿದಿರಬೇಕು. ಇಲ್ಲವಾದರೆ ಶಾಸನದಲ್ಲಿ, ಮಠಧರ್ಮವಾಗಿ ಕೊಡುವ 'ಪುರಸಾಧನ' ದಾನದತ್ತಿ ನೀಡುವ ಅವಶ್ಯಕತೆ ಬರುತ್ತಿರಲಿಲ್ಲವೆನಿಸುತ್ತದೆ. ಬಹುಶಃ ಕನಕಪುರ ದೇಗುಲ ಮಠಕ್ಕೆ ಈ ಹಿನ್ನೆಲೆಯಲ್ಲಿ ಸಂಬಂಧ ಬೆಳೆದಿರುವಂತಿದೆ. ಕೊಡಗಿನಿಂದ ಇಂದಿಗೂ ವಾರ್ಷಿಕ ವೀರಭದ್ರ ಜಾತ್ರೆಗೆ ಮಠದ ಮನೆತನದವರು ಬರುತ್ತಾರೆ. ಅರ್ಚಕರ ಮನೆಯಲ್ಲಿ ವೀರಭದ್ರ, ಭದ್ರಕಾಳಿಯರ ಉತ್ಸವಮೂರ್ತಿಗಳನ್ನು ದೈನಂದಿನ ಪೂಜೆಗಿಡುತ್ತಾರೆ.

*ರಥೋತ್ಸವ-ರಥಸಪ್ತಮಿ ಜಾತ್ರೆ*

ಈ ಮಹೋತ್ಸವ ಒಂದು ವಾರ ಕಾಲ ನಡೆಯುತ್ತದೆ. ಮಾಘಶುದ್ಧ ಷಷ್ಠಿ ಲಾಗಾಯ್ತು ಮಾಘ ಶುದ್ಧ ದ್ವಾದಶಿಯವರೆಗೆ ಅಂದರೆ ಶುಕ್ರವಾರದಿಂದ ಆರಂಭವಾಗಿ ಮುಂದಿನ

ಗುರುವಾರದವರೆಗೆ ನಡೆಯುತ್ತದೆ. ಶುಕ್ರವಾರ ದೇಗುಲದಲ್ಲಿ ವೀರಭದ್ರಸ್ವಾಮಿಗೆ ಕುಂಭಾಭಿಷೇಕ ಪುಣ್ಯಾಹ ನಾಂದಿ



ಶಿವನಹಳ್ಳಿಯ ವೀರಭದ್ರ ಜಾತ್ರೆಯ ತೇರು ಹಾಗೂ ದೇಗುಲ ಮಠದ ಸ್ವಾಮಿಗಳ ಪಲ್ಲಕ್ಕಿ ಉತ್ಸವ

ಅಂಕುರಾರ್ಪಣೆ ಪಂಚಕಳಶ ಸ್ಥಾಪನೆ ಮತ್ತು ಕಂಕಣಧಾರಣೆ ನಡೆಯುತ್ತದೆ. ನೆರೆಯ ಗಡಸನಹಳ್ಳಿಯಲ್ಲಿಯೂ ಹೀಗೆಯೇ ಆಚರಣೆಗಳಿದ್ದು, ಪಟ್ಟಲದಮ್ಮನ ಕೊಂಡ, ಉತ್ಸವಾದಿಗಳು ನಡೆಯುತ್ತವೆ. ಶಿವನಹಳ್ಳಿಯಲ್ಲಿ ಈ ದಿನ ಮನೆ ಮನೆಗಳಿಗೆ ಅರ್ಚಕರು ಕೊಡಗು ವೀರಭದ್ರ ಹಲಗೆಯನ್ನು ಪೂಜೆಗೆ ಒಯ್ದು ತರುತ್ತಾರೆ.

ಶನಿವಾರ ಬೆಳಗ್ಗೆ ವೀರಭದ್ರನಿಗೆ ರುದ್ರಾಭಿಷೇಕ; ರಾತ್ರಿ ಪುಷ್ಪ ರಥೋತ್ಸವ ನಡೆಯುತ್ತದೆ. ಇದನ್ನು ಚಿಕ್ಕತೇರು, ಹೂತೇರು ಎನ್ನುತ್ತಾರೆ. ಊರು ಸುತ್ತಿಬರುವ ಈ ಚಿಕ್ಕತೇರು, ಊರುತ್ಸವವಾಗಿ ಕಾಣಿಸಿಕೊಳ್ಳುತ್ತದೆ. ಗಡಸನಹಳ್ಳಿಯಲ್ಲಿ ಈ ದಿನ ಬೆಳಗ್ಗೆ ಪಟ್ಟಲದಮ್ಮನಿಗೆ ಜನಪದ ಆಚರಣೆಗಳು ನಡೆಯುತ್ತವೆ. ಭಾನುವಾರ ಧ್ವಜೋತ್ಸವ ಹಾಗು ರುದ್ರಾಭಿಷೇಕವಿರುತ್ತದೆ. ಹಾಗು ಸಾಮಾನ್ಯವಾದ ಮರದ ತೇರು ಊರುಸುತ್ತಿ ಪೂಜೆ ಪಡೆದು ಬರುತ್ತದೆ. ಇದನ್ನು ಮಿದ್ದೆ ತೇರು ಎನ್ನುತ್ತಾರೆ. ಬಹುಶಃ ಚಿಕ್ಕತೇರು ಹಾಗು ದೊಡ್ಡ ತೇರುಗಳ ನಡುವೆ (ಮಧ್ಯಂತರದಲ್ಲಿ) ನಡೆಯುವ 'ಮಧ್ಯತೇರು' ಜನಪದದಲ್ಲಿ 'ಮಿದ್ದೆ ತೇರು' ಎಂದು ಬಾಯ್ದೆರೆಯಾದಂತಿದೆ.

ನಾಲ್ಕನೆಯ ಸೋಮವಾರ ಸಂಜೆ ಕನಕಪುರ ಶ್ರೀ ದೇಗುಲಮಠದ ಸ್ವಾಮೀಜಿಯವರ ಪಲ್ಲಕ್ಕಿ (ಟ್ರಾಕ್ಟರ್) ಉತ್ಸವ





ಶಿವನಹಳ್ಳಿ ವೀರಭದ್ರನ ಅಗ್ನಿಕೊಂಡ

ನಡೆಯುತ್ತದೆ. ಊರು ಸುತ್ತು ಹೋಗಿಬರುವಲ್ಲಿ ಶ್ರೀಮನ್ನಿರಂಜನ ಜಗದ್ಗುರು ಅಷ್ಟೋತ್ತರ ಪೂಜೆ ಮಾಡಿ ನಿರುಪಾಧಿಕ ನಿರ್ಮಲಜ್ಯೋತಿ ಬೆಳಗಿ ಮಂಗಳ ಹಾಡುತ್ತಾರೆ. ಬೀದಿಯಲ್ಲಿ ಶಿವರಂಗೋಲಿ, ತಳಿರುತೋರಣಗಳು ಕೆಂಪು ನೀರಿನ ದೃಷ್ಟಿ ಆರತಿ ಎತ್ತಿ ಹಾದಿಗೆ ಎಳೆಬಿಡುವ ಹೆಂಗಳೆಯರ ಚರ್ಯೆ ಇತ್ಯಾದಿಗಳು ಜನಭಕ್ತಿಯುತ್ಸಾಹದ ಸಂಕೇತವಾಗಿ ಪ್ರಚುರವಾಗಿರುತ್ತವೆ. ಇಲ್ಲಿ ಇಡಿಗಾಯಿ ಹಾಕುವವರೂ ಉಂಟು. ಮನೆಮನೆಯ ಭಕ್ತರು ಹಣ್ಣುಕಾಯಿ ಹೂವಿಟ್ಟು, ಆರತಿಎತ್ತಿ, ಹರಕೆ, ಆಶೀರ್ವಾದ ಪಡೆಯುತ್ತಾರೆ. ಗುರುವು ಮನೆಯ ಬಾಗಿಲಿಗೆ ಬಂದು ಹರಸಿದ ಸಂತೋಷ ಭಕ್ತರಿಗೆ. ಈ ಜಂಗಮ ಪೂಜೆ, ಜಂಗಮಯಾತ್ರೆ, ಒಂದು ರೀತಿಯಲ್ಲಿ ಗುರುರಥೋತ್ಸವ/ಜಂಗಮ ರಥೋತ್ಸವವೆಂದು ಪರಿಭಾವಿಸಬಹುದು. ಸ್ವಾಮಿಗಳಂತು ನಿರ್ಲಿಪ್ತ, ನಿರಂಜನ ಯೋಗದಲ್ಲಿದ್ದು ಹರಸುವಂತೆ ಕಾಣುತ್ತದೆ; ಅವಿರಳ ಪರಂಜ್ಯೋತಿಯ ಆಶೀರ್ವಾದ ಪ್ರತೀಕವಾಗಿಯೂ ಕಾಣುತ್ತದೆ; ಈ ಪಲ್ಲಕ್ಕಿ ಸೇವೆ ಸಾಗುವ ಮುನ್ನ ದಂಪತಿಗಳಿಂದ ಪಾದಪೂಜೆ, ರಾಜಗೌರವಗಳು ಸಲ್ಲುತ್ತವೆ. ಈ ದಿನ ರಾತ್ರಿ ಅಗ್ನಿಕೊಂಡೋತ್ಸವಕ್ಕೆ, ಮರಗಳನ್ನು ಎತ್ತುಗಳ ನೊಗಕ್ಕೆ ಸೇರಿಸಿ

ತರುವ 'ಎಳೆವಾರ'ವನ್ನು ದೇಗುಲ ಪ್ರದಕ್ಷಿಣೆ ಮಾಡಿ ರಾಶಿ ಹಾಕಿ ಪೂಜಿಸಿ ಕರ್ಪೂರದಿಂದ ಹಚ್ಚುತ್ತಾರೆ. ಅದು ಐದನೇ ದಿನ ಮಂಗಳವಾರಕ್ಕೆ ಹೊಂದುವಂತೆ ನಡೆಯುತ್ತದೆ. ವೀರಭದ್ರನ ವಾರವೆ ಮಂಗಳವಾರವಾದ ಕಾರಣ ಈ ಹೊಂದಾಣಿಕೆ. ಬೆಳಗಿನ ೬ ಗಂಟೆ ವೇಳೆಗೆ ದೇವರು ಕೊಂಡಹಾಯ್ದ ನಂತರ, ಊರಿನ ಹೆಂಗಳೆಯರು ತಂಬಿಟ್ಟಿನಾರತಿ ಹೊತ್ತು ದೇವ ನೈವೇದ್ಯಕ್ಕೆಂದು ದೇಗುಲಕ್ಕೆ ಹೋಗುತ್ತಾರೆ. ಈ ಬೆಳಗು ಜಾವದ ದಿನ ಕೊಂಡ ಹಾಯುವ ಮುನ್ನ ದೇಗುಲಮಠದ ಸ್ವಾಮಿಗಳನ್ನು ನಡೆಮುಡಿ (ನಡೆಮಡಿ) ಹಾಸಿ ಪಂಜಿನಾರತಿಯೊಡನೆ ದೇಗುಲಕ್ಕೆ ಕರೆದೊಯ್ದು ಪಾದಪೂಜೆ ಮಾಡಿ ನಂತರ ಕೊಂಡದ ಸ್ಥಳಕ್ಕೆ ವೀರಭದ್ರ ಹಲಗೆಯನ್ನು ಅರ್ಚಕರು ಉತ್ಸವದೊಡನೆ ತರುತ್ತಾರೆ. ಕೊಂಡವನ್ನು ಮೂರುಸುತ್ತು ಬಂದು ತೀವ್ರ ಆವೇಶ ವೇಗದೊಡನೆ ನಿಗಿನಿಗಿ ಕೆಂಡವನ್ನೂ ದೇವರ ಹಲಗೆ ಹೊತ್ತು ಹಾಯುತ್ತಾರೆ. ನಂತರ ಹರಕೆ ಹೊತ್ತವರು ಕೊಂಡದ ಮಂಟಪ ದ್ವಾರದ ಬಳಿ ಗುಡಿಗೆ ಅಭಿಮುಖವಾಗಿ ಕುಳಿತು ತಲೆಯ ಮೇಲೆ ಬಟ್ಟೆಯನ್ನು ಹರಡಿಕೊಳ್ಳುತ್ತಾರೆ. ಕೊಂಡದ ಬೆಂಕಿಕೆಂಡವನ್ನೂ ಮೂರು ಬಾರಿ ಆ ಬಟ್ಟೆಯ ಮೇಲೆ ಕೊಂಡನಿರ್ವಹಣೆಕಾರರು ಎರಚುತ್ತಾರೆ. ಅದು ಕೆಂಡ ಪ್ರಸಾದವಂತೆ. ಈ ಕೊಂಡದ ದಿನದಂದು ಮುಳ್ಳಾವಿಗೆಯವರಿರುತ್ತಾರೆ; ಹರಕೆ ಇದ್ದವರು ತಲೆಯ ಮೇಲೆ ಕೆಂಡ (ಗಡಿಗೆ) ವಿಟ್ಟುಕೊಂಡು



ವೀರಭದ್ರನ ಜಾತ್ರಾ ಸಮಯದಲ್ಲಿ ದಲಿತರಿಂದ ಕ್ಯಾತಮ್ಮನ ಮೆರವಣಿಗೆಯ ಉತ್ಸವ

ಮುಳ್ಳಾವಿಗೆಯವರಿಗೆ ನಮಿದು, ದೇಗುಲ ಪ್ರದಕ್ಷಿಣೆ ಮಾಡಿಬರುತ್ತಾರೆ. ಲಿಂಗಧೀರರು ವಡಬು, ಉಗ್ಗಡಿಸುತ್ತಾರೆ.

ಈ ಮಂಗಳವಾರದಂದು ದೊಡ್ಡ ತೇರು (ರಥೋತ್ಸವ) ನಡೆಯುತ್ತದೆ. ಇದು ಬೊಂಬೆ ತೇರಲ್ಲ, ಕಂಬದ ತೇರು. ಅಂದು ರಥಾಂಗ ಹೋಮ ನಡೆಯುತ್ತದೆ. ಮಾದಪ್ಪನ ಭಾವಿಗೆ ವೀರಭದ್ರಸ್ವಾಮಿ ಸಂಬಂದ ಗಂಗೆಪೂಜೆಗೆ ಹೋಗುವಲ್ಲಿ, ಅರಳಿಕಡ್ಡಿ, ಹತ್ತಿಕಡ್ಡಿ, ಬನ್ನಿಕಡ್ಡಿ ಹಾಕಿ ಹೋಮ ಸುಟ್ಟು, ಗಡಿಗೆ ಬೂದಿ, ತುಂಬಿ, ಗಂಗೆಗೆ ಹಾಕುತ್ತಾರೆ. ಅಲ್ಲಿಂದ ತೀರ್ಥವನ್ನು ಗಡಿಗೆ ಕರಗ ಮಾಡಿಕೊಂಡು ದೇಗುಲಕ್ಕೆ ತರುತ್ತಾರೆ. ತೀರ್ಥಪ್ರೋಕ್ಷಣೆ ಮಾಡುತ್ತಾರೆ.

ಈ ಸಮಯದಲ್ಲಿ ಊರದೇವತೆ 'ಕ್ಯಾತಮ್ಮ' – ದಲಿತರ ಕಾಲೋನಿಯಿಂದ ಉತ್ಸವದಲ್ಲಿ ಬರುವ ಆ ದೇವತೆಗೆ ಎಲ್ಲರೂ 'ಸೋಬಲು' (ಸೋಗಲು; ಮಡಿಲಕ್ಕಿ) ಕಟ್ಟುತ್ತಾರೆ. ತೆಂಗು, ಅಕ್ಕಿ, ಬೆಲ್ಲ, ರವಿಕೆ, ಕಣ ಸಹಿತವಾದ ಮಡಿಲಕ್ಕಿ ಅದು. ವೀರಭದ್ರ ದೇಗುಲಕ್ಕೆ ಬಂದು ಅದು ತೀರ್ಥ ಹಾಕಿಸಿಕೊಂಡು ಹೋಗುತ್ತದೆ. 'ಹುತ್ತದ ಪೂಜೆ ಮಾಡಿ ಈಕೆಯನ್ನೂ ಕರೆದುಕೊಂಡು ಹೋಗಬೇಕು. ಈಕೆಗೆ ಬಲಿ ಅರ್ಪಣೆ ಇಲ್ಲ.

ಹಬ್ಬದ ಆರನೇ ದಿನ ದೇವರ ಉಯ್ಯಾಲೋತ್ಸವವಿರುತ್ತದೆ. ಹಾಗೂ ಕಳ್ಳರಸೇವೆಯೂ ನಡೆಯುತ್ತದೆ. ಕಳ್ಳ ಪೋಲೀಸ್ ಆಟವದು. ಒಬ್ಬ ಕದ್ದು ಹೋದಾಗ ಪೋಲೀಸನಂತೆ ಹಿಡಿಯಹೋಗುವ ಅಣಕು ರಂಜನೆಯಾಟವದು.

ಮೊದಲಿಗೆ ದೇಗುಲದ ನೆರೆಯ ಕೆರೆಯಲ್ಲಿ ನೀರು ತುಂಬಿರುತ್ತಿದ್ದಾಗ ದೇವರ ತೆಪ್ಪೋತ್ಸವ ನಡೆದು ನಂತರ ಕಳ್ಳರ ಸೇವೆ ನಡೆಯುತ್ತಿತ್ತು. ಏಳನೇ ದಿನ ಗುರುವಾರ ಮಹಾಮಂಗಳಾರತಿ ನಂತರ ಜಾತ್ರೆ ಮುಕ್ತಾಯ. ಈ ಏಳುದಿನದ ರಥೋತ್ಸವ ಜಾತ್ರಾ ಸಮಯದಲ್ಲಿ; ಕಾರ, ಸಾಂಬಾರ, ರೊಟ್ಟಿ ಇತ್ಯಾದಿಗಳ ಸೇವನೆ, ಮದುವೆ ಮುಂಜಿ ಇವಾವುದನ್ನು ಊರಿನಲ್ಲಿ ಮಾಡಬಾರದೆಂಬ ಹಬ್ಬದ ಕಟ್ಟಳೆ ಇದೆ. ಕಾರಣ ಊರವರೆಲ್ಲರ ಗಮನ ದೇವರ ಜಾತ್ರೆಯತ್ತ ತನ್ಮಯವಾಗಿರಬೇಕೆಂಬ ಹಿನ್ನೆಲೆಯೆ ಅದಾಗಿದೆ.

ಈ ದೇವರ ಕೊಡುಗೆ ಜಮೀನು–ಲಿಂಗಮುದ್ರೆ ಕಲ್ಲು ಇರುವ (ಶಾಸನೋಕ್ತ ಪ್ರದೇಶ) ಕಡೆ ದೇಗುಲದ ಅರ್ಚಕರು ಹೋಗಿ ಪೂಜೆ ಮಾಡಬೇಕಾದ ಸಂಪ್ರದಾಯವಿದೆ. ಸಾಮಾನ್ಯವಾಗಿ ಡಿಸೆಂಬರ್ ತಿಂಗಳಿನಲ್ಲಿ ಕುಯ್ಲಿಗೆ ಮುಂಚೆ ರಾಗಿ ತೆನೆಯನ್ನು ತಂದು ಪೂಜಿಸಬೇಕು. ಸೀ ಅನ್ನ ಮಾಡಿ ದೇವರಿಗೆ ನೈವೇದ್ಯವಿಡುವುದು. ಬೆಳೆ ಕುಯ್ಯುವ ೧೫–೨೦ ದಿನಗಳ ಮುಂಚೆಯೆ. ದೇವರಿಗೆ ಬರಿ ರಾಗಿತೆನೆ ಮಾತ್ರ ಪೂಜೆಗಿಡಬೇಕು. ಇಲ್ಲಿಂದ ದಕ್ಷಿಣಕ್ಕೆ ಇರುವ ಪ್ರಸಿದ್ಧ ಮುನೇಶ್ವರ ಬೆಟ್ಟದ ದೇವರ ಸಂಕೇತವಾಗಿ ಮೂರು ಕಲ್ಲುಗಳನ್ನಿಟ್ಟು

ತವ್ವಗಳಿಗೆ ಮತ್ತು ಗಣಪತಿಗೆ ಪೂಜೆ ಸಲ್ಲಿಸುತ್ತಾರೆ.

ದೇವರ 'ಪರ'ವನ್ನೂ ಈ ಜಮೀನಿನಲ್ಲಿ ಮಾಡುವಾಗ ರಾಗಿಮುದ್ದೆ ಅನ್ನ, ಅವರೆಸಾರು, ಪಾಯಸದ ನೈವೇದ್ಯವಿರುತ್ತದೆ. ಈ ಸಮಯದಲ್ಲಿ ಸಂಗ್ರಹವಾದ ಹೆಚ್ಚಿನ ದವಸ ಜಾತ್ರೆ, ಪರಿಷೆಗೆ ಬಳಕೆ ಆಗುತ್ತದೆ. ದವಸದ ಹಬ್ಬದ ಈ ಮೇಲಿನ ಆಚರಣೆಗಳು ಹಾಗು ಆಚರಿಸುವ ಸಮಯ ಇತ್ಯಾದಿಗಳು ಕೊಡಗಿನ ಹುತ್ತರಿ ಆಚರಣೆಗೆ ಸಂವಾದಿಯಾಗಿ ಕಾಣುತ್ತವೆ. ಇದರಿಂದ ಶಿವನಹಳ್ಳಿ ವೀರಭದ್ರ ಹಾಗು ಕೊಡಗಿನ ಸಂಬಂಧಕ್ಕೆ ಒಂದು ಜನಪದ ತಾರ್ಕಣೆಯೂ ಒದಗುವಂತಾಗುತ್ತದೆ.

ಗೌರಿಹಬ್ಬದಲ್ಲಿ ಎಳ್ಳುಂಡೆ, ಅಕ್ಕಿಕಾಳಿನ ಸಾಲು ತೋರಣ ಕಟ್ಟಿ ಈ ವೀರಭದ್ರನಿಗೆ ಅಕ್ಕಿಪೂಜೆ ಸಲ್ಲಿಸುತ್ತಾರೆ. (ತುಮಕೂರು ತಾ. ಹರಳೂರಿನ ವೀರಭದ್ರನಿಗೂ ಇಂಥದೇ ಪದ್ಧತಿ ಇದೆ.) ಭದ್ರಕಾಳಿ ವೀರಭದ್ರನನ್ನು ಕೂಡಿಸಿ ಅಕ್ಕಿಪೂಜೆಯನ್ನು ಮೊದಲಿಗೆ ಇಲ್ಲಿ ಮಾಡಲಾಗುತ್ತಿತ್ತು. ಗೌರಿಕೊಂಡವೂ ನಡೆಯುತ್ತಿತ್ತು. ಶಿವರಾತ್ರಿಯಲ್ಲೂ ಕೊಂಡ ಇತ್ತು. ನವರಾತ್ರಿಯಲ್ಲಿ ಬನ್ನಿಮರದ ತುಂಡುತಂದು ದೇಗುಲದ ಬಲಕ್ಕೆ ಎದುರಿಗೆ ನಿಲ್ಲಿಸುತ್ತಾರೆ. ವೀರಭದ್ರ ಭದ್ರಕಾಳಿಯರನ್ನೂ ಮಂಟಪದಲ್ಲಿ ಕೂರಿಸಿ ಬನ್ನಿ ರೆಂಬೆ ಕಡಿದು ಅದಕ್ಕೆ ಕಟ್ಟುತ್ತಾರೆ. ಪಂಜು ಹಿಡಿದಿರುತ್ತಾರೆ ಆ ಉತ್ಸವಮೂರ್ತಿಗೆ ಸುಮಾರು ನೂರಡಿ ದೂರದಲ್ಲಿ ಬನ್ನಿ ಕೊಂಬೆಗೆ ಬಂದೂಕಿನಿಂದ ಗುರಿ ಹೊಡೆಯುವ ಕ್ರೀಡೆ ನಡೆಸುತ್ತಾರೆ. ಹೊಡೆದ ಮೇಲೆ ಅರ್ಚಕರು ಬನ್ನಿಪತ್ರೆ ತಂದು ದೇವರ ಮುಂದಿಟ್ಟು, ಜನರಿಗೆ ಪ್ರಸಾದವಾಗಿ ನೀಡುತ್ತಾರೆ. ಕೊಡಗಿನಲ್ಲಿ ಹುತ್ತರಿಕದಿರು ಸಂಬಂಧದ ಪೂಜೆಯೂ ಹೀಗಿರುತ್ತದೆ. ಅದಾಗಿ ಕೊಡಗಿನ ಸಂಬಂಧಗಳಿಗೆ ಇಲ್ಲಿನ ಅಚರಣೆಗಳೂ ಮೋಷಕವೆನ್ನಬಹುದು. ಕಾರ್ತೀಕದಲ್ಲಿ ಈ ವೀರಭದ್ರನಿಗೆ ದೀಪೋತ್ಸವ ಉಂಟು. ಜಾತ್ರಾ ಸಮಯದಲ್ಲಿ ಪಾನಕ ಪನ್ನೀರಿಗೆಂದು ಸಾಗುವ 'ಓಲೆಬಂಡಿ' ಮೆರವಣಿಗೆಯಲ್ಲಿ ಊರಿನ ಪ್ರತಿ ಮನೆಯವರೂ 'ಬೆಲ್ಲ'ದ ಕೊಡುಗೆಕೊಡುತ್ತಾರೆ. ಒಟ್ಟಾರೆ ಶಿವನಹಳ್ಳಿಯ ವೀರಭದ್ರನ ಜಾತ್ರೆ, ಜನಪದ, ರಾಜಗೌರವದ, ಗುರುಸಾನ್ನಿಧ್ಯದ, ಶಿಲ್ಪ ವೈಶಿಷ್ಟ್ಯಗಳ, ಶಾಸನಾಧಾರಗಳ ಐತಿಹಾಸಿಕ ಪರಂಪರೆಯ ಜಾತ್ರೆ ಎನ್ನಬಹುದು.* ಜನಜೀವನದಲ್ಲಿ ಬೇರು ಬಿಟ್ಟಿರುವ ಹಾಗೂ ಜನರನ್ನು ಬಳಸಿರುವ ವೀರಭದ್ರ ವರ್ಚಸ್ಸಿನ ಸಂಕೇತವಾಗಿ ಇವೆಲ್ಲ ಕಾಣಬರುತ್ತವೆ.

*ಹೊರಳುಗಲ್ಲು ವೀರಭದ್ರ*

ಮರಳೇ ಗ್ರಾಮದಲ್ಲಿರುವ ಈ ವೀರಭದ್ರನ ಪರಿಸರದಲ್ಲಿ ಕನಕಪುರದಿಂದ ೬ ಕಿ.ಮೀ. ದೂರದ ಮಹಂತೇಶ್ವಮಠ, ಮಹದೇಶ್ವರ ದೇವಾಲಯ, ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ ಪ್ರಮುಖರಾದ ಶ್ರೀ ಕಾಲಾಗ್ನಿ ರುದ್ರಮುನೀಶ್ವರರಿಂದ ಸ್ಥಾಪಿತವಾದ (ಕನಕಪುರದಿಂದ ಬಳಸುಹಾದಿಯಲ್ಲಿ ೧೨ ಕಿ.ಮೀ.)



**ಹೊರಳುಗಲ್ಲು ವೀರಭದ್ರ**

ತ್ರಿವಿಧದಾಸೋಹದ ಶ್ರೀ ಮರುಳೇಗವಿಮಠಗಳಿವೆ.

ಇಲ್ಲಿನ ವೀರಭದ್ರನ ಮೂರ್ತಿಲಕ್ಷಣವೆಂದರೆ : ಚತುರ್ಭುಜ ಸ್ಥಾನಕದಲ್ಲಿರುವ ನೀಳವಮೂರ್ತಿ, ಜಟಾಕುಂಡಲಧಾರಿಯಾಗಿದ್ದು ಕಲಾತ್ಮಕ ನೀಳ ಕಿರೀಟದ

* ಶಿವನಹಳ್ಳಿ ವೀರಭದ್ರ ಜಾತ್ರೆ ಕುರಿತು ಕೆಲವು ಮಾಹಿತಿಗಳನ್ನು ಪ್ರಧಾನ ಅರ್ಚಕ ಶ್ರೀ ಎಸ್.ವಿ. ಚನ್ನವೀರಯ್ಯ, ಶ್ರೀ ಪರ್ವತಪ್ಪ (೭೫), ಶ್ರೀ ಚನ್ನಬಸಪ್ಪ (೮೦), ಶ್ರೀ ಮಾದೇಗೌಡರ ಮಗ ಶಿವಮಾದಯ್ಯ ಅವರುಗಳಿಂದ ಪಡೆದಿದ್ದೇನೆ. ಅವರಿಗೆಲ್ಲ ಕೃತಜ್ಞತೆಗಳು.

ಪೂರಿತ (ಮುಂಬದಿ) ಭಾಗದಲ್ಲಿ ಶಿವಲಿಂಗ ಸಂಕೇತಧಾರಿಯಾಗಿದ್ದಾನೆ; ತ್ರಿನೇತ್ರನಾಗಿದ್ದಾನೆ. ಬಲಹಿಂಗೈಯಲ್ಲಿ ಡಮರು-ಬಾಣ; ಎಡ ಹಿಂಗೈಯಲ್ಲಿ ತ್ರಿಶೂಲ ಬಿಲ್ಲುಗಳನ್ನು ಸಂಯುಕ್ತ ಶಿಲ್ಪವಾಗಿಸಿರುವುದು ವಿಶೇಷ. ಸಾಮಾನ್ಯವಾಗಿ ಡಮರು-ತ್ರಿಶೂಲ, ಬಿಲ್ಲು-ಬಾಣಗಳ ಪ್ರತ್ಯೇಕ ಶಿಲ್ಪಗಳು ಕಾಣಬರುವಲ್ಲಿ ಇಲ್ಲಿ ಸಂಯುಕ್ತಗೊಳಿಸಿರುವ ಬಗೆ ಅಪೂರ್ವವಾಗಿದೆ. ಮುಂಗೈಗಳಲ್ಲಿ ಖಡ್ಗ, ಹಾಗು ದಕ್ಷನ ಶಿರದ ಮೇಲೆ ನಾಗಮಂಡಲದ ಉಬ್ಬುಶಿಲ್ಪವಿರುವ ಡಾಲುವಿನಿಲ್ಲಿ ನಾಗಹೆಡೆಗಳ ಮೇಲೆ ಊರಿದ ಹಸ್ತಭಂಗಿ ಗಮನಾರ್ಹವಾಗಿದೆ. ಇದು ಮನಸಂಯಮಿ, ಮನಃಕುಂಡಲಿನಿಯೋಗ ವೀರಭದ್ರನ ಸಂಕೇತದಂತಿದೆ. ಮಂಡಿಮಟ್ಟಕ್ಕೆ ಇಳಿಬಿದ್ದ ರುಂಡಮಾಲಾಧಾರಿಯಾಗಿ, ಹಾವುಗೆ ರಹಿತ, ಪ್ರಮಾಣಬದ್ಧ ಶಿಲ್ಪವಾಗಿ ಕಾಣುತ್ತಾನೆ ಈ ವೀರಭದ್ರ. ಬಲ ಸೊಂಟದಲ್ಲಿ ಚೂರಿ, ಭುಜಕೀರ್ತಿ ಕಂಕಣಕೇಯೂರದೊಡನೆ ಶಿಲ್ಪಗೊಂಡಿದ್ದಾನೆ. ಪ್ರಭಾವಳಿಯಲ್ಲಿ ಬಲಕ್ಕೆ ಪ್ರಣಾಮಭಂಗಿಯ ಟಗರುದಲೆಯ ಸ್ಥಾನಕ ದಕ್ಷನಿದ್ದಾನೆ. ಪ್ರಸನ್ನ ಗಂಭೀರ ವದನನಾದ ಈ ವೀರಭದ್ರನ ಶಿಲ್ಪ ಹೊಯ್ಸಳರ ಅಂತ್ಯಕಾಲದ ಶಿಲ್ಪವೆನಿಸುತ್ತದೆ. ಆಕರ್ಷಕ ಸರಳತೆಯಿಂದ ಕೂಡಿದ ಈ ವೀರಭದ್ರನ ಗುಡಿ



ಹೊರಳುಗಲ್ಲಿನ ವೀರಭದ್ರನ ಹಲಗೆ

ಹಿಂಬದಿಯಲ್ಲಿ ಅಪ್ರಕಟಿತ ಹೊಯ್ಸಳರ ಕಾಲದ ಶಾಸನವಿದೆ. ಸಪ್ತಮಾತೃಕೆಯರ ಸೂರ್ಯಶಿಲ್ಪವೂ ಇಲ್ಲಿರುವುದು ಗಮನಾರ್ಹ. ಅರ್ಚಕ ಶ್ರೀ ವೀರಪ್ಪನವರ ಮನೆಯಲ್ಲಿ ವೀರಭದ್ರ ಘನಹಲಗೆಯು ಸಂರಕ್ಷಿತವಾಗಿದೆ. ಶಿವನಹಳ್ಳಿಯ ವೀರಭದ್ರ ಘನಹಲಗೆಯೊಂದರಲ್ಲಿರುವಂತೆ ಈ ಹೊರಳುಗಲ್ಲಿನ ಹಲಗೆಯ ವೀರಭದ್ರನಲ್ಲಿಯೂ ಆ ಲಕ್ಷಣಗಳಿವೆ. ಇವನು ಷಡ್ಭುಜ ವೀರಭದ್ರನಾಗಿ ಬಾಣ ಬಿಲ್ಲು, ಕೈಶೂಲ, ಬಾಕು, ಖಡ್ಗ-ಡಾಲುಧಾರಿಯಾಗಿದ್ದಾನೆ. ಕರಂಡಮಕುಟದಲ್ಲಿ ಶಿವಲಿಂಗ ಹೊಂದಿ, ತ್ರಿನೇತ್ರನಾಗಿ ಹುರಿಮೀಸೆಯ ಗಂಭೀರ ವದನನಾಗಿದ್ದಾನೆ. ಮಂಡಿಗೆ ತಾಗಿದಂತೆ ೫ ರುಂಡಗಳ ಮಾಲೆ ಹೊಂದಿ, ಕಾಲಿಗೆ ಗಗ್ಗರವಿದ್ದು, ಹಾವುಗೆಗಳ ಮೇಲೆ ಎಡಪಾರ್ಶ್ವೋದಯದಲ್ಲಿ ಯುದ್ಧಭಂಗಿಯಲ್ಲಿದ್ದಾನೆ. ಬಲಕ್ಕೆ ಪ್ರಣಾಮ ಸ್ಥಾನಕ ಭಂಗಿಯ ದಕ್ಷ, ಎಡಕ್ಕೆ ಖಡ್ಗ, ಡಾಲುಧಾರಿಣಿ ಭದ್ರಕಾಳಿ ಇದ್ದಾಳೆ. ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವ ಒಂದು ಸುಂದರ, ವೀರಭದ್ರ ಹಲಗೆ ಶಿಲ್ಪವಿದಾಗಿದೆ. ಈ ವೀರಭದ್ರ ಸಂಬಂಧದಲ್ಲಿ 'ಗದ್ದುಗೆ ಗುಡಿ' ಎನ್ನುವುದುಂಟು. ಆದರೆ ಗುರುಗದ್ದುಗೆಯ ಮೇಲೆ ಗೌರಿಬಿದನೂರು ತಾ. ಹೊಸೂರು ಗ್ರಾಮದ ವೀರಭದ್ರನಂತೆ ಈ ವೀರಭದ್ರನೂ ಗುರುಗದ್ದುಗೆಯ ಮೇಲೆ ಪ್ರತಿಷ್ಠಾಪಿತನಾದವನೇ ಎಂಬುದು ಸ್ಪಷ್ಟವಿಲ್ಲ.

ವಾರ್ಷಿಕವಾಗಿ ಮಹಾನವಮಿ-ನವರಾತ್ರಿಯಲ್ಲಿ ಪೂಜಾದಿಗಳು ನಡೆಯುವಲ್ಲಿ ಒಂಭತ್ತು ದಿನದ ಪಟ್ಟಕ್ಕೆ ಕೂರಿಸಿ ರುದ್ರಾಭಿಷೇಕ, ಪೂಜಾ ನೈವೇದ್ಯಗಳು ವೀರಭದ್ರನಿಗೆ ಉಂಟು. ಆಯುಧಪೂಜೆ, ಮಹಾನವಮಿ ಉತ್ಸವವೂ ಇವನಿಗಿದೆ. ವೀರಭದ್ರನಿಗೆ ಬನ್ನಿಪೂಜೆ ನಡೆಸುವಲ್ಲಿ ಬನ್ನಿಮರಕ್ಕೆ ಪಂಜುಕಟ್ಟಿ ಬಂದೂಕಿನಿಂದ ಹೊಡೆಯುತ್ತಾರೆ. ಅಲ್ಲಿಗೆ ಗ್ರಾಮದ ಎಲ್ಲ ದೇವರುಗಳೂ ಬರುತ್ತವೆ. ಭದ್ರಕಾಳಿಯ ಜೊತೆ ವೀರಭದ್ರನಿಗಿಲ್ಲಿಲ್ಲ.

ಶಿವನಹಳ್ಳಿ ವೀರಭದ್ರನಿಗೆ ಭದ್ರಕಾಳಿಯೊಡನೆ ಜಾತ್ರೆಯಲ್ಲಿ ಮದುವೆ ಆಚರಣೆ ಉಂಟು. ಆದರೆ ಹೊರಳುಗಲ್ಲು ವೀರಭದ್ರ ಸಂನ್ಯಾಸಿ ಅಂತೆ. ಆ ಕಾರಣ ಭದ್ರಕಾಳಿಯ ಸಮಹೋಗ ಇಲ್ಲಿಲ್ಲ. ಈಗಾಗಲೇ ಹೇಳಿರುವಂತೆ ಡಾಲುವಿನ ಮೇಲಿರುವ ನಾಗಲಕ್ಷಣಗಳಿಂದ ಸೂಚಿತವಾದ ಮನಃಸ್ಸಂಯಮಿ ವೀರಭದ್ರ ಇವನಾದ್ದರಿಂದ ಭದ್ರಕಾಳಿ ಸಹಯೋಗವಿಲ್ಲದಿರುವ ಕಾರಣ ತಿಳಿಯುವಂತಾಗುತ್ತದೆ; ಕುಮಾರ ವೀರಭದ್ರನಾದರೂ ಇಂತ ಸಹಯೋಗವಿರುವುದಿಲ್ಲ. ಆದರೆ ಹಲಗೆ ವೀರಭದ್ರ

ಉತ್ಸವಮೂರ್ತಿಯಾದ್ದರಿಂದ ಅವನಿಗೆ ಭದ್ರಕಾಳಿ ಸಹಯೋಗವನ್ನೂ ಯುದ್ಧಭಂಗಿಯಲ್ಲಿರುವ ಕಾರಣ ಶಿಲ್ಪದಲ್ಲಿ ಮೂಡಿಸಲಾಗಿದೆ.

ಊರಹಬ್ಬದಲ್ಲಿ ಅಂದರೆ ಯುಗಾದಿ ನಂತರ ೧೫ ದಿನಕ್ಕೆ ವೀರಭದ್ರನಿಗೆ ಕೊಂಡ ನಡೆಯುತ್ತದೆ. ಒಂದನೇ ದಿನ 'ಎಳೆವಾರ ಉತ್ಸವ'. ಆ ದಿನ ಸೋಮವಾರ, ಕೊಂಡಕ್ಕೆ ಗಾಡಿ ಸೌದೆ ಹಾಕುತ್ತಾರೆ. ಮಂಗಳವಾರ, ಬೆಳಗ್ಗೆ ಗಂಗಾಸ್ನಾನ ಮಾಡಿಸಿದ ದೇವರಿಗೆ 'ಒಳಮೆಟ್ಟಿಸಿಕೊಂಡು' ಅಂದರೆ – ಗಂಗೆಪೂಜೆ ಆದಮೇಲೆ ಅಲ್ಲಿ ವೀರಭದ್ರ ಸನ್ನಿಧಿಯಲ್ಲಿ ಊರದೇವರಿಗೆಲ್ಲ ಪೂಜೆಕೊಡುತ್ತಾರೆ. ನಂತರ ನಡೆಮುಡಿ (ನಡೆಮಡಿ) ಹಾಸಿ, ಪಂಜಿನಸೇವೆ, ಉರುಳುಸೇವೆ ನಡೆಸುತ್ತಾರೆ. ನಡೆಮುಡಿ (ನಡೆಮಡಿ) ಹಾಕಿ ಪಂಜು ಹಿಡಿದ ಮಡಿವಾಳರು, ಅಂದರೆ ಎರಡು ಕೈಯಲ್ಲೂ ಪಂಜುಹಿಡಿದು ದೇವರಿಗೆ ಪಂಜುನಮಸ್ಕಾರವನ್ನು ನಾಲ್ದಿಸೆಗೂ, ನಾಲ್ದಿಸೆಯಿಂದಲೂ ಸಲ್ಲಿಸುತ್ತಾರೆ – ಇದು ಶಿವನಹಳ್ಳಿ ವೀರಭದ್ರನಿಗೂ ಇದೆ – ಒಳಮೆಟ್ಟಿಸಿಕೊಂಡು ಬರುವಲ್ಲಿ ಹೊರಳುಗಲ್ಲಿನ ಮಹದೇಶ್ವರ ಮಠದ ಸ್ವಾಮಿಗಳು ನಡೆಮು(ಮ)ಡಿಯಲ್ಲಿ ಮೊದಲಿಗೆ, ಅವರ ಹಿಂದೆ ಸ್ವಾಮಿ ಹಲಗೆ ಹೊತ್ತ ಅರ್ಚಕರು, ಹಲಗೆ ಹಿಂದೆ ಗ್ರಾಮದೇವತೆ ಈ ಕ್ರಮದಲ್ಲಿ ಕೊಂಡದ ಬಳಿ ಬರುತ್ತಾರೆ. ಕೊಂಡದ ಸುತ್ತ ಹಲಗೆಯ ಅರ್ಚಕರು ಮೂರುಸುತ್ತು ಬಂದು ಸ್ವಾಮೀಜಿಯವರ ಸಮಕ್ಷಮದಲ್ಲಿ ಕೊಂಡಹಾಯುತ್ತಾರೆ. ಭಕ್ತರೂ ಹಾಯುತ್ತಾರೆ. ನಂತರ ವೀರಭದ್ರಸ್ವಾಮಿಗೆ ತಂಬಿಟ್ಟಿನ ತಂಪಿನಾರತಿ ವೀರಶೈವ ಹೆಂಗಳೆಯರಿಂದ ನಡೆಯುತ್ತದೆ. ಈ ಕೊಂಡದ ಜೊತೆಗೆ ಬಸವೇಶ್ವರ ಕೊಂಡವೂ ನಡೆಯುತ್ತದೆ. ವೀರಭದ್ರಕೊಂಡ ಬೆಳಿಗ್ಗೆ ೫ ಗಂಟೆಗಾದರೆ, ಬಸವೇಶ್ವರನದು ೭ ಗಂಟೆಗೆ ನಡೆಯುತ್ತದೆ. ಊರಲ್ಲಿ ಅದೇ ದಿನ ಮಾರಮ್ಮನ ಕೊಂಡವೂ ನಡೆದು ಆ ಒಕ್ಕಲಿನವರು ಹಾಯುತ್ತಾರೆ.

ಕೊಂಡದ ನಂತರ ಸಂಜೆ ವೀರಭದ್ರೋತ್ಸವ ನಡೆಯುತ್ತದೆ. ದೇವರ ಕೊಂಡ ಆದ ಮೇಲೆ ಎಲ್ಲಾ ದೇವರ ಉತ್ಸವವನ್ನೂ ವಿಶೇಷವಾಗಿ ಒಂದು ದಿನ ಇಟ್ಟುಕೊಳ್ಳುತ್ತಾರೆ. ಊರಿನ ಹಬ್ಬಕ್ಕೆ 'ಕಬ್ಬಾಳಮ್ಮ' ದೇವತೆ ಬರಲೇಬೇಕು. ಮಾರಮ್ಮನ ಕೊಂಡವನ್ನು ಕಬ್ಬಾಳಮ್ಮನ ಕರಗವು ಹಾಯಬೇಕು, ಎಂಬುದು ಸಂಪ್ರದಾಯವಾಗಿದೆ.

ಈ ವೀರಭದ್ರನ ಕುರಿತು ಜನಪದ ಕತೆಯೊಂದಿದೆ, ಇವನಿಗೆ ಸುತ್ತ ಇದ್ದ ಕಾಡಿನಲ್ಲಿ ಮುಳ್ಳು ಹೆಚ್ಚಾಗಿದ್ದ ಕಾರಣ 'ಮುಳ್ಳುವುದಿ/ಮುಳ್ಳುದಿ ವೀರಭದ್ರ' ಎಂದು ಹೆಸರಿದೆ. ಹಳೆಮನೆದಳವು ಗುಡಿಯ ಪಕ್ಕದಲ್ಲಿದೆ. ಇದ್ದ ಎರಡು ಊರುಗಳು ನಾಶವಾದುವು. ಮುನೀಶ್ವರ ಬೆಟ್ಟದ ಮೇಲೆ ಹೋದ ಶರಣರು ಅಲ್ಲಿಯ ಗದ್ದುಗೆ ಆದರು. ಅವರು ಶರಣ ಜಂಗಮರು. ಭಿಕ್ಷೆಗೆ ಹೋಗಿ ದಾಸೋಹ ನಡೆಸುತ್ತಿದ್ದರು. 'ಬಸವ' ಅವರಲ್ಲಿತ್ತು. ಜೋಳಿಗೆ ಹಾಕಿ ಕೊರಳಿಗೆ ಗೆಜ್ಜೆ, ಗಂಟೆಕಟ್ಟಿ ಅವನನ್ನು ಕಳುಹಿಸುತ್ತಿದ್ದರು. ಆಗ ಊರಿನವರು 'ಗುರುಗಳ ಬಸವ' ಬಂದ ಎಂದು ಭಿಕ್ಷೆ ಹಾಕಿ ಕಳುಹಿಸುತ್ತಿದ್ದರು. ಅದು ಗುರುಸನ್ನಿಧಿಗೆ ತಂದು ಭಿಕ್ಷೆಯನ್ನು ಒಪ್ಪಿಸುತ್ತಿತ್ತು. ಒಮ್ಮೆ ದಬ್ಬಳ್ಳಿ ಎಂಬ ಗ್ರಾಮದಲ್ಲಿ ಹೆಣ್ಣುಮಗಳು ಹಸು ಕರೀತಿದ್ಲು; ಬಸವ ಗಂಟೆ ಅಲ್ಲಾಡಿಸಿದ. ಆ ಶಬ್ದಕ್ಕೆ ಹಾಲು ಕರೆಯುತ್ತಿದ್ದ ತಪ್ಪಲೆ ಬಿದ್ದುಹೋಯಿತು. ಆಗ ಆ ಹೆಣ್ಣು ಬಸವನನ್ನು ಅಟ್ಟಿಬಿಟ್ಟಳು. ಬಸವ ನೊಂದು ಹಿಂದಿರುಗುವಲ್ಲಿ ಹಾದಿಯಲ್ಲಿಯೆ ಲಿಂಗೈಕ್ಯವಾಯಿತು. ವಿಷಯ ಶರಣರಿಗೆ ತಿಳಿಯಿತು. ಮನಸ್ಸು ನೊಂದಿತು. ದಬ್ಬಳ್ಳಿಗೆ ಅವರ ವೇದನೆಯೆ ಶಾಪವಾಯಿತು. ಅದು ಹಾಳುಬಿದ್ದಿತು. ಅಂದಿನಿಂದ ಜನ ತಮ್ಮ ತಪ್ಪನ್ನು ಶರಣರು ಕ್ಷಮಿಸಲೆಂದು ಮನೀಶ್ವರ ಬೆಟ್ಟಕ್ಕೆ ಮಿಗಿಲು ಗೌರವದಿಂದ, ಮೀಸಲು ಗೌರವದಿಂದ ನಡೆದುಕೊಳ್ಳುತ್ತಾರೆ.

ಇನ್ನು ಶಿವನಹಳ್ಳಿ ವೀರಭದ್ರನ ಕುರಿತ ವಲಸೆ ಕತೆ ದಾಕ್ಷಾಯಣಿ ಸತಿ ಆದ ಸಂಬಂಧದಲ್ಲಿ ಕೂಡಿಕೊಂಡಂತಿದ್ದು, ಹೊರಳುಗಲ್ಲು ಗ್ರಾಮದಲ್ಲಿ ಪ್ರಚಲಿತವಾಗಿದೆ. ಸಾವನದುರ್ಗದಲ್ಲಿ ಹಿಂಡು ದನವನ್ನು ದನಗಾಹಿ ಹೆಣ್ಣೊಂದು ತನ್ನ ಕೂದಲಿನಿಂದ ಅಟ್ಟಿಕೊಂಡುಬಂದಳಂತೆ. ಅದನ್ನು ಕಂಡ ಆಕೆಯ ತಾಯಿತಂದೆಗೆ ಕೋಪಬಂದು ಆಕೆಯನ್ನು ಮೂರುತುಂಡುಮಾಡಿ ಕುಕ್ಕೆಯಲ್ಲಿ ತರುತ್ತಿದ್ದು, ಒಂದು ತುಂಡನ್ನು ಸಾವನದುರ್ಗಕ್ಕೆ ಎಸೆದರಂತೆ. ೨ನೇ ತುಂಡನ್ನು ಗಾಣಾಳುವಿನಲ್ಲಿ, ೩ನೇ ತುಂಡನ್ನು ಶಿವನಹಳ್ಳಿಯಲ್ಲಿ ಇಟ್ಟರಂತೆ. ಆ ತುಂಡುಗಳು ಬಿದ್ದೆಡೆಯಲ್ಲೆಲ್ಲ ವೀರಭದ್ರ ಆದುವಂತೆ. ದ. ಕನ್ನಡ ಜಿಲ್ಲೆ ಪಡುಬಿದ್ರೆಯಲ್ಲಿ (ಪಾದ ಬಿದ್ದಮರದ ನೆಲೆ– ದಕ್ಷನ ಯಜ್ಞಕುಂಡಕ್ಕೆ ಬಿದ್ದ ಸತಿಯ ದೇಹವನ್ನು ಶಿವನು ರುದ್ರಾವೇಶದಲ್ಲಿ ಒಯ್ಯುತ್ತಿದ್ದಾಗ, ಆ ಉಮೆಯ ಪಾದಗಳು ಪಡುಬಿದ್ರೆಯಲ್ಲಿ ಬಿದ್ದ ಕಾರಣ ಆ ಹೆಸರು ಬಂತೆಂಬ ಹಾಗು ಶಕ್ತಿಪೀಠವಾಯಿತೆಂಬ ಪೌರಾಣಿಕ ಕತೆ ಅಲ್ಲಿದೆ) ಇಂಥದೇ ಕತೆಯಿದ್ದು ಅಲ್ಲಿ ನಡೆಯುವ 'ಜಾರಂದಾಯ' ವೇಷದ ಜನಪದ

ಕಲೆ, ವೀರಭದ್ರನ ಅವತಾರವನ್ನು ಸೂಚಿಸುತ್ತದೆ ಎನ್ನಲಾಗಿದೆ. ಹೀಗೆಯೆ ದಕ್ಷಯಜ್ಞ ಮರ್ದನನಾದ ವೀರಭದ್ರನ ಕತೆಯನ್ನು ಜನಪದ ತನ್ನ ಕತೆಗೆ ಹೊಂದಿಸಿಕೊಂಡ ಇನ್ನೊಂದು ಬಗೆಯಾಗಿ ಕಾಣುತ್ತದೆ. ಹೀಗಾಗಿ ಶಕ್ತಿಪೀಠಗಳ ನೆಲೆಯಲ್ಲಿ ವೀರಭದ್ರ ಪ್ರತಿಷ್ಠೆಗಳು ಆದುವೆಂಬ ಜನಪದ ಸಂಕೇತ ಇಲ್ಲಿದೆ. ಜೊತೆಗೆ ವೀರಭದ್ರ ಮಾತೃಕೆಯರ ಅಭಿರಕ್ಷಕನಾಗಿದ್ದಾನಲ್ಲವೆ! ಅದು ಕಾರಣ ಈ ಸಾಂಕೇತಿಕ ಕತೆಗಳಿರಬೇಕು.



ಆಡನಕುಪ್ಪೆ ವೀರಭದ್ರನ ದೇಗುಲ, ಹೊರಭಿತ್ತಿಯ ವರ್ಣಚಿತ್ರ ಹಾಗೂ ದೇಗುಲ ಮಠದ ಕಿರಿಯ ಶ್ರೀಗಳು

### *ಆಡನಕುಪ್ಪೆ ವೀರಭದ್ರ*

ಈ ಗ್ರಾಮವು ಕನಕಪುರ ಕಸಬ ಗ್ರಾಮವಾಗಿ ಬಸವೇಶ್ವರ ಮತ್ತು ವೀರಭದ್ರ ದೇವರ ಸಂಬಂಧದ ಪೂಜಾಚಾರಗಳಿಗೆ ಪ್ರಸಿದ್ಧವಾಗಿದೆ. ಎರಡೂ ದೇವರಿಗೂ ಕೊಡುಗೆ ಜಮೀನಿಗಳಿವೆ. ವಿಶೇಷವೆಂದರೆ ವೀರಭದ್ರ ದೇಗುಲದ ಉತ್ತರ ಭಿತ್ತಿಯಲ್ಲಿ (ಗೋಡೆ) ವೀರಭದ್ರನಿಗೆ ದಕ್ಷಾರಾಧನೆಯ ವರ್ಣಚಿತ್ರಗಳನ್ನು ಬಿಡಿಸಿರುವುದಾಗಿದೆ.

ಧ್ವಜಸ್ತಂಭ, ಬಲಿಪೀಠ, ಮುಖಮಂಟಪ, ಒಳಮಂಟಪ, ಗರ್ಭಗೃಹ, ಪ್ರಸ್ತರ ಭಾಗದಲ್ಲಿ ಬಸವಣ್ಣನ ಗಾರೆಯಚ್ಚಿನ ನಾಲ್ದೆಸೆಯ ವಿಗ್ರಹಗಳು, ಉತ್ತರಮುಖಿ ವೀರಭದ್ರ ದೇವಕೋಷ್ಠ, ದ್ರಾವಿಡಶೈಲಿಯ ವಿಮಾನಗೋಪುರವಿದ್ದು ಆಕರ್ಷಕ ದೇಗುಲವಾಗಿದೆ. ದೇಗುಲದ ಉತ್ತರಬದಿಗೆ ನೀಳ, ಆಳದ ಕೊಂಡದ ಕಲ್ಲಿನ ಕಟ್ಟೋಣವಿದೆ.

ಗರ್ಭಗೃಹದ ವೀರಭದ್ರ ಚತುರ್ಭುಜನಾಗಿ, ಛನ್ನವೀರ, ಕೇಯೂರ ಭುಜಕೀರ್ತಿ ಸಹಿತನಾಗಿ ಎಂದಿನಂತೆ ಹಿಂಗೈಗಳಲ್ಲಿ ಅಗಲ ಮುಖದ ಬಾಣ, ಬಿಲ್ಲು, ಮುಂಗೈಗಳಲ್ಲಿ ಖಡ್ಗ, ಪಾರ್ಶ್ವಕ್ಕೆ ತಿರುಗಿರುವ ಡಾಲುವನ್ನು ಒತ್ತಿಹಿಡಿದು ನಿಂತಿದ್ದಾನೆ. ಸೊಂಟಚೂರಿ, ರುಂಡಮಾಲೆ ಸ್ಪಷ್ಟವಾಗಿ ಕಾಣದು. ಕರಂಡ ಮುಕುಟನಾಗಿ ಚಾಚಿ ಎತ್ತಿದ ಹುರಿಮೀಸೆಯ ಈ ವೀರಭದ್ರ ಮೂರ್ತಿಯ ಶೈಲಿ ವಿಜಯನಗರ ಶೈಲಿಯನ್ನು ಹೋಲುತ್ತದೆ. ಸುಮಾರು ಮೂರು ಅಡಿ ಎತ್ತರದ ಮೂರ್ತಿ ಆಗಿದೆ. ಗಣೇಶ ಹಾಗು ಷಣ್ಮುಖ ಮೂರ್ತಿಗಳು ವೀರಭದ್ರನ ಪಾರ್ಶ್ವದಲ್ಲಿರುವುದು ತಾಂತ್ರಿಕ ಸಂಕೇತವೆನಿಸುತ್ತದೆ. ಪಕ್ಕದಲ್ಲಿ ಬಸವನೂ ಇದ್ದಾನೆ. ಮಂಟಪದಲ್ಲಿ ಹುತ್ತವಿದ್ದು ದಿನನಿತ್ಯಪೂಜೆ ಇರುತ್ತದೆ. ಗಣೇಶ ಚೌತಿಯಲ್ಲಿ ತನಿ ಎರೆಯುವಲ್ಲಿ, ಊರಿನವರೆಲ್ಲ ಪಾಲ್ಗೊಳ್ಳುತ್ತಾರೆ.

ನಂದಿಕಂಬ (ಧ್ವಜಸ್ತಂಭ)ದಲ್ಲಿ ಪುರುಷಾಮೃಗ, ಬಸವ, ಗಜಲಕ್ಷ್ಮಿ, ಶಾರ್ದೂಲಗಳ ಉಬ್ಬುಶಿಲ್ಪಗಳಿವೆ. ಇಲ್ಲಿನ ಶಿಲ್ಪ ಪ್ರತಿಷ್ಠಾನಗಳನ್ನು ನೋಡಿದರೆ ತಾಂತ್ರಿಕ ವೈದಿಕ ಪ್ರಭಾವವು ಕಾಣುವಂತಿದೆ.

ಆಡನಕುಪ್ಪೆಯಲ್ಲಿ ಉಗಾದಿ ಕಳೆದು ಮುಂದಿನ ಸೋಮವಾರದಿಂದ ಗುರುವಾರದವರೆಗೆ ವಾರ್ಷಿಕ ವೀರಭದ್ರ ಜಾತ್ರೆ ನಡೆಯುತ್ತದೆ. ಇಲ್ಲಿ ಬಸವಣ್ಣನಿಗೂ ಕೊಂಡ, ವೀರಭದ್ರನಿಗೂ ಕೊಂಡವಿದೆ. ಮೊದಲನೇ ದಿನ ಸೋಮವಾರದಂದು 'ಬಸವಣ್ಣನ ಎಳೆವಾರ' ರಾತ್ರಿ ಏಳೂವರೆ ಗಂಟೆಯಿಂದ ಶುರುವಾಗುತ್ತದೆ. ಸೌದೆಯನ್ನು (ಮೂರು) ಗಾಡಿಯಲ್ಲಿ ಊರಿನವರು ಮಾತ್ರ ತಂದುಹಾಕುವ ಆಚರಣೆ ಅದು. ೫೦ ಅಡಿ ಉದ್ದ, ೪ ಅಡಿ ಅಗಲ, ೩ ಅಡಿ ಅಗಲದ ಈ

ಬಸವೇಶ್ವರ ಕೊಂಡಕ್ಕೆ ಐದು ಕಳಶವಿಟ್ಟು ರಾತ್ರಿ ೧೧ರ ವೇಳೆಗೆ ಪೂಜಾದಿಗಳನ್ನು ಆರಂಭಿಸುವಲ್ಲಿ ಕೊಂಡಕ್ಕೆ ಹಾಕಿದ ಸೌದೆಗೆ ಕರ್ಪೂರವಿಟ್ಟು ಹತ್ತಿಸುತ್ತಾರೆ. ಬೆಳಗಿನ ಜಾವ ೬ ಗಂಟೆಗೆ ಕೊಂಡ ನಡೆಯುತ್ತದೆ. ವೀರಭದ್ರ ಹಲಗೆ ಹಾಗು ಬಸವಣ್ಣನನ್ನು (ಆನೆಕಲ್ಲು, ಸುಂಡಘಟ್ಟದ ಕಡೆಯಿಂದ ಬಂದ ನೀರಿನ ಹೊಳೆ) ಚಿಕ್ಕ ಹೊಳೆಯಲ್ಲಿ ಮೀಯಿಸಿ ಹೂ ಪೂಜೆಮಾಡಿ ವಾದ್ಯ ಸಮೇತ ಕೊಂಡದ ಬಳಿ ತರುತ್ತಾರೆ. ಅರ್ಚಕರು ಈ ಉತ್ಸವಮೂರ್ತಿಗಳನ್ನು ಹೊತ್ತು ಕೊಂಡಹಾಯುತ್ತಾರೆ. ಮಂಗಳವಾರ ಊರುತ್ಸವವನ್ನು ಮಾಡುತ್ತಾರೆ.

ಬಸವಣ್ಣನ ಕೊಂಡದಲ್ಲಿ ಸೌದೆಯನ್ನು (ಮರದ ತುಂಡುಗಳು) ರಾಶಿ ನಿಲ್ಲಿಸಿ ಕೆಂಡಮಾಡುತ್ತಾರೆ. ಜೊತೆಗೆ ಮಣ್ಣಿನ ಹಳ್ಳದ ಕೊಂಡವದಾಗಿದೆ.

ಮಂಗಳವಾರ ರಾತ್ರಿ ಊರಿನಲ್ಲಿ ವೀರಭದ್ರನ ಕೊಂಡಕ್ಕೆ ಸಿದ್ಧತೆ ಅಂದರೆ 'ಎಳೆವಾರ' ನಡೆಯುತ್ತದೆ. 'ವೀರಭದ್ರಪರ' ನಡೆದು ಅನ್ನ ದಾಸೋಹವಿರುತ್ತದೆ. ದಾಸೋಹಕ್ಕೆ ಅನ್ನಸಾರು, ಮುದ್ದೆ ಮತ್ತು ಪಾಯಸವೆ ಪ್ರಸಾದ. ಶ್ರೀ ದೇಗುಲಮಠದ ಸ್ವಾಮಿಗಳು ಕೊಂಡದ ಸಮಯದಲ್ಲಿ ಮಹಾಮಂಗಾಳಾರತಿಗೆ ದಯಮಾಡಿಸುತ್ತಾರೆ.

ವೀರಭದ್ರನ ಕೊಂಡ ೬೦ ಅಡಿ ಉದ್ದ, ೪ ಅಡಿ ಅಗಲ, ೪ ಅಡಿ ಆಳದ ಕಲ್ಲಿನ ರಚನೆಯ ಕಟ್ಟೋಣವಾಗಿದೆ. ಬುಧವಾರ ವೀರಭದ್ರನಿಗೆ ಕೊಂಡವಾಗುವುದು ಇಲ್ಲಿನ ವಿಶೇಷ. ಅಂದು ಚಿಕ್ಕ ಹೊಳೆಯಿಂದ ಅಗ್ರೋದಕ ತಂದು ವೀರಭದ್ರನಿಗೆ ಹೋಮ ರುದ್ರಾಭಿಷೇಕ ನಡೆಸಿ ಪಂಚಕಳಸಹೂಡಿ ಪೂಜಾದಿಗಳು ನಡೆಯುತ್ತವೆ.

ವೀರಭದ್ರನ ಕೊಂಡಕ್ಕೆ ಊರಿನವರಲ್ಲದೆ ಬರಡನಹಳ್ಳಿ ಇತ್ಯಾದಿ ಸುತ್ತಮುತ್ತಲ ಗ್ರಾಮದವರು ಸೌದೆಯನ್ನು ತಂದು ಹರಡುತ್ತಾರೆ. ಕೊಂಡವು ಸಿದ್ಧವಾದ ಬುಧವಾರದಂದು ವೀರಭದ್ರ ಹಲಗೆ ಹೊತ್ತು ಅರ್ಚಕರು ಮಾತ್ರ ಹಾಯುತ್ತಾರೆ.

ಬುಧವಾರ ವೀರಭದ್ರಕೊಂಡ ಆದನಂತರ 'ಹಾಲರಬಿ ಸೇವೆ' ನಡೆಯುತ್ತದೆ. ಅಂದರೆ ಮೂರು ತಂಬಿಗೆಗಳಲ್ಲಿ ಹಾಲು ತುಂಬಿಕೊಂಡು, ಅದರಲ್ಲಿ ಹೊಂಬಾಳೆ ಇಟ್ಟು ಪೂಜಿಸುವುದಾಗಿದೆ. ಹಾಲರಬಿಗಳನ್ನು ಕನ್ಯೆಯರು ಮಾತ್ರ ಹೊತ್ತು ತರುತ್ತಾರೆ. ರಥದ ಕಳಶವನ್ನು ಗಂಡಸರು ತರುತ್ತಾರೆ. ಈ ಸೇವಾ ಉತ್ಸವವು ದೇಗುಲದ ಸುತ್ತ ಮೆರವಣಿಗೆ ಬರುತ್ತವೆ. ದೇಗುಲಮಠದ ಸ್ವಾಮಿಗಳು ಈ ಉತ್ಸವದ ಜೊತೆಯಲ್ಲಿ ಸಾಗಿ ಬರುತ್ತಾರೆ. ನಂತರ ವೀರಭದ್ರ ರಥೋತ್ಸವ ನಡೆಯುತ್ತದೆ. ವೀರಭದ್ರನ ತೇರಿನ ಮೇಲೆ ಸ್ವಾಮಿಗಳನ್ನು ಕೂರಿಸಲಾಗುತ್ತದೆ. ಈ ಸಮಯದಲ್ಲಿ ಊರಿನವರಿಂದ ನಂದಿಧ್ವಜ ಕುಣಿತ, ಪಟದ ಕುಣಿತ ಇತ್ಯಾದಿ ಜನಪದ ಭಕ್ತಿ ಕಲಾಪ್ರದರ್ಶನವೂ ಇರುತ್ತದೆ. ಈ ವೀರಭದ್ರನ ಕುರಿತು, ಹೆಂಗಸರು ಹಾಗು ಗಂಡಸರು ಸೇರಿದಂತೆ (ತಬ್ಬಗುಪ್ಪೆ ಮಾರೇಗೌಡನದೊಡ್ಡಿ, ಬರಡನಹಳ್ಳಿಯ ಗ್ರಾಮೀಣರು) ಜನಪದ ಹಾಡುಗಳನ್ನು ಹೇಳುತ್ತಾರೆ. 'ಹೊಂಬಾಳೆ ಹಾಲರಬಿ ಸೇವೆ', ವೀರಭದ್ರನನ್ನು ದಕ್ಷಯಜ್ಞನಾಶದ ನಂತರ, ಶಾಂತ–ಸೌಮ್ಯಗೊಳಿಸಿದ ಭದ್ರಕಾಳಿಯು ಪೂಜಾಸಂಕೇತವಂಬಂತಿದೆ.

ಗುರುವಾರದಂದು ದೇಗುಲಮಠದ ಸ್ವಾಮಿಗಳ ಪಲ್ಲಕ್ಕಿಉತ್ಸವವು ಸಂಜೆ ನಡೆಯುತ್ತದೆ. ಅದಾದನಂತರ ಜಾತ್ರೆ ಮುಕ್ತಾಯವಾಗುತ್ತದೆ. ಹಬ್ಬಗಳ ಸಂದರ್ಭದಲ್ಲಿ ಅಂದರೆ, ಸಂಕ್ರಾಂತಿ, ಶಿವರಾತ್ರಿಯಲ್ಲಿ ರುದ್ರಾಭಿಷೇಕ ಮತ್ತು ವಿಶೇಷ ಪೂಜೆ ನಡೆಯುತ್ತದೆ. ಕಾರ್ತೀಕದಲ್ಲಿ ಪ್ರತಿಸೋಮವಾರ, ಶುಕ್ರವಾರಗಳಲ್ಲಿ ದೀಪಾರಾಧನೆ ನಡೆಯುತ್ತದೆ. ನವರಾತ್ರಿಯಲ್ಲಿ ಮೊದಲನೇ ದಿನ ಪಟ್ಟಕ್ಕೆ ಕೂರಿಸಿ, ೯ನೇ ದಿನ ಆಯುಧಪೂಜೆ ಮಾಡುತ್ತಾರೆ. ನಂತರ ಬನ್ನಿಮಂಟಪ ಕಟ್ಟುವಲ್ಲಿ ಉತ್ಸವಮೂರ್ತಿಯನ್ನು ಅಲ್ಲಿಟ್ಟು ಪೂಜೆಮಾಡುತ್ತಾರೆ. ಬಾಳೆಕಂಬಗಳನ್ನು ಕಟ್ಟಿ, ಒಂದು ಕಂಬವನ್ನು ಬನ್ನಿ ಮರಕ್ಕೆ ಕಟ್ಟಿ ಕಡಿಯುತ್ತಾರೆ; ಬನ್ನಿಯನ್ನು ತರುತ್ತಾರೆ.

ಗ್ರಾಮದೇವತೆಯ 'ಕರಗ'ದ ಸಂದರ್ಭದಲ್ಲಿ 'ಮಡಿಲಕ್ಕಿ' (ಸೋಗಲು ಬಾಳೆ, ವೀಳ್ಯ, ಅಕ್ಕಿ, ಹಣ)ಯನ್ನು ದೇಗುಲ ಮಠಕ್ಕೆ ತಂದು ಆಶೀರ್ವಾದ ಪಡೆದು ದೇವತೆಗೆ ಅರ್ಪಿಸುತ್ತಾರೆ. *

ಆಡನ ಕುಪ್ಪೆಯಲ್ಲಿ ಬಸವೇಶ್ವರ ಹಾಗು ವೀರಭದ್ರ ಪೂಜೆ ತಾಂತ್ರಿಕ ಸೂಕ್ಷ್ಮಾಚಾರಗಳ ಮೂಲಕ ನಡೆಯುವಲ್ಲಿ ಗುರು–ವಿರಕ್ತ ಸಂಯೋಗ ಸಮನ್ವಯ ಆಚರಣೆಗಳ ಸೂಚನೆ ಒದಗುವಂತಿದೆ.

---

* ಆಡನಕುಪ್ಪೆ ವೀರಭದ್ರನ ಗುಡಿಗೆ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರ ಜೊತೆಯಲ್ಲಿ ಹೋಗಿ, ಅರ್ಚಕ ಶ್ರೀ ಡಿ.ಎಸ್. ಪರಮಶಿವಯ್ಯ ಅವರಿಂದ ಅಲ್ಲಿನ ಆಚರಣೆಗಳ ಬಗ್ಗೆ ಕೆಲವು ವಿವರಗಳನ್ನು ಪಡೆದಿದ್ದೇನೆ. ಅದಕ್ಕೆ ನಾನು ಅವರಿಗೆ ಕೃತಜ್ಞ.

*ಮುರುಕಣಿ ವೀರಭದ್ರ*

ಈ ವೀರಭದ್ರ ಗುಡಿ ಮೊದಲಿಗೆ ಹೆಂಚಿನ ಮಾಡು ಹೊಂದಿದ್ದು ಈಗ ಸಿಮೆಂಟ್ ಮೌಲ್ಡಿಂಗ್ ಹೊಂದಿದೆ.

ಇಲ್ಲಿ ಯುಗಾದಿ ಆದ ೮ ದಿನಕ್ಕೆ ಹಬ್ಬ ನಡೆಯುತ್ತದೆ. ಒಂದು ವಾರದ ಹಬ್ಬ. ಮೊದಲು ಭಾನುವಾರದಂದು ನೆರೆಯ ರೇವಣಸಿದ್ದೇಶ್ವರ ಬೆಟ್ಟಕ್ಕೆ ಹೋಗಿಬಂದು ಭೀಮೇಶ್ವರ–ವೀರಭದ್ರನ ದರ್ಶನ ಮಾಡಿ ಹಬ್ಬದ ಸಿದ್ಧತೆ ಮಾಡತೊಡಗುತ್ತಾರೆ. ಸೋಮವಾರ 'ಎಳವಾರ', ಮಂಗಳವಾರ 'ಕೊಂಡ ಹಾಯುವಿಕೆ', ಬುಧವಾರ ತೇರು; ವೀರಗಾಸಿಗಳು (ಕೂತಗಾನಹಳ್ಳಿ) ಖಡ್ಗ ಹೇಳುತ್ತಾರೆ. ಇಲ್ಲಿಯೂ ಒಂದು ವಾರದ ಆಚರಣೆಗಾಗಿ ಹಬ್ಬದ ಕಟ್ಟುಗಳನ್ನು ಊರಿನಲ್ಲಿ ಪಾಲಿಸುತ್ತಾರೆ. ಉತ್ಸವ, ಮೆರವಣಿಗೆಗಳೂ ಕಾಣಬರುತ್ತವೆ. ಜಂಬೂಸವಾರಿ ದಿನ ಬನ್ನಿ ಮರದ ಮಂಟಪದ ಬಳಿ ಹೋಗಿ ಬನ್ನಿ ಮರಕ್ಕೆ ತೆಂಗಿನಕಾಯಿಯನ್ನು (ಮರದ ಕೊಂಬೆಗೆ) ಕಟ್ಟಿ ಗುಂಡು ಹೊಡೆಯುತ್ತಾರೆ. ಕೊಂಡದ ನಂತರ ಊರವರು ಕೊಂಡದ ಸುತ್ತ ತುಂಬಿಟ್ಟು ಆರತಿ ತರುತ್ತಾರೆ. ಈ ಗುಡಿಯಲ್ಲಿ ಹಳೆವೀರಭದ್ರ ಮತ್ತು ವೀರಭದ್ರ ಶಿಲ್ಪ ಫಲ ಹಾಗು ಹೊಸ ವೀರಭದ್ರರ ಶಿಲ್ಪಗಳು



**ಮುರುಕಣಿ ಹಳೆವೀರಭದ್ರ ಮತ್ತು ವೀರಭದ್ರ ಶಿಲಾಫಲಕ**

ಗಮನಾರ್ಹವಾಗಿವೆ. ಈ ಉಗಾದಿ ಸಮಯದ ವೀರಭದ್ರ ಉತ್ಸವಗಳಿಗೆ ಶ್ರೀದೇಗುಲಮಠ ಅಥವಾ ಅದರ ಶಾಖಾ ಮಠವಾದ ಈ ಕಬ್ಬಾಳುವಿನ ಬಿಲ್ವತ್ರೆ ಗವಿಮಠದ ಗುರುಗಳನ್ನು ಕರೆಸಿ ಭಕ್ತಿಸೇವೆಯನ್ನು ಅರ್ಪಿಸುತ್ತಾರೆ.

ಹಳೆ ವೀರಭದ್ರ ಭಿನ್ನಗೊಂಡಿರುವುದರಿಂದ ಗರ್ಭಗೃಹದಿಂದಾಚೆ ಅಂಕಣದಲ್ಲಿಟ್ಟು ಹೊಸ ವೀರಭದ್ರನನ್ನು ಗರ್ಭಗೃಹದಲ್ಲಿ ಪೂಜಿಸುತ್ತಾರೆ. ಆದರೂ ಹಳೆವೀರಭದ್ರನಿಗೆ ಹೂವು ಗಂಧವಿಡುತ್ತಾರೆ.

ಹಳೆವೀರಭದ್ರಶಿಲ್ಪದ ಲಕ್ಷಣವೆಂದರೆ : ಚತುರ್ಭುಜ ಸ್ಥಾನಕ ದ್ವಿಭಂಗಿಮೂರ್ತಿಯಾಗಿದ್ದು, ಬಲಹಿಂಗೈಯಲ್ಲಿ ಬಾಣಗಳ ಬತ್ತಳಿಕೆಯಿಂದ ಡಮರು ಬಾಣವನ್ನು ಕಲಾತ್ಮಕವಾಗಿ ಸೆಳೆಯುತ್ತಿರುವುದು! ಮೇಲ್ತುದಿಯಲ್ಲಿ ತ್ರಿಶೂಲಕ್ಕಂಟಿದ ತ್ರಿಶೂಲಬಿಲ್ಲಿನಿಂದ ಬಾಣಪ್ರಯೋಗ ತೋರಿರುವ ಶಿಲ್ಪದ ಅರ್ಥವಂತಿಕೆ ಅಪರೂಪದ ಬಗೆಯಾಗಿದೆ. ಬಿಲ್ಲ–ಬಾಣ, ಡಮರು–ತ್ರಿಶೂಲಗಳ ಶಿಲ್ಪ ಸಂಯುಕ್ತತೆ ಹೊರಳುಗಲ್ಲಿನ ವೀರಭದ್ರನಲ್ಲಿರುವುದಕ್ಕಿಂತಲೂ ಇಲ್ಲಿ ವಿಶಿಷ್ಟವಾದ ಕಲಾತ್ಮಕ ಕೆತ್ತನೆಯದಾಗಿದೆ. ವೀರಭದ್ರನ ಸವ್ಯ ಸಾಚಿತ್ವ–ಎರಡು ಕೈಗಳಲ್ಲಿಯೇ ಅನೇಕ ಕರಗಳ ವೀರಕಾಯಕದ ಶಕ್ತಿಹೊಂದಿದೆ ಎಂದು ತೋರುವ ಸಂಕೇತವನ್ನು ಶಿಲ್ಪಿಯು ಚಾತುರ್ಯದಿಂದ ಮೂಡಿಸಿದ್ದಾನೆ. ಕರ್ನಾಟಕದಲ್ಲಿಯೆ ಸದ್ಯ ನನ್ನ ಗಮನಕ್ಕೆ ಬಂದಿರುವುದರಲ್ಲಿ ಹಿಂಗೈಗಳ ಶಿಲ್ಪವಾಗಿ ಇದು ವಿಶಿಷ್ಟವೆನಿಸುತ್ತದೆ. ಬಲಮುಂಗೈಯಲ್ಲಿ ಓರೆಖಡ್ಗ, ಎಡಮುಂಗೈ ದಕ್ಷರುಂಡದ ಮೇಲೆ ನಿಂತ ಡಾಲುವನ್ನು ಒತ್ತಿಹಿಡಿದ ಎಂದಿನ ಸಾಮಾನ್ಯ ಶೈಲಿಯಲ್ಲಿವೆ. ಬಲಕ್ಕೆ ಟಗರುದಲೆಯ ದ್ವಿಭಂಗಿಯಲ್ಲಿರುವ ದಕ್ಷನ ನಮನ ಚರ್ಯೆ ಇದೆ. ಕರಂಡಮಕುಟ ಕಿರೀಟದಲ್ಲಿ ಶಿವಲಿಂಗ, ತ್ರಿನೇತ್ರ, ಕೋರೆಮೀಸೆ, ಸೊಂಟಚೂರಿ ತೊಡೆಯ ಮೇಲೆ ಹಾಯುವ ರುಂಡಮಾಲೆ, ಎಡಗಾಲು ಗಗ್ಗರ ಹೊಂದಿ ಹಾವುಗೆ ಮೇಲೆ ನಿಂತ ಈ ವೀರಭದ್ರ ವಿಜಯನಗರ ಶೈಲಿಯ ಒಂದು ಮಾದರಿಯಾಗಿದ್ದಾನೆ. ಇವನ ಜೊತೆಗೆ ಶಿಲಾಫಲಕದ ವೀರಭದ್ರ ಶಿಲ್ಪವೊಂದಿದೆ. ಅದು ಶುದ್ಧ ಗ್ರಾಮೀಣಶೈಲಿಯ ಚತುರ್ಭುಜ ಆಯುಧಸ್ಥನಾಗಿ, ಪಾರ್ಶ್ವೋದಯ ಪಾದಗಳ ಎಂದಿನ ಲಕ್ಷಣಗಳ ಶಿಲ್ಪವಾಗಿದೆ. ವಿಶೇಷವೆಂದರೆ ಸೊಂಟದ ಚೂರಿಯ ಜೊತೆಗೆ ಸೊಂಟದ ಗಂಟೆ ಇದ್ದು ಪ್ರತ್ಯೇಕವಾಗಿ ತ್ರಿಶೂಲವೊಂದನ್ನು ಕೆತ್ತಿರುವುದಾಗಿದೆ. ಇಂದು ದೇವತೆಯ ಅಂಶಾವತಾರದ ಸಂಕೇತವೆಂಬಂತಿದೆ; ಅಥವಾ ಕೊಡಗಿನಲ್ಲಿ ಅನೇಕ ಕಥೆ ಭದ್ರಕಾಳಿ (ನೆಲೆ)ಯುನ್ನೂ ತ್ರಿಶೂಲಗಳಿಂದ ಮಾತ್ರ ಸಂಕೇತಿಸುವಲ್ಲಿ, ಇಲ್ಲಿರುವ ತ್ರಿಶೂಲ ಭದ್ರಕಾಳಿಯ ಸಂಕೇತವಾಗಿರಬಹುದೇ? ಎನಿಸುತ್ತದೆ. ಬಲಕ್ಕೆ ದಕ್ಷನ ಶಿಲ್ಪವಿಲ್ಲದಿರುವ ಕಾರಣ, ಕೆಲವೆಡೆ ಭದ್ರಕಾಳಿ ಶಿಲ್ಪ ಬಲಕ್ಕೂ ಕಾಣಬರುವಲ್ಲಿ (ನಿಜಗಲ್ಲು–ನೆಲಮಂಗಲ ತಾ. – ಉದ್ದಾನ ವೀರಭದ್ರನಲ್ಲಿಯಂತೆ). ಇಲ್ಲಿನ ತ್ರಿಶೂಲ ಸಂಕೇತ ಮೇಲಿನ ಊಹೆಗೆ ಅವಕಾಶ ನೀಡುವಂತಿದೆ. ಇದೊಂದು ಪರಕೆಯ ಶಿಲ್ಪವೂ ಆಗಿರಬಹುದು.



ಮುರುಕಣಿ ಹೊಸ ವೀರಭದ್ರ ವಿಗ್ರಹ ಮತ್ತು ಕೊಂಡದ ನೆಲೆ

ಗುಡಿಯೊಳಗಿನ ರುದ್ರಾಕ್ಷಿಮಣಿ ಕಿರೀಟಿಯಾದ ಹೊಸ ವೀರಭದ್ರ ಮೂರುವರ್ಷದ ಹಿಂದೆ ಪ್ರತಿಷ್ಠೆಯಾದದ್ದು, ಎಂದಿನ ವೀರಭದ್ರನ ಲಕ್ಷಣಗಳನ್ನು ಆಧುನಿಕ ಬಗೆಯಲ್ಲಿ ಶಿಲ್ಪದಲ್ಲಿ ಮೂಡಿಸಲಾಗಿದೆ. ಹಾವುಗೆ ರಹಿತನಾದ ಈ ವೀರಭದ್ರನಿಗೆ ಎದೆಯ ಮೇಲೆ ಕರಡಿಗೆ ಹಾಕಲಾಗಿದೆ. ಉತ್ಸವಮೂರ್ತಿಯೂ ಇದೇ ಶೈಲಿಯಲ್ಲಿದೆ. ವೀರಭದ್ರನ ಘನ ಹಲಗೆಗಳನ್ನೂ ಊರಿನೊಳಗೆ ಪ್ರತ್ಯೇಕ ಗೃಹದಲ್ಲಿಟ್ಟು ರಕ್ಷಿಸಿದ್ದಾರೆ. ಕಾರಣ, ಊರಿನ ಹೊರಗೆ ವೀರಭದ್ರನ ಗುಡಿ ಇರುವುದಾಗಿದೆ. ಚುಂಚನಗಿರಿ ಒಕ್ಕಲುಗಳೇ ಬಹುತೇಕ ಇರುವ ಈ ಗ್ರಾಮದಲ್ಲಿ ವೀರಭದ್ರ ಆರಾಧನೆಯನ್ನೂ ನಿಷ್ಠೆಯಿಂದ ಪಾಲಿಸುತ್ತಾರೆ. 'ಮುರುಕಣಿ' (ಮೂರ್ಕಣ್ಣಿ) ಎಂಬ ಈ ಗ್ರಾಮದ ಹೆಸರು, ಮೂರುಕಣ್ಣಿನ (ತ್ರಿನೇತ್ರ) ವೀರಭದ್ರನಿಂದಾಗಿ ಬಂದಿರುವ ಸಾಧ್ಯತೆ ಇದೆ ಎಂದರೆ ಒಂದು ಕಾಲಕ್ಕೆ ಬಹು ಪ್ರಸಿದ್ಧವಾಗಿದ್ದ ಈ ದೇವತೆಯ ಕಾರಣವೆ ಗ್ರಾಮಕ್ಕೆ 'ಸ್ಥಳನಾಮ' ಒದಗಿರುವ ಸೂಚನೆಯನ್ನೂ ಪರಿಗ್ರಹಿಸಬಹುದಾಗಿದೆ.

*ಗಾಣಾಳು ವೀರಭದ್ರ*

ಇಲ್ಲಿನ ವೀರಭದ್ರ ಮೊದಲಿಗೆ ಲಿಂಗರೂಪದಲ್ಲಿ ಆರಾಧನೆಗೊಳ್ಳುತ್ತಿದ್ದನೆಂದಿದೆ. ಆನಂತರ ಮೂರ್ತಿರೂಪ ಮಾಡಿಸಿ ಪೂಜೆ ನಡೆಯಲಾರಂಭವಾಯಿತು. ಈ ವೀರಭದ್ರ ಇಲ್ಲಿಗೆ ಬರಲು ಜನಪದ ಕತೆಯೊಂದಿದೆ. ಸಾವನದುರ್ಗದಲ್ಲಿ ಭಜಂತ್ರಿಗಳ ಪೈಕಿ ರಾಜನೊಬ್ಬನಿದ್ದನಂತೆ. ವೀರಭದ್ರದೇವರ ಅರ್ಚಕರ ಹಿರಿಯ ಮಗಳು ದನಗಾಹಿಯಾಗಿ ಹಸುಕರುಗಳನ್ನು ಅಟ್ಟಿಕೊಂಡು ಬರುತ್ತಿದ್ದಳಂತೆ. ಅ ಭಜಂತ್ರಿ ರಾಜ ಅರ್ಚಕರ ಚೆಲುವಾದ ಆ ಮಗಳನ್ನು ನೋಡಿ, ಮೋಹಕ್ಕೆ ಬಿದ್ದ. ಆ ಮಗಳನ್ನು ಮದುವೆ ಮಾಡಿಕೊಡಲು ಅರ್ಚಕರಿಗೆ ಹೇಳಿಕಳುಹಿಸಿದ. ಆಗ ಅರ್ಚಕ ದಂಪತಿಗಳು ಜಾತಿ ವರಸೆ ಬರುವುದಿಲ್ಲವೆಂದು ಹೇಳಿದರು. ಹಾಗೇ ಹೇಳಿ ಅದೇ ರಾತ್ರಿ



ಗಣಾಳು ವೀರಭದ್ರ ಗುಡಿಯ ವೀರಭದ್ರ ಲಿಂಗ ಮತ್ತು ಮೂರ್ತಿ

ಮಗಳನ್ನು ದಂಪತಿಗಳು ತಲೆಯಮೇಲೆ ಕುಕ್ಕೆಯ ಮೇಲಿಟ್ಟುಕೊಂಡು ಊರುಬಿಟ್ಟು ಹೊರಟರು. ರಾಜ ಸೈನಿಕರನ್ನು ಕಳುಹಿಸಿದ. ಸೈನಿಕರು ಬರುವುದನ್ನು ನೋಡಿ ಅರ್ಚಕ ತಂದೆಯು ಮಗಳನ್ನು ಕಡಿದು ತುಂಡುಮಾಡಿ ಕುಕ್ಕೆ ಮೇಲಿಟ್ಟುಕೊಂಡು ಮುಂದೆ ನಡೆದರು. ಸೈನಿಕರು ವಾಪಸಾದರು. ತಂದೆತಾಯಿ ಕೃಷ್ಣಾಪುರದೊಡ್ಡಿ ಬಳಿ ಕೂನಗಲ್ ಬಳಿ ಬರುವ ವೇಳೆಗೆ ಆಯಾಸವಾಗಿ ಕುಕ್ಕೆ ಇಳಿಸಿದರು. ಆ ತುಂಡುಗಳೆಲ್ಲ ಕಲ್ಲಾಗಿದ್ದವು. ಆಗ ಅವುಗಳನ್ನು ಎಲ್ಲೆಲ್ಲಿ ಬಿಸಾಡಿದರೋ. ಅಲ್ಲೆಲ್ಲಾ ಒಂದೊಂದು ನೆಲೆ ಆಯ್ತು. ಅಂದರೆ ವೀರಭದ್ರನಿಗೆ ಅಲ್ಲೆಲ್ಲ ನೆಲೆ ಒದಗಿತ್ತು. ಅಂತಾಗಿ ಕೂನಗಲ್ಲು, ಗಾಣಾಳು, ಶಿವನಹಳ್ಳಿ ಇಲ್ಲೆಲ್ಲ ವೀರಭದ್ರ ಪ್ರತಿಷ್ಠೆಗಳಾದುವಂತೆ. ಶಿವನಹಳ್ಳಿ ಸ್ಥಿರ ನೆಲೆ ಎಂದು ತಂದೆ ತಾಯಿಗಳಿಗೆ ಆಶ್ವಾಸನೆ ಒದಗಿತಂತೆ. ಈ ಸ್ಥಿರನೆಲೆಯಿಂದ ಸಾವನದುರ್ಗಕ್ಕೆ ವೀರಭದ್ರ ಹೋದನೆಂದು ಹೇಳುವುದುಂಟು. ಈ ಕತೆ ಹಿಂದಿನಂತೆ ಪೌರಾಣಿಕ ದಕ್ಷಯಜ್ಞಕುಂಡಕ್ಕೆ ಹಾರಿದ ಸತಿಯಕತೆಯ ರೂಪಾಂತರಿತ ಜನಪದ ಕತೆಯಾಗಿ ಇಲ್ಲಿ ಪ್ರಚಲಿತವಾಗಿರುವಂತಿದೆ.

ಗಾಣಾಳುವಿನಲ್ಲಿ ಕೊಡಗಿನ ವೀರಭದ್ರ ಹಲಗೆಯನ್ನು ಶಿವನಹಳ್ಳಿಯಿಂದ ತಂದು ಒಂದು ವಾರವಿಟ್ಟುಕೊಂಡು ವೀರಭದ್ರಕೊಂಡ, ಪೂಜಾದಿಗಳು ನಡೆಸುತ್ತಾರೆ. ಅರಸುಮನೆತನದವರಿಗೆ ಈ ದೇವರ ಕೃಪೆಯಿಂದ ಸಂತಾನಭಾಗ್ಯ

ಒದಗಲಾಗಿ, (ಇದೊಂದು ರೀತಿ ಮಾನಸಿಕ ಯಾ ಮನೋವೈಜ್ಞಾನಿಕ ಸಿದ್ಧತೆಯ ಒಂದು ಸಂಕೇತವೂ ಆಗಿರಬಹುದು). ಅವರು ಇಲ್ಲಿಗೆ ನಡೆದುಕೊಳ್ಳುತ್ತಾರಂತೆ. ಇಲ್ಲಿಯೂ ವೀರಭದ್ರ ಉತ್ಸವ ಸಂದರ್ಭದಲ್ಲಿ, ಸೋಮವಾರ 'ಎಳೆವಾರ'ದ ಸೌದೆ ಕೊಂಡಕ್ಕೆ ಬಿದ್ದು, ಮಂಗಳವಾರ ಬೆಳಗ್ಗೆ ಎಂಟು ಗಂಟೆಗೆ ಕೊಂಡ ನಡೆಯುತ್ತದೆ. ಆರಸುಮನೆತನದವರು ಉತ್ಸವಗಳನ್ನು ನಡೆಸುತ್ತಾರೆ. ಗಾಣಿಗರು, ಗೌಡ ಜನಾಂಗದವರೇ ವಿಶೇಷ ಸಂಖ್ಯೆಯಲ್ಲಿದ್ದು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಇಲ್ಲಿನ ವೀರಭದ್ರನೂ ಎಂದಿನ ಲಕ್ಷಣಗಳಿಂದ ಕೂಡಿ ಅವನ ಬಲಪಕ್ಕದಲ್ಲಿ ಶಿವಲಿಂಗವನ್ನು ಗರ್ಭಗೃಹದಲ್ಲಿಡಲಾಗಿದೆ. ಇಲ್ಲಿನ ಶಿಲ್ಪ ಲಕ್ಷಣಗಳಲ್ಲಿ ಗಮನಾರ್ಹವಿಷಯವೆಂದರೆ ಡಾಲುವು ಒಂದು ಲಾಕುಳ ದಂಡದಂತಿದ್ದು, ವೀರಭದ್ರನ ಎಡ ಮುಂಗೈ ಸೊಂಟಮಟ್ಟದಲ್ಲಿ ಅದನ್ನು ಎತ್ತಿ ಹಿಡಿದಿರುವುದಾಗಿದೆ.

ಇಲ್ಲಿ ಗೌರಿಹಬ್ಬದಲ್ಲಿ ಗೌರಿಕೊಂಡ, ನವರಾತ್ರಿಯಲ್ಲಿ ವೀರಭದ್ರ ಭದ್ರಕಾಳಿ ಸಹಿತವಾದ ಹಲಗೆಯನ್ನೂ ಬನ್ನಿ ಮರದ ಕೆಳಗೆ ಇಟ್ಟು ಪೂಜೆ ನಡೆಸಿ ಬನ್ನಿ ವಿತರಣೆ ಮಾಡುತ್ತಾರೆ. ವೀರಭದ್ರಮೂರ್ತಿ ಪ್ರತಿಷ್ಠೆಮಾಡಲಾಗಿ ಮೊದಲಿನ ವೀರಭದ್ರಲಿಂಗವನ್ನೂ ಬಲಕ್ಕಿಟ್ಟು ಬಸವನ ಸಹಿತ ಪೂಜೆನಡೆಯುತ್ತಿದೆ ಎಂದು ಅರ್ಚಕರಾದ, ಶ್ರೀ ಜಿ.ವಿ. ಈಶ್ವರಯ್ಯನವರು ಹೇಳುತ್ತಾರೆ.

**ಬನ್ನಿ ಮುಕ್ಕೊಡ್ಲು ವೀರಭದ್ರ :** ಇವನಿಗೆ ಮೇ ತಿಂಗಳಲ್ಲಿ ಮೂರು ದಿನ ಜಾತ್ರೆ ನಡೆಯುತ್ತದೆ. ಎಳವಾರ, ಕೊಂಡ, ವೀರಭದ್ರ ಹಲಗೆಹೊತ್ತು ಕೊಂಡ ಹಾಯುವಿಕೆ ಇತ್ಯಾದಿಗಳು ಎಂದಿನಂತೆ ಇಲ್ಲಿನ ಜನಪದ ಆಚರಣೆಗಳಲ್ಲಿವೆ. ವೀರಭದ್ರ ಹಲಗೆಯುಕೊಂಡ ಹಾಯ್ದ ಮೇಲೆ ಭಕ್ತರನ್ನು ಕೊಂಡದ ಸುತ್ತಕೂರಿಸಿ ಕೊಂಡದ ಕೆಂಡವನ್ನು 'ಕೆಂಡ ಪ್ರಸಾದ'ವಾಗಿ ಕೊಡುವುದು ಇಲ್ಲಿನ ರೂಢಿ. ಮೂರನೇ ದಿನದಂದು ವೀರಭದ್ರನಿಗೆ ದೊಡ್ಡ ತೇರು ನಡೆಯುತ್ತದೆ. ನವರಾತ್ರಿಯಲ್ಲಿ ಬನ್ನಿ ಮರಕ್ಕೆ ಕೆಂಪು ಸೀರೆ ಉಡಿಸಿ ಭದ್ರಕಾಳಿ ಸಂಕೇತವಾಗಿ ಪೂಜೆಮಾಡುತ್ತಾರೆ. ಎಂದಿನಂತೆ ಆಯುಧದಿಂದ ಬನ್ನಿ ಕಡಿದು ಹಂಚುತ್ತಾರೆ.

*ಹಲಗೂರು ವೀರಭದ್ರ*

ಕನಕಪುರ ತಾ. ಗಡಿಗ್ರಾಮ ಹಲಗೂರು ಇಂದು ಮಂಡ್ಯ ಜಿಲ್ಲೆಗೆ ಸೇರಿದ್ದು, ಮೊದಲಿಗೆ ಕನಕಪುರ ತಾಲ್ಲೂಕಿನ ಶಾಸನೋಕ್ತ ಗ್ರಾಮವೆ ಆಗಿತ್ತು. ಇಲ್ಲಿಯ ವೀರಭದ್ರನನ್ನು ನಡುಕೇರಿ ವೀರಭದ್ರನೆಂದು ಸ್ಥಾನಮಹತ್ವದ ಕಾರಣ ಕರೆಯುತ್ತಾರೆ. ವೀರಗಾಸಿ ಕಲಾವಿದ ಶ್ರೀ ಎಸ್.ಜೆ. ನಾಗರಾಜು ಅವರು ಈ ಗುಡಿಯ (ತಮ್ಮಡಿ) ಪ್ರಧಾನ ಅರ್ಚಕರಾಗಿದ್ದಾರೆ.

**ಜನಪದೋತ್ಸವಗಳು – ಆಚರಣೆಗಳು :** ಉಗಾದಿ ಆದ ೧೫ ದಿವಸಕ್ಕೆ ಗ್ರಾಮದೇವತೆ ಪಟ್ಟದಲಮ್ಮನ ಜಾತ್ರೆಯ ಸಮಯದಲ್ಲಿಯೆ ಈ ವೀರಭದ್ರನ ಉತ್ಸವಾದಿಗಳು ನಡೆಯುತ್ತವೆ. ದಲಿತರೂ ಸೇರಿದಂತೆ ಎಲ್ಲರಿಂದ ಪೂಜೆಗೊಳ್ಳುವ ಪಟ್ಟದಲಮ್ಮ 'ಏಳುಕಲ್ಲುಗಳ ಸಾಲಿನ ಸಪ್ತಮಾತೃಕೆಯರ' ಪ್ರತಿನಿಧಿಯಾಗಿದ್ದಾಳೆ. ವೀರಭದ್ರನಾದರೋ ಮಾತೃಣಾಮಭಿರಕ್ಷಕನಾಗಿ ಸಪ್ತಮಾತೃಕೆಯರ ಸಂಬಂಧ ಹೊಂದಿದವನು. ಹೀಗಾಗಿ **ಹೊಂಬಾಳೆಯನ್ನು** ವೀರಭದ್ರನ ಸನ್ನಿಧಿಯಿಂದ ಪಟ್ಟಲದಮ್ಮನ ಸನ್ನಿಧಿಗೆ ಒಯ್ಯುವಲ್ಲಿ ಆ ಪರಂಪರೆಯ ಸಂಕೇತವು ಕಾಣುತ್ತದೆ. ಸಾಮಾನ್ಯವಾಗಿ ಜಾತ್ರೆ ಗುರುವಾರ ಆರಂಭ. ಅಂದು ಮೊದಲ ಪೂಜೆಯು ರುದ್ರಾಭಿಷೇಕದಿಂದ ಆರಂಭ. ಮರುದಿನ ಶುಕ್ರವಾರ ಸಂಜೆ 'ಎಳವಾರ'ದಲ್ಲಿ ಸೌದೆರಾಶಿ ತರುತ್ತಾರೆ. ಶನಿವಾರದಂದು ಕೊಂಡ, ಪಟ್ಟಲದಮ್ಮನ (ಸಪ್ತಮಾತೃಕೆ!) ಎದುರು ನಡೆಯುತ್ತವೆ. ವೀರಭದ್ರನ ಉತ್ಸವಮೂರ್ತಿಯನ್ನು ಆ ಗುಡಿ ಎದುರು ಮೂಲಗುಡಿಯಲ್ಲಿ ಪೂಜಿಸಿದಂತೆ ಹೂ ಹೊಂಬಾಳೆಯಿಂದ ಪೂಜೆಕೊಟ್ಟು ನಂತರ ಹೊತ್ತುಕೊಂಡು ತಮ್ಮಡಿ ವೀರಗಾಸಿ ಅರ್ಚಕರು ಹಾಯುತ್ತಾರೆ. (ಮೊದಲಿಗೆ ಗುರುವಾರ ಬಂದು ಮಣ್ಣು ತೋಡಿ ಕೊಂಡಮಾಡಿ ಹಾಯುತ್ತಿದ್ದರು. ಈಗ ಉದ್ದ ೫೦ ಅಡಿಯ ಗಾರೆ ಕಟ್ಟಿದ ಕೊಂಡ ಮಾಡಿದ್ದಾರೆ).

'ಹೂ ಹೊಂಬಾಳೆ'ಯನ್ನು ವೀರಭದ್ರ ಗುಡಿಯಲ್ಲಿ ಮಾಡಿಕೊಂಡು ಊರುತ್ಸವದಲ್ಲಿ ಪಟ್ಟಲಮ್ಮನ ಗುಡ್ಡದ ಗುಡಿಗೆ (ವೀರಭದ್ರ ಗುಡಿಯಿಂದ ಸುಮಾರು ೧ ಕಿ.ಮೀ. ದೂರ) ಒಯ್ಯುತ್ತಾರೆ. ಕೊಂಡದ ದಿನ ೧೦೮ ಹೆಂಗಳೆಯರು ತಂಬಿಟ್ಟು ಆರತಿಯನ್ನು ಒಯ್ಯುತ್ತಾರೆ. ಇಲ್ಲಿ ಕೊಂಡ ಹಾಯುವುದನ್ನು 'ಗುಡ್ಡಹಾಯುವುದು' ಎನ್ನುವುದುಂಟು. ಭಾನುವಾರ ಭದ್ರಕಾಳಿ ಸಮೇತ ವೀರಭದ್ರನ ಉತ್ಸವ ನಡೆಯುತ್ತದೆ.

ವೀರಭದ್ರನಿಗೆ ಗ್ರಾಮದೇವತೆ ಹಬ್ಬದಲ್ಲಿ 'ಹೂ ಹೊಂಬಾಳೆ' ಮುಡಿಸುವಂತೆ, ಗೌರಿಹಬ್ಬ ಹಾಗು ಗಣೇಶ ಚೌತಿಯಲ್ಲೂ ಹೊಂಬಾಳೆ ಮುಡಿಸಿ ಪೂಜಿಸುತ್ತಾರೆ. ಇದನ್ನು 'ಹೂ ಹೊಂಬಾಳೆ' ಮಾಡುವುದು ಎನ್ನುತ್ತಾರೆ. ಹಳೆ ನಿಜಗಲ್ಲಿನ

ವೀರಭದ್ರನಿಗೆ ಭದ್ರಕಾಳಿ ಸಹಗಾಮಿ ಶಿಲ್ಪವಾಗಿರುವ ಕಾರಣ ಅಲ್ಲಿ ಹೊಂಬಾಳೆ ಪೂಜೆ ಕೊಡುತ್ತಾರೆ. ಹಾಗೆಯೇ ಹಲಗೂರು ವೀರಭದ್ರನ ಉತ್ಸವಮೂರ್ತಿಗೆ (ಉತ್ಸವ ಬೇರ)



ವೀರಭದ್ರ ಹಲಗೆಗಳು ಮತ್ತು ಕೊಂಡದ ಬಳಿ ವೀರಗಾಸಿ ಕಲಾವಿದರು

ಭದ್ರಕಾಳಿಮೂರ್ತಿ ಸಹಗಾಮಿಯಾಗಿ ಇರುವಲ್ಲಿ ಹೊಂಬಾಳೆ ಪೂಜೆ ಆಕೆಯ ಸಂಕೇತವಾಗಿ ಇಲ್ಲಿ ನಡೆಯುತ್ತದೆ ಎನ್ನಬೇಕು.

ನವರಾತ್ರಿಯಲ್ಲಿ ಪಟ್ಟಕ್ಕೆ ಕೂರಿಸಿದ ವೀರಭದ್ರನಿಗೆ : ವಿಜಯದಶಮಿಯಂದು ಭದ್ರಕಾಳಿ ಸಮೇತವಾಗಿ ಉತ್ಸವಮೂರ್ತಿಗಳನ್ನು ಗುಡಿಯ ಬಳಿ ಇಟ್ಟು ತೋರಣಕಟ್ಟೆ ಕತ್ತಿಯಿಂದ ಬನ್ನಿ ಕಡಿದು ತಂದು ಬನ್ನಿ ಅಲಂಕಾರಮಾಡುತ್ತಾರೆ. ಖಡ್ಗವನ್ನು ವೀರಗಾಸಿಗಳು ಹೇಳುತ್ತಾರೆ. ಬನ್ನಿ ಪ್ರಸಾದವನ್ನು ಎಲ್ಲರಿಗೂ ಹಂಚುತ್ತಾರೆ. ಕಾರ್ತೀಕದಲ್ಲಿ ನಾಲ್ಕು ವಾರವೂ ದೀಪೋತ್ಸವ ನಡೆಯುವಲ್ಲಿ ಕೊನೆಯ ಅಮಾವಾಸ್ಯೆಯಂದು ೧೦೦೧ ದೀಪ ಹಚ್ಚುತ್ತಾರ.

ಹಲಗೂರಿನ ಆಗ್ನೇಯಕ್ಕೆ ದೂರದಲ್ಲಿ ಬಸವನ ಬೆಟ್ಟವಿದೆ. ಊರಿನ ಯಾವುದೇ ಹಬ್ಬವಾಗಲಿ, ವೀರಭದ್ರ ಉತ್ಸವವಾಗಲಿ ಅದಕ್ಕೆ ಮುನ್ನ ಆ ಬೆಟ್ಟಕ್ಕೆ ಹೋಗಿ ದೇವರನ್ನು ಕರೆದುತರುವ ರೂಢಿ ಇದೆ. ಪಟ್ಟದಲಮ್ಮನ ಜೊತೆಗೆ 'ಲಿಂಗು' – ಅಲ್ಲಿರುವ ಈಶ್ವರ ದೇವರನ್ನು ಕರೆದುತರುತ್ತಾರೆ.

**ಗುಡಿಯ ವೀರಭದ್ರ ಲಕ್ಷಣಗಳು** : ಸುಮಾರು ೫ ಅಡಿ ಎತ್ತರದ ಈ ವೀರಭದ್ರ ಷಡ್ಭುಜನಾಗಿ ಸ್ಥಾನಕ ದ್ವಿಭಂಗಿಯಲ್ಲಿದ್ದಾನೆ. ಬಲ ಎರಡು ಹಿಂಗೈಗಳಲ್ಲಿ ತ್ರಿಶೂಲ ಹಾಗು ಬಾಣ, ಬಲಮುಂಗೈಯಲ್ಲಿ ನೀಳ ನೇರ ಖಡ್ಗವಿದೆ. ವಿಶೇಷವೆಂದರೆ ಸಾಮಾನ್ಯವಾಗಿ ಬಾಣವು ಮೇಲ್ಮುಖವಾಗಿ ಹಿಡಿಯಲ್ಪಟ್ಟಿರುತ್ತದೆ. ಆದರೆ ಇಲ್ಲಿ ಬಾಣದ ತುದಿ ಕೆಳಮುಖವಾಗಿ



ಹಲಗೂರು ವೀರಭದ್ರ ಶಿಲ್ಪದ ವಿವರಗಳು

ಕೆತ್ತಲ್ಪಟ್ಟಿದೆ. ಎಡ ಎರಡು ಹಿಂಗೈಗಳಲ್ಲಿ ಡಮರು ಮತ್ತು ಬಿಲ್ಲುಗಳಿವೆ. ಬಲಹಿಂಗೈ ಡಮರು ಹಿಡಿಯುವ ಬದಲು ತ್ರಿಶೂಲ; ಎಡ ಹಿಂಗೈ ತ್ರಿಶೂಲ ಹಿಡಿಯುವ ಬದಲು ಡಮರು ಹಿಡಿದಿರುವುದು ವಿಶೇಷ. ಶಿಲ್ಪಿಯ ದೃಷ್ಟಿಯೂ ಇದಕ್ಕೆ ಕಾರಣವಿರಬಹುದು. ಎಡಮುಂಗೈ ಡಾಲುವಿನ ಮೇಲೆ ಇಳಿಪು ಸ್ಪರ್ಶದಲ್ಲಿದೆ. ವಿಶೇಷವೆಂದರೆ ಡಾಲುವಿನ ಕೆಳಗೆ ದಕ್ಷರುಂಡವಿರುವ ಬದಲು, ಪೂಜಾಭಂಗಿ (!)ಯ ಪ್ರಸೂತಿಯನ್ನು ಪಾರ್ಶ್ವಕ್ಕೆ ಕೆತ್ತುವ ಬದಲು ಡಾಲುವಿನ ಕೆಳಗೇ ಕೆತ್ತಲಾಗಿದೆ. ಬಲಕ್ಕೆ ಎಂದಿನಂತೆ ಟಗರುದಲೆಯ ಪ್ರಣಾಮ ಸಮಭಂಗಿಯಲ್ಲಿ ಸ್ಥಾನಕ ದಕ್ಷನಿದ್ದಾನೆ. ಶಿರದ ಕರಂಡ ಮುಕುಟದ ಪೂರಿತ (ಮುಂದೆ) ಭಾಗದಲ್ಲಿ ಶಿವಲಿಂಗವಿದೆ. ಚಾಚಿ ಎತ್ತಿದೆ ಹುರಿಮೀಸೆ, ಕೋರೆಹಲ್ಲು, ಭುಜಕೀರ್ತಿ ಕೇಯೂರಭೂಷಿತರುವ ಈ ಮೂರ್ತಿ, ಎಡಭುಜದಿಂದ ಬಲಮಂಡಿಯುವರೆಗೆ ರುಂಡಮಾಲೆಯನ್ನು ಹೊಂದಿದ್ದಾನೆ; ಹಾವುಗೆಯ ಮೇಲಿರುವ ಪಾದಗಳಲ್ಲಿ ಎಡಪಾದ ಎಡಪಾರ್ಶ್ವೋದಯದಲ್ಲಿದೆ. ಈ ವೀರಭದ್ರನಿಗೆ ಇದ್ದ, ೪೦ ಎಕರೆ ಕೊಡುಗೆ ಜಮೀನಿನಲ್ಲಿ ಅರ್ಚಕರಿಗೆ ಈಗ ಉಳಿದಿರುವುದು ೧೦ ಎಕರೆಯಂತೆ.



ವೀರಭದ್ರ – ಭದ್ರಕಾಳಿಯರ ಉತ್ಸವ ಮೂರ್ತಿಗಳು

**ಉತ್ಸವಮೂರ್ತಿ (ಉತ್ಸವಬೇರ)** : ವೀರಭದ್ರ, ಭದ್ರಕಾಳಿಯರು ಪಂಚಲೋಹದ ಶಿಲ್ಪಗಳಾಗಿ ಎಂದಿನ ತಮ್ಮ ನಿಗದಿತ ಲಕ್ಷಣಗಳನ್ನು ಹೊಂದಿವೆ. ಆದರೆ ಡಾಲುವಿನ ಕೆಳಗೆ ಎರಡೂ ಶಿಲ್ಪಗಳು ನಾಗಹೆಡೆಗಳನ್ನು ಹೊಂದಿರುವುದನ್ನು ನೋಡಿದರೆ, ಸಪ್ತಮಾತೃಕೆಯರ (ಪಟ್ಟಲದಮ್ಮ) ಸಂಬಂಧವನ್ನು ಗಮನಿಸಿದರೆ, ತಾಂತ್ರಿಕ–ವೈದಿಕಾರಾಧನೆಯ ಸಂಕೇತವಾಗಿ ಈ ದಂಪತಿ ಉತ್ಸವಬೇರಗಳು ಕಾಣುವಂತಿವೆ. (ಆದರೆ ಗುಡಿಯಲ್ಲಿ ಭದ್ರಕಾಳಿ ವಿಗ್ರಹ ಪ್ರತ್ಯೇಕ ಇಲ್ಲ). ಇವಲ್ಲದೆ ವೀರಭದ್ರ ಹಲಗೆಗಳೂ ಆಕರ್ಷಕವಾಗಿದ್ದು ರಕ್ಷಿತವಾಗಿವೆ.

ಹೀಗೆ ಕನಕಪುರ ಪರಿಸರದ ಪ್ರದೇಶದಲ್ಲಿ ವೀರಭದ್ರಾರಾಧನೆಯು ರಾಜಮಾನಿತವಾಗಿ, ಮನಃಕುಂಡಲಿಯ ತಾಂತ್ರಿಕ ವೈದಿಕ ಆರಾಧನೆಯ ಸಂಕೇತವಾಗಿ, ಶರಣರ ಸ್ಮರಣೆಗಳ ಸಂಕೇತವಾಗಿ ವೀರಶೈವರಲ್ಲದೆ, ಎಲ್ಲ ಜನಾಂಗಗಳವರಿಂದ ನಡೆಯುತ್ತಿರುವುದು, ಶ್ರೀ ದೇಗುಲ ಸ್ವಾಮಿಗಳನ್ನು ಭಕ್ತಜನತೆಯು ವೀರಭದ್ರಜಾತ್ರೆ, ಉತ್ಸವ ಸಂದರ್ಭದಲ್ಲಿ ತಮ್ಮಲ್ಲಿಗೆ ಕರೆಸುವುದು : ಹಾಗು ಜನಪದ ಆಚರಣೆಗಳನ್ನು ತುಂಬಿಕೊಂಡಿರುವಲ್ಲಿ ಶೋಷಣೆ, ಅಹಂಕಾರದ ವಿರುದ್ಧ, ವೀರಭದ್ರ ದಂಪತಿಗಳ ಹೋರಾಟದ ಸಂದರ್ಭದ ಸಂಕೇತವನ್ನು ಜನತೆ ಪಾಲಿಸಿರುವುದು ವಿಶೇಷ ಗಮನ ಸೆಳೆಯುತ್ತದೆ.

*

---

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ.
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚೆಲುವಂಗೆ ನಾನೊಲಿದೆ ಎಲೆ ಅವ್ವಗಳಿರಾ !
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು.
ಸೀಮೆಯಿಲ್ಲದ ನಿಸ್ಸೀಮಂಗೊಲಿದೆ ನಾನು.
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ
ಮಿಗೆ ಮಿಗೆ ಒಲಿದೆ ಎಲೆ ಅವ್ವಗಳಿರಾ.

– ಅಕ್ಕಮಹಾದೇವಿ

# ಭಾರತೀಯ ಪರಿಕಲ್ಪನೆಯಲ್ಲಿ ಜಗತ್ತು ಮತ್ತು ಕಾಲಾವಣದಲ್ಲಿ ಶಿವ *

ಮೂಲ ಲೇಖಕರು : **ಎಲ್.ಕೆ. ಶ್ರೀನಿವಾಸನ್,**

(ಮಾಜಿ ನಿರ್ದೇಶಕರು, ಆರ್ಕಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾ)

**ಕನ್ನಡಾನುವಾದ – ಎಂ.ಜಿ. ನಾಗರಾಜ್**



ಶಿವನ ಸಾಂಕೇತಿಕ ರೂಪವೇ ಲಿಂಗ. ಅದು ಯೋನಿಪಟ್ಟವೆನಿಸಕೊಳ್ಳುವ **ಪೀಠ** ಎಂಬ, ಭಾಗಕ್ಕೆ ಸೇರಿಸಿರುವಂಥದ್ದು. ಶಿವನ ಈ ನೆಲೆಯನ್ನು ಹೊಂದಿರುವ ವಾಸ್ತುರಚನೆಯ ದೇಗುಲವನ್ನೆ ಶಿವಾಲಯ ಎನ್ನುತ್ತಾರೆ. ಈ ಪ್ರತಿಯೊಂದು ಭಾಗಗಳ ಉಗಮರೂಪವು ಹೋಲಿಕೆ ಇಲ್ಲದ ಅಸಾದೃಶ್ಯ ವಸ್ತುಗಳಂತಿದ್ದು ಅವೆಲ್ಲವು ವಿವಿಧ ಹಂತಗಳಲ್ಲಿ (ಕಾಲಗಳಲ್ಲಿ) ಶಿವನ ಆರಾಧನೆಯೊಡನೆ ಸಂಬಂಧಗೊಂಡು ಬಂದುವು. ಈ ಸಂದಭವಾಗಿ ಶಿವನ 'ಸಕಲ' ರೂಪ (ಮೂರ್ತಿರೂಪ, ವ್ಯಕ್ತರೂಪ) ಹಾಗೂ ನಿಷ್ಕಲ ರೂಪ (ರೂಪಾತೀತ - ಅವ್ಯಕ್ತರೂಪ)ಗಳ ಆರಾಧನೆಯ ಉಗಮದ ಕಾಲವನ್ನು ತಿಳಿಯಬೇಕಿದೆ.

ಪುರಾತತ್ತ್ವೀಯ ಉತ್ಖನನದಿಂದ ದೊರೆತಿರುವ ಸಾಕ್ಷ್ಯಗಳನ್ನು ಪರಿಶೀಲಿಸಿದರೆ, ಶಿವನ ಉಪಾಸನಾ ಪದ್ಧತಿಯ ಕಾಲವು ಸರಸ್ವತಿ-ಸಿಂಧೂ ನಾಗರೀಕತೆಯು ಕಾಲದ್ದಾಗಿರುವುದು ಎಂದು ತಿಳಿಯುತ್ತದೆ. ಇದು ನಮ್ಮ

---

* ಮೂಲ ಲೇಖನ ಆಂಗ್ಲಭಾಷೆಯದು. ದಕ್ಷಿಣ ಕನ್ನಡ ಜಿಲ್ಲೆಯ ಪಣಂಬೂರು ನಂದಿನೇಶ್ವರ ದೇಗುಲದ ಸ್ಮರಣ ಸಂಚಿಕೆಯು **ಈಶ್ವರ ದರ್ಶನ,** ೨೦೦೧ ರಲ್ಲಿ ಪ್ರಕಟವಾಗಿದ್ದು, ಕನ್ನಡಾನುವಾದವನ್ನು ಮಾಡಿಕೊಡಲು ಡಾ ಎಂ. ಚಿದಾನಂದಮೂರ್ತಿ ಅವರ ಮೂಲಕ ನನ್ನನ್ನು ಶ್ರೀ ಶ್ರೀನಿವಾಸನ್ ಅವರು ವಿನಂತಿಸಿ ನಂತರ ಕನ್ನಡದ ಸ್ಮರಣ ಸಂಚಿಕೆಯಲ್ಲೂ ಪ್ರಕಟಿಸಬೇಕೆಂದು ಅವರು ಬದುಕಿದ್ದಾಗ ಕೋರಿದ್ದರು. ಅವರ ಆಶಯವನ್ನು ಸದ್ಯ ಗೌರವಿಸಲಾಗಿದೆ.

ಭಾರತ ಉಪಖಂಡದಲ್ಲಿ ಕ್ರಿ. ಪೂ. ಮೂರು ಸಾವಿರ ವರ್ಷದಷ್ಟು ಹಿಂದಿನ ಹಾಗೂ ಜನಪ್ರಿಯವಾಗಿ ಕರೆಯುವ 'ಹರಪ್ಪ ಸಂಸ್ಕೃತಿಯ' ಕಾಲವಾಗಿದೆ. ಅಂತೇ ಹರಪ್ಪಾ ನಿವೇಶನಗಳಲ್ಲಿ ಇದಕ್ಕೆಲ್ಲ ಉತ್ಖನನದಿಂದ ದೊರೆತ ವಾಸ್ತವಿಕ ಸಾಕ್ಷ್ಯಗಳಾದರೋ ಪರಿಶೀಲನಾರ್ಹವಾಗಿವೆ.

ಹರಪ್ಪ ಸಂಸ್ಕೃತಿಯ ಕಾಲದಲ್ಲಿ 'ಶಿವ-ಪಶುಪತಿ'ಯು ಲಿಂಗರೂಪದಲ್ಲಿ ಆರಾಧಿಸಲ್ಪಡುತ್ತಿತ್ತು ಎಂದು ಕೆಲ ವಿದ್ವಾಂಸರ ಅಭಿಮತವಾಗಿದೆ. ಇದಕ್ಕೆ ಮೊಹೆಂಜದಾರೋವಿನಲ್ಲಿ ದೊರೆತ ದುಂಡು ಶಿಲೆಗಳು ಹಾಗೂ ಲಿಂಗರೂಪ ವಸ್ತುಗಳ ಆಧಾರ; ಟೆರಕೋಟ ಮುದ್ರಾಫಲಕ (terracotta tablets) ಗಳಲ್ಲಿ ಅಚ್ಚುಗೊಂಡಿದ್ದ ಮೇಕೆ ಸಹಿತನಾದ ಕೊಂಬು ಶಿರೋವೇಷದ ದೇವತೆಯ ಸ್ವರೂಪ, ಸಿಂಧೂ ಮುದ್ರೆಗಳ ಮೇಲೆ ಶಿವಪಶುಪತಿ ಎಂದು ಗುರುತಿಸಲಾಗಿರುವ ಮೂರು ಕೊಂಬುಗಳ ತ್ರಿಶೃಂಗ ಶಿರೋವೇಷದ ಯೋಗಿ ಹಾಗೂ ಕಾಲಿಬಂಗನ್, ಲೋಥಾಲ್ ಮತ್ತು ದೋಲ್‌ವಿರ ಮುಂತಾದ ಕಡೆ ಕಂಡುಬಂದಿರುವ ಶಿವ-ನಟರಾಜನ ತದ್ರೂಪ ಎಂದು ಪರಿಭಾವಿಸಲಾದ ಪುರುಷ ಶಿಲಾ ಶಿಲ್ಪ ಇತ್ಯಾದಿ ಇವುಗಳ ಆಧಾರದ ಮೇಲೆ ಲಿಂಗರೂಪ ಶಿವಪಶುಪತಿ ಆರಾಧನೆ ಇತ್ತು, ಎಂಬುದು ಆ ವಿದ್ವಾಂಸರ ಅಭಿಮತಕ್ಕೆ ಕಾರಣವಾಗಿದೆ.

ಈ ನಿಲುವಿಗೆ ಪೂರಕ ಸಾಕ್ಷ್ಯವನ್ನು ಸಿಂಧೂ ಮುದ್ರಿಕೆಗಳ ಮೇಲಿರುವ ಗೂಳಿ (ವೃಷಭ) ಹಾಗೂ ತ್ರಿಶೂಲಗಳ ಸಂಕೇತದಿಂದ ಪಡೆದುಕೊಳ್ಳಲಾಗಿದೆ. ಹರಪ್ಪನ್ ಸಂದರ್ಭದಿಂದಲೂ ಇದನ್ನು ಹೆಕ್ಕಲಾಗಿದೆ. ಪುಷ್ಟ ಮಾನವಾಕೃತಿಯೊಂದು, ಬೆನ್ನಮೇಲೆ ಹಿಣಿಲು, ತಲೆಯಲ್ಲಿ ಕೊಂಬು ಹೊಂದಿರುವ ಜೋಡಿ ಗೂಳಿಗಳು ಎಳೆಯುತ್ತಿರುವ ಕಂಚಿನ ಘನ ರಥದ ಸಾರಥ್ಯವಹಿಸಿರುವ ಶಿಲ್ಪವದಾಗಿದೆ. ಈ ಕಂಚಿನ ಆಕೃತಿಯ ಕಾಲವನ್ನು ಕ್ರಿ.ಪೂ. ಮೂರು ಸಾವಿರ ವರ್ಷದ್ದೆನ್ನಬಹುದಾಗಿದೆ. ಮಹಾರಾಷ್ಟ್ರದ ದಿಯಾಂಬಾದ್‌ನಲ್ಲಿ ದೊರೆತ ಈ ಆಕೃತಿಯನ್ನು ರಥಪತಿಯಾದ ರುದ್ರ ಎಂದು ಗುರುತಿಸಲಾಗಿದೆ. ವೈದಿಕ ಸೂಕ್ತದ ಭಾಗವೆನಿಸಿದ 'ಶತರುದ್ರೀಯ'ದಲ್ಲಿ ಶಿವನನ್ನು ರಥಪತಿ (ರಥೇಭ್ಯೋ ಪಥಪತಿಭ್ಯಶ್ಚ ವಾ ನಾಮೋ ನಮಃ) ಎಂದು ಪರಿಭಾವಿಸಲಾಗಿದೆ. ಹಾಗೂ ಕ್ರಿ.ಪೂ. ೨೦೦೦ ರ ಸುಮಾರಿನ ಕುಂಭಗಳು ಮಹಾರಾಷ್ಟ್ರದ ನವ್ದತೋ, ಆಂಧ್ರದ ಸಂಗನಪುಲ್ಲಿ ಎಂಬ ನವಶಿಲಾತಾಮ್ರಯುಗದ ನಿವೇಶನಗಳಲ್ಲಿ ಲಭ್ಯವಾಗಿವೆ. ಆ ಕುಂಭಗಳ ಮೈಮೇಲೆ ತಲೆಕೆದರಿದ ಮತ್ತು ಹಸ್ತದಲ್ಲಿ ವಜ್ರಶಿಲಾದಂಡಧಾರಿಯಾದ ತಲೆಗೊಂಬಿನ ದೇವತೆಯನ್ನು ಕೌಶಲಪೂರ್ಣವಾಗಿ ಬಿಡಿಸಲಾಗಿದೆ. ಈ ಚಿತ್ರವನ್ನೂ ವಜ್ರಬಾಹು ಎಂದು ಕರೆಯುವ ಶಿವನ ತದ್ರೂಪ ಎಂದು ಗುರುತಿಸಲಾಗಿದೆ.

ಬಿಹಾರದ ಚಿರಂದ್ (ಈಶಾನ್ಯ ಭಾರತ), ಮಹಾರಾಷ್ಟ್ರದ ಜೋರ್ವೆ ಮತ್ತು ಇನಾಮ್‌ಗಾಂವ್ ನಂಥ ತಾಮ್ರಯುಗೀನ ನಿವೇಶನಗಳಲ್ಲಿಯೂ ಟೆರಕೋಟದ ಕಿರುಲಿಂಗಗಳೂ, ಹಿಣಿಲುಳ್ಳಗೂಳಿ, ನಾಗ ಆಕೃತಿಗಳು, ತ್ರಿಶೂಲ ಇತ್ಯಾದಿಗಳು ದೊರೆತಿವೆ. ಇವು ಶಿವಾರಾಧನೆಯ ಸಂದರ್ಭವನ್ನು ಸೂಚಿಸುತ್ತವೆ.

ಭಾರತ ಪರ್ಯಾಯ ಖಂಡದ ಬೃಹತ್ ಶಿಲಾಯುಗ ಸಂದರ್ಭದ, ತಲೆಗೊಂಬಿನ ಮುಖವಾಡಗಳು ತ್ರಿಶೂಲಗಳು, ಶೂಲಗಳು, ಎಸೆಈಟಿ (ಭಲ್ಲೆ) ಇತ್ಯಾದಿಗಳು ಮಗನಾದ ಕಾರ್ತಿಕೇಯ ಮತ್ತು ದುರ್ಗೆಯರದೂ ಸೇರಿದಂತೆ ಶಿವಗಣ ಬಳಕೆಯ ವಸ್ತು ಪ್ರಭಾವ ಸೂಚಕಗಳಾಗಿವೆ. ಪ್ರಾಚ್ಯ ವಸ್ತು ಸಾಕ್ಷ್ಯಗಳ ಹಿನ್ನೆಲೆಯಲ್ಲಿ ಮೇಲ್ಕಂಡಂತೆ ವಿವೇಚಿಸಿ, ಶಿವನ ಸಕಲ ಹಾಗೂ ನಿಷ್ಕಲ ರೂಪಗಳ ಆರಾಧನೆಯು ಬಹು ಪ್ರಾಚೀನ ಕಾಲದ್ದು ಎಂದು ತಳೆದ ತೀರ್ಮಾನವು ಇಂದಿಗೂ ನಡೆದ ಮುಕ್ತ ಚರ್ಚೆಗೆ ಒಡ್ಡಿಕೊಳ್ಳುವಂಥದ್ದು. ಅದೊಟ್ಟಿಗೆ ಇರಲಿ.

ಈ ಮೇಲಿನ ವಿಷಯ ಕುರಿತಂತೆ ಸ್ಪಷ್ಟ ಚಿತ್ರವು ಇತಿಹಾಸ ಕಾಲದಿಂದ ಅಂದರೆ ವಿಶೇಷತಃ ಮೌರ್ಯ ಹಾಗು ಮೌರ್ಯಪೂರ್ವಕಾಲದಿಂದ ಒದಗುತ್ತದೆ. ಶಿವನು ತನ್ನ ವಿಶ್ವತೋ ರೂಪದಲ್ಲಿ ಸೃಷ್ಟಿ, ಸ್ಥಿತಿ, ಲಯ ಕ್ರಿಯೆಯಲ್ಲಿ ತಲ್ಲೀನವಿರುವಂಥಲ್ಲಿ ಅವನ ಮಹಾಸ್ವರೂಪವು ಈಶ ಅಥವಾ ಮಹೇಶ್ವರ ಎಂಬ ಅಭಿದಾನದಲ್ಲಿ ವ್ಯಕ್ತಗೊಂಡಂತೆ ಕಾಣುತ್ತದೆ. ಅದು ಶಿವನ ಪರಮೋಚ್ಚ ನಾಮಾಭಿದಾನ. ಪತಂಜಲಿಗೂ ಮುನ್ನವೆ ಶಿವಾರಾಧಕರ ಅಸ್ತಿತ್ವವು ತಿಳಿದದ್ದೆ. ಮೌರ್ಯರ ಕಾಲದಲ್ಲಿ ಅಶೋಕನು ಕಾಶ್ಮೀರದಲ್ಲಿ ಶಿವ ಅಶೋಕೇಶ್ವರ ಎಂಬ ದೇಗುಲ ನಿರ್ಮಿಸಿದುದೇ ಶಿವಾರಾಧನೆಯ ಸ್ಪಷ್ಟ ಸಾಕ್ಷಿ ಆಗಿದೆ. ಅಶೋಕನ ಪುತ್ರ

ಜಲುಕನು ಶಿವನ ಪರಮ ಆರಾಧಕನಾಗಿದ್ದ. ಗಾಂಧಾರ ದೇಶದಲ್ಲಿ ಉಮಾಸಹಿತನಾದ ನಂದಿವಾಹನ ಶಿವ (ಉಮಾಮಹೇಶ್ವರ) ಬಹಳ ಜನಪ್ರಿಯ ಆರಾಧ್ಯದೈವ ಗಳಾಗಿದ್ದರು. ಈ ದಿಸೆಯಲ್ಲಿ ಕಾರಕೋರಂ ಹೆದ್ದಾರಿಯ ಇಸ್ಲಾಮಾಬಾದಿನ ಈಶಾನ್ಯಕ್ಕೆ ಹಾಗು ಗಿಲ್ಗಿಟ್ಟಿನ ದಕ್ಷಿಣಕ್ಕೆ ಇರುವ ಚಿಲಾಸ್ ಎಂಬ ಸ್ಥಳದಲ್ಲಿ ಶಿವನ ಒಂದು ವಿಶಿಷ್ಟ ಪ್ರತೀಕವಿದ್ದು ಗಮನಿಸತಕ್ಕುದಾಗಿದೆ. ಇಲ್ಲಿ ಶಿವನ ಈ ರೂಪವು ದ್ವಿಭುಜ ಶಿವನಂತಿದ್ದು, ಒಂದು ಕೈಯಲ್ಲಿ ದಂಡ, ಇನ್ನೊಂದು ಕೈಯಲ್ಲಿ ಪಾಶ ಹಿಡಿದ ಸ್ಥಾನಕ ಶಿವ ಕಿರೀಟಧಾರಿಯಾಗಿ ಬಂಡಲ್ಲಿನ ಮೇಲೆ ಕೆತ್ತನೆಗೊಂಡಿದ್ದಾನೆ. ಅವನು ನಗ್ನ ಶಿವನಂತೆ ಕಾಣುತ್ತಾನೆ. ಕ್ರಿ.ಪೂ. ೧ನೇ ಶತಮಾನದ ಖರೋಷ್ಠಿ. ಶಾಸನವೊಂದರಲ್ಲಿ ಅವನನ್ನು 'ಸೇವಾಸ್' ಎಂದು ವಿವರಿಸುತ್ತ, 'ಈಶಾ ದೇವೋ ವರೇ ಅಮಹಸ ಮಹೇಶ' (ಈಶಾದೇವೋ ವರೇಹಮಹಸ್ಸ ಮಹೇಶಃ) ಎಂದು ಉಕ್ತಗೈಯಲಾಗಿದೆ. ಕುಶಾನಪೂರ್ವ, ಕುಶಾನ ಹಾಗೂ ಶೃಂಗರ ಕಾಲಾವಧಿಯಲ್ಲಿ ಶಿವನ ಲಿಂಗ (ನಿಷ್ಕಲ) ಮತ್ತು ವಿಗ್ರಹ (ಸಕಲ) ರೂಪಗಳು ಭೀತ ಮಧುರಾ ಉಜ್ಜಯಿನಿ, ಗುಮ್ಮಿ ಇತ್ಯಾದಿ ಕಡೆಗಳಿಂದ ಬಂದು ರೂಢಿಗೊಂಡ ಮುಖಲಿಂಗರೂಪದಲ್ಲಿ ಕಾಣಿಸಿಕೊಂಡಿವೆ. ಈ ಸೋದ್ಧೃತಗಳು ಸ್ಪಷ್ಟವಾಗಿ ಶಿವನ ಆರಾಧನೆಯು ವಿಗ್ರಹ-ಮೂರ್ತಿ (ಸಕಲ) ಹಾಗೂ ಅವಿಗ್ರಹ (ನಿಷ್ಕಲ) ರೂಪಗಳಲ್ಲಿ ವಾಯುವ್ಯ ಭಾರತ ಉತ್ತರ ಭಾರತ ಹಾಗೂ ಮಧ್ಯಪ್ರದೇಶಗಳಲ್ಲಿ, ಕ್ರಿ.ಶ.ದ ಆರಂಭದ ಹಾಗೂ ಪೂರ್ವದ ಶತಮಾನಗಳಲ್ಲಿ ನಡೆಯುತ್ತಿತ್ತು ಎಂದು ಸಾಬೀತು ಪಡಿಸುತ್ತವೆ.

ಈ ಸಂದರ್ಭದಲ್ಲಿ ಭೀತದ ಪಂಚಮುಖ ಲಿಂಗವು ಅತ್ಯಂತ ಪ್ರಾಚೀನ ಲಿಂಗಗಳ ಪೈಕಿ ಒಂದಾಗಿರುವ ಕಾರಣ ವಿಶೇಷ ಗಮನಾರ್ಹವೆನಿಸುತ್ತದೆ. [ಕೆಲವು ವಿದ್ವಾಂಸರು ಭೀತಲಿಂಗವನ್ನು ಪಂಚಮುಖಲಿಂಗದೊಡನೆ ಸಮೀಕರಿಸು ವುದನ್ನು ಸಮ್ಮತಿಸುವುದಿಲ್ಲ; ಬಹುತೇಕ ಸ್ಮಾರಕ ಶಿಲೆ ಎನಿಸುವ ಶಕ್ತಿಸಹಿತನಾದ ಪ್ರತೀಕ ಎಂದು ಪರಿಭಾವಿಸು ತ್ತಾರೆ. ಆದರೆ ಲಿಂಗದ ಅಡಿಭಾಗದಲ್ಲಿ (ಕೆಳಗೆ) ಪುರುಷಲಿಂಗ ದಂಥ ಸಂಕೇತವನ್ನು ಕೆತ್ತಿರುವುದು ಹಾಗೂ ಶಾಸನಗಳ ಸಾತಕ್ಷ್ಯಗಳು ಅದನ್ನು ಪಂಚಮುಖ ಲಿಂಗದೊಡನೆ ಸಮೀಕರಿಸುವ ವಿಷಯಕ್ಕೆ ಒತ್ತುಕೊಡುವಂತಿವೆ. ಹೀಗಾಗಿ ಭೀತಲಿಂಗವನ್ನು, ಮುಖಲಿಂಗಗಳ ಕುರಿತ ವಿವೇಚನೆಯಲ್ಲಿ ಪಂಚಮುಖಲಿಂಗವೆಂದೇ ಗುರುತಿಸಬೇಕಾಗುತ್ತದೆ]. ಈ ವಿಶಿಷ್ಟ ಲಿಂಗ ಮಾದರಿಯ ವಿಶೇಷವೆಂದರೆ ಲಿಂಗದ ನಾಲ್ಕು ಪಾರ್ಶ್ವಗಳಲ್ಲಿ ನಾಲ್ದಿಸೆಗಳಲ್ಲಿ ಶಿವನ ಎದೆಮಟ್ಟದ ವಿಗ್ರಹಭಾಗಗಳಿರುವುದಾಗಿದೆ, ಹಾಗೂ ಲಿಂಗದ ನೆತ್ತಿ ಭಾಗದಲ್ಲೂ ಆಕಾಶಮುಖಿ ಯಾಗಿರುವ ಅದೇ ಬಗೆಯ ಶಿವನ ವಿಗ್ರಹವಿರುವುದಾಗಿದೆ. ಅಂದರೆ ನಿಷ್ಕಲರೂಪದ ಲಿಂಗ ಐದು ಪಾರ್ಶ್ವಗಳಲ್ಲಿ ಅರೆ ಸಕಲರೂಪದ ಶಿವನನ್ನು ಸಂಯುಕ್ತಗೊಳಿಸಿರುವುದು ಅಲಹಾಬಾದ್ ಬಳಿಯ ಭೀತ ಎಂಬಲ್ಲಿ ಕಂಡು ಬಂದಿರುವುದಾಗಿದೆ. ಸದ್ಯ ಈ ವಿಶಿಷ್ಟಲಿಂಗವನ್ನೂ ಲಕ್ನೋದ ಮ್ಯೂಸಿಯಂನಲ್ಲಿ ರಕ್ಷಿಸಿಡಲಾಗಿದೆ. ಈ ಲಿಂಗದ ಇನ್ನೊಂದು ವಿಶೇಷವೆಂದರೆ ಕ್ರಿ.ಪೂ. ೧ನೆಯ ಶತಮಾನಕ್ಕೆ ಸೇರಿದ ಶಾಸನ ಬರಹ ವೊಂದು ಅದರ ಮೇಲಿರುವುದಾಗಿದೆ (ASI 1909-10 Annual Report, Plate L IV), ಈ ಶಾಸನವು ಸ್ಪಷ್ಟವಾಗಿ 'ಲಿಂಗ' ವೆಂದು ಹೆಸರಿಸಿ ಅದು ವಾಸಿತಿಪುತ್ರ ನಾಗಶ್ರೀ ಎಂಬುವನಿಂದ ಪ್ರತಿಷ್ಠೆಗೊಂಡಿತು ಎಂದಿದೆ.

**ಶಾಸನ ಪಾಠ**

ಖಜಹತಿ-ಪುತಾನಂ ಲ (ಇಂ) ಗೋ ಪತಿಠಾಪಿಟೋ ॥
ವಾಸಿಠಿ-ಪುತೇನ ನಾಗಸಿಲಿನಾ ಪಿಯಥಾ [ಮ್] ದೆ (ಂ)
ವಥಾ ॥

– ಕಜಹುತಿಯ ಮಕ್ಕಳ, ಶಿವಲಿಂಗವು ವಾಸಿಠಿಯ ಪುತ್ರ ನಾಗಶ್ರೀ ಯಿಂದ ಅರ್ಪಿಸಲ್ಪಟ್ಟಿದೆ. ದೇವರಿಗೆ ಇದು ಪ್ರೀತ್ಯರ್ಥವಾಗಲಿ.

ಈಗಾಗಲೇ ತಿಳಿಸಿರುವಂತೆ ಕ್ರಿ.ಶಕೆಯ ಆರಂಭದ ಮುನ್ನಿನ ಶತಮಾನಾಂತ್ಯದಲ್ಲಿ ಶಿವನ ಕಾರ್ಯಗಳನ್ನು ಮುಖ್ಯವಾಗಿ ಸೃಷ್ಟಿ, ಸ್ಥಿತಿ ಹಾಗೂ ಲಯ ಎಂಬ ವಿಭಾಗಗಳಾಗಿ ಗುರುತಿಸಲಾಗಿತ್ತು. ಅದು ಪರಮೋಚ್ಚ ದೇವನಾದ 'ಮಹೇಶ್ವರ' ಅಥವಾ 'ಮಹೇಶ' ಎಂಬ ಅಭಿದಾನವು ಶಿವನಿಗಿದ್ದುದರಿಂದಲೇ ಸ್ಪಷ್ಟವಾಗಿತ್ತು. ಮೇಲ್ಸೂಚಿತ ಖರೋಷ್ಠಿ ಶಾಸನವೆ ಇದಕ್ಕೆ ಸಾಕ್ಷಿ ಆಗಿದೆ. ಶಿವನ ಈ ಕಾರ್ಯಗಳ ಜೊತೆಗೆ ಕಾಲಾಂತರದಲ್ಲಿ ಕಂಚಿನ ಹಾಗು ಶಿಲಾವಿಗ್ರಹರೂಪದಲ್ಲಿ ರೂಪಿಸಿದ ನಟರಾಜನಿಗೆ

ಅನ್ವಯವಾದ ಅನುಗ್ರಹ ಹಾಗೂ ತಿರೋಭಾವ ಕ್ರಿಯೆಗಳು ಸೇರಿ ಪಂಚಕ್ರಿಯೆ (ಪಂಚಕಾರ್ಯ)ಗಳು ಶಿವನಿಗೆ ಆರೋಪಿತವಾದುವು.

ಈ ಐದು ಪ್ರಾತಿನಿಧಿಕ ಶಿವಕಾರ್ಯಗಳ ಜೊತೆಗೆ, ವಿಶಿಷ್ಟ ತಾತ್ವಿಕ ಹಾಗೂ ಗೋಪ್ಯ ದೀಕ್ಷಾ ನೆಲೆಯಲ್ಲಿ ಶಿವನನ್ನೂ ವಿಶ್ವದ ಐದು ಮೂಲ (ವಸ್ತು) ತತ್ವಗಳೊಡನೆ ಅಂದರೆ ಪ್ರಥ್ವಿ, ಅಪ್ಪು ವಾಯು ಅಗ್ನಿ (ತೇಜ) ಮತ್ತು ಈಶಾನ (ವಾಯು-ಆಕಾಶ) ತತ್ವಗಳೊಡನೆ ಸಂಯುಕ್ತ ಗೊಳಿಸಲಾಯಿತು. ಇಂಥ ವ್ಯಕ್ತಿತ್ವಾರೋಪಣ ಅಥವಾ ವ್ಯಕ್ತೀಕರಣ ಅಥವಾ ಮೂರ್ತಭಾವದ, ಪರಿಕಲ್ಪನೆಯಲ್ಲಿ ಪೂರ್ವಮುಖ ತತ್ಪುರುಷ, ದಕ್ಷಿಣಮುಖ ಅಘೋರ, ಪಶ್ಚಿಮಮುಖ ಸದ್ಯೋಜಾತ, ಉತ್ತರಮುಖ ವಾಮದೇವ, ಆಕಾಶಮುಖಿ ಈಶಾನ ಇವೆಲ್ಲವನ್ನೂ ಏಕೀಭವಿಸಿದ ದೈವಿಕಕಲ್ಪವಾಗಿ ತತ್ವ ಅಥವಾ ಸದಾಶಿವ ತತ್ವವೆಂದು ಕರೆಯಲಾಗಿದೆ. ಈ ಪರಿಕಲ್ಪನೆಯು ಕ್ರಿ.ಪೂ. ಮೂರನೆ ಶತಮಾನದ ತೈತ್ತರೀಯ ಅರಣ್ಯಕದ ನಾರಾಯಣೋಪ ನಿಷತ್ತಿನಿಂದ ಮೂಡಿಬಂದಿದೆ. ಅದರ ಅನುಗುಣ ಮಂತ್ರ ಶ್ಲೋಕಗಳು ಹೀಗಿವೆ.

*ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಯ ವೈ ನಮಃ ||*
*ಭವೇ ಭವೇ ನಾತಿಭವೇ ಭಜಸ್ವ ಮಾಮ್ ಭವೋದ್ಭವಾಯ ನಮಃ ||*
*ವಾಮದೇವಾಯ ನಮೋ ಜೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ||*
*ನಮಃ ಕಲವಿಕರ್ಣಾಯ ನಮೋ ಬಲವಿಕರ್ಣಾಯ ನಮೋ ಬಲಪ್ರಮಥನಾಯ ನಮಃ ||*
*ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ||*
*ಅಘೋರೆ ಭ್ಯೋಽಥ ಘೋರೇ ಭಯೋ ಘೋರ-ಘೋರ ತರೇಭ್ಯ:*
*ಸರ್ವತಃ ಸರ್ವ ಸರ್ವೇಭ್ಯೋ ನಮಸ್ತೇ ಅಸ್ತು ರುದ್ರ-ರೂಪೇಭ್ಯಃ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀ ಮಹೇ ತನ್ನೋಽ ರುದ್ರಃ ಪ್ರಚೋದಯಾತ್*
*ಈಶಾನಃ ಸರ್ವವಿದ್ಯಾನಾಂ ಈಶ್ವರಃ ಸರ್ವಭೂತಾನಾಂ ಬ್ರಹ್ಮ ದೀಪತಿರ್ಽ ಬ್ರಹ್ಮನೋಽ ಧಿಪತಿರ್ಽ ಬ್ರಹ್ಮಾ ಶಿವೋ ಅಸ್ತು ಸದಾಶಿವೋಂ ||*

ತೈತ್ತರೀಯ ಅರಣ್ಯಕದ ಈ ಮೇಲಿನ ಶ್ಲೋಕಗಳು ಮೂಲತಃ ಸ್ತೋತ್ರರೂಪದವಾಗಿದ್ದು ಶಿವನ ಪಂಚಮುಖ ತತ್ವದ ಪ್ರತಿಯೊಂದಕ್ಕೂ ಆರೋಪಿತ (ವಿಶೇಷಣವನ್ನು / ಉಪಾಧಿಯನ್ನು) ಹೇಳಲಾಗಿದೆ. ಈ ಶ್ಲೋಕದ ಯಾವ ಅಂಶವೂ ಯಾವುದೇ ಪ್ರತಿಮಾ ಶಿಲ್ಪದ ಸೂಚನೆಯನ್ನಾಗಲಿ ಅಥವಾ ಯಾವುದೇ ಪ್ರಾತ್ಯಕ್ಷಿಕೆಯನ್ನು (ಮೂರ್ತರೂಪ) ನೀಡುವುದಿಲ್ಲ. ಆದರೆ ಆರೋಪಿತ ವಿಶೇಷಣ - ಉಪಾಧಿಗಳು ಪಂಚವಕ್ತ್ರನೆನಿಸುವ ರುದ್ರ ಅಥವಾ ಶಿವನಿಗಲ್ಲದೆ ಬೇರಾವ ದೈವತಗಳಿಗಿಲ್ಲ. ಸದ್ಯೋಜಾತನಿಗೆ ಭವೋದ್ಭವ, ವಾಮದೇವನಿಗೆ ಸರ್ವಭೂತದಮನ, ಅಘೋರನಿಗ ಘೋರ ಘೋರತರ, ತತ್ಪುರುಷನಿಗೆ ಮಹಾದೇವ, ಈಶಾನನಿಗೆ ಈಶ್ವರಃ ಎಂಬ ಉಪಾಧಿಗಳು ಅರ್ಥವತ್ತಾಗಿವೆ. ಹಾಗೂ ಈ ಉಪಾಧಿಗಳು ಪಂಚಮುಖಲಿಂಗದ ಸೃಷ್ಟಿ ಕಾರಣನ ಮಹೋನ್ನತ (ಅದ್ಭುತ) ಮತ್ತು ಸೃಜನ ಮನಸ್ಸಿಗೆ ಸೂಕ್ತ ಸೂಚಕ ಪ್ರೇರಣೆಗಳನ್ನು ಈ ಪ್ರತಿಯೊಂದು ಪಂಚಮುಖಗಳ ದೃಕ್ ದರ್ಶನಕ್ಕಾಗಿ ನೀಡಿರಲೇಬೇಕು. ವಾಸ್ತವವಾಗಿ, ಪ್ರಸ್ತುತ ಸಂದರ್ಭದಲ್ಲಿ ಶಿವನ ಈ ಪ್ರತಿಯೊಂದು ಮುಖವೂ, ಆತ್ಮನ್ ಅಥವಾ ಅಂತರ್‌ಚೈತನ್ಯ ಎನಿಸುವ ಬ್ರಹ್ಮನ್ ಎಂದೇ ಪರಿಗಣಿತವಾಗಿವೆ. ಈ ಸಂದರ್ಭದಲ್ಲಿ ಶಿವನಿಗೆ ಮೀಸಲಾದ ಗುಡಿಗಳೆನಿಸಿದರೂ ಆಂಧ್ರದ ಆಲಂಪುರದ ಬಳಿಯ ಕೂಡಲಿ ಸಂಗಮದಲ್ಲಿ ಮೊದಲ (ಬಾದಾಮಿ!) ಚಾಲುಕ್ಯರ ದೇಗುಲಗಳನ್ನು, ನವಬ್ರಹ್ಮ ದೇವಾಲಯಗಳೆಂದೇ ಕರೆದಿರುವುದನ್ನು ಗಮನಿಸಬೇಕು (ನೆನಪಿಸಿಕೊಳ್ಳಬೇಕು).

ಭೀತದ ಪಂಚಮುಖಲಿಂಗವು, ಲಿಂಗದ ಸಾಂಕೇತಿಕ ರೂಪ. ಹಾಗೂ ಪ್ರತಿಮಾ ರೂಪ ಸಂಯುಕ್ತಕವಾಗಿ ವಿಶ್ವದ ಪಂಚಭೌತಿಕ ವಸ್ತುಗಳನ್ನು ಪ್ರತಿನಿಧಿಸುವ ವಿಶ್ವಕೇಂದ್ರಿಯ ನಾದ ಶಿವನನ್ನು ಪ್ರಪ್ರಥಮವಾಗಿ ನಿರ್ದೇಶಿಸಿದೆ. ಇಲ್ಲಿ ಶಿವನ ಪಂಚಮುಖಗಳಲ್ಲಿ ತತ್ಪುರುಷ ಅಘೋರ*, ಸದ್ಯೋಜಾತ, ಹಾಗೂ ವಾಮದೇವ ವದನಗಳು ಲಿಂಗದ ಸುತ್ತ ನಾಲ್ಕು ಪ್ರಧಾನ ದಿಸೆಗಳತ್ತ ಮುಖಮಾಡಿರುವ ಪ್ರತೀಕವಾಗಿವೆ. ಐದನೆ ಮುಖ ಅಂದರೆ ಈಶಾನವು ಲಿಂಗದ ನೆತ್ತಿಯ ನೆಲೆಯಲ್ಲಿದ್ದು ಆಕಾಶಮುಖಿಯಾಗಿದೆ. ಇಂಥ ಶಿವನನ್ನು,

(* ಶಿವನಪಂಚ ವಕ್ತ್ರಗಳಲ್ಲಿ ಅಘೋರ ಮುಖವನ್ನು ಸ್ಪಷ್ಟವಾಗಿ ಗುರುತಿಸಬಹುದು)

ಅವನ ಎಡಗೈಯಲ್ಲಿ ಕಳಶ ಅಥವಾ ಕುಂಭ, ಬಲಗೈ ಅಭಯಹಸ್ತವಿರುವಂತೆ ಚಿತ್ರಿಸಲಾಗುತ್ತದೆ. ಪಂಚವಕ್ತ್ರ ಶಿವನ ಈಶಾನ ಮುಖವನ್ನು, ಅದು ಅವ್ಯಕ್ತವೆನಿಸುವ ಕಾರಣ ಸಾಮಾನ್ಯವಾಗಿ ಪ್ರತಿಮಾರೂಪದಲ್ಲಿ ತೋರುವುದಿಲ್ಲ. ಹೀಗಾಗಿ ಚತುರ್ಮುಖ ಲಿಂಗಗಳೆ ಜನಪ್ರಿಯವೆನಿಸಿವೆ. ಭೀತದ ಲಿಂಗವು ಮೊದಲ ಬಾರಿಗೆ ಪ್ರತಿಮಾ ರೂಪದಲ್ಲಿ ಶಿವನ ಐದೂ ಮುಖಗಳನ್ನು ನಿರ್ದೇಶಿಸಿ ತೋರಿ ಒಂದು ಅಪವಾದವೆನಿಸಿದೆ.

ಭೀತದ ಲಿಂಗದ ಸ್ವರೂಪವನ್ನು ಗಮನಿಸಿದರೆ, ಶಿವನ ಪಂಚವಕ್ತ್ರದ ಹಿನ್ನೆಲೆಗಿರುವ ತತ್ತ್ವ ಹಾಗೂ ವೈಲಕ್ಷಣ್ಯದ (ತಾತ್ವಿಕ ದರ್ಶನ, ವೈಶಿಷ್ಟ್ಯ) ವಿಶಿಷ್ಟತೆಯು ಕ್ರಿ.ಪೂ. ೧ನೇ ಶತಮಾನದ ವೇಳೆಗೆ ಪ್ರಚಲಿತವಾಗಿದ್ದುದರ ಸಂಭವ ವಾಗಿದೆ. ಆದರೆ ಒಂದು ನಿಖರ ಸ್ಪಷ್ಟವಾದ ಪ್ರತಿಮಾ ರೂಪವು ಕ್ರಿ.ಶ. ಸು. ೬೫೦ರ ದಾದ ವಿಷ್ಣುಧರ್ಮೋತ್ತರ ಪುರಾಣಗ್ರಂಥದಲ್ಲಿ ಉಕ್ತಗೊಂಡಿತೆನ್ನಬೇಕು. ವಾಸ್ತವವಾಗಿ ಈ ಹೊತ್ತಿಗೆ ಶಿವನ ಪ್ರತಿಮಾ ಶಿಲ್ಪ ಶಾಸ್ತ್ರವು ಗಟ್ಟಿ ಆಧಾರದ ಮೇಲೆ ಬೆಳೆದಿತ್ತು ಹಾಗೂ ನಿಷ್ಕಲ ಲಿಂಗರೂಪವುಳಿದು ಸ್ವತಂತ್ರವಾಗಿ ಶಿವನ ಚಿತ್ರವನ್ನು ವಿವಿಧ ರೂಪಗಳಲ್ಲಿ ಬರೆಯಲಾಗುತ್ತಿತ್ತು.

ಪಂಚಮುಖಲಿಂಗಗಳ ನಿದರ್ಶನಗಳು ಅಪರೂಪ. ಆದರೆ ಉಳಿದಂತೆ ಮುಖಲಿಂಗಗಳ ಪೈಕಿ ವಿಶೇಷತಃ ಏಕಮುಖಲಿಂಗ ಮತ್ತು ಚತುರ್ಮುಖ ಲಿಂಗಗಳು ದೇಶದ ವಿವಿಧ ಭಾಗಗಳಲ್ಲಿ ಲಭ್ಯವಾಗಿವೆ ಹಾಗೂ ಅವುಗಳು ಕ್ರಿ.ಶ. 5-6ನೇ ಶತಮಾನದ ಸುಮಾರಿನವಾಗಿವೆ. ಅದು ಮುಖಲಿಂಗರೂಪದ ಶಿವನ ಜನಪ್ರಿಯ ಆರಾಧನಾ ಸಂದರ್ಭವನ್ನು ಸೂಚಿಸುತ್ತದೆ. ಮುಖ್ಯವಾಗಿ ಏಕಮುಖ ಲಿಂಗಗಳು ಮಧ್ಯಪ್ರದೇಶದ ಭೂಮಾರ, ಕೋಹ್ ವಿಧಿಶಾದ ಉದಯಗಿರಿ, ಮಧ್ಯಪ್ರದೇಶದ ಖಮಾರಿಯ, ಉತ್ತರ ಪ್ರದೇಶದ ಶಂಕರಘುಡ, ಇತ್ಯಾದಿ ಕಡೆ ಕಾಣಬರುತ್ತವೆ. ಅವೆಲ್ಲ ಶಿವನ ತತ್ಪುರುಷ ಅಂಶವನ್ನೇ ಪ್ರದರ್ಶಿಸಿವೆ. ಹೀಗೆಯೇ ಚತುರ್ಮುಖಲಿಂಗಗಳೂ ಪ್ರಸಿದ್ಧಿಗೊಂಡು ಜನಪ್ರಿಯವಾಗಿದ್ದುವು. ಅವುಗಳು ಪ್ರಮುಖವಾಗಿ ಮಧ್ಯಪ್ರದೇಶದ ನಚನ ಎಂಬಲ್ಲಿರುವ ಮಹಾದೇವ ದೇಗುಲ ಹಾಗು ಸಿರಪುರ್, ಆಂಧ್ರಪ್ರದೇಶದ ಸಿದ್ದವಟ್ಟಂ ಬಳಿಯ ಜ್ಯೋತಿ, ಉತ್ತರ ಪ್ರದೇಶದ ಕನೂಜ್‌ನಲ್ಲಿ ಕಂಡು ಬಂದಿವೆ. ಕೋಲ್ಕತ್ತಾದ ಇಂಡಿಯನ್ ಮ್ಯೂಸಿಯಂನಲ್ಲಿ ಒಂದು ಚತುರ್ಮುಖ ಲಿಂಗವಿದೆ. ನಚನದಲ್ಲಿ ಬಿಡಿಶಿಲ್ಪಗಳ ಸಮೂಹದಲ್ಲಿ, ಆ ಪ್ರದೇಶದಲ್ಲಿದ್ದ ಪಾಶುಪತದ ಪ್ರಭಾವದ ಪ್ರತೀಕವಾದ ಲಕುಲೀಶನ ಆಸೀನ ವಿಗ್ರಹವೂ ಇದೆ. ಈ ಹಿನ್ನೆಲೆಯಲ್ಲಿ, ಕ್ರಿ.ಶಕೆಯ ಮುನ್ನಿನ ಶತಮಾನಾಂತ್ಯ ಹಾಗೂ ಕ್ರಿ.ಶ.ದ ಆರಂಭಿಕ ಶತಮಾನ ಗಳಲ್ಲಿ 'ಶಿವ' ಬೆಳೆದುಬಂದ ಬಗೆಯನ್ನು ಗಮನಿಸಬೇಕಿದೆ.

ಪತಂಜಲಿಯು, ಶಿವ ಭಾಗವತರೆಂದು ಪರಿಗಣಿತ ರಾಗಿದ್ದ ಶಿವಾರಾಧಕರು ಕಬ್ಬಿಣದ ಬಲ್ಲೆಗಳನ್ನು (ಶೂಲ !) ಹಾಗೂ ದಂಡಗಳನ್ನು ಹಿಡಿದು ಚರ್ಮಧಾರಿ ಗಳಾಗಿದ್ದರು. ಇದು ಅಲೆಗ್ಸಾಂಡರನ ಕಾಲದ ಬರವಣಿಗೆಗಳಲ್ಲಿ ಸಿಬಿಯ ಬುಡಕಟ್ಟಿಗೆ ಅನ್ವಯಮಾಡಿ ಹೇಳಿರುವುದಕ್ಕೆ ಪೂರಕವಾಗಿದೆ. ವಿಮ ಕದಫೀಸ, ಕಾನಿಷ್ಕ ಹಾಗೂ ಹುವಿಷ್ಕ ಎಂಬ ಕುಶಾನ್ ರಾಜ್ಯ ಚಿನ್ನದ ನಾಣ್ಯಗಳಲ್ಲಿ ಶಿವನನ್ನು ಅಧಿಕಾರದಂಡ (ಚಿನ್ನದ ದಂಡ), ತ್ರಿಶೂಲ ಹಾಗೂ ನಂದಿ ಸಹಿತನನ್ನಾಗಿ ಚಿತ್ರಿಸಿದ್ದು 'ಓಮೇಶ್' ಎಂದು ಕರೆಯಲಾಗಿದೆ. ಹೀಗೆಯೇ ತಕ್ಷಶಿಲಾ, ಉಜ್ಜಯಿನಿ, ಕದಾಸ, ಔದಂಬರರು, ಅವಧೇಯರು ಅವರ ನಾಣ್ಯಗಳಲ್ಲಿ ಶಿವನ ಚಿತ್ರವಿದ್ದುದು ಆ ಕಾಲಕ್ಕೆ ಶಿವಾರಾಧನೆಯ ಪ್ರಾಚಲಿತ್ಯವು ಮನುಷ್ಯರೂಪದ ಹಾಗೂ ಸಾಂಕೇತಿಕ ರೂಪದಲ್ಲಿತ್ತು ಎಂಬುದನ್ನು ಸಾಬೀತುಗೊಳಿಸುತ್ತದೆ. ಅದೇನೇ ಇರಲಿ, ಲಿಂಗರೂಪ 'ದಲ್ಲಿ ಶಿವನನ್ನು ಆರಾಧಿಸುತ್ತಿದ್ದ ಪದ್ಧತಿಯು ಪ್ರತಿಮಾರೂಪದಲ್ಲಿಯ ಪೂಜೆಗಿಂತ ಮೊದಲಿನದು ಎಂದೇ ಹೇಳಬೇಕು.

ಆಂಧ್ರದ ಚಿತ್ತೂರು ಜಿಲ್ಲೆಯ ಗುಡಿಮಲ್ಲಂ ನ ಪರಶುರಾಮೇಶ್ವರ ದೇಗುಲವು ಬಹುಶಃ ಅತ್ಯಂತ ಪ್ರಾಚೀನತಮ ಶಿವದೇಗುಲವಾಗಿರುವಂತಿದೆ. ನಿಷ್ಕಲ (ಸಾಂಕೇತಿಕ) ಹಾಗೂ ಸಕಲ (ಪ್ರತಿಮಾ), ರೂಪ ಸಂಯುಕ್ತವಾಗಿ ಶಿವನು ಕಾಣಿಸಿಕೊಳ್ಳುತ್ತಾನೆ. (ಚಿತ್ರ) ಪುರುಷ ಪ್ರಮಾಣದ ಶಿವನ ವಿಗ್ರಹವು ಮಾನುಷ ರೂಪದಲ್ಲಿದೆ. ಶಿಶ್ನಾಕಾರದಲ್ಲಿ ರೂಪಿಸಲ್ಪಟ್ಟಿರುವ ಆ ಲಿಂಗಮುಖದ ಮುಕ್ಕಾಲು ಭಾಗವನ್ನು ಆವರಿಸಿದಂಥ ಬೆನ್ನನ್ನು ಲಿಂಗಕ್ಕೆ ತಾಗಿಸಿಕೊಂಡು ನಿಂತಂಥ ಉಬ್ಬುಶಿಲ್ಪವಾಗಿ

ಆ ವಿಗ್ರಹವಿದೆ. ಈ ಮನುಷ್ಯಾಕೃತಿಯನ್ನು ವೈದಿಕ ಪರಿಕಲ್ಪನೆಯ 'ರುದ್ರ ಯಜಮಾನ' ಎಂದು ಗುರುತಿಸಲಾಗಿದೆ. ಯಜ್ಞೋಪವೀತರಹಿತನಾದ ಮುಕ್ಕಣ್ಣನಂತೆ ಈ ಶಿಲ್ಪವನ್ನು ಮೂಡಿಸಲಾಗಿದೆ. ಈ ಸ್ವರೂಪವೆ ಮುಂದಿನ ಶಿವ ಶಿಲ್ಪಗಳ ವಿಶಿಷ್ಟ ಚಹರೆ ಯಾಯಿತು. ಈ ವಿಗ್ರಹದ ಬಲಗೈಯಲ್ಲಿ ಯಜ್ಞಪಶು ಮೇಕೆ (ಮೇಷ) ಇದ್ದು ಎಡಗೈಯಲ್ಲಿ ಆಜ್ಯಪಾತ್ರ ಎನಿಸುವ ಬಟ್ಟಲು ಸಹಿತವಾಗಿ ದಂಡವೂ ಇದೆ. ಈ ಲಿಂಗವು ಶಿಲಾವೇದಿಕೆಯ ಮೇಲೆ ನಿಂತಿದ್ದು ಕ್ರಿ.ಪೂ ಸು ೩-೨ನೇ ಶತಮಾನಕ್ಕೆ ಸೇರುತ್ತದೆ. ಈ ಮೊದಲಮೂಲ, ತೆರೆದ ಆರಾಧನಾ ನೆಲೆಯು (ತೆರೆದ ಗುಡಿ-ಮಂಟಪ) ಮುಂದಿನ ಶತಮಾನಗಳಲ್ಲಿ ಆಚ್ಛಾದಿತ ಆವರಣದ ಶಿವನ ದೇಗುಲವಾಗಿ ಪರಿವರ್ತಿತವಾಯಿತು. ಇಂದಿನ ಅದರ ಸ್ವರೂಪವು ಕ್ರಿ.ಶ. ೯ನೇ ಶತಮಾನದ ಚೋಳ ಶೈಲಿಯ ಕಟ್ಟಡವಾಗಿದ್ದು ಇಂದಿಗೂ ಪೂಜಾಚರಣೆಗಳನ್ನೂ ಅದು ಹೊಂದಿದೆ. ಇಂಥ ತೆರೆದ ಗುಡಿಗಳು ಭಾರತದ ವಾಯುವ್ಯ ಭಾಗದಲ್ಲಿನ ನಾಣ್ಯಗಳ ಮೇಲೆ ಚಿತ್ರಿತಗೊಂಡಿವೆ. ಇದಕ್ಕೆ ಹೆಚ್ಚುಕಡಿಮೆ (ಬಹುತೇಕ) ಸಮಕಾಲೀನವೆಂದು, ಉಜ್ಜಯಿನಿಗೆ ೧೨.ಕಿ.ಮೀ. ಪೂರ್ವದಲ್ಲಿರುವ ಪಂಚಕ್ರೋಷ್ಟಿ ಯಾತ್ರದ ಪಿಂಗಳೇಶ್ವರ ದೇಗುಲದ ಚತುರ್ಮುಖ ಲಿಂಗವನ್ನು ಭಾವಿಸಲಾಗಿದೆ. (ಅಶೋಕನ ಕಾಲದ ರಾಮಪೂರ್ವ್ವದ ವೃಷಭನನ್ನು ನೆನಪಿಗೆ ತರುವ ಇಲ್ಲಿನ ಒಂದು ಪುಷ್ಟ (ಸದೃಢ-ಮಜಭೂತಾದ) ಸ್ಥಾನಕ ವೃಷಭವು ಈ ಲಿಂಗದ ಹಾಗೂ ವೃಷಭನ ಕಾಲವನ್ನು ಮೌರ್ಯರ ಅವಧಿಗೆ ನಿಗದಿಗೊಳಿಸಲು ಅನುವಾಗಿದೆ. ಗೂಳಿ ಸಹಿತವಾದ ಉಜ್ಜಯಿನಿಯ ಈ ಲಿಂಗ ಹಾಗು ನಾಣ್ಯಗಳು ಹೊಂದಿರುವ ಶಿವನ ಪ್ರತೀಕಗಳು ಕ್ರಿ.ಪೂ. ೧ನೇ ಶತಮಾನದ ಮುನ್ನಿನಿಂದಲೂ ಶಿವಾರಾಧನೆಯ ಚಾಲ್ತಿಯನ್ನು ದೃಢೀಕರಿಸುತ್ತವೆ.

ಕ್ರಿ.ಶ. ೨-೪ನೇ ಶತಮಾನಗಳ ಅವಧಿಯಲ್ಲಿ ದಕ್ಷಿಣ ದೇಶ ಮತ್ತು ಆಂಧ್ರಪ್ರದೇಶದಲ್ಲಿ ಶಾತವಾಹನರ ಪೋಷಣೆಯಲ್ಲಿ ಲಿಂಗ ಭೂಯಿಷ್ಠವಾದ ಗುಡಿಗಳು ಹಾಗು ಶಿವಾರಾಧನೆಯು ಜನಪ್ರಿಯವಾಗಿದ್ದುವು. ವಿಶೇಷತಃ ನಾಗಾರ್ಜುನಕೊಂಡದಲ್ಲಿಯ ವಿಮುಲ ಸಂಖ್ಯೊಶಿವಾಲಯ ಗಳು ಮತ್ತು ಕರ್ನಾಟಕದ ಐಹೊಳೆ ಮಹಾರಾಷ್ಟ್ರದ ಟರ್ ಪ್ರದೇಶಗಳಲ್ಲಿನ ಶಿವಾಲಯಗಳ ಅಸ್ತಿತ್ವ ಇದಕ್ಕೆ ಸಾಕ್ಷಿಯಾಗಿದೆ. ಇಲ್ಲಿ ಶಿವನನ್ನು ಪುಷ್ಪ ಭದ್ರ, ಸರ್ವದೇವ, ಅಷ್ಟಭುಜ ಹಾಗೂ ಅಘೋರ ಎಂದೆಲ್ಲ ನಾಮೀಕರಿಸ ಲಾಗಿದೆ. ಅಮರಾವತಿಯ ಚತುರ್ಮುಖ ಲಿಂಗವು ಮುಖಲಿಂಗದ ಆರಾಧನೆಯಯನ್ನು ದೃಢೀಕರಿಸುತ್ತದೆ. ಗುಜರಾತಿನ ಕಾಯಾವರೋಹಣದಲ್ಲಿನ ಲಿಂಗಾಲಯ ಗಳು ಮತ್ತು ಲಕುಲೀಶ ಮೂರ್ತಿಗಳ ಪ್ರಸಾರವನ್ನು ಗಮನಿಸಿದರೆ ಪಶ್ಚಿಮ ಭಾರತವನ್ನಾಳಿದ ಕ್ಷತ್ರಪರು ಶಿವ ಮತ್ತು ಲಕುಲೀನಶ ನಿಷ್ಠ ಆರಾಧಕರಾಗಿದ್ದರೆಂದು ಸ್ಪಷ್ಟವಾಗುತ್ತದೆ. ೧೨ನೇ ಶತಮಾನದ ಮಧ್ಯಕಾಲದ ಸೋಲಂಕಿವಂಶಿಕ ರಾಜನಾದ ಜಯಸಿಂಹ ಸಿದ್ಧರಾಜನಿಂದ ಸಿದ್ದಾಪುರದಲ್ಲಿ ಪ್ರತಿಷ್ಠಾಪನ ಗೊಂಡ ರುದ್ರಮಹಾಲಯ ಅಥವಾ ಏಕಾದಶ ರುದ್ರರಿಗೆ ಮೀಸಲಾದ ರುದ್ರಮಾಲಾ ಹಾಗು ಪ್ರಭಾಸ ಪಟ್ಟಣದಲ್ಲಿರುವ ಸೋಮನಾಥ ಮಹಾ ಶಿವಾಲಯದಂಥ ದೇಗುಲಗಳ ಅಸ್ತಿತ್ವವೇ ಗುಜರಾತ ಪ್ರದೇಶವು ಶಿವಾರಾಧನೆಯ ಪ್ರಬಲಕೇಂದ್ರವಾಗಿ ಮುಂದು ವರಿದುದರ ಸಾಕ್ಷ್ಯವಾಗಿದೆ. ನಮ್ಮ ರಾಷ್ಟ್ರದಲ್ಲಿ ಪ್ರಸಾರಗೊಂಡಿರುವ ದ್ವಾದಶ ಜ್ಯೋತಿರ್ಲಿಂಗಗಳ ಪೈಕಿ ಪ್ರಭಾಸ ಪಟ್ಟಣದ ಸೋಮನಾಥ ಲಿಂಗವು ಇಂದಿಗೂ ಜ್ಯೋತಿರ್ಲಿಂಗವೆಂದೇ ಆರಾಧನೆಗೊಳ್ಳುತ್ತಿದೆ.

ರಾಜಾಸ್ತಾನದ ಮೇವಾರ ಪ್ರದೇಶದ ನೆರೆಯ ಕಿರದೂ ಎಂಬ ನೆಲೆಯಲ್ಲಿನ ಸಮೂಹ ಶಿವಾಲಯಗಳೂ ೧೨ನೇ ಶತಮಾನದ ಮಧ್ಯಾವಧಿಯದಾಗಿವೆ. ಈ ಸಮೂಹ ಶಿವಾಲಯಗಳಲ್ಲಿ ಬಹುದೊಡ್ಡ ಹಾಗೂ ಬಹಳ ಮುಖ್ಯವಾದ ಆಲಯವು ಶಿವಸೋಮೇಶ್ವರನಿಗೆ ಅರ್ಪಿತವಾಗಿದೆ. ಸಿರ್ಕಾರದ ಬಳಿಯ ಬೆಟ್ಟದ ಮೇಲಿನ ಮಹಾದೇವ ದೇಗುಲ ಹಾಗೂ ಕೆಕಿರಂದ ಜಿಲ್ಲೆ ನಾಗಪುರದ ನೀಲಕಂಠೇಶ್ವರ ದೇಗುಲ ಮತ್ತು ಏಕಲಿಂಗ್ಜಿಯ ಲಕುಲೀಶ ದೇಗುಲ ಇವೆಲ್ಲವೂ ಕಿರದೂ ಶಿವಾಲಯಗಳ ಮುನ್ನವೇ ನಿರ್ಮಾಣಗೊಂಡಿರುವಲ್ಲಿ ಇವೆಲ್ಲ ಅಲ್ಲಿದ್ದ ಶಿವಾರಾಧನೆಯ ಪ್ರಾಬಲ್ಯವನ್ನು ಸ್ಪಷ್ಟವಾಗಿ ದೃಢೀಕರಿಸುತ್ತವೆ. ಇನ್ನು ಲಕುಲೀಶ ಮೂರ್ತಿಯ ರೂಪದಲ್ಲಿ ಶಿವಾರಾಧನೆಯು ಕಲಿಂಗ ಪ್ರದೇಶದಲ್ಲಿ ಪ್ರಚಲಿತವಾಗಿತ್ತು; ಅದಕ್ಕೆ ಬಹಳ ಅಪರೂಪವೆನಿಸುವ ಆಂಧ್ರಪ್ರದೇಶದ ಶ್ರೀಕಾಕುಳಂ ಜಿಲ್ಲೆಯ ಮುಖಲಿಂಗವು ಮುಂಭಾಗದಲ್ಲಿ (ಮುಂಬದಿಯಲ್ಲಿ)

ಮಹೇಶನ ಬದಲು ಸು ಕ್ರಿ.ಶ. ೫ನೇ ಶತಮಾನಾವಧಿಯ ಲಕುಲೀಶನ ಮೂರ್ತಿಯನ್ನುಹೊಂದಿರುವ ಲಿಂಗವಾಗಿರುವುದೇ ಒಂದು ಅಪೂರ್ವ ಸಾಕ್ಷಿ ಆಗಿದೆ. ಕರ್ನೂಲ್ ಬಳಿಯ ಕೂಡಲಿಸಂಗಮ ಪ್ರದೇಶ ಕಡಪದ ಬಳಿಯ ಸಿದ್ಧವಟ್ಟಂ ತಮಿಳುನಾಡಿನ ಕೊಯಮತ್ತೂರು ಜಿಲ್ಲೆ ಪೆರೂರು (ಕ್ರಿ.ಶ. ಸು. ೫ನೇ ಶತಮಾನ) ಇಲ್ಲೆಲ್ಲ ಶಿವ-ಲಕುಲೀಶ ಆರಾಧನೆಯ ಬಹಳ ಜನಪ್ರಿಯವಾಗಿತ್ತು.

ಬಹು ಪ್ರಾಚೀನ ಕಾಲದಿಂದಲೂ, ಸಾಂಪ್ರದಾಯಿಕವಾಗಿ ಶಿವನ ಆವಾಸಸ್ಥಾನ ಪ್ರದೇಶವೆಂದು ನಂಬಿರುವ ಐಮಾಚಲ ವಲಯವು (ಪ್ರದೇಶ) ಶೈವಧರ್ಮವನ್ನು ಸಹಜವಾಗಿ ಘೋಷಿಸಿದೆ. ಸ್ಥೂಲವಾಗಿ ಹೇಳುವುದಾದರೆ ಈ ಪ್ರದೇಶವು ಎರಡು ವಿಭಾಗಗಳನ್ನು ಹೊಂದಿದೆ. ಒಂದು ಗೋಪೇಶ್ವರ, ದೇವಲ್‌ಘರ್, ರಾಣಿಹತ್, ಲಖಿಮಂಡಲ್, ಹಾಗೂ ಡೆಹರಾಡೂನ್ ಗಳನ್ನೊಳಗೊಂಡಿರುವ ಪೌರಿ ಗರವಾಲ್; ಇನ್ನೊಂದು ಇಡೀ ಕುಮಾನ್ (ಕುಮಾಂವ್) ಪ್ರದೇಶವನ್ನೊಳಗೊಂಡಿರುವ ತೆಹ್ರಿ ಗರವಾಲ್ ವಿಭಾಗವಾಗಿದೆ. ಇಡೀ ಪ್ರದೇಶವು ಪ್ರಧಾನವಾಗಿ ಶೈವಧರ್ಮದ ನಿರ್ದೇಶನ (ಪ್ರಭಾವ)ದಲ್ಲಿತ್ತೆನಿಸುತ್ತದೆ. ಈ ಪ್ರದೇಶವು ಶಿವನಿಗೆ ಮೀಸಲಾದ ಅನೇಕ ದೇಗುಲಗಳಿಂದ ಸುತ್ತುವರಿಯಲ್ಪಟ್ಟಿರುವುದೇ ಇದರ ಕುರುಹೆನಿಸುತ್ತದೆ. ಲಖಿಮಂಡಲದಲ್ಲಿ ವರ್ಮನ್ (ಪ್ರಭಾಮತ್ತೇನಿಸುತ್ತದೆ; ರ್ವನ್ ದೊರೆಗಳಿಂದ ನಿರ್ಮಿತವಾದ ಶಿವಾಲಯಗಳ ಒಂದು ಸಮೂಹ ತುಸು ಶಿಥಿಲಾವಸ್ಥೆಯಲ್ಲಿದೆ; ಹಾಗೆಯೇ ಬ್ರಹ್ಮಪುರದ ಪೌರವ ದೊರೆಗಳಿಂದ ನಿರ್ಮಿತವಾದ ಬಲೇಶ್ವರದ ಶಿವಾಲಯ ಗಳೂ ಶಿಥಿಲಗೊಂಡಿಲಿ. ಈ ದೇಗುಲಗಳ ಕಾಲವು ಕ್ರಿ.ಶ. ೬-೮ನೇ ಶತಮಾನಗಳ ಅವಧಿಗೆ ಸೇರಿದುದಾಗಿದೆ.

ಕ್ರಿ.ಶ. ೮ನೇ ಶತಮಾನದಲ್ಲಿ ಆಳತೊಡಗಿದ ಕತ್ಯೂರಿ ರಾಜ ವಂಶಿಕರು ನಿಷ್ಠಾವಂತ ಶಿವಾರಾಧರಾಗಿದ್ದು ಬಹುಶಃ ಪ್ರಾಶುಪತ ಆಚಾರ್ಯರಿಂದ ಬಹಳ ಪ್ರಭಾವಿತರಾಗಿದ್ದ ರೆನಿಸುತ್ತದೆ. ಇದಕ್ಕೆಲ್ಲ ಪೌರಿ ಗರವಾಲ್ ಸಹಿತವಾಗಿ, ಕುಮಾಂವ್ ಕೇಂದ್ರದ ಸುತ್ತಲ ಪ್ರದೇಶದಲ್ಲೆಲ್ಲ ಅನೇಕ ಶಿವಾಲಯಗಳು ಇವರಿಂದ ನಿರ್ಮಿತವಾಗಿರುವುದೇ ಸಾಕ್ಷಿ ಎನಿಡಿಸುತ್ತದೆ. ಕತ್ಯೂರಿ ರಾಜರಿಂದ ನಿರ್ಮಿತ ದೇಗುಲಗಳ ಪೈಕಿ ಉತ್ತರ ಪ್ರದೇಶದ ಆಲ್ಮೋರ ಜಿಲ್ಲೆಯ ವೈಜನಾಥ್ ಮತ್ತು ಜಗೇಶ್ವರಗಳಲ್ಲಿ ಶಿವಾಲಯಗಳ ಸಮೂಹ ನಿರ್ಮಾಣವನ್ನು ಗಮನಿಸಬಹುದು. ಜಗೇಶ್ವರದ ದೇವಾಲಯಗಳ ಗುಂಪಿನಲ್ಲಿ ಲಕುಲೀಶ್ವರ ಮತ್ತು ಬಾಲೇಶ್ವರ ದೇವರ ಗುಡಿಗಳಿವೆ. ಜಗೇಶ್ವರದ ಬಳಿಯ ದಂಡೇಶ್ವರದಲ್ಲಿ, ಸ್ಥಳೀಯದಾಗಿ ದಂಡೇಶ್ವರ ಎಂದು ಕರೆಯುವ ಶಿವ-ಲಕುಲೀಶನಿಗೆ ಮೀಸಲಾದ ಗುಡಿ ಇದೆ. ಚಂಪಾವತ್‌ನ ಬಾಲೇಶ್ವರ, ದ್ವರಹತನ ರತ್ನೇಶ್ವರ ದೇಗುಲಗಳು ಶಿವಾರಾಧನೆಯ ಪ್ರಾಬಲ್ಯವನ್ನು ಸಾಕ್ಷೀಕರಿಸುವ ಕುಮಾಂವ್ ಪ್ರದೇಶದ ಇತರ ಪ್ರಮುಖ ದೇಗುಲಗಳಾಗಿವೆ. ಹೀಗಾಗಿ ವೈಜನಾಥ ಮತ್ತು ಜಗೇಶ್ವರಗಳಲ್ಲಿ ಶೈವ ಪಂಥದ ಪ್ರತಿಮೆಗಳ ಬಾಹುಳ್ಯವನ್ನು ಕಾಣಬಹುದು.

ಕ್ರಿ.ಶ. ೯ನೇ ಶತಮಾನಾಂತರ ಭಾರತದ ತೀರ ಉತ್ತರದ ಕಾಶ್ಮೀರ ಕಣಿವೆ ಪ್ರದೇಶವನ್ನು ಆಳಿದ ಕಾರ್ಕೋಟ ರಾಜವಂಶಿಕರು ಹಾಗು ಅವರ ಉತ್ತರಾಧಿಕಾರಿಗಳು ಶಿವನ ಅತೀವ ನಿಷ್ಠೆಯ ಆರಾಧಕರಾಗಿದ್ದರು. ಶಿವನಿಗೆ ಮೀಸಲಾಗಿ ಅವರು ಕಟ್ಟಿದ ಅನೇಕ ದೇಗುಲಗಳಿಂದಾಗಿ ಇದು ಸೂಚಿತವಾಗಿದೆ. (ಈಗಾಗಲೇ ಕ್ರಿ.ಪೂ. ೩ನೇ ಶತಮಾನದ ವೇಳೆಗೆ ಅಶೋಕ ಚಕ್ರವರ್ತಿಯ ಶಿವ-ಅಶೋಕೇಶ್ವರ ಎಂಬ ಶಿವಾಲಯವನ್ನು ನಿರ್ಮಿಸಿದುದನ್ನು ಗಮನಿಸಿದ್ದೇವೆ) ಇವುಗಳಲ್ಲಿ ಆವಂತೀಪುರದ ಅವಂತೀಶ್ವರ, ಪಯರ್‌ನಲ್ಲಿಯ ಶಿವಾಲಯ, ಪತನ್‌ನಲ್ಲಿಯ ಶಂಕರ-ಗೌರೀಶ್ವರ ಹಾಗೂ ಸುಗಂಧೇಶ್ವರ, ಶ್ರೀನಗರದ ಬಳಿಯ ಲದ್ದೋವಿನ ಶಿವರುದ್ರೇಶ್ವರ ದೇಗುಲಗಳು ನರನ್ನಾಗ್‌ದಲ್ಲಿನ ಶಿವದೇಗುಲ ಮತ್ತು ಶ್ರೀನಗರದ ಬಳಿಯ ಪ್ರಾಚೀನ ಪುರಾಣಾಧಿಷ್ಠಾನ ಇತ್ಯಾದಿಗಳು ಅವಶ್ಯಕವಾಗಿ ಗಮನಿಸಬೇಕಾದಂಥವಾಗಿವೆ. ಇವುಗಳಲ್ಲಿ ಕೊನೆಯದು ಸರ್ವತೋಭದ್ರ ದೇವಾಲಯವಾಗಿದ್ದು ಬಾಗಿಲವಾಡದ ಹಾಸುಗಲ್ಲಿನ ಮೇಲೆ ಲಕುಲೀಶನ ವಿಗ್ರಹವನ್ನು ಹೊಂದಿದೆ. ಪಯರ್‌ನಲ್ಲಿಯ ಶಿವಾಲಯದಲ್ಲಿಯೂ ಇಂಥದೇ ಸಂದರ್ಭವಿರುವುದನ್ನು ನೋಡಿದರೆ ಕಾಶ್ಮೀರ ಕಣಿವೆಯಲ್ಲಿದ್ದ ಪಾಶುಪತ ಪ್ರಭಾವದ ಸ್ಪಷ್ಟ ದ್ಯೋತಕವಾಗಿದೆ. ಪಂದ್ರೇಥನ್‌ನಲ್ಲಿ ಕಂಡುಬಂದ ಅನೇಕ ಶೈವ ಸಂಬಂಧೀ (ಶಿವಗಣ) ಪ್ರತಿಮೆಗಳನ್ನು ಶ್ರೀನಗರದ ಪ್ರತಾಪ್‌ಸಿಂಗ್

ಮ್ಯೂಸಿಯಂನಲ್ಲಿಡಲಾಗಿದೆ. ಈ ಮೇಲಿನ ಉದಾಹರಣೆಗಳಿಂದ ಕಾಶ್ಮೀರ ಕಣಿವೆ ಪ್ರದೇಶದ ಜನರು ಪ್ರಮುಖವಾಗಿ ಕ್ರಿ.ಪೂ. ೩ನೇ ಶತಮಾನದ ನಂತರ ಶಿವಾರಾಧಕರಾಗಿದ್ದರೆಂದು ತಿಳಿಯುತ್ತದೆ.

ಕರ್ನಾಟಕದ ಶಿವಮೊಗ್ಗಾ ಜಿಲ್ಲೆಯ ತಾಳಗುಂದದಲ್ಲಿ ಕ್ರಿ.ಶ. ೧-೨ನೇ ಶತಮಾನದಲ್ಲಿ ಸಾತಕರ್ಣಿಗಳಿಂದ ಶಿವನು ಸ್ಥಾನಕುಂದೇಶ್ವರ ಎಂದು ಆರಾಧಿಸಲ್ಪಟ್ಟಿದ್ದಾನೆ. ನಂತರ ಬನವಾಸಿಯ ಆದಿಕದಂಬರಿಂದಲೂ ಬನವಾಸಿಯಲ್ಲಿ ಪ್ರಸಿದ್ಧ ಮಧುಕೇಶ್ವರ ದೇಗುಲವದಲ್ಲಿ ಆರಾಧಿಸಲ್ಪಟ್ಟವನಾಗಿದ್ದಾನೆ.

ಪ್ರಾಚೀನದಲ್ಲಿ ಅಯ್ಯಾವೂಳೆ ಅಥವಾ ಆರ್ಯಪುರವೆನಿಸಿದ್ದ ಐಹೊಳೆ, ಪಟ್ಟದಕಲ್ ಬಾದಾಮಿ, ಮಹಾಕೂಟ ಹಾಗೂ ಬಿಜಾಪುರ ಜಿಲ್ಲೆಯ ನಾಗರಾಳ ಪಟ್ಟಣಗಳಲ್ಲಿ ಬಾದಾಮಿ ಚಾಲುಕ್ಯರ ಉಗಮದ ಮುನ್ನವೇ, ಇಟ್ಟಿಗೆಯಲ್ಲಿ ಕಟ್ಟಿದ್ದ ಶಿವಾಲಯಗಳಿದ್ದುವು. ಮುಂದೆ ಅವುಗಳು ಈ ಆದಿ ಚಾಲುಕ್ಯರಿಂದ ಬಹು ಹಂತಗಳ ಶಿಲಾದೇಗುಲಗಳಾಗಿ ಪರಿವರ್ತಿತವಾದುವು. ಮಹಾಕೂಟವು ಲಕುಲೀಶ ಪಂಥದ ಪ್ರಮುಖ ಕೇಂದ್ರವಾಗಿತ್ತು. ಐಹೊಳೆ, ಪಟ್ಟದಕಲ್ಲು ಹಾಗೂ ಬಾದಾಮಿ ಪ್ರದೇಶದಲ್ಲಿ ಆದಿಚಾಲುಕ್ಯರಿಂದ ಬಹುಸಂಖ್ಯೆಯಲ್ಲಿ ಶಿವಾಲಯಗಳು ನಿರ್ಮಾಣಗೊಂಡವು. ಅಲ್ಲಿ ಶಿವಲಿಂಗದ ಜೊತೆಗೆ ಶಿವಪಾರ್ವತಿ (ಉಮಾಮಹೇಶ್ವರ), ಸಹಸ್ರಲಿಂಗ, ಕಾರ್ತಿಕೇಯ, ಗಣೇಶ ತ್ರಿಪುರಾಂತಕ, ಅರ್ಧನಾರೀಶ್ವರ ಇತ್ಯಾದಿ ಪ್ರತಿಮೆಗಳು ಅಲ್ಲಿನ ಭಿತ್ತಿಕೋಷ್ಠಗಳಲ್ಲಿ ಪ್ರತಿಷ್ಠೆಗೊಂಡವು. ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆಯ ಚೇಜರ್ಲದಲ್ಲಿ ಕಪೋತೇಶ್ವರ ಶಿವಾಲಯವಿದ್ದು, ಕ್ರಿ.ಶ. ೪ನೇ ಶತಮಾನದಷ್ಟು ಹಳೆಯದಾದ ಮೇಲ್ಸೂಚಿತ ಅನೇಕ ಪ್ರತಿಮೆಗಳು (ವಿಗ್ರಹಗಳು) ಅದರಲ್ಲಿವೆ. ಇಂದಿಗೂ ಈ ಶಿವಾಲಯವು ಆರಾಧಿತವಾಗಿರುವುದು ಕುತೂಹಲಕಾರಿ.

ಈ ಹಿನ್ನೆಲೆಗಳಿಂದ ಕ್ರಿ.ಶ. ೫-೬ನೇ ಶತಮಾನಗಳಿಂದಲೇ ಶಿವನ ಅನೇಕ ಪ್ರತಿಮಾ ರೂಪಗಳು (ಸಕಲರೂಪ) ದೇಗುಲಗಳಲ್ಲಿ ಪ್ರತಿಷ್ಠೆಗೊಳ್ಳುತ್ತಿದ್ದುದು ಸ್ಪಷ್ಟಗೊಳ್ಳುತ್ತದೆ. ಇದು ಭಾರತದ ಉತ್ತರ ಹಾಗೂ ದಕ್ಷಿಣ ಭಾಗದಲ್ಲೆಲ್ಲ ಸ್ಥಿರ ಪದ್ಧತಿಯಾಗಿ ಕಾಣಬರುತ್ತದೆ. ಶಿವನ ವಿವಿಧ ಪ್ರತಿಮಾರೂಪಗಳ ನಿರ್ದೇಶನದ ಜೊತೆಗೆ ಉಳಿದ ದೈವ ಪ್ರತಿಮೆಗಳನ್ನೂ ಕುರಿತು ನಿರ್ದೇಶನವಾದುದೂ ಕಾಣುತ್ತದೆ. ಶಿವ ಹಾಗೂ ತತ್ಸಂಬಂಧಿ ದೈವಗಳ ವಿಗ್ರಹಗಳು ಮತ್ತು ದೇಗುಲ ರಚನಾ ವಿನ್ಯಾಸ ಕುರಿತ ನಿಯಮ ಪ್ರಾಮಾಣ್ಯಗ್ರಂಥ (ಆಗಮೋಕ್ತ) ಗಳು ರಚನೆಗೊಳ್ಳುತ್ತಿದ್ದ ವಿಷಯವನ್ನು ಅವು ಸೂಚಿಸುತ್ತವೆ.

ಗುಪ್ತರ ಹಾಗೂ ಗುಪ್ತೋತ್ತರ ಅವಧಿಯಲ್ಲಿ ಅಂದರೆ ಕ್ರಿ.ಶ. ೫-೬ನೇ ಶತಮಾನಗಳಲ್ಲಿ ಗುಹಾ ದೇವಾಲಯಗಳು, ಸೂತ್ರವಿನ್ಯಾಸ ದೇಗುಲಗಳು ಲಿಂಗರೂಪಿ ಶಿವನಿಗಷ್ಟೇ ಅಲ್ಲದೆ ಉಮಾಮಹೇಶ್ವರ, ಅರ್ಧನಾರೀಶ್ವರ, ಸೋಮಸ್ಕಂದ ಇತ್ಯಾದಿ ವಿಗ್ರಹರೂಪಿ ಮೈದೋರಿಕೆಯ ಶಿವನಿಗೂ ಆಸರೆಯಾಗಿ, ಆ ವಿಗ್ರಹಗಳು ದೇಗುಲ ಭಿತ್ತಿ ಹಾಗೂ ಗುಹೆಗಳಲ್ಲಿ ಬಹು ಸಂಖ್ಯೆಯಲ್ಲಿ ಕಾಣಿಸಿಕೊಳ್ಳಲಾರಂಭಿಸಿದುವು. ಶಕ್ತಿ ಸಹಿತನಾಗಿ ಕಾರ್ತಿಕೇಯ ನೊಡಗೂಡಿ ಈ ರೂಪಗಳಲ್ಲಿನ ಶಿವನ ಮಾದರಿಗಳು ಧಾರ್ಮಿಕ ಫಲಕ ಅಥವಾ ಬಿಲ್ಲೆಗಳಲ್ಲಿದ್ದು ಅವು ಆಂಧ್ರದ ಭೀಮಾವರಂ, ಪೆದ್ದ ಮುಡಿಯಂ, ಕೆಸರಗುತ ಇತ್ಯಾದಿ ನಿವೇಶನಗಳಲ್ಲಿ ಕಂಡು ಬಂದಿರುವ ಬಗ್ಗೆ ವರದಿಯಾಗಿದೆ. ಅಲ್ಲದೆ, ತ್ರಿದೇವ (ತ್ರಿಮೂರ್ತಿ!) ಮತ್ತು ಸೋಮಸ್ಕಂದ ಪಂಥವು ಜನಪ್ರಿಯಗೊಂಡು, ಶಿವನ ಪ್ರತ್ಯೇಕ ಪ್ರತಿಮಾಮೂರ್ತಿಗಳು ಕಾಣಿಸಿಕೊಳ್ಳಲಾರಂಭಿಸಿದುವು. ಅವುಗಳೆಂದರೆ:
i. ಮಹಾರಾಷ್ಟ್ರದ ನಾಗಪುರ ಜಿಲ್ಲೆಯ ಮನಸರ್‌ನ ಶಿವ-ಯಜಮಾನ ವಿಗ್ರಹವಾಗಿದ್ದು ಚತುರ್ಮುಖನಾಗಿ, ವರದ ಹಸ್ತ ಹೊಂದಿರುವ ಮೂರ್ತಿ

ii. ದ್ವಾದಶಹಸ್ತ, ದ್ವಯಶಿರದ ಶಿವ ಹಾಗೂ ಪೌರಾಣಿಕ ಊರ್ಧ್ವರೇತಸನನ್ನು ಪ್ರತಿನಿಧಿಸುವ ಅಷ್ಟಶಿರಗಳ ಮೂರ್ತಿ ಇವೆರಡೂ ಮಂಥಾಲ್‌ನಲ್ಲಿ ಲಭ್ಯವಿದ್ದು ಕ್ರಿ.ಶ. ೫ನೇ ಶತಮಾನದ ವಾಕಾಟಕರ ಕಾಲದ್ದೆನ್ನಬಹುದು.

iii. ಹೀಗೆಯೇ, ಮಧ್ಯಪ್ರದೇಶದ ಬಿಲಾಸಪುರ ಜಿಲ್ಲೆಯ ಜಾಲದಲ್ಲಿ ಬಹುಮುಖ ಶಿವನ ಪ್ರತಿಮೆಯೊಂದರಲ್ಲಿ ಊರ್ಧ್ವಮುಖವು ಪ್ರಧಾನವಾಗಿದ್ದು, ಗಂಟೆಯಾಕಾರದಲ್ಲಿರುವಂಥ ಊರ್ಧ್ವರೇತನೆನಿಸಿ ಅದು ಸುಮಾರು ಮೂರುಮೀಟರ್ ಎತ್ತರದ ಶಿವಪ್ರತಿಮೆಯಾಗಿರುವುದು ವರದಿಗೊಂಡಿದೆ. ಬಹುಶಃ ಈ ವಿಗ್ರಹವು

ಶಿವನ ಅಂಶವಾದ (ಗಣ) ಭೈರವನನ್ನು ಪ್ರತಿನಿಧಿಸುವಂತಿದೆ. ಕ್ರಿ.ಶ. ೫–೬ನೇ ಶತಮಾನದ ಕಾಲದ್ದೆನ್ನ ಬಹುದಾಗಿದೆ.

iv. ಆಂಧ್ರದ ಪಶ್ಚಿಮ ಗೋದಾವರಿ ಜಿಲ್ಲೆಯ ಪೆದ್ದವೇಗಿಯಲ್ಲಿ ಇದೇ ಬಗೆಯ ಬಹುಮುಖ ಶಿವ ಪ್ರತಿಮೆಯೊಂದು ಕಾಣಬಂದಿದೆ. ಅದಕ್ಕೆ ಏಕಾದಶ ಮುಖಗಳಿದ್ದು ಅದರ ಪ್ರಧಾನ ಮುಖದಲ್ಲಿ ಮೂರನೇ ಕಣ್ಣಿದ್ದು, ಇಪ್ಪತ್ತನಾಲ್ಕು ಭುಜಗಳಿವೆ. ಅದು ಬಹುಶಃ ಶಿವನ ವಿಶ್ವರೂಪವನ್ನು ಪ್ರತಿನಿಧಿಸುವಂತಿದೆ. ಅಂದರೆ ಶತರುದ್ರೀಯದಲ್ಲಿ ವರ್ಣಿಸಿರುವಂತೆ 'ರುದ್ರೇಭ್ಯೋ ಯೇ ಪ್ರಥಿವ್ಯಾಂ ಯೇ ಅಂತರಿಕ್ಷೇ ಯೇ ದಿವೇ' - ಇಡೀ ವಿಶ್ವದಲ್ಲಿ ಚಿರ ಜಗದಂತರ್ಯಾಮಿಯಾಗಿ ನೆಲೆಸಿರುವ ಶಿವನ ಸ್ವರೂಪವೇ ಅದು. ಈ ಪ್ರತಿಮೆಯು ಕ್ರಿ.ಶ. ೬-೭ನೇ ಶತಮಾನದ ವಿಷ್ಣುಕುಂಡಿನ್ ದೊರೆಗಳ ಕಾಲಕ್ಕೆ ಸೇರಿದ್ದಾಗಿದೆ. ವಿಶ್ವರೂಪ ಅಥವಾ ಮಹೇಶ ಅಥವಾ ಸದಾಶಿವ ರೂಪದಲ್ಲಿ ಶಿವನನ್ನು ತಂಜಾವೂರಿನ ಬಳಿಯ ವೈತೇಶ್ವರ ದೇಗುಲದಲ್ಲಿ ವೈತೇಶ್ವರ ದೇಗುಲದ ಗೋಪುರದಲ್ಲಿರುವಂತೆ ಮುಂದಿನ ಅವಧಿಗಳಲ್ಲಿ ತೋರಿಸುತ್ತ ಬರಲಾಯಿತು. 12092

ಈ ಸಂದರ್ಭದಲ್ಲಿ ಗಮನಿಸಬೇಕಾದ ಅಂಶವೆಂದರೆ ಗುಪ್ತರ ಕಾಲದನಂತರ, ಅಗ್ನಿ ಪುರಾಣ, ವಾಯುಪುರಾಣ, ವಿಷ್ಣುಧರ್ಮೋತ್ತರ ಪುರಾಣ ಇತ್ಯಾದಿ ಅಂಗೀಕೃತ ಆಕರಗ್ರಂಥಗಳು, ಸಕಲರೂಪವೆನಿಸಿದ ಪ್ರತಿಮಾ ಮೂರ್ತಿಗಳ ಪ್ರಮಾಣಬದ್ಧ ವಿಗ್ರಹಗಳ ರಚನೆಗೆ ಸೂತ್ರಗಳನ್ನು ಶಾಸ್ತ್ರೀಯವಾಗಿ ನೇಯ್ದುಕೊಟ್ಟವು. ಇದು ದೈವ ಪ್ರತಿಷ್ಠಾ ಕಾರ್ಯಕ್ಕೆ ಹಾಗೂ ದೇಗುಲ ಭಿತ್ತಿ-ಕೋಷ್ಠಗಳಲ್ಲಿ ಪರಿವಾರ ದೇವತಾ ಸ್ಥಾಪನೆಗೆ ಅನುಕೂಲಕರ ಪ್ರಾಮಾಣ್ಯ ಒದಗಿಸಿತ್ತು. ಇಂಥ ಒಂದು ಪ್ರಮುಖ ಶಾಸ್ತ್ರ ಗ್ರಂಥವಾಗಿ ಕ್ರಿ.ಶ. ೯ನೇ ಶತಮಾನದ ಮಾನಸಾರವು! ಒದಗಿ, ಅದರಲ್ಲಿ ದೇಗುಲ ರಚನೆ ಹಾಗೂ ಪ್ರತಿಮಾ ನಿರ್ಮಾಣದ ವಿವಿಧ ವಿಷಯಗಳ ವಿವರವಿದೆ. ದಕ್ಷಿಣ ಭಾರತದಲ್ಲಿ ಅನೇಕ ಆಗಮ ಗ್ರಂಥಗಳು ಶಿವ, ವಿಷ್ಣು ಮತ್ತು ದುರ್ಗೆಯರ ವಿವಿಧ ಬಗೆಯ ಆರಾಧನಾ ವಿಧಾನಗಳನ್ನು ತಿಳಿಸಿವೆ. ಅಲ್ಲದೆ ಪೂಜಿಸಲ್ಪಡುವ ಪ್ರತಿಮೆಗಳ ನಿರ್ಮಾಣದ ಸೂತ್ರಗಳನ್ನು ನಿರ್ದೇಶಿಸಿ ಹೇಳಿವೆ. ಇವುಗಳಲ್ಲಿ ದೇವತೆ ಪ್ರತಿಮಾ ಪ್ರಮಾಣ, ಪ್ರತಿಮಾನಕ್ಷೆ ಹಾಗು ಪೂಜಾ ವಿಧಾನಗಳನ್ನು ವಿವರಿಸಲಾಗಿರುವ ಗ್ರಂಥಗಳೆಂದರೆ ಅಪರಾಜಿತಪ್ರಚ್ಛ, ದಿಪಾರ್ಣವ, ಈಶಾನ ಶಿವ, ಗುರುದೇವ ಪದ್ಧತಿ, ಕಾಮಿಕಾಗಮ, ಸುಪ್ರಭೇದಾಗಮ, ಅಜಿತಾಗಮ, ಕಾರಣಾಗಮ, ಕಾಶ್ಯಪಶಿಲ್ಪ, ಪೂರ್ವಕಾರಣ, ಶಿವಧರ್ಮೋತ್ತರ ಪುರಾಣ ಇತ್ಯಾದಿಗಳಾಗಿವೆ.

ಈಗಾಗಲೇ ಹೇಳಿದಂತೆ ಮೊದಲ ಚಾಲುಕ್ಯರು (ಆದಿ ಚಾಲುಕ್ಯ) ಐಹೊಳೆ, ಪಟ್ಟದಕಲ್ಲು, ಮಹಾಕೂಟ, ನಾಗರಾಳ ಹಾಗೂ ತಮ್ಮ ರಾಜಧಾನಿ ಬಾದಾಮಿಯಲ್ಲಿ ಬಹುಸಂಖ್ಯೆಯಲ್ಲಿ ಶಿವಾಲಯಗಳನ್ನು ನಿರ್ಮಿಸಿದರು. ಆಲಂಪುರದ ಬಳಿಯ ಕೂಡಲಸಂಗಮದಲ್ಲಿನ ನವಬ್ರಹ್ಮ ದೇಗುಲಗಳ ಸಮೂಹವು ಶಿವನಿಗೆ ಮೀಸಲಾದಂಥವು. ಆದಿ ಚಾಲುಕ್ಯರ ಕಾಲದವು. ಈ ದೇಗುಲಗಳ ಭಿತ್ತಿ ಹಾಗೂ ಸ್ತಂಭಗಳು ಶಿವನ ವಿವಿಧರೂಪಗಳನ್ನು ಹಾಗು ಅವನ ಪರಿವಾರದ ಕಾರ್ತಿಕೇಯ, ಗಣೇಶ, ದುರ್ಗ ಇತ್ಯಾದಿ ದೇವತೆಗಳನ್ನು ಆವರಣ ದೇವತೆಗಳಾಗಿ ತಮ್ಮ ಶಿಲ್ಪ ವೈವಿಧ್ಯವಾಗಿ ಮೈದೋರಿಕೊಂಡಿವೆ. ಪಲ್ಲವ ಶೈಲಿಯ ದೇಗುಲಗಳಲ್ಲಿ ಗರ್ಭಗೃಹದಲ್ಲಿ ಧಾರಾಲಿಂಗದ (ವೃತ್ತೀಯ ದುಂಡಾಕೃತಿಯ ಲಿಂಗಗಳ ಬದಲು ಬಹುಮುಖದ ಲಿಂಗ) ಜೊತೆಗೆ ಗರ್ಭಗೃಹದ ಹಿಂಭಿತ್ತಿಯಲ್ಲಿ ಸೋಮಸ್ಕಂದದ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಇವುಗಳನ್ನನುಸರಿಸಿ ರಾಷ್ಟ್ರಕೂಟರು ಅನೇಕ ಶಿವಾಲಯಗಳನ್ನು ನಿರ್ಮಿಸಿದರು. ಅವುಗಳಲ್ಲಿ ವಿಶೇಷತಃ ಶಿವನ ವಿವಿಧ ರೂಪಗಳನ್ನೊಳಗೊಂಡ ಎಲ್ಲೋರದ ಕೈಲಾಸ ದೇಗುಲವು ಬಂಡೆ ಕಡಿದು ಮಾಡಿದ ವಿಶಿಷ್ಟ ದೇಗುಲವಾಗಿ ಗಮನಸೆಳೆಯುತ್ತದೆ.

ಬಾದಾಮಿ ಚಾಲುಕ್ಯರ ಸಮಕಾಲೀನ ಪಲ್ಲವ ರಾಜರೂ ತಮ್ಮ ದೇಶದಲ್ಲಿ ಕೆಲವು ಮಹತ್ತರ ವಿನ್ಯಾಸದ ಹಾಗೂ ಬಂಡೆ ಕಡಿದು ಮಾಡಿದ ದೇಗುಲಗಳ ಪೈಕಿ ಅಖಂಡ ಏಕಶಿಲಾ ನಿರ್ಮಿತ ರಥಗಳು, ತೆರೆದ ಬಂಡೆಗಲ್ಲ ಮೇಲಿನ ಉಬ್ಬು ಶಿಲ್ಪಗಳು, ಸಮುದ್ರ ದಂಡೆಯ ಶಿಲಾದೇಗುಲಗಳು ಇವೆ. ಇವೆಲ್ಲ ಮಹಾಬಲಿಪುರಂನಲ್ಲಿವೆ. ಕಾಂಚೀಪುರಂನಲ್ಲಿಯ (ಕ್ರಿ.ಶ.ಸು. ೭-೮ನೇ ಶತಮಾನ) ಕೈಲಾಸನಾಥ ದೇಗುಲ ಇವೆಲ್ಲ ಬಹಳ ಪ್ರಸಿದ್ಧಗೊಂಡಿವೆ. ಸ್ಮಾರಕ ದೇಗುಲಗಳೆನಿಸುವ ಲಿಂಗಾಲಯಗಳೂ ಇದ್ದು ಅವು

ರಾಜಪೋಷಿತವಾಗಿ ನಿರ್ಮಾಣಗೊಂಡಂಥವು. ಪಲ್ಲವರ ಅವಧಿಯಲ್ಲಿ ನಿರ್ಮಾಣಗೊಂಡ ರಾಜಸಿಂಹೇಶ್ವರ ಮಹೇನ್ದ್ರ ಮರ್ವೇಶ್ವರ , ಹಾಗು ಅತ್ಯಂತಕಾಮ ಪಲ್ಲವೇಶ್ವರ ದೇಗುಲಗಳು ಆಯಾ ಪೋಷಕ ರಾಜರ ಹೆಸರಲ್ಲಿ ನಿರ್ಮಾಣಗೊಂಡವಾಗಿವೆ. ಇವಲ್ಲದೆ ಮಧ್ಯಕಾಲೀನ ಯುಗದ ಆರಂಭದಲ್ಲಿ ನಿರ್ಮಿತವಾದ ಗುರುವಾಯತನ ಗಳು ಅನೇಕ ಪಾಶುಪತ ಆಚಾರ್ಯರ ಹೆಸರಿನಲ್ಲಿಯೆ ಕಟ್ಟಲ್ಪಟ್ಟ ಶಿವಾಲಯಗಳಾಗಿವೆ.

ಶಿವಾಲಯಗಳ ವೈವಿಧ್ಯಗಳು ಮೊಳಕೆಯೊಡೆದು ಹೊಸರೂಪ ತಳೆಯುತ್ತ ಹೋದುದರ ಜೊತೆಗೆ ಅವುಗಳ ವಾಸ್ತು ವೈವಿಧ್ಯಗಳು, ಶಿವನ ಶಿಲ್ಪಗಳು ಹೊಸ ಹೊಸ ರೂಪಗಳಲ್ಲಿ ಕಾಣಿಸಿಕೊಂಡವು. ಹೀಗಾಗಿ ಶಿವನ ವಿವಿಧ ರೂಪಗಳನ್ನು ವಿಂಗಡಿಸಲಾಯಿತು. ಅನುಗ್ರಹ, ಸಂಹಾರ ಹಾಗೂ ಲೀಲಾಮೂರ್ತಿ ಶಿವನನ್ನು ಶಿವ-ಲಕುಲೀಶ, ಶಿವ-ತ್ರಿಪುರಾಂತಕ, ಶಿವ-ಲಿಂಗೋದ್ಭವ, ಶಿವ-ದಕ್ಷಿಣಾಮೂರ್ತಿ, ಶಿವ ಭಿಕ್ಷಾಟನೆ, ಶಿವ-ಕಂಕಾಳ, ಶಿವ-ವೃಷಕ್ಸೇನ, ಶಿವ-ವೃಷಭಾರೂಢ, ಶಿವವಿಷಾಪಹರಣ, ಶಿವಗಜಾಂತಕ, ಶಿವ-ಕಾಲಾರಿ, ಶಿವ-ರಾವಣಾನುಗ್ರಹಮೂರ್ತಿ, ಸ್ಕಂದ, ಉಮಾಸಹಿತ ಶಿವ, ಶಿವ-ಊರ್ಧ್ವತಾಂಡವ, ಶಿವ-ಅರ್ಧನಾರೀಶ್ವರ, ಶಿವ-ವೀಣಾಧರ, ಶಿವ-ಚಂಡೇಶಾನುಗ್ರ ಮೂರ್ತಿ, ಶಿವ-ಅಘೋರವೀರಭದ್ರ, ಶಿವ-ನಂದೀ ಅನುಗ್ರಹಮೂರ್ತಿ, ಶಿವ-ಪ್ರದೋಷಮೂರ್ತಿ, ಶಿವ-ಭೈರವ, ಶಿವ-ಗಂಗಾಧರ, ಶಿವ-ವಿಷ್ಣು ಚಕ್ರದಾನ ಮೂರ್ತಿ, ಜಲಂಧರ ವಧಾಮೂರ್ತಿಶಿವ, ಅಜ ಏಕಪಾದ, ಶಿವ-ಶರಭ ಸಂಹಾರ ಮೂರ್ತಿ, ಶಿವ-ಕಚ್ಚಪೇಶ್ವರ, ಶಿವವಾಮನ, ಶಿವ-ಕಿರಾತ, ವಿವಿಧ ನಾಟ್ಯಭಂಗಿಯ ಶಿವನಟೇಶ, ಶಿವ-ಕಾಮಾರಿ, ಇತ್ಯಾದಿ ರೂಪಗಳಲ್ಲಿ ಕಂಡು, ಶಿವಾಲಯ ಗಳಲ್ಲಿಯಂತು ಈ ರೂಪಗಳ ಶಿವನನ್ನು ಬಿಡಿಸಲಾಯಿತು. ಹಾಗೆ ನೋಡಿದರೆ ಕೆಲವು ಆಗಮ ಗ್ರಂಥಗಳಲ್ಲಿ ಶಿವನ ಪಂಚವಿಂಶತಿ ಲೀಲಾಮೂರ್ತಿ (೨೫ ರೂಪಗಳು) ಹೆಸರುಗಳ ಪಟ್ಟಿಯನ್ನು ನೀಡಿದೆ. ಶಿವನ ವೀರ-ಕೃತ್ಯಗಳ ಹಾಗೂ ದೈವಿಕ ಕ್ರಿಯೆಗಳನ್ನು ಆ ಹೆಸರುಗಳು ನಿರೂಪಿಸುತ್ತವೆ. ಹೀಗೆಯೇ ಶಿವನನ್ನು ವ್ಯಕ್ತೀಕರಣಗೊಳಿಸಿದ. ತತ್ಪುರುಷ ವಾಮದೇವ, ಸದ್ಯೋಜಾತ ಹಾಗು ಅಘೋರ ರೂಪಗಳಲ್ಲದೆ, ಪೂರ್ಣ ಮಾನುಷರೂಪದಲ್ಲಿ ಪ್ರತಿನಿಧಿಸಲ್ಪಟ್ಟ ಶಿವನಿದ್ದಾನೆ. ಇಂಥ ಶಿವನು ಚೋಳರ ಕಾಲದ ತಂಜಾವೂರಿನ ಬೃಹದೀಶ್ವರ ದೇಗುಲದ ಗರ್ಭಗೃಹದ ಭದ್ರ ಭಾಗದ ಮಾಡುಗಳಲ್ಲಿ ಕಾಣಬರುತ್ತಾನೆ.

ತಮಿಳು ದೇಶದಲ್ಲಿ ಪಲ್ಲವರ ನಂತರ ಆಳ್ವಿಕೆಗೆ ಬಂದ ಚೋಳರು ಬೃಹತ್ ದೇಗುಲ ಸಮುಚ್ಚಯ ದೇಗುಲ ಸಂಕೀರ್ಣಗಳನ್ನು ನಿರ್ಮಿಸಿದರು; ಅದರ ಜೊತೆಗೆ ಆ ಹೊತ್ತಿಗಾಗಲೇ ಇದ್ದ ದೇಗುಲಗಳ ವಿಸ್ತಾರವನ್ನು ಮತ್ತು ಹೆಚ್ಚಿಸಿದರು. ಇದಕ್ಕೆ ತಂಜಾವೂರಿನ ಬೃಹದೀಶ್ವರ, ಗಂಗೈಕೊಂಡ ಚೋಳಪುರಂನ ಬೃಹದೀಶ್ವರ, ತ್ರಿಭುವನಂನಲ್ಲಿಯ ಶಿವಕಂಪಹರೇಶ್ವರ, ತರಮಂಗಲಮ್‌ನ ಶಿವಜ್ವರಹರೇಶ್ವರ, ದರಸುರಮ್‌ನ ಶಿವ ಮತೇಶ್ವರ ದೇಗುಲಗಳು, ಇವೆಲ್ಲ ತಂಜಾವೂರು ಜಿಲ್ಲೆಯಲ್ಲಿರುವ ಎದ್ದು ಕಾಣುವ ಉದಾಹರಣೆಗಳಾಗಿವೆ. ಈ ದೇಗುಲಗಳು ವಿವಿಧ ಪ್ರತಿಮಾರೂಪಗಳಲ್ಲಿ ಶಿವನನ್ನು ಪ್ರತಿನಿಧಿಸುವ ಶಿಲೆ ಹಾಗೂ ಕಂಚಿನ ವೈವಿಧ್ಯಮಯ ಶಿಲ್ಪಗಳ ಸಂಗ್ರಹಾಲಯವೂ (ತವರ್ಮನೆ) ಆಗಿವೆ. ಪಲ್ಲವ, ಚೋಳ ವಿಜಯನಗರ ಹಾಗೂ ನಾಯಕರಾಳ್ವಿಕೆಯ ಕಾಲದಲ್ಲಿ ಶಿಲೆ ಹಾಗೂ ಗಾರೆಯಚ್ಚಿನ ಮಾಧ್ಯಮದಲ್ಲಿ ಶಿವನ ಶಿಲ್ಪಗಳನ್ನು ಮೂಡಿಸಿದದ್ದಲ್ಲದೆ ಕಂಚಿಯ ಕೈಲಾಸನಾಥ, ಪನಮಲೈನ ತಲಗಿರೀಶ್ವರ, ತಂಜಾವೂರಿನ ಬೃಹದೀಶ್ವರ ದೇಗುಲಗಳು ಹಾಗು ಹಂಪಿಯ ವಿರೂಪಾಕ್ಷ ದೇಗುಲ, ಆಂಧ್ರದ ಹಿಂದೂಪುರದ ಲೇಪಾಕ್ಷಿ ವೀರಭದ್ರ ದೇಗುಲಗಳ ಭಿತ್ತಿ ವರ್ಣಚಿತ್ರಗಳಲ್ಲೂ ಮೂಡಿಸಲಾಯಿತು. ಈ ಸಂದರ್ಭದಲ್ಲಿ ತಂಜಾವೂರಿನ ಬೃಹದೀಶ್ವರ ದೇವಾಲಯದ ಭಿತ್ತಿಗಳಲ್ಲಿರುವ ಭವ್ಯ ಶೋಭೆಯ ಛಾಯಾ ಚಿತ್ರಪಟದಲ್ಲಿ ಶಿವನನ್ನು ತ್ರಿಪುರಾಂತಕನಂತೆ ಚಿತ್ರಿಸಿರುವುದು ವಿಶೇಷ ಉಲ್ಲೇಖನೀಯ ವೆನಿಸುತ್ತದೆ.

ಕ್ರಿ.ಶಕೆಯ ಪೂರ್ವದ ಅಂತ್ಯ ಶತಮಾನಗಳಿಂದ ಹಿಡಿದು ಗುಡಿಮಲ್ಲಂನಿಂದ ಆರಂಭಿಸಿ ಗಮನಿಸಿದರೆ ಆಂಧ್ರಪ್ರದೇಶವು ಚಾಲುಕ್ಯ ಹಾಗೂ ಚಾಲುಕ್ಯೋತ್ತರ ಅವಧಿಯಲ್ಲಿ ಶಿವಾರಾಧನೆಯ ಪ್ರಬಲ ಕೇಂದ್ರವಾಗಿ ಮುಂದುವರಿದು ಕಾಣಬರುತ್ತದೆ. ಆಂಧ್ರವು ತ್ರಿಲಿಂಗದೇಶ ವೆಂದೇ ಪರಿಗಣಿತವಾದುದ್ದುಂಟು. ಏಕೆಂದರೆ ಲಿಂಗ ಕ್ಷೇತ್ರಗಳೆನಿಸಿದ ಭೀಮಾವರಂ, ದ್ರಾಕ್ಷಾರಾಮ, (ಕಾಳಹಸ್ತಿಯ)

ಕಾಳೇಶ್ವರ ಹಾಗೂ ಶ್ರೀಶೈಲ ಮಲ್ಲಿಕಾರ್ಜುನ ಕ್ಷೇತ್ರಗಳಿದ್ದುದೇ ಕಾರಣವಾಗಿತ್ತು. ವೆಂಗಿಯ ಚಾಲುಕ್ಯರು, ನಂತರ ಓರಂಗಲ್ಲಿನ ಕಾಕತೀಯರು ಶಿವನ ಆರಾಧಕರಾಗಿದ್ದರು. ಅನೇಕ ಶಿವಾಲಯಗಳನ್ನು ನಿರ್ಮಿಸಿದರು. ಅವುಗಳಲ್ಲಿ ಪಾಲಂಪೇಟೆಯ ರಾಮಪ್ಪ ದೇಗುಲ, ಮತ್ತು ಹನುಮಕೊಂಡದ ರುದ್ರೇಶ್ವರ ದೇಗುಲಗಳು ವಿಶೇಷ ಗಮನಾರ್ಹವಾಗಿವೆ.

ನೊಳಂಬರ ರಾಜಧಾನಿಯಾಗಿದ್ದ (ಕ್ರಿಶ. ೯-೧೧ನೇ ಶತಮಾನದ ಕರ್ನಾಟಕದಲ್ಲಿ) ಹೇಮಾವತಿಯಲ್ಲಿ ಬಹು ಕುತೂಹಲಕಾರಿಯಾದ ಶಿವದೇವಾಲಯವಿದೆ. ಇದು ಸಿದ್ದೇಶ್ವರ ದೇವರಿಗೆ ಮೀಸಲಾದ ಗುಡಿ ಆಗಿದೆ. ಅಪೂರ್ವವಿಶೇಷವೆಂದರೆ ಲಿಂಗಪೀಠದ ಮೇಲೆ ಲಿಂಗ ಬಾಣ ಭಾಗ) ದ ಬದಲು ಶಿವನ ಮೂರ್ತಿಯು ಆಸೀನವಾಗಿದೆ.

ನೊಳಂಬರ ಕಾಲದ ರಚನೆಯ ಅನೇಕ ಶಿವಾಲಯಗಳ ಪೈಕಿ ಕೋಲಾರ ಜಿಲ್ಲೆಯ ನಂದಿಯಲ್ಲಿರುವ ಭೋಗ ನಂದೀಶ್ವರ ಹಾಗು ಅರುಣಾಚಲೇಶ್ವರ ಗುಡಿಗಳು ಗಮನಾರ್ಹವಾಗಿವೆ. ಈ ದೇಗುಲಗಳಲ್ಲಿ ಸಂಧ್ಯಾತಾಂಡವ ಶಿವರೂಪವಲ್ಲದೆ ಶಿವನ ವಿವಿಧ ರೂಪಗಳನ್ನು ನಿದರ್ಶಿಸುವ ಉತ್ಕೃಷ್ಟ ಶಿಲ್ಪಗಳು ಇವೆ.

ಕಳಿಂಗ ಪ್ರದೇಶದಲ್ಲಿ ಗುಪ್ತರ ನಂತರದಲ್ಲಿ, ಶೈಲೋದ್ಭವರು, ಭೌಮಕರ, ಸೋಮವಂಶೀಯರು ಹಾಗೂ ಚೋಡಗಂಗರು ಇತ್ಯಾದಿ ರಾಜವಂಶಗಳು ಕ್ರಿ.ಶ. ೯ನೇ ಶತಮಾನದಿಂದ ಹಿಡಿದು ೧೩ನೇ ಶತಮಾನದ ವರೆಗೆ ಉದಿಸಿ ಆಳಿದುವು. ಈ ರಾಜವಂಶಗಳೆಲ್ಲವೂ ಮೂಲಭೂತವಾಗಿ ಶಿವಾರಾಧಕವಾಗಿದ್ದು ಕಳಿಂಗ ಪ್ರದೇಶದಲ್ಲಿ ಅನೇಕ ಶಿವಾಲಯಗಳನ್ನು ನಿರ್ಮಿಸಿದವು, ವಿಶೇಷತಃ ಕ್ರಿ.ಶ. ೭ನೇ ಶತಮಾನದ ಆರಂಭದಲ್ಲಿಯೇ ಭುವನೇಶ್ವರದ ಪರಿಸರದಲ್ಲಿ ಶತ್ರುಘ್ನೇಶ್ವರ ನಂತರ ಪರಶುರಾಮೇಶ್ವರ, ಶಿಶಿರೇಶ್ವರ, ಮಾರ್ಕಂಡೇಶ್ವರ, ಮುಕುಟೇಶ್ವರ ದೇಗುಲಗಳು ನಿರ್ಮಿಸಿ ಅದನ್ನು ಭವ್ಯ ಲಿಂಗರಾಜ ಶಿವಾಲಯದಲ್ಲಿ ನಿರ್ಮಾಣದಲ್ಲಿ ಪರ್ಯವಸಾನ ಗೊಳಿಸಿದುವು.

ಮಧ್ಯಭಾರತದ ಬಂಡೇಲ್ ಖಂಡದ ಪ್ರದೇಶದಲ್ಲಿ ಚಾಂದೇಲರು ಕುಜರಾಹುವಿನ ಸುತ್ತಮುತ್ತ ಬಹಳಷ್ಟು ಶಿವಾಲಯಗಳನ್ನು ನಿರ್ಮಿಸಿದರು. ಅವುಗಳಲ್ಲಿ ಕಂದಾರಿಯದ ಮಹಾದೇವ ಮತ್ತು ವಿಶ್ವನಾಥ ದೇಗುಲಗಳು ಬಹಳ ಗಣನೀಯವಾಗಿವೆ. ಚಂದೇಲರಿಗೆ ಮುನ್ನ ಕಲಚೂರ್ಯ ಹಾಗೂ ಕಚ್ಛಪಘಾತ ರಾಜವಂಶ ವಂಶಗಳು ಮಧ್ಯಭಾರತದಲ್ಲಿ ಅನೇಕ ಬೃಹತ್ ಭವ್ಯ ಶಿವಾಲಯಗಳನ್ನು ನಿರ್ಮಿಸಿದ್ದುಂಟು.

ಗುಪ್ತರ ಕಾಲೋತ್ತರದಲ್ಲಿ ಮಹಾ ಗುರ್ಜರ ಪ್ರತೀಹಾರ ಹಾಗೂ ಪರಮಾರ ದೊರೆಗಳು, ಹಿಮಾಚಲ ಪ್ರದೇಶವು ಸೇರಿದಂತೆ ಮಧ್ಯಭಾರತ ಮತ್ತು ಉತ್ತರ ಭಾರತಗಳಲ್ಲಿ ಬಹುಸಂಖ್ಯೆಯಲ್ಲಿ ಶಿವಾಲಯಗಳನ್ನು ಪ್ರತಿಷ್ಠಾಪಿಸಿ ಪ್ರಸಾರಗೊಳಿಸಿದರು. ಅವುಗಳಲ್ಲಿ ಕರಮಠ, ಜಗೇಶ್ವರಗಳಲ್ಲಿ ದಂಡೇಶ್ವರ ಲಕುಲೀಶನ ಹೆಸರಿನಲ್ಲಿರುವ ಶಿವಾಲಯಗಳ ಕುರಿತು ಈಗಾಗಲೇ ಪ್ರಸ್ತಾಪಿಸಲಾಗಿದೆ. ಈ ಕಾಲದ ಇಲ್ಲಿನ ಶಿವಾಲಯಗಳಲ್ಲಿ ಭಿತ್ತಿಗಳಲ್ಲಿ ಶಿವನ ವೈವಿಧ್ಯಮಯ ಶಿಲಾಶಿಲ್ಪಗಳಿದ್ದು-ಕಂಚಿನ ಬಿಡಿ ಶಿಲ್ಪಗಳೂ ಇವೆ. ರಾಜಸ್ಥಾನ ಹಾಗೂ ಗುಜರಾತಿನಲ್ಲಿ ಬಹಳಷ್ಟು ಶಿವಾಲಯಗಳು ಕಾಣಬರುತ್ತವೆ. ಎಲಿಫೆಂಟಾದಲ್ಲಿಯ ಭವ್ಯ-ಶಿವಮಹೇಶನ ಮೂರ್ತಿಯ ಸ್ಥಾಪನೆಗೆ ಮೂಡಿ ಸುವಿಕೆಗೆ ಕಲಚೂರಿ ದೊರೆಗಳೇ ಕಾರಣರಾಗಿದ್ದಾರೆ.

ಕರ್ನಾಟಕದಲ್ಲಿ ಗಂಗರು, ನೊಳಂಬರು, ರಾಷ್ಟ್ರಕೂಟರ ನಂತರದ ಕಲ್ಯಾಣಿ ಚಾಲುಕ್ಯರು, ಹಲಸಿ ಮತ್ತು ಹಾನಗಲ್ ಕದಂಬರು ದ್ವಾರಸಮುದ್ರದ ಹೊಯ್ಸಳರು, ವಿಜಯನಗರದರಸರು ಹಾಗೂ ನಾಯಕ ದೊರೆಗಳು, ಇವರೆಲ್ಲ ಬಹುತೇಕ ಶಿವಾರಾಧಕರಾಗಿದ್ದರು. ಈ ರಾಜವಂಶಿಕರ ಅನೇಕ ಶಾಸನಗಳು ಶಿವಸ್ತುತಿಯಿಂದ ಅಂದರೆ "ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ'' ಎಂದು ಆರಂಭಗೊಂಡಿವೆ. ಅರ್ಥಗರ್ಭಿತವಾಗಿ ಲಿಂಗರೂಪಿ ಶಿವನನ್ನು 'ಮೂಲಸ್ತಂಭ' ಎಂದೇ ಕರೆದಿವೆ. ಈ ರಾಜವಂಶೀಯರು ಅಚ್ಚರಿಯ ಅನೇಕ ಭವ್ಯ ಶಿವಾಲಯ ಗಳನ್ನು ನಿರ್ಮಿಸಿದರು. ಅವುಗಳಲ್ಲಿ ಹಾವೇರಿಯ ಸಿದ್ದೇಶ್ವರ ದೇಗುಲ, ಲಕ್ಕುಂಡಿಯ ಕಾಶಿವಿಶ್ವೇಶ್ವರ, ಇಟ್ಟಗಿಯ

ಮಹಾದೇವ, ಡಂಬಳದ ದೊಡ್ಡ ಬಸಪ್ಪ, ಗದುಗಿನ ಸೋಮೇಶ್ವರ ದೇವಾಲಯಗಳು ಇವೆಲ್ಲ ಕಲ್ಯಾಣ ಚಾಲುಕ್ಯರ ಕಾಲದವಾಗಿವೆ; ಹಳೆಬೀಡಿನ ಹೊಯ್ಸಳೇಶ್ವರ ದೇಗುಲ ಹೊಯ್ಸಳರ ಕಾಲದ್ದಾದರೆ ಚೌಡದಾನಪುರದ ಮುಕ್ತೇಶ್ವರ ಹಾನುಗಲ್ಲಿನ ತಾರಕೇಶ್ವರ ದೇವಾಲಯಗಳು ಮುಂದಿನ (ನಂತರದ) ಕದಂಬರ ಕಾಲದ್ದಾಗಿವೆ. ಕಂಚಿಯ ಏಕಾಂಬರೇಶ್ವರ, ಹಂಪಿಯ ವಿರೂಪಾಕ್ಷ, ಲೇಪಾಕ್ಷಿಯ ವೀರಭದ್ರ ದೇವಾಲಯಗಳು ವಿಜಯನಗರದರಸರ ಕಾಲದವಾಗಿವೆ. ನಾಯಕರ ಕಾಲದಲ್ಲಿ ಅನೇಕ ಶಿವಾಲಯಗಳು ಇಡೀ ದೇಶದಲ್ಲಿ ಜನಪ್ರಿಯವಾಗಿ ಸಾರ್ವತ್ರಿಕವಾಗಿ, ವ್ಯಾಪಕವಾಗಿದ್ದ ಶಿವಾರಾಧನೆಯ ದ್ಯೋತಕವಾಗಿವೆ.

ಈ ಮೇಲಿನ ಸಂಕ್ಷಿಪ್ತ ವಿವರಣೆಯ ಮೂಲಕ ಇಡೀ ಭಾರತೀಯ ಉಪಖಂಡದಲ್ಲಿ ಪ್ರಚಲಿತವಿರುವ ಶಿವಾರಾಧನೆಯ ಸಂಗತಿಯನ್ನು ಇಡೀ ದೇಶದಲ್ಲಿ ಹರಡಿಕೊಂಡಿರುವ ಅನೇಕ ಶಿವದೇಗುಲಗಳ ಉದಾರಣೆಗಳಿಂದ ಗಮನಿಸಲಾಯಿತು. ಒಂದು ಸಣ್ಣ ಸಾಂಕೇತಿಕ ಮತ್ತು ಸರಳ ಸಾಮಾನ್ಯ ಲಿಂಗಾಕೃತಿಯಿಂದ ಹಿಡಿದು ಶಿವನ ವಿಕಸಿತ ವ್ಯಕ್ತಿರೂಪಗಳಾಗಿ ಯುಗ ಯುಗಳಲ್ಲಿ ಶಿವನು ಮೂಡಿಬಂದ ಬಗೆಯನ್ನು ಗಮನಿಸಲಾಯಿತು. ಅದೇನೇ ಇರಲಿ ಎಲ್ಲ ಶಿವಾಲಯ ಗಳಲ್ಲಿ ಮುಖ್ಯವಾಗಿ ಲಿಂಗರೂಪವನ್ನೆ ಇಂದಿಗೂ ಪ್ರಧಾನ ದೇವತಾ ಸ್ವರೂಪವೆಂದು ಪೂಜಿಸಲಾಗುತ್ತಿದೆ. ಈ ಕೆಲವು ದೇವಾಲಯಗಳು ಬಹು ಪವಿತ್ರವೆಂದು ಪರಿಭಾವಿಸಲ್ಪಟ್ಟು ಆ ಪೈಕಿ ೧೨ ಶಿವ ದೇಗುಲಗಳಿರುವ ನೆಲೆಯನ್ನು ಜ್ಯೋತಿರ್ಲಿಂಗ ಕ್ಷೇತ್ರವೆಂದು ಜನಪ್ರಿಯವಾಗಿ ಪರಿಗಣಿಸ ಲಾಗಿದೆ. ಈ ಜ್ಯೋತಿರ್ಲಿಂಗಗಳ ದರ್ಶನವು ಬದುಕಿಗೆ ಮಹಾಸೌಭಾಗ್ಯ ತರುತ್ತದೆ ಎಂಬ ನಂಬಿಕೆ ಇದೆ. ೧೨ ಜ್ಯೋತಿರ್ಲಿಂಗ ಕ್ಷೇತ್ರಗಳು :

೧. ಗುಜರಾತಿನ ಸೌರಾಷ್ಟ್ರದಲ್ಲಿನ ಪ್ರಭಾಸ ಪಟ್ಟಣದ ಸೋಮನಾಥ ಲಿಂಗ
೨. ಆಂಧ್ರಪ್ರದೇಶದ ಶ್ರೀಶೈಲದಲ್ಲಿನ ಮಲ್ಲಿಕಾರ್ಜುನ ಲಿಂಗ
೩. ಉಜ್ಜಯಿನಿಯ ಮಹಾಬಲ ಮತ್ತು ಓಂಕಾರೇಶ್ವರ ಹಾಗು ಮಧ್ಯಪ್ರದೇಶದ ಓಂಕಾರಲಿಂಗಗಳು.
೪. ಉತ್ತರ ಪ್ರದೇಶದ ಕೇದಾರನಾಥದ ಕೇದಾರೇಶ್ವರ ಲಿಂಗ
೫. ಮಹಾರಾಷ್ಟ್ರದ ಪುಣೆ ಬಳಿಯ ಭೀಮಾಶಂಕರಲಿಂಗ
೬. ಉತ್ತರ ಪ್ರದೇಶದ ವಾರಣಾಸಿ ಕಾಶಿಯ ವಿಶ್ವನಾಥ ಲಿಂಗ
೭. ಮಹಾರಾಷ್ಟ್ರದ ನಾಸಿಕ್ ಬಳಿಯ ತ್ರಿಯಂಬಕೇಶ್ವರ ಲಿಂಗ
೮. ಮಹಾರಾಷ್ಟ್ರದ ಪರಳಿಯ್ ವೈದ್ಯನಾಥೇಶ್ವರ ಲಿಂಗ
೯. ಮಹಾರಾಷ್ಟ್ರದ ಪರಭಣಿಯ ಬಳಿಯ ಔಂಢನ ನಾಗನಾಥೇಶ್ವರಲಿಂಗ
೧೦. ತಮಿಳುನಾಡಿನ ರಾಮೇಶ್ವರದ ರಾಮೇಶ್ವರಲಿಂಗ
೧೧. ಮಹಾರಾಷ್ಟ್ರದ ಎಲ್ಲೋರದಲ್ಲಿಯ ಗ್ರೀಷ್ಮೇಶ್ವರಲಿಂಗ

ಭಾರತದಲ್ಲಿ ಈ ಕ್ಷೇತ್ರಗಳ ಭೌಗೋಳಿಕ ವಲಯದ ವಿಸ್ತಾರವೇ ಶಿವ ಆರಾಧನೆಯ ವಿಶಾಲ ವ್ಯಾಪ್ತಿಯನ್ನು ಸೂಚಿಸುತ್ತದೆ. ಇನ್ನೊಂದು ಕುತೂಹಲಕಾರಿ ಅಂಶವೆಂದರೆ ಈ ದ್ವಾದಶ ಕ್ಷೇತ್ರಗಳಲ್ಲಿ ಐದು ಕ್ಷೇತ್ರಗಳು ಮಹಾರಾಷ್ಟ್ರದಲ್ಲಿದ್ದು ಶಿವನ ಆರಾಧನೆಯ ಪ್ರಾಧಾನ್ಯವು ಆ ಪ್ರದೇಶದಲ್ಲಿರುವ ಸೂಚನೆ ಆಗಿದೆ.

ಈ ಶಿವ ವಿಕಸನ ಪ್ರಕ್ರಿಯೆಯು ಏಕಮುಖ ಲಿಂಗದಿಂದ ಆರಂಭಿಸಿ ಚತುರ್ಮುಖಲಿಂಗ ಪ್ರಕಾರದ ಮೂಲಕ ಪಂಚ ಮುಖಲಿಂಗಕ್ಕೆ ಸಾಗಿ ನಂತರ ವೈವಿಧ್ಯಪೂರ್ಣ ಶಿವನ ಪ್ರತಿಮಾ ಮೂರ್ತಿಗಳಲ್ಲೂ ಕಾಣಿಸಿಕೊಂಡಿದೆ. ಈ ಪ್ರತಿಮೆಗಳ ಪೈಕಿ ಶಿವನಟರಾಜ ಪ್ರತಿಮೆಯು ಅವನ ವಿಶ್ವನಾಟ್ಯ ಅಥವಾ ಜಗದ್ ನೃತ್ಯ ರೂಪದಿಂದ ಪರಿಭಾವಿಸಲ್ಪಟ್ಟವಾದದ್ದು. ಕಾರಣ ಶಿವನ ಈ ಸ್ವರೂಪವು, ಶಿವನ ಕಾರ್ಯಗಳಾದ ಸೃಷ್ಟಿ, ಸ್ಥಿತಿ ಸಂಹಾರ ಅಥವಾ ಲಯ, ಅನುಗ್ರಹ ಹಾಗೂ ತಿರೋಭವ ಸೇರಿದಂತೆ ಆದ ಪಂಚಕ್ರಿಯೆಯ ಹರಳುಗಟ್ಟಿದ ಪರಿಕಲ್ಪನೆ ಆಗಿದೆ. ತಂಜಾವೂರಿನ ಚೋಳರು ವಿವಿಧ ನೃತ್ಯ ಭಂಗಿಗಳ ಕಂಚಿನ ಅತ್ಯಂತ ಉತ್ಕೃಷ್ಟ ಶಿವ-ನಟರಾಜನ ಪ್ರತಿಮಾ ಮೂರ್ತಿಗಳನ್ನು ತಯಾರಿಸಿದರು. ಅವುಗಳಲ್ಲಿ ತಮಿಳುನಾಡಿನ ಉತ್ತರ ಆರ್ಕಾಟ್ ಜಿಲ್ಲೆಯ ತಿರುವಲಂಗಾಡುವಿನ ಶಿವ-

ನಟರಾಜ ಪ್ರತಿಮೆಯು ಅತ್ಯಂತ ಗಮನಾರ್ಹವಾಗಿದೆ. (ವಿಶಿಷ್ಟವಾಗಿದೆ) ನಲ್ಲೂರು ತಿರುವಾರಂಗುಲಮ್, ಕುರ್‍ರಂ, ದಕ್ಷಿಣ ಆರ್ಕಾಟ್ ಜಿಲ್ಲೆ ಹಾಗೂ ತಂಜಾವೂರು ಜಿಲ್ಲೆಯ ಶಿವಪುರದ ಪ್ರತಿಮಾ ಮೂರ್ತಿಗಳು ಹೀಗೆಯೇ ಗಮನಾರ್ಹವಾಗಿವೆ. ಇವುಗಳಲ್ಲಿ ಕೊನೆಯದು (ಶಿವಪುರ) ಚೋಳರ ಕಾಲದ ಅತ್ಯಂತ ಸುಂದರವಾದ ಪ್ರತಿಮಾ ಮೂರ್ತಿಯಾಗಿದ್ದು, ಕ್ರಿ.ಶ. ೧೦ನೇ ಶತಮಾನದ್ದಾಗಿದೆ, ಹಾಗೂ ಶಿವನನ್ನು ಭುಜಂಗ ತ್ರಾಸಿತ ಅಥವಾ ಆನಂದ ತಾಂಡವ ಭಂಗಿಯಲ್ಲಿ ತೋರಿಸಲಾಗಿದೆ. ಅದರ ಪರಿಮಾಣವು ೧೩೭ ಸೆಂ.ಮೀ ಇದ್ದು, ತೂಕವು ೧೮೪ ಕೆ.ಜಿಯಷ್ಟಿದೆ. ಅಲ್ಲದೆ ಅದು ಚೋಳರ ಅತ್ಯಂತ ಮಹತ್ವಾಕಾಂಕ್ಷೆಯ ಕಲಾತ್ಮಕ ಉತ್ಪನ್ನದ ಮೂರ್ತಿ ಶಿಲ್ಪಗಳಲ್ಲಿ ಒಂದಾಗಿದೆ. ಹೀಗೆ ಪ್ರಾಚೀನ ಇತಿಹಾಸಕಾಲ ದಿಂದ ಅಂದರೆ ಕ್ರಿ.ಪೂ. ೩ನೇ ಶತಮಾನದಿಂದ ಹಿಡಿದು ಶಿವಾರಾಧನೆಯು ಶತ ಶತಮಾನಗಳಲ್ಲಿ ಮುಂದುವರಿಯುತ್ತ ಇಂದಿನ ವರೆಗೆ ಬಂದಿದೆ. ಹಾಗೂ ನೇಪಾಳ ಮತ್ತು ಆಗ್ನೇಯ ಏಷ್ಯಾ ಸೇರಿದಂತೆ ಇಡೀ ಉಪಖಂಡದ ವಿಸ್ತಾರದಲ್ಲಿ ಶಿವನ ಆರಾಧನೆಯ ಪ್ರಸಾರಗೊಂಡಿದೆ.

**ಆಕರಗಳು (ಇಂಗ್ಲಿಷ್ ಭಾಷೆಯವು)**


1. ಎಂ. ವೆಂಕಟರಾಮಯ್ಯ, ೧೯೬೨ ಎ, ಚತುರ್ಮುಖಲಿಂಗ ಫ್ರಂವ್ ಸಿರ್‌ಪುರ, ರಾಯಚೂರ್ ಡಿಸ್ಟ್ರಿಕ್ಟ್, ಮಧ್ಯಪ್ರದೇಶ ಜರ್ನಲ್ ಆಫ್ ಇಂಡಿಯನ್ ಹಿಸ್ಟರಿ ವಾಲ್ಯೂಮ್ XI ಪಾರ್ಟ್ II
2. ಎಂ.ಸಿ. ಜೋಷಿ, ಬಿ.ಎಂ. ಪಾಂಡೆ, ೧೯೬೮, ದಿ ಟೆಂಪಲ್ಸ್: ಅನ್ ಆರ್ಕಿಯೋಲಾಜಿಕಲ್ ಸರ್ವೆ ಇನ್ ಕುಮಾನ್ ಸೊವೆನೀರ್, ಆಲ್ಮೋರ
3. ಕೃಷ್ಣದೇವ, ೧೯೬೯, ಟೆಂಪಲ್ಸ್ ಆಫ್ ನಾರ್ತ್ ಇಂಡಿಯ, ನ್ಯಾಷನಲ್ ಬುಕ್ ಟ್ರಸ್ಟ್, ನ್ಯೂ ಡೆಲ್ಲಿ.
4. ಜೆ.ಎನ್. ಬ್ಯಾನರ್ಜಿ, ೧೯೭೪, ಡೆವಲಪ್‌ಮೆಂಟ್ ಆಫ್ ಹಿಂದು ಎಕೊನಾಗ್ರಫಿ, ನ್ಯೂ ಡೆಲ್ಲಿ.
5. ಬಿ.ಎನ್. ಶರ್ಮ, ೧೯೭೬, ಐಕೊನಾಗ್ರಫಿ ಆಫ್ ಸದಾಶಿವ ನ್ಯೂ ಡೆಲ್ಲಿ.
6. ಸಿ. ಶಿವರಾಮಮೂರ್ತಿ, ೧೯೭೬, ಶತರುದ್ರೀಯ ವಿಭೂತಿ ಆಫ್ ಶಿವಾಸ್ ಐಕೊನಾಗ್ರಫಿ, ಅಭಿನವ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ.
7. ಮಾರ್ಗ್ ಪಬ್ಲಿಕೇಶನ್ಸ್, ೧೯೮೦, ಸ್ಲೆಂಜರ್ಲ್ ಆಫ್ ತಮಿಳುನಾಡು, ಮುಂಬಯಿ.
8. ಐ.ಕೆ. ಶರ್ಮ, ೧೯೮೨, ಡೆವಲಪ್‌ಮೆಂಟ್ ಆಫ್ ಅರ್ಲಿ ಶಿವ ಆರ್ಟ್ ಅಂಡ್ ಆರ್ಕಿ ಟೆಕ್ಚರ್, ನ್ಯೂ ಡೆಲ್ಲಿ.
9. ಜೊನ್ನ ಗೊಟ್‌ಫ್ರೈಡ್ ವಿಲಿಯಮ್ಸ್, ೧೯೮೩, ದಿ ಆರ್ಟ್ ಆಫ್ ಗುಪ್ತ ಇಂಡಿ, ಹೆರಿಚೇಟಜ್ ಪಬ್ಲಿಷರ್ ನ್ಯೂ ಡೆಲ್ಲಿ.
10. ಎಸ್.ಕೆ. ರಾಮಚಂದ್ರರಾವ್, ೧೯೯೨, ಪ್ರತಿಮಾ ಕೋಶ, ವಾಲ್ಯೂಮ್ ೬ ಕಲ್ಪತರು ರೀಸರ್ಚ್ ಅಕಾಡೆಮಿ, ಬೆಂಗಳೂರು
11. ಐ.ಕೆ. ಶರ್ಮ., ೧೯೯೪, ಪರಶುರಾಮೇಶ್ವರ ಟೆಂಪಲ್ ಅಟ್ ಗುಡಿಮಲ್ಲಂ (ಎ ಪ್ರೋಬ್ ಇಂಟು ಇಟ್ಸ್ ಆರಿಜಿನ್) ದತ್‌ಸನ್ಸ್, ನಾಗಪುರ್
12. ಕೆ.ಕೆ. ಚಕ್ರವರ್ತಿ (ಎಡಿಟರ್, ಉಜ್ಜೈನ್ - ದಿ ಸಿಟಿ ಎಟರ್ನಲ್, ನ್ಯೂ ಡೆಲ್ಲಿ
13. ಎನ್. ಕೃಷ್ಣಮೂರ್ತಿ (ಎಡಿಟರ್), ೨೦೦೧ ಈಶ್ವರ ದರ್ಶನ (ಎ ಕಲೆಕ್ಷನ್ ಆಫ್ ಎಸ್ಸೇಸ್ ಇನ್ ಕನ್ನಡ ಅಂಡ್ ಇಂಗ್ಲೀಷ್ ಎಕ್ಸ್‌ಲೂಸೀವ್‌ಲಿ ಆನ್‌ಶಿವ) ನಂದನೇಶ್ವರ ಟೆಂಪಲ್ ಕಮಿಟಿ, ಬೀಚ್ ರೋಡ್, ಪೆರಂಬೂರ್, ಸೌತ್‌ಕೆನಾರಾ (ಕರ್ನಾಟಕ)
14. ರಾಮಚಂದ್ರಕಾಕ್, ೧೯೩೩, ಏನ್ಷಿಯಂಟ್ ಮಾನ್ಯುಮೆಂಟ್ಸ್ ಆಫ್ ಕಾಶ್ಮೀರ್ (ರೀಪ್ರಿಂಟ್ ೧೯೭೧) ಸಾಗರ್ ಪಬ್ಲಿಕೇಶನ್ಸ್ ನ್ಯೂ ಡೆಲ್ಲಿ.

# ಶರಣ ಸಿದ್ಧಾಂತದ ಹಿನ್ನೆಲೆಯಲ್ಲಿ ಭ್ರಷ್ಟಾಚಾರ ನಿರ್ಮೂಲನೆ : ಒಂದು ಚಿಂತನೆ

– ಎಚ್.ಎಸ್. ಸಿದ್ದಗಂಗಪ್ಪ *

**ಸ**ರ್ಕಾರದ ಭ್ರಷ್ಟಾಚಾರ ತನಿಖೆ, ಭ್ರಷ್ಟರಿಗೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪಟ್ಟ. ಜಂಟಾ ವಿಚಾರಣೆಗೆ ಸಿವಿಲ್‌ಕೋರ್ಟು ಆವರಣದಲ್ಲಿ ವಿಶೇಷ ಕೋರ್ಟ್, ಮಹಾನಗರ ಪಾಲಿಕೆಯಲ್ಲಿ ವಂಚಕರಿಗೆ ಬಡ್ತಿ, ನಗರಸಭೆ ಭ್ರಷ್ಟಚಾರ ಸಿಬಿಐ ತನಿಖೆಗೆ ಆಗ್ರಹ. ಐಟಿಪಿ ಹಗರಣ; ಶಿಸ್ತುಕ್ರಮಕ್ಕೆ ಲೋಕಾಯುಕ್ತರ ಶಿಫಾರಸ್ಸು, ನಕಲಿ ಛಾಪಾ ಕಾಗದ ಹಗರಣ ಸಿಬಿಐ ತನಿಖೆಗೆ ಕೇಂದ್ರದ ನಿರ್ಧಾರ. ಮದ್ಯ ಖರೀದಿಯಲ್ಲಿ ಭ್ರಷ್ಟಾಚಾರ, ಹಣ ದುರುಪಯೋಗ; ಕ್ರಮಕ್ಕೆ ಶಿಫರಸು. ಲಂಚ : ಪುರಸಭಾ ಮುಖ್ಯಾಧಿಕಾರಿ ಬಂಧನ, ಹಣ ವಸೂಲಿ; ನಕಲಿ ಲೋಕಾಯುಕ್ತ ಅಧಿಕಾರಿ ಬಂಧನ, ದರೋಡೆ ಸಂಚು : ಐವರ ಬಂಧನ, ಭ್ರಷ್ಟಚಾರ ಕ್ಷಮಿಸಬೇಡಿ. ನಕಲಿ ವೈದ್ಯಕೀಯ ಬಿಲ್ ; ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿ ಪಂಗನಾಮ, ೮ ಮಂದಿ ಬಂಧನ; ಹಿರಿಯ ವೈದ್ಯರ ವಂಚನೆ ಬಯಲಿಗೆ, ಭ್ರಷ್ಟ ನೌಕರರ ವಿರುದ್ಧ ಕ್ರಮ, ಛಾಪಾ ಕಾಗದ : ಮತ್ತಷ್ಟು ಬಂಧನ ಸಾಧ್ಯತೆ, ರಾಜಕಾರಣ, ಪೋಲೀಸ್ ಅಧಿಕಾರಿಗಳ ಪಾತ್ರ; ವಿಚಾರಣೆಯಲ್ಲಿ ವೈದ್ಯರಿಗೆ ಹೈಕೋರ್ಟ್ ತರಾಟೆ, ಸಿಇಟಿ ಪ್ರಶ್ನೆಪತ್ರಿಕೆ ಬಯಲು; ಮಹತ್ತರ ಸುಳಿವು ಲಭ್ಯ. ಹೊಸದಾಗಿ ವಸತಿ ಗೃಹನಿರ್ಮಾಣಕ್ಕೆ ಆದೇಶ; ವಸತಿ ಗೃಹ ಕುಸಿತಕ್ಕೆ ಹಣಕಾಸು ನಿರ್ವಾಹಣೆಯಲ್ಲಿ ಅವ್ಯವಹಾರ ಬೆಳಕಿಗೆ, ಲಂಚಕೊಳಗಾದ ಇನ್ಸ್‌ಪೆಕ್ಟರ್ ತನಿಖೆಗೆ ಕಮಿಷನರ್ ಆದೇಶ, ಸಾರಿಗೆ ವಂಚನೆ ಪ್ರಕರಣ; ೧೧೩ ಸಿಬ್ಬಂದಿ ಅಮಾನತು.

ಮೇಲಿನ ಶೀರ್ಷಿಕೆಗಳು ಇತ್ತೀಚಿನ ದಿನಪತ್ರಿಕೆಗಳಲಿ ಪ್ರಕಟವಾದ ಭ್ರಷ್ಟಾಚಾರಕ್ಕೆ ಸಂಬಂಧಿಸಿದ ಕೆಲವು ತುಣುಕುಗಳು. ಇವೆಲ್ಲ ಭ್ರಷ್ಟಾಚಾರದ ವಿವಿಧ ಮುಖಗಳಿಗೆ ಸಂಬಂಧಿಸಿದ ಚಿತ್ರಣ. ಭ್ರಷ್ಟಚಾರವೆಂದರೆ ಅನೀತಿಯಿಂದ, ಅಧರ್ಮದಿಂದ ಅಕ್ರಮವಾಗಿ ಸಂಪಾದಿಸಿದ್ದು. ಭ್ರಷ್ಟಚಾರವನ್ನು ಕುರಿತು ಬರೆಯುವುದೆಂದರೆ; ಚಿಂತನೆ ಮಾಡುವುದೆಂದರೆ **'ಗಿಂಡಿಯಲ್ಲಿ ಗೊಮ್ಮಟನಿಗೆ ಅಭಿಷೇಕ ಮಾಡಿದಂತೆ', 'ಕನ್ನಡಿಯುಲ್ಲಿ ಕರಿಯುನ್ನು ಅಡಗಿಸಿದಂತೆ'** ಆಗುತ್ತದೆ. ಇವತ್ತು ನಾನಾ ಕ್ಷೇತ್ರಗಳಲ್ಲಿ ವಿವಿಧ ರೀತಿಗಳಲ್ಲಿ ಭ್ರಷ್ಟಾಚಾರ ತುಂಬಿ ಹೋಗಿದೆ. ಇದಕ್ಕೆ ಕಾರಣಗಳು ನೂರಾರು, ಸಾವಿರಾರು. ಹುಡುಕುತ್ತಾ ಹೊದರೆ ಕೊನೆಯಿಲ್ಲ, ಮೊದಲಿಲ್ಲ. ಅಷ್ಟರ ಮಟ್ಟಿಗೆ ಭ್ರಷ್ಟಾಚಾರ ಪಾರ್ಥೇನಿಯಂ ಕಳೆಯಂತೆ ವ್ಯಾಪಿಸಿದೆ. ನಾವು ಇಂದು ಎಷ್ಟೇ ಕಷ್ಟಪಟ್ಟು ಹುಡುಕಿದರೂ ಭ್ರಷ್ಟಚಾರವಿಲ್ಲದ ಮುಕ್ತ ಕ್ಷೇತ್ರ ನಮಗೆ ಕಂಡುಬರುವುದಿಲ್ಲ. ಒಟ್ಟಾರೆ ಇಡೀ ವ್ಯವಸ್ಥೆಯೆ ಹದಗೆಟ್ಟು ಭ್ರಷ್ಟಾಚಾರದ ಕೂಪವಾಗಿದೆ.

ಭ್ರಷ್ಟಾಚಾರ ಇಂದು ನಿನ್ನೆಯದಲ್ಲ ಸಾವಿರಾರು ವರ್ಷಗಳಿಂದ ಒಂದಲ್ಲ ಒಂದು ರೂಪದಲ್ಲಿ ಗುಪ್ತಗಾಮಿನಿಯಾಗಿ, ಕೆಲವೊಮ್ಮೆ ಭೋರ್ಗರೆಯುತ್ತಾ ಹರಿದು ಬಂದಿರುವುದನ್ನು ಇತಿಹಾಸ, ಪುರಾಣಗಳ ಪುಟಗಳ ಮೇಲೆ ಕಣ್ಣಾಡಿಸಿದಾಗ ಗೋಚರವಾಗುತ್ತದೆ. ಮೋಸ, ವಂಚನೆ, ಕಳ್ಳತನ, ದರೋಡೆ ಇವೆಲ್ಲವೂ ಭ್ರಷ್ಟಚಾರ ಎಂಬ ವೃಕ್ಷದ ಬೇರುಗಳೆ.

ಈ ಭ್ರಷ್ಟಾಚಾರವೆಂಬ ಮಹಾವೃಕ್ಷದ ಬೇರುಗಳು ಎಷ್ಟು ಆಳಕ್ಕೆ ಹೋಗಿವೆ ಎಂದರೆ, ಅವುಗಳ ಮೂಲವನ್ನು ಕಂಡುಹಿಡಿಯುವುದೇ ಕಷ್ಟವಾಗಿದೆ. ಒಂದು ರೆಂಬೆಯನ್ನು ಕತ್ತರಿಸಲು ಹೋದರೆ ಆ ಜಾಗದಲ್ಲಿ ಮತ್ತೊಂದು ಬೇರು ಚಿಗುರುತ್ತದೆ, ರೆಂಬೆ ಕೊನರುತ್ತದೆ. ಇಂತಹ ವಿಷವರ್ತುಲದಲ್ಲಿ ಬದುಕಬೇಕಾದ ಅನಿವಾರ್ಯತೆ ನಮ್ಮದಾಗಿದೆ.

ಸರ್ಕಾರ ಬಡವರಿಗಾಗಿ ನಿರ್ಮಿಸುವ ಮನೆಗಳ ನಿರ್ಮಾಣ ಕಾರ್ಯ ಮುಗಿಯುವ ಮುನ್ನವೇ ಕುಸಿತ, ಬಿರುಕು, ರಸ್ತೆ ನಿರ್ಮಾಣ ಮಾಡಿದ ಒಂದೆರಡು ತಿಂಗಳುಗಳಲ್ಲಿಯೇ ಸಂಚಾರಕ್ಕೆ ಯೋಗ್ಯವಾಗದಂತ ದುಸ್ಥಿತಿ, ಸೇತುವೆ ಉದ್ಘಾಟನೆಯ ಮುನ್ನವೇ ಬಿರುಕು, ಕಾಮಗಾರಿಗಳು ಪ್ರಾರಂಭ ಆಗದೆ ಇದ್ದರೂ ಹಣ ಬಿಡುಗಡೆ, ಬಾವಿಗಳನ್ನು ತೋಡದೆ ಇದ್ದರೂ, ಬೋರ್‌ವೆಲ್ ಕೊರೆಸದೇ ಇದ್ದರೂ ಸರ್ಕಾರಿ ಫೈಲುಗಳಲ್ಲಿ ಫಲಾನುಭವಿಗಳಿಗೆ ಹಣ ಸಂದಾಯ. ಇಂತಹ ಉದಾಹರಣೆಗಳು ನೂರಾರು. ಕಳಪೆ

* ೫೩/೧, ಶಿವಕೃಪ, ೩ನೇ ಅಡ್ಡರಸ್ತೆ, ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು–೫೬೦ ೦೭೨

ಗುಣಮಟ್ಟದ ವಸ್ತುಗಳನ್ನು ಬಳಸುವುದು, ಕಳಪೆ ಕಾಮಗಾರಿಗಳು ನಿರ್ವಹಣೆ, ಇವೆಲ್ಲ ಭ್ರಷ್ಟಾಚಾರದ ಮುಖಗಳೆ. ಇದು ಒಂದು ಕ್ಷೇತ್ರವಾಯಿತು. ಇಂತಹ ಅನೇಕ ಕ್ಷೇತ್ರಗಳಲ್ಲಿ ಭ್ರಷ್ಟಾಚಾರದ ಕರಾಳ ಛಾಯೆ ದಟ್ಟವಾಗಿ ವ್ಯಾಪಿಸಿರುವುದನ್ನು ಪತ್ತೆ ಮಾಡಲು ಯಾವುದೇ ರೀತಿಯ ದೂರದರ್ಶಕ ಮಾಪನ ಬೇಕಾಗುವುದಿಲ್ಲ. ಎಲ್ಲವೂ ಮುಕ್ತವಾಗಿ, ರಾಜಾರೋಷವಾಗಿ ದಿನನಿತ್ಯ ನಮ್ಮ ಕಣ್ಣುಮುಂದೆ ನಡೆಯುವ ಘಟನೆಗಳು.

ಭ್ರಷ್ಟಾಚಾರಕ್ಕೆ ಕಾರಣಗಳು ಹುಡುಕುತ್ತಾ ಹೋದಂತೆ ನಮಗೆ ಅನೇಕ ವಿಚಾರಗಳು ವ್ಯಕ್ತವಾಗುತ್ತವೆ. ಇದಕ್ಕೆ ಮೂಲಕಾರಣ ದುರಾಸೆ. ಮನುಷ್ಯನಿಗೆ ಆಸೆ ಇರಬೇಕು, ಅದು ಸಹಜ. ಆದರೆ ದುರಾಸೆ ಇರಬಾರದು. ಇಂದಿನ ಸಮಾಜದ ಅವ್ಯವಸ್ಥೆಗೆ. ಅಸಮಾನತೆಗೆ, ಹದಗೆಟ್ಟ ಪರಿಸ್ಥಿತಿ ನಿರ್ಮಾಣಕ್ಕೆ ದುರಾಸೆಯೇ ಕಾರಣ. ಕೂಡಿಡಬೇಕು ಎನ್ನುವ, ಹಾಗೆ ಕೂಡಿಟ್ಟಿದ್ದು, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಅನುಭವಿಸಬೇಕು. ಅವರ್‍ಯಾರು ಕಷ್ಟಪಡದೆ, ಬೆವರು ಸುರಿಸದೆ ಸುಖವಾಗಿ ಕೂತು ತಿನ್ನಬೇಕು. ಈ ಪ್ರವೃತ್ತಿ ನಮ್ಮೊಳಗೆ ಮನೆಮಾಡಿಕೊಂಡಿರುವುದೇ ಇಂದು ನಡೆಯುವ ಹಲವಾರು ಅನರ್ಥಗಳಿಗೆ ಕಾರಣ.

ಇವತ್ತು ನಾವು ಯಾವುದೇ ಕ್ಷೇತ್ರವನ್ನು ಒಳಹೊಕ್ಕಿನೋಡಿದಾಗ ತತ್ತ್ವಕ್ಕೆ, ಆದರ್ಶಕ್ಕೆ, ಪ್ರಾಮಾಣಿಕತೆಗೆ ಬದ್ಧರಾಗಿ ಸೇವೆಸಲ್ಲಿಸುವ, **'ಜನಸೇವೆಯ ಜನಾರ್ಧನ ಸೇವೆ'** ಎಂದು ಭಾವಿಸುತ್ತಾ ತ್ರಿಕರಣ ಶುದ್ದರಾಗಿ ಸೇವೆಸಲ್ಲಿಸುವ ಅಧಿಕಾರಿಗಳಿದ್ದಾರೆ. ಸಿಬ್ಬಂದಿ ವರ್ಗದವರಿದ್ದಾರೆ. ರಾಜಕಾರಣಿ ಗಳಿದ್ದಾರೆ. ಆದರೆ ಅವರ ಸಂಖ್ಯೆ ತುಂಬಾ ವಿರಳ. ಎಣಿಕೆ ಮಾಡುವಷ್ಟು ಸಂಖ್ಯೆಯಲ್ಲಿ ಕಾಣಸಿಗುವಂತಹವರು. ಬೆತ್ತಲೆ ರಾಜ್ಯದಲ್ಲಿ ಬಟ್ಟೆ ಹಾಕಿಕೊಂಡವರೇ ಹುಚ್ಚರು ಎನ್ನುವಷ್ಟು ಮಟ್ಟಿಗೆ ಅವರ ಸ್ಥಿತಿ. ಒಂದು ಕಛೇರಿಯ ಮೇಲಾಧಿಕಾರಿ ಪ್ರಾಮಾಣಿಕ ನಾಗಿದ್ದರೆ, ಆದರ್ಶ ತತ್ತ್ವಗಳ ಬೆನ್ನಹತ್ತಿದ್ದರೆ ಕೆಳಗಿನವರು ಅನಿವಾರ್ಯವಾಗಿ ಅವರನ್ನು ಹಿಂಬಾಲಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಅಧಿಕಾರಿ ಬಿಗಿಯಾಗಿದ್ದರೆ, ಪ್ರಾಮಾಣಿಕ ನಾಗಿದ್ದರೆ, ತಾನೂ ತಿನ್ನುವುದಿಲ್ಲ ಎಂಬ ವ್ಯಂಗ್ಯದ ಮಾತು ಕೇಳ ಬೇಕಾಗುತ್ತದೆ.

ಭ್ರಷ್ಟಾಚಾರವೆಂಬ ವಿಷವೃಕ್ಷ ಬೆಳೆಯಲು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಮಾಜವೂ ಕಾರಣವಾಗಿದೆ. ಒಂದು ಕೈಯಿಂದ ಚಪ್ಪಾಳೆ ತಟ್ಟುವುದು ಹೇಗೆ ಸಾಧ್ಯವಾಗುವುದಿಲ್ಲವೋ, ಹಾಗೆಯೇ ಒಂದೇ ಕಡೆಯಿಂದ ಭ್ರಷ್ಟಚಾರ ಬೆಳೆಯಲು ಸಾಧ್ಯವಾಗುವುದಿಲ್ಲ. ಕೊಡುವವರು ಇರುವ ತನಕ ತೆಗೆದುಕೊಳ್ಳುವವರು ಇರುತ್ತಾರೆ. ನಿಯಮ ಬಾಹಿರವಾಗಿ ಕೆಲಸಮಾಡಿಸಿಕೊಳ್ಳಬೇಕಾದಾಗ 'ಲಂಚ' ದ ಆಸೆ ತೋರಿಸಿ ಕೆಲಸ ಮಾಡಿಸಿಕೊಳ್ಳವವರು ಸಂಖ್ಯೆ ಸಮಾಜದಲ್ಲಿ ದಿನೇ ದಿನೇ ಪಾರ್ಥೇನಿಯಂ ಕಳೆಯಂತೆ ಬೆಳೆಯುತ್ತಲೇ ಇರುತ್ತದೆ. ಕೆಲಸಮಾಡಿಸಿಕೊಳ್ಳಬೇಕಾದವರು ನ್ಯಾಯಮಾರ್ಗದಲ್ಲಿ ನಡೆಯುವಂತಾದರೆ ಅನಿವಾರ್ಯವಾಗಿ ಕೆಲಸ ಮಾಡಿ ಕೊಡುವುದು ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ಆದ್ಯಕರ್ತವ್ಯ. ಹಾಗೆಯೇ ತಮಗೆ ಬೇಕಾದ ಕೆಲಸವನ್ನು ಮಾಡಿಕೊಡಿವಂತೆ ಕೇಳುವುದು ಸಾರ್ವಜನಿಕರ ಹಕ್ಕು. ಸಾರ್ವಜನಿಕರು ಎಲ್ಲಿಯವರೆಗೆ ನ್ಯಾಯಮಾರ್ಗದಲ್ಲಿ ನಡೆಯದೆ ನೀತಿ, ನಿಯಮಗಳನ್ನು ಬಿಟ್ಟು ಕೆಲಸ ಮಾಡಿಕೊಡುವಂತೆ ಪ್ರೇರೇಪಿಸುತ್ತಾರೋ, ಅಲ್ಲಿಯವರೆಗೂ ಭ್ರಷ್ಟಚಾರದ ಬೇರುಗಳು ಬೆಳೆಯುವುದನ್ನು ತಡೆಯಲು ಕಷ್ಟವಾಗುತ್ತದೆ. ಲಂಚಕೋರರನ್ನೂ ಹುಡುಕಿಕೊಂಡು ನಾವು ಎಲ್ಲಿಗೂ ಹೋಗಬೇಕಾಗಿಲ್ಲ. ನಮ್ಮ ನಡುವೆಯೇ ಲಂಚದಿಂದ ಕೊಬ್ಬಿಹೋದ ದೇಹವೆಂಬ ಗುಡಾಣಗಳು ದಿನದಿಂದ ದಿನಕ್ಕೆ ಬೆಳೆಯುತ್ತಲೇ ಇವೆ. ಅಕ್ಕಿ, ದನಗಳಿಗೆ ಹಾಕುವ ಮೇವು, ಫಿರಂಗಿಯಿಂದ ಹಿಡಿದು ಸೈನಿಕರ ಶವಪೆಟ್ಟಿಗೆವರೆಗೂ ಇರುವ ಕದಂಬ ಬಾಹುವವನ್ನು ಚಾಚಿಕೊಂಡಿದೆ. ಸಮಾಜದಲ್ಲಿ ಭ್ರಷ್ಟಾಚಾರ ಎಷ್ಟರ ಮಟ್ಟಿಗೆ ಬೆಳೆದಿದೆ ಎಂದರೆ, ಭ್ರಷ್ಟಾಚಾರಕ್ಕೆ ಸಿಲುಕದವನೇ ಅಪರಾಧಿ ಎಂಬ ಹಣೆಪಟ್ಟಿಯನ್ನು ಹಚ್ಚಿಕೊಳ್ಳ ಬೇಕಾದ ವಿಷಮ ಪರಿಸ್ಥಿತಿ ನಿರ್ಮಾನವಾಗಿದೆ ನಮ್ಮಲ್ಲಿ ಭ್ರಷ್ಟಾಚಾರದ ಬಗೆಗೆ ನೂರಾರು ದೃಷ್ಟಾಂತಗಳು ಸಿಗುತ್ತವೆ. ಪ್ರತಿಯೊಬ್ಬರ ಬದುಕಿನಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಒಂದಲ್ಲ ಒಂದು ಕಾರಣದಿಂದ ಈ ಭ್ರಷ್ಟಾಚಾರ ನಮ್ಮನ್ನಾಳದೆ ಇರಲು ಸಾಧ್ಯವಿಲ್ಲವೆಂಬ ಮಟ್ಟಕ್ಕೆ ಬೆಳೆದಿದೆ. ಇದರ ಬಗ್ಗೆ ಯಾರನ್ನೂ ಮಾತನಾಡಿಸಿದರೂ ಒಬ್ಬೊಬ್ಬರಲ್ಲಿ ಒಂದೊಂದು ಲಂಚದ ಕಥೆಗಳಿರುತ್ತವೆ.

ಲಂಚ ನಾಗರಿಕ ಹಕ್ಕಿನ ಮೊದಲ ಭಾಗವಾಗಿಯೂ ಮನುಷ್ಯ ಭಾವನೆಗಳ ಮೊದಲ ವಿಧಿಯಾಗಿಯೂ ಮಾಡಲಾಗುತ್ತಿರುವುದು ಪೋಲೀಸ್ ವ್ಯವಸ್ಥೆ, ಉದ್ಯಮ ಹಾಗೂ ಗುಮಾಸ್ತರು ಈ ಮೂರು ಮಾದರಿಗಳಿಂದಲೇ ಇಂದು

ಭ್ರಷ್ಟಾಚಾರವೆಂಬುದು ಉದ್ದವಾಗಿ ಬೆಳೆದು ನಡೆಯೂರಿ ನಿಂತಿರುವ ಇವುಗಳ ವಿಸ್ತಾರ ದೊಡ್ಡದು. ಈ ಮಾದರಿಗಳನ್ನು ಸೃಷ್ಟಿಸಿದ ಅಧುನಿಕ ರಾಷ್ಟ್ರಪ್ರಭುತ್ವ ಉಳ್ಳವರ ಮತ್ತು ಬಲಾಢ್ಯರ ಕಪಿ ಮುಷ್ಟಿಯಲ್ಲಿ ಇರುತ್ತಿದೆಯಾದ್ದರಿಂದ ಇಲ್ಲಿ ನಾವು ದುಲರ್ಭರ ರಕ್ಷಣೆ ಮತ್ತು ಪ್ರಗತಿಯನ್ನು ನಿರೀಕ್ಷಿಸುವುದು ತಪ್ಪೆನಿಸುತ್ತದೆ.

ಸಮಾಜದಲ್ಲಿ ಬೇರುಬಿಟ್ಟಿರುವ ಅಸಮಾನತೆ ಭ್ರಷ್ಟಾಚಾರವೆಂಬ ವಿಷವೃಕ್ಷ ಬೆಳೆಯಲು ಕಾರಣ. ಓದಿ ಕೆಲಸ ಸಿಕ್ಕಿದ ಶೋಷಿತ ಸಮಾಜದವರೆಲ್ಲರನ್ನೂ ಈ ವ್ಯವಸ್ಥೆ ಭ್ರಷ್ಟಾಚಾರನನ್ನಾಗಿಯೂ, ನೀಚರನ್ನಾಗಿಯೂ ಮಾಡುತ್ತಿದೆ, ಹಣ ಕೊಡದಿದ್ದರೆ ಏನೂ ನಡೆಯದಂತಹ ಪರಿಸ್ಥಿತಿ ನಿರ್ಮಾಣ ವಾದಾಗ ಬಡವನೊಬ್ಬ ಹಣ ಸಂಪಾದಿಸಲು ಅನ್ಯ ಮಾರ್ಗಗಳು ಹಿಡಿಯಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗುತ್ತದೆ. ಹೀಗೆ ಬಡವ ತಪ್ಪದಾರಿಗೆ ಹೋಗಲು ಕಾರಣರಾದವರು ಯಾರು ? ಇಲ್ಲಿ ಹಣವಿರುವ ಶ್ರೀಮಂತರನ್ನೆಲ್ಲ ಪ್ರಜಾಪ್ರಭುತ್ವದಲ್ಲಿ ಏನೂ ಬೇಳೆ ಬೇಯದಿದ್ದಾಗ ಹಣ ನೀಡಿ ಕೆಲಸ ಮಾಡಿಸಿಕೊಳ್ಳುತ್ತಾನೆ. ಶತಶತಮಾನಗಳಿಂದ ಕಾಡುತ್ತ ಬಂದ ಅಗಾಧ ಹಸಿವು ತೃಷೆಯಲ್ಲಿರುವ ಜನರಿಗೆ ಲಂಚದರುಚಿ ಹತ್ತಿಸಿ ಆತನನ್ನು ಭ್ರಷ್ಟರನ್ನಾಗಿ ಮಾಡುವುದು ಯಾರು? ಆದುದರಿಂದಲೇ ಭ್ರಷ್ಟಾಚಾರ ಉಳ್ಳವರ ಹಿತಾಸಕ್ತಿಯು ಪ್ರಜಾಪ್ರಭುತ್ವ ಸೃಷ್ಟಿಸಿರುವ ಅಧಿಕಾರದ ಒಂದು ಮಾರ್ಗ.

ಇತಿಹಾಸದ ಪುಟಗಳ ಮೇಲೆ ಕಣ್ಣಾಡಿಸಿದಾಗ ಮೊದಲಿನಿಂದಲೂ ಮಾನವ ತನ್ನ ಸುಖ, ಸ್ವಾರ್ಥ ಸಾಧನೆಗಾಗಿ ಮತ್ತೊಬ್ಬರ ಶೋಷಣೆ ಮಾಡುತ್ತಲೇ ಬಂದಿದ್ದಾನೆ. ಬಲವಿದ್ದವನೇ ಬಾಳಿಯಾನು ಎಂಬ ನೀತಿ ಪ್ರಮುಖವಾಗಿತ್ತು. ತೋಳ್ಬಲವುಳ್ಳವನು ಪ್ರಬಲ ಗುಂಪುಗಳನ್ನು ಕಟ್ಟಿಕೊಂಡು ಹೋರಾಟವನ್ನು ಮಾಡುತ್ತಾ ದುರ್ಬಲರಾದವರನ್ನು ಹಿಂಸಿಸುತ್ತಲೇ ಅಧಿಕಾರ ಸ್ಥಾಪಿಸಿಕೊಂಡಿದ್ದು ಹಿಂದಿನ ಕಥೆ. ಶ್ರೀಮಂತಿಕೆ ಹಾಗೂ ಅಧಿಕಾರಶಾಹಿ ಮತ್ತೊಬ್ಬರ ಶೋಷಣೆಯಲ್ಲಿಯೇ ಆನಂದಪಡುತ್ತಿವೆ. ನೆಮ್ಮದಿ ಮಾತ್ರ ಮರೀಚಿಕೆಯಾಗುತ್ತಿದೆ.

ಸಮಾಜದಲ್ಲಿ ತಾಂಡವವಾಡುತ್ತಿರುವ ಅಸಮಾನತೆಯ ಮುಖಗಳನ್ನು ರಾಷ್ಟಕವಿ ಡಾ. ಕುವೆಂಪು ಅವರು 'ಕಲ್ಕಿ' ಎಂಬ ಕವನದಲ್ಲಿ ಮಾರ್ಮಿಕವಾಗಿ ಹೇಳಿದ್ದಾರೆ.

*ಪೀತಾಂಬರಗಳ ಹೊದೆಯುವರಲ್ಲಿ*
*ಕೌಪೀನಕೆ ಚಿಂದಿಯ ಸಿಗದಲ್ಲಿ ....*
*ಬಡ ಬಗ್ಗರ ಜಠರಾಗ್ನಿಯು ಎದ್ದು*
*ಗುಡಿಸಲುಗಳಿಗೇ ಬೆಂಕಿಯು ಬಿದ್ದು*
*ಧಗ, ಧಗ, ಧಗ, ಧಗ ಹೊತ್ತಿದುದು*
*ಬಡವರ ಬೆಂಕಿಯು ನಾಲಿಗೆ ಚಾಚಿ*
*ಶ್ರೀಮಂತರನಪ್ಪಿತು ಬಾಚಿ*
*ಬಡವರ ಸಿಟ್ಟಿರು ಏನು ಪಿಶಾಚಿ*

ಈ ಬೆಂಕಿಯಲ್ಲಿ ಶ್ರೀಮಂತರು ಮೃಷ್ಟಾನ್ನ ಸುಖಗಳು, ಮನೆ, ಮಠಗಳು ಸಿಕ್ಕಿ ಬೆಂದು ಹೋದವು. ಈ ಸಂದರ್ಭದಲ್ಲಿ ಬಡವರನ್ನು ಉದ್ಧರಿಸುವ 'ಕಲ್ಕಿ' ಹುಟ್ಟಿಬರುತ್ತಾನೆ. ಅವನಾದರೊ ಹಸಿವಿನ ದಾಹದಿಂದ ನೆತ್ತರ ಹೊಳೆ ಹರಿಸುತ್ತಾನೆ. ತಲೆಗಳನ್ನು ಚಂಡಾಡುತ್ತಾನೆ. ಹೆಣಗಳನ್ನು ತಿಂದು ತೇಗುತ್ತಾನೆ. ಇದನ್ನು ಕನಸಿನಲ್ಲಿ ಕಂಡ ಕವಿ ಕಂಪಿಸುತ್ತಾ 'ಕಲ್ಕಿ ಕಲ್ಕಿ' ಎನ್ನುತ್ತಾ ಚೀರಿ 'ಕವನೊಡದೆದ್ದ ಇನ್ನೆಲ್ಲಿಯ ನಿದ್ದೆ' ಎಂದು ಹೇಳುವ ಮೂಲಕ ಈ ಸಾಮಾಜಿಕ ಅಸಮತೋಲನಕ್ಕೆ ಕಲ್ಕಿ ಬರಬೇಕು, ಕ್ರಾಂತಿಯಾಗಬೇಕು. ಬದಲಾವಣೆ ಉಂಟಾಗಬೇಕೆಂಬ ಆಶಯವನ್ನು ಕವಿ ವ್ಯಕ್ತಪಡಿಸಿದ್ದಾರೆ.

'ಅಧಿಕಾರ ಎಂಬುದು ಜನರ ಸೇವೆ ಮಾಡಲು ದೊರೆತ ಒಂದು ಸದಾವಕಾಶ' ಎನ್ನುವರ ಸಂಖ್ಯೆ ತುಂಬಾ ಕಡಿಮೆ. ಅಧಿಕಾರವನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದೇ ಇದಕ್ಕೆ ಶರಣರ ಪರಿಹಾರವನ್ನು ಕಂಡುಕೊಳ್ಳಬೇಕಾಗುವ ಆದರ್ಶ ಜೀವನವನ್ನು ಅವಲೋಕಿಸಬೇಕಾಗುತ್ತದೆ.

ಶರಣರು ಸಮಾಜಕ್ಕೆ ನೀಡಿದ ಬಹುದೊಡ್ಡ ಕಾಣಿಕೆ ಎಂದರೆ ಕಾಯಕ ಮತ್ತು ದಾಸೋಹ ಸಿದ್ದಾಂತ. ಪ್ರತಿಯೊಬ್ಬರು ಬೆವರು ಸುರಿಸಿ ದುಡಿಯಬೇಕು. ತಮ್ಮ ಅನ್ನವನ್ನು ತಾವೇ ಸಂಪಾದಿಸಿಕೊಳ್ಳಬೇಕು. ಕಷ್ಟಪಡದೆ, ಬೆವರು ಸುರಿಸದೆ ಗಳಿಸಿದ ಹಣ, ನಾಯಿಯ ಮೊಲೆಯ ಹಾಲಿನಷ್ಟೇ ನಿಷ್ಪ್ರಯೋಜಕ. ನಾಳಿನ ಬಗ್ಗೆ ಯೋಚಿಸದೆ ಅಂದಂದಿಗೆ ಜೀವನ ನಡೆಸಲು ಸಾಧ್ಯವಾಗುವಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ದಾಸೋಹಕ್ಕೆ ವಿನಿಯೋಗಿಸಬೇಕೆಂಬುದು ಶರಣರ ಸಾಮಾನ್ಯ, ಸರಳ ಸೂತ್ರವಾಗಿತ್ತು.

ಭ್ರಷ್ಟಾಚಾರಕ್ಕೆ ಪ್ರೇರಣೆ ಭೋಗಜೀವನ ನಡೆಸಬೇಕೆಂಬ ಬಯಕೆ. ಇದಕ್ಕೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಪ್ರೇರಣೆ

ನೀಡುವವರು ಮಡದಿಯರು. ದುಡಿಯುವ ಗಂಡಂದಿರು ಸಂಜೆ ಮನೆಗೆ ಬಂದಾಗ ಅವರ ಜೇಬಿನ ಕಡೆಗೆ ಕಣ್ಣುಬಿಡುವವರ ಸಂಖ್ಯೆ ಹೆಚ್ಚಾದಂತೆ ಭ್ರಷ್ಟಾಚಾರದ ವ್ಯಾಪ್ತಿಯೂ ವಿಸ್ತಾರವಾಗುತ್ತಿದೆ. **'ತಾಯಿ ಮಗನ ಹೊಟ್ಟೆ ನೋಡಿದರೆ, ಹೆಂಡತಿ ಗಂಡನ ಜೇಬು ನೋಡಿದಳು'** ಎಂಬ ಮಾತು ಭ್ರಷ್ಟಾಚಾರಕ್ಕೆ ಹಿಡಿದ ಕನ್ನಡಿ. ಯಾವ ಕುಟುಂಬದಲ್ಲಿ ಹೆಂಗಸಾಗಲಿ, ಗಂಡಸಾಗಲಿ **'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು'** ಎಂಬ ಮನೋಭಾವನೆಯನ್ನು ಬೆಳೆಸಿಕೊಂಡು ಜೀವನದಲ್ಲಿ ಆಚರಣೆಯಲ್ಲಿಯೂ ತಂದಿರುತ್ತಾರೆಯೋ ಅಂತಹ ಕುಟುಂಬಗಳಲ್ಲಿ ನೆಮ್ಮದಿ, ಶಾಂತಿಯ ವಾತಾರಣವಿರುತ್ತದೆ. ಶಾಂತಿ, ನೆಮ್ಮದಿ ಹಣಕೊಟ್ಟು ಮಾರ್ಕೆಟ್‌ನಿಂದ ತರುವ ವಸ್ತುವಲ್ಲ, ನಾವಾಗಿಯೇ ಅದನ್ನು ಪಡೆದುಕೊಳ್ಳುವ ವಾತಾವರಣ ನಿರ್ಮಾಣಮಾಡಬೇಕು. ಇದು ಪರೋಕ್ಷವಾಗಿ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕುತ್ತದೆ.

ಭ್ರಷ್ಟಾಚಾರಕ್ಕೆ ಮತ್ತೊಂದು ಕಾರಣ ಅನುಕರಣೆ, ಅವರಂತೆ ನಾವು ಇರಬೇಕು ಎನ್ನುವ ಭಾವನೆ. ಅದನ್ನು ತಪ್ಪು ಎಂದು ಹೇಳುವಂತಿಲ್ಲ. ಅದು ಮಾನವನ ಸಹಜ ಗುಣವಾದರೂ, ನವಿಲು ನೋಡಿ ಕೆಂಬೂತ ಪುಕ್ಕ ತೆರೆದುಕೊಳ್ಳುವಂತಾಗ ಬಾರದು. ನಮಗಿಂತ ಮೇಲಿನವರನ್ನು ನೋಡಿ ಮನಸ್ಸನ್ನು ರಾಡಿ ಮಾಡಿಕೊಳ್ಳುವ ಬದಲು, ನಮಗಿಂತ ಕೆಳಗಿನವರನ್ನು ನೋಡಿ ಮನಸ್ಸನ್ನು ಮಾನಸ ಸರೋವರವನ್ನಾಗಿ ರೂಪಿಸಿಕೊಳ್ಳುವುದು ಸುಸಂಸ್ಕೃತ ಲಕ್ಷಣ. ಈ ಸಂದರ್ಭದಲ್ಲಿ ಚೀನಾ ಗಾದೆಯೊಂದು ನೆನಪಿಗೆ ಬರುತ್ತದೆ. ಒಬ್ಬ ಗಟ್ಟಿಮುಟ್ಟಾದ ವ್ಯಕ್ತಿ ಬೇರೆಯವರು ಷೂ ಹಾಕುವುದನ್ನು ಕಂಡು ಸದಾ ನನಗೆ ಷೂ ಹಾಕುವ ಅದೃಷ್ಟವಿಲ್ಲ ಎಂದು ಕೊರಗುಗುತ್ತಿದ್ದನಂತೆ. ಎಲ್ಲಿಯವರೆಗೆ ಅವನಿಗೆ ಆ ಕೊರಗು, ಎರಡೂ ಕಾಲಿಲ್ಲದ ಒಬ್ಬ ವ್ಯಕ್ತಿಯನ್ನು ನೋಡುವವರೆಗೂ ಇತ್ತಂತೆ. ಆ ಎರಡೂ ಕಾಲಿಲ್ಲದ ವ್ಯಕ್ತಿಯನ್ನು ನೋಡಿ, ದೇವರು ನನಗೆ ಎರಡು ಕಾಲುಗಳನ್ನು ಕೊಟ್ಟಿದ್ದಾನೆ, ನಡೆದಾಡುವ ಶಕ್ತಿಯನ್ನು ಕೊಟ್ಟಿದ್ದಾನೆ. ಆ ವ್ಯಕ್ತಿಗಿಂತ ನಾನೇ ನಿಜಕ್ಕೂ ಅದೃಷ್ಟವಂತ ಎಂದು ಸಂತೋಷಪಟ್ಟನಂತೆ. ಅಂತಹ ಮನಸ್ಥಿತಿಯನ್ನು ನಾವು ಬೆಳೆಸಿಕೊಳ್ಳಬೇಕು ಆಗ ಮಾತ್ರ ನಾವು ನೆಮ್ಮದಿಯಿಂದ ಜೀವನ ನಡೆಸಲು ಸಾಧ್ಯ.

ಪ್ರಸ್ತುತ ಸಮಾಜದಲ್ಲಿ ಭ್ರಷ್ಟಾಚಾರ ನಿರ್ಮೂಲನೆ ಸರಳವೂ ಅಲ್ಲ; ಸುಲಭವೂ ಅಲ್ಲ. ರಕ್ತ ಬೀಜಾಸುರನಂತೆ ಅದರ ಸಂತತಿ ಬೆಳೆಯುತ್ತಲೇ ಇದೆ. ಆದರೆ ಶರಣರ ಜೀವನ ಸಿದ್ಧಾಂತವನ್ನು ಅರ್ಥಮಾಡಿಕೊಂಡು, ಜೀವನದಲ್ಲಿ ಅಳವಡಿಸಿಕೊಂಡರೆ ಕೊಂಚಮಟ್ಟಿಗಾದರೂ ತಡೆಗಟ್ಟಬಹುದು. ಇದಕ್ಕೆ ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ ಅವರಂತ ಆದರ್ಶ ಶರಣೆಯರು ನಮಗೆ ದಾರಿದೀಪವಾಗಿದ್ದಾರೆ. ಮಾರ್ಗದರ್ಶಕರಾಗಿದ್ದಾರೆ.

ಸತ್ಯಕ್ಕೆ ಒಬ್ಬ ಸಾಮಾನ್ಯ ಹೆಣ್ಣು. ತಾನು ನಂಬಿದ ಸತ್ಯವನ್ನು ಆಚರಿಸಿ, ನುಡಿದಂತೆ ನಡೆದು ಆದರ್ಶಪ್ರಾಯವಾಗಿದ್ದಾಳೆ. ಧರ್ಮದ ಲಹೆಸರಿನಲ್ಲಿ ನಡೆದು ಬಂದ ಆಡಂಬರವನ್ನು ಟೀಕಿಸುತ್ತಾ :

*ಅರ್ಚನೆ ಪೂಜನೆ ನೇಮವಲ್ಲ;*
*ಮಂತ್ರತಂತ್ರ ನೇಮವಲ್ಲ;*
*ಧೂಪ ದೀಪಾರತಿ ನೇಮವಲ್ಲ;*
*ಪರಧನ ಪರಸ್ತ್ರೀ ಪರದೈವಂಗಳಗೆರಗಿದಿಪ್ಪುದೇ ನೇಮ*
*ಶಂಭು ಜಕ್ಕೇಶ್ವರನಲ್ಲಿ ಇದು ಕಾಣಿರಣ್ಣಾ ನಿತ್ಯನೇಮ*

ಎಂದು ನುಡಿದ ಸತ್ಯಕ್ಕ ಇಡೀ ಮಾನವ ಸಮುಯದಾಯಕ್ಕೆ ಕಳಶಪ್ರಾಯಳಾಗಿದ್ದಾಳೆ. ಕಸಗುಡಿಸುವ ಕಾಯಕ ಮಾಡಿಕೊಂಡಿದ್ದ ಆಕೆ ಕಸಗುಡಿಸುವಾಗ ಹಾದಿಯಲ್ಲಿ ಏನೋ ಬೆಲೆ ಬಾಳುವ ವಸ್ತು ಬಿದ್ದಿದುದು ಕಂಡಿದೆ. ಅದು ಆಕೆಯ ಶರಣ ಸಿದ್ಧಾಂತಕ್ಕೆ ಸವಾಲೊಡ್ಡಿದೆ. ಅದನ್ನು ತೆಗೆದುಕೊಳ್ಳಬೇಕೊ, ಬೇಡವೋ ಎಂಬ ಜಿಜ್ಞಾಸೆಗೆ ಒಳಗಾಗುತ್ತಾಳೆ. ಇಂತಹ ಸ್ಥಿತಿಯಲ್ಲಿ ಆಕೆ ಸತ್ಯಕ್ಕೆ, ಪ್ರಾಮಾಣಿಕತೆಗೆ ಒತ್ತುಕೊಡುತ್ತಾಳೆ. ಆಗ ಸತ್ಯಕ್ಕನ ಮನಸ್ಸು ಸ್ಥಿರವಾಗುತ್ತದೆ. ಆಗ ಅವಳು :

*ಲಂಚ ವಂಚನೆ ಕೈಯಾನದ ಭಾಷೆ*
*ಬಟ್ಟೆ, ಹೊನ್ನು, ವಸ್ತ್ರ ಬಿದ್ದಿದ್ದಡೆ*
*ಕೈಮುಟ್ಟಿ ಎತ್ತದೆನಾದಡೇ ಅಯ್ಯಾ ನಿಮ್ಮಾಣೆ*
*ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ*
*ಶಂಭುಜಕೇಶ್ವರ ದೇವಯ್ಯಾ ನಿಮ್ಮಾಣೆ.*

ಎಂದು ಹೇಳುತ್ತಾಳೆ,

ಶಿವಶರಣರು ಪ್ರಾಮಾಣಿಕವಾಗಿ, ಬೇರೊಬ್ಬರಿಗೆ ಭಾರವಾಗದಂತೆ ಬದುಕಿದವರು. ಅವರ ರಕ್ತ ಕಣಕಣಗಳಲ್ಲಿ ಪ್ರಾಮಾಣಿಕತೆ, ಶ್ರದ್ದೆ, ಕಾಯಕ ನಿಷ್ಠೆ. ಅಂತರ್ಗಗವಾಗಿತ್ತು. ಅವರಲ್ಲಿ ನಡೆನುಡಿ ಎರಡೂ ಒಂದಾಗಿತ್ತು.

ಆಯ್ದಕ್ಕಿ ಮಾರಯ್ಯ ದಂಪತಿಗಳು ಅಪರೂಪದ ದಾಂಪತ್ಯ. 'ಅಕ್ಕಿ' ಯನ್ನು ಆಯ್ದುತಂದು ಜೀವನ ನಡೆಸುವ ಕಾಯಕ ಅವರದು. ಅವರು ಅಂಗಡಿ ಬೀದಿಗಳಲ್ಲಿ, ಮುಖ್ಯವಾಗಿ ಶಿವಭಕ್ತರ ಮನೆಗಳ ಸುತ್ತಲೂ ಚೆಲ್ಲಿದ ಅಕ್ಕಿಯನ್ನು ಆಯ್ದುತಂದು ಅದರಿಂದ ಮೊದಲು ಜಂಗಮ ದಾಸೋಹವನ್ನು ಮಾಡಿ ಉಳಿದಿದ್ದರಲ್ಲಿ ಜೀವನ ನಡೆಸುತ್ತಿದ್ದರು. ಅವರಿಗೆ ಶಿವನಿಷ್ಠೆ ಮತ್ತು ಜಂಗಮ ದಾಸೋಹ ಮುಖ್ಯವಾಗಿತ್ತು. ಬಡತನ ಎಂದೂ ಅವರಿಗೆ ಸಮಸ್ಯೆಯಾಗಿ ಕಾಡಲಿಲ್ಲ. ನೆಮ್ಮದಿಯ ಜೀವನಕ್ಕೆ ಅಡ್ಡಿಯಾಗಲಿಲ್ಲ. ಅದಕ್ಕೊಂದು ಘಟನೆ ಪುಷ್ಟಿಯನ್ನು ನೀಡುತ್ತದೆ.

ಆಯ್ದಕ್ಕಿ ದಂಪತಿಗಳ ಕಾಯಕ ನಿಷ್ಠೆಯನ್ನು ಅವರ ಬದುಕಿನ ದಾರಿದ್ರ್ಯವನ್ನು ಮನಗಂಡ ಬಸವಣ್ಣನವರು. ಮಾರಯ್ಯನು ಅಕ್ಕಿಯನ್ನು ಅಯಿುತ್ತಿದ್ದ ಹಾದಿಯಲ್ಲಿ ಬೇಕಾದಷ್ಟು ಅಕ್ಕಿಯನ್ನು ಚೆಲ್ಲಿಸಿದರು. ಇದರಿಂದಾಗಿ ಮಾರಯ್ಯನು ಮೂರುದಿನಗಳಿಗಾಗುವ ಅಕ್ಕಿಯನ್ನು ಒಂದೇ ದಿನದಲ್ಲಿ ಆಯ್ದು ಮನೆಗೆ ತಂದ. ಇದರಿಂದ ಸ್ವಾಭಾವಿಕವಾಗಿಯೇ ಆಶ್ಚರ್ಯಗೊಂಡ ಲಕ್ಕಮ್ಮ, ಇಷ್ಟು ಅಕ್ಕಿಯನ್ನು ಆಯ್ದು ತರಲು ಹೇಗೆ ಸಾಧ್ಯವೆಂದು ಪ್ರಶ್ನಿಸಿ, ಇದರ ಹಿಂದಿನ ಕಾರಣವನ್ನು ಅರಿತು "ಬಸವಣ್ಣನವರ ಮನೆಯಲ್ಲಿರುವ ಒಂದು ಲಕ್ಷದ ತೊಂಬತ್ತಾರು ಸಾವಿರ ಶರಣರನ್ನು ತಮ್ಮ ಮನೆಗೆ ದಾಸೋಹಕ್ಕಾಗಿ ಕಳುಹಿಸಿ ಕೊಡಬೇಕೆಂದು ಬಸವಣ್ಣನವರನ್ನು ಬಿನ್ನವಿಸಿಕೊಳ್ಳಲು ಮಾರಯ್ಯನನ್ನು ಕಳುಹಿಸಿದಳು. ಮಾರಯ್ಯ ಹೆಂಡತಿ ಹೇಳಿದಂತೆ ಮಾಡಿದ. ಅಂದು ಮಾರಯ್ಯ ಆಯ್ದು ತಂದ ಒಂದು ದಿನ ಅಕ್ಕಿಯಿಂದಲೇ ಬಗೆ ಬಗೆಯ ಭಕ್ಷ್ಯ ಭೋಜ್ಯಾದಿಗಳನ್ನು ಮಾಡಿ ಬಸವಣ್ಣನವರು ಕಳುಹಿಸಿದ ಒಂದು ಲಕ್ಷದ ತೊಂಬಾತ್ತಾರು ಸಾವಿರ ಶರಣರಿಗೆ ಉಣಬಡಿಸಿದಳೆಂದು ಕಥೆಯೊಂದರಿಂದ ತಿಳಿದು ಬರುತ್ತದೆ.

ಲಕ್ಕಮ್ಮ ದಂಪತಿಗಳು ಒಂದು ಲಕ್ಷದ ತೊಂಬತ್ತಾರು ಸಾವಿರ ಜಂಗಮರಿಗೆ ದಾಸೋಹ ಸೇವೆಯನ್ನು ಮಾಡಿದರು ಎಂಬುದಾಗಲಿ, ಅಥವಾ ಆಯ್ದುತಂದ ಒಂದು ಹಿಡಿ ಅಕ್ಕಿಯಿಂದಲೇ ಬಗೆ ಬಗೆಯ ಭಕ್ಷ್ಯಭೋಜ್ಯಾದಿಗಳನ್ನು ಮಾಡಿದಳು ಎಂಬುದಾಗಲಿ ಮಹತ್ವದ ವಿಷಯವೆನಿಸುವುದಿಲ್ಲ, ಆ ಶರಣ ದಂಪತಿಗಳು ತಮ್ಮ ನಿಷ್ಠೆಯ ಬದುಕಿನಲ್ಲಿ ಉಂಟಾದ ಬಡತನವನ್ನು ಅವರು ಎದುರಿಸಿದ ದಿಟ್ಟತನವನ್ನು ಬಸವಣ್ಣನವರ ಶ್ರೀಮಂತಿಕೆಗೆ ಸೊಪ್ಪು ಹಾಕದೆ ಅವರು ಮೆರೆದ ಶಿವತತ್ತ್ವದ ಸ್ವಾಭಿಮಾನವನ್ನು ಇಲ್ಲಿ ಮುಖ್ಯವಾಗಿ ಗ್ರಹಿಸಬೇಕಾಗುತ್ತದೆ.

'ಕಾಯಕ' ಎಂಬ ಪರಿಭಾಷೆಯನ್ನು ಶರಣರು ವಿಚಾರ ಪ್ರಪಂಚಕ್ಕೆ ಕೊಟ್ಟ ವಿಶಿಷ್ಟವಾದ ಕಾಣಿಕೆ ಎನ್ನಬಹುದು. ಈ ಮಾತು ಹೊಟ್ಟೆಯ ಪಾಡಿಗಾಗಿ ಕೈಗೊಂಡ ಉದ್ಯೋಗ ಎಂದಷ್ಟೇ ಅರ್ಥವನ್ನು ಒಳಗೊಂಡಿಲ್ಲ. ಪ್ರತಿಯೊಬ್ಬರೂ ತಮ್ಮ ಜೀವನದ ನಿರ್ವಹಣೆಗಾಗಿ ಉದ್ಯೋಗವನ್ನು ಕೈಗೊಳ್ಳಬೇಕಾದುದು ಅವಶ್ಯಕ ಹಾಗೂ ಅನಿವಾರ್ಯವೂ ಕೂಡ. ಆದರೆ ಇನ್ನೊಬ್ಬರ ದುಡಿಮೆಯನ್ನು ಕುಳಿತು ತಿನ್ನುವ ಹಕ್ಕು ನಮಗಿಲ್ಲ. ನಮ್ಮ ದೇಹಶ್ರಮದಿಂದಲೇ ತಮ್ಮ ಬದುಕು ನಡೆಯಬೇಕು. ಆದರೆ 'ಕಾಯಕ' ಎಂಬುದರ ಅರ್ಥ ಇಷ್ಟೇ ಅಲ್ಲ; ಇನ್ನು ವ್ಯಾಪಕವಾದುದು. ಅದನ್ನು ಅರ್ಥೈಸುತ್ತಾ ಹೋದಂತೆ ವಿಸ್ತಾರವಾಗುತ್ತದೆ. ತಾನು ಕೈಗೊಂಡ ಉದ್ಯೋಗ ಸಮಾಜಕ್ಕೆ ಹಾನಿಕಾರಕವಾಗಬಾರದು. ಸಮಾಜದ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು. ಅದರ ಫಲ ತನಗೆ ಮಾತ್ರವಲ್ಲದೆ ಸಮಾಜಕ್ಕೂ ದೊರೆಯಬೇಕು ಎಂಬುದಕ್ಕೆ ಶರಣರು ಹೆಚ್ಚು ಮಹತ್ವವನ್ನು ಕೊಟ್ಟಿದ್ದರು.

ಸಮಾಜನಿಷ್ಠನಾದ ಸಿದ್ಧರಾಮ ಕರ್ಮಯೋಗವನ್ನು ಮೆಚ್ಚಿದವನು. ಅದನ್ನು ತನ್ನ ಜೀವನದಲ್ಲಿ ಅರ್ಥಪೂರ್ಣವಾಗಿ ಅಳವಡಿಸಿಕೊಂಡವನು. ವ್ಯಕ್ತಿ ಕ್ರಿಯಾಶೀಲನಾಗಿರಬೇಕು ಎಂಬುದು ಅವನ ಸಿದ್ಧಾಂತ. ಅಂತಹ ಕ್ರಿಯಾಶೀಲ ವ್ಯಕ್ತಿಯನ್ನು ಕಾಡಕಿಚ್ಚಿನ: ಚಂಡಮಾರುತ ರೂಪದಲ್ಲಿ ಗುರುತಿಸುತ್ತಾನೆ.

*ಕಾಯ ಧರಿಸಿದವ*
*ಬೆಟ್ಟದಲ್ಲಿಯ ಕಾಡ ಕಿಚ್ಚಿನಂತಿರಬೇಕು*
*ಆಷಾಢದಲ್ಲಿಯ ಚಂಡಮಾರುತದಂತಿರಬೇಕು*

ಸಿದ್ಧರಾಮ ಕ್ರಿಯಾಶೀಲನಿಗೆ ಕೊಡುವ ಗೌರವ, ಮನ್ನಣೆಯನ್ನು ಕ್ರಿಯಾಶೂನ್ಯನಿಗೆ ಕೊಡುವುದಿಲ್ಲ. ಅಂತಹ ವ್ಯಕ್ತಿಯನ್ನು ಕಟುವಾಗಿ ಟೀಕಿಸಿದ್ದಾನೆ. ಕಷ್ಟಪಡದೆ ಸುಖಪಡಬೇಕೆನ್ನುವವರನ್ನು ತರಾಟೆಗೆ ತೆಗೆದುಕೊಂಡಿದ್ದಾನೆ.

*ಕರ್ಮಯೋಗವ ಮಾಡದೆ*
*ನಿರ್ಮಲ ಸುಚಿತ್ತ್ವವನರಿದ ಪರಿ ಇನ್ನೆಂತೋ*
*ಕೃಷಿಯ ಮಾಡಿ ಉಣ್ಣದೆ*
*ಹಸಿವು ಹರಿದ ಪರಿ ಇನ್ನೆಂತೋ*

*ಬೇಯದೆ ಅಶನವನುಂಬ ಠಾವಾವುದು*
*ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ !*

'**ಬೇಯದೆ ಅಶನವನುಂಬುದು**' ಎಂದರೆ ಅನ್ನವನ್ನು ಬೇಯಿಸದೆ ಹೇಗೆ ಹಸಿ ಹಸಿಯಾಗಿ ತಿನ್ನಲಾಗದೋ ಹಾಗೆಯೇ ತಮ್ಮ ಪಾಲಿಗೆ ಬಂದ ಕರ್ಮವನ್ನು ನಿಷ್ಠೆಯಿಂದ ಮಾಡದಿದ್ದರೆ ಮನಸ್ಸು ಕೆಸರು ತುಂಬಿದ ಗುಂಡಿಯಾಗುತ್ತದೆ. ಒಡೆದ ಕನ್ನಡಿಯಂತಾಗುತ್ತದೆ. ಕಷ್ಟಪಟ್ಟು ಬೆವರು ಸುರಿಸಿ ದುಡಿಯುವ ಕರ್ಮನಿಷ್ಠ ವ್ಯಕ್ತಿಗಳಿದ್ದಾಗ ಮಾತ್ರ ಉತ್ತಮ ಹಾಗೂ ಕ್ರಿಯಾಶೀಲ ಸಮಾಜನಿರ್ಮಾಣಕ್ಕೆ ನೆರವಾಗುತ್ತದೆ ಎಂದು ಸಿದ್ಧರಾಮ ಅಭಿಪ್ರಾಯಪಡುತ್ತಾನೆ. ಅಂದರೆ ಶ್ರದ್ಧೆ, ನಿಷ್ಠೆಯಿಂದ ಕೂಡಿದ ಕಾಯಕದಿಂದ ವ್ಯಕ್ತಿಯ ಭವಿಷ್ಯ ಭವ್ಯವಾಗಿ ರೂಪಿತವಾಗುತ್ತದೆ. ಇದು ಸಮಾಜದ ಮೇಲೂ ಪ್ರಭಾವ ಬೀರುತ್ತದೆ ಎಂಬುದು ಸಿದ್ದರಾಮನ ಆಶಯವಾಗಿದೆ.

ಶರಣರು ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯನ್ನಷ್ಟೇ ಮಾಡಲಿಲ್ಲ. ಸಮಾಜದ ಅರ್ಥವ್ಯವಸ್ಥೆಯ ಬಗ್ಗೆಯೂ ಚಿಂತನೆಯನ್ನು ಮಾಡಿದರು. ಸಮಾಜದಲ್ಲಿ ಅಸಮಾನತೆಯು ಅಂತರ ಕಡಿಮೆಯಾಗಬೇಕಾದರೆ ಪ್ರತಿತಿಯೊಬ್ಬರೂ ಕಷ್ಟಪಟ್ಟು ದುಡಿಯಬೇಕು. ಸೋಮಾರಿತನದಿಂದ ದೂರವಿರಬೇಕು. ತಾವು ದುಡಿದು ಗಳಿಸಿದ ಗಳಿಕೆಯಲ್ಲಿ ತಮಗೆ ಅಗತ್ಯವಿದ್ದಷ್ಟನ್ನು ಮಾತ್ರವಿಟ್ಟುಕೊಂಡು ಉಳಿದುದನ್ನು ದಾಸೋಹ ರೂಪದಲ್ಲಿ ಸದ್ವಿನಿಯೋಗಿಸಬೇಕು. ಅಂದಂದಿನ ಗಳಿಕೆಯನ್ನು ಅಂದೇ ವಿನಿಯೋಗಿಸಿ, ನಾಳಿನ ಚಿಂತೆಯಿಲ್ಲದೆ ನೆಮ್ಮದಿಯಿಂದ ಅಂದಿನ ರಾತ್ರಿಯನ್ನು ಶುಭ ರಾತ್ರಿಯನ್ನಾಗಿ ರೂಪಿಸಿಕೊಳ್ಳಬೇಕು. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಶರಣರು ಜೀವನವನ್ನು ರೂಪಿಸಿಕೊಂಡರು. ಅದರಂತೆ ಬದುಕಿದರು. ಕೂಡಿಡಬೇಕೆಂಬ ಬಯಕೆಯಾಗಲಿ, ಆಸೆಯಾಗಲಿ ಅವರ ಹತ್ತಿರ ಸುಳಿಯಲು ಬಿಡುತ್ತಿರಲಿಲ್ಲ. ಸರಳ ಜೀವನ ನಡೆಸುವುದನ್ನು ಅವರು ರೂಢಿಸಿಕೊಂಡಿದ್ದರು. ಶರಣರ ಆರ್ಥಿಕ ಆಲೋಚನೆ ಆಧುನಿಕ ಯುಗದ ಆಸ್ತಿಯ ಹಕ್ಕು ಖಾಸಗಿ ಆಸ್ತಿ ಮುಂತಾದ ವಿಚಾರಗಳಿಗೆ ತೀರಾ ವಿರುದ್ಧವಾಗಿದೆ. ಒಬ್ಬ ಶರಣ ಶ್ರೇಷ್ಠನಿಂದ ಹಿಡಿದು ಇನ್ನೊಬ್ಬ ಸಾಮಾನ್ಯ ಭಕ್ತನವರೆಗೂ ದುಡಿಯದೇ ಯಾರೂ ಉಣ್ಣುವಂತಿಲ್ಲ. ಹಾಗೆ ನೋಡಿದರೆ. ಕೇವಲ ಈ ಆರ್ಥಿಕ ವಿಚಾರದ ಸಲುವಾಗಿಯೇ ಶರಣರನ್ನು 'ಶ್ರೇಷ್ಠ' ಮತ್ತು 'ಸಾಮಾನ್ಯ' ಎಂಬ ತರತಮ ದೃಷ್ಟಿಯಿಂದ ನಡೆಸಿಕೊಳ್ಳುವುದೇ ಮೂಲಭೂತವಾಗಿ ತಪ್ಪಾಗುತ್ತದೆ. ೧

ಇದಕ್ಕೆ ವಚನಸಾಹಿತ್ಯದಲ್ಲಿ ವಿಪುಲವಾದ ಆಧಾರಗಳು ಸಿಗುತ್ತದೆ. ನುಲಿಯ ಚಂದಯ್ಯ ತನ್ನ ವಚನವೊಂದರಲ್ಲಿ ಈ ಜಗತ್ತಿನಲ್ಲಿ ಹುಟ್ಟಿದ ಮೇಲೆ ಪ್ರತಿಯೊಬ್ಬರು ಕಾಯಕ ಮಾಡಿಯೇ ಜೀವಿಸಬೇಕು. ಇದಕ್ಕೆ ಯಾರಿಗೂ ವಿನಾಯಿತಿಯಿಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

*ಗುರುವಾದರೂ ಕಾಯಕದಿಂದಲೆ ಜೀವನ್ಮುಕ್ತ*
*ಲಿಂಗವಾದರೂ ಕಾಯಕದಿಂದಲೆ ವೇಷದ ಪಾಶ ಹರಿವುದು*
*ಗುರುವಾದಡೆಯೂ ಚರಸೇವೆಯ ಮಾಡಬೇಕು*
*ಲಿಂಗವಾದಡೂ ಚರಸೇವೆಯ ಮಾಡಬೇಕು*
*ಚೆನ್ನಬಸವಣ್ಣ ಪ್ರಿಯ ಚಂದ್ರೇಶ್ವರಲಿಂಗದ ಅರಿತು.*

ಕಾಯಕದಿಂದ ಯಾರಿಗೂ ವಿನಾಯಿತಿಯಿಲ್ಲ ಎಂಬುದನ್ನು ನುಲಿಯಚಂದಯ್ಯನ ವಚನ ಸ್ಪಷ್ಟಪಡಿಸುತ್ತದೆ. ಗುರುವಾಗಲಿ, ಲಿಂಗವಾಗಲಿ, ಜಂಗಮವಾಗಲಿ ಎಲ್ಲರೂ ಕಾಯಕದೃಷ್ಟಿಯಿಂದ ಸಮಾನರು ಎಂಬುದನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ಪ್ರತಿಯೊಬ್ಬರೂ ತನ್ನ ದೇಹವನ್ನು ದಂಡಿಸಿ ಸಂಪಾದನೆ ಮಾಡಬೇಕು ಎಂಬುದು ಎಷ್ಟು ಮುಖ್ಯವೋ, ಹಾಗೆ ದುಡಿದ ಗಳಿಕೆಯನ್ನು ತನ್ನ ಅಗತ್ಯಕ್ಕಿಂತ ಹೆಚ್ಚು ಪಡೆಯುವಂತಿಲ್ಲ ಎಂಬ ಎಚ್ಚರ ಮಾತ್ರ ಸದಾ ಜಾಗ್ರತವಾಗಿರಬೇಕೆಂಬ ವಿಚಾರವನ್ನು ಶರಣರ ಕಾಯಕ ಸಿದ್ಧಾಂತ ಒಳಗೊಂಡಿದೆ. ಕಾಯಕದ ಮಹತ್ವವನ್ನು ಆಯ್ದಕ್ಕಿ ಲಕ್ಕಮ್ಮ ತನ್ನ ವಚನದಲ್ಲಿ ಚಿಂತನೆ ಮಾಡಿದ್ದಾಳೆ. ಆಕೆಯ ವಿಚಾರಧಾರೆ ಕಾಯಕ ತತ್ವಕ್ಕೆ ಭಾಷ್ಯ ಬರೆದಂತಿದೆ.

*ಕಾಯಕದಲ್ಲಿ ನಿರತನಾದರೆ*
*ಗುರುದರ್ಶನವಾದರೂ ಮರೆಯಬೇಕು*
*ಲಿಂಗಪೂಜೆಯಾದರೂ ಮರೆಯಬೇಕು*
*ಜಂಗಮ ಮುಂದಿದ್ದರೂ ಹಂಗು ಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ*
*ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು.*

ಶರಣರು ಜೀವನದಲ್ಲಿ ಗುರು, ಲಿಂಗ, ಜಂಗಮಕ್ಕೆ ಉನ್ನತ ಸ್ಥಾನವನ್ನು ನೀಡಿದ್ದಾರೆ. ಇವೆಲ್ಲಕ್ಕಿಂತಲೂ ಕಾಯಕವೇ ಮುಖ್ಯ ಎಂಬುದನ್ನು ಮೇಲಿನ ವಚನದಲ್ಲಿ ಗಮನಿಸಬಹುದಾಗಿದೆ. ಈ ಮೇಲೆ ಪ್ರಸ್ತಾಪಿಸಿದ ಮೋಳಿಗೆ ಮಾರಯ್ಯ ಮತ್ತು ಆಯ್ದಕ್ಕಿ ಲಕ್ಕಮ್ಮನ ವಚನಗಳನ್ನು ಗಮನಿಸಿದಾಗ ಬಸವಾದಿ ಶರಣರು ಕಾಯಕಕ್ಕೆ ಎಷ್ಟೊಂದು ಬೆಲೆ, ಮಹತ್ವ ಕೊಟ್ಟಿದ್ದರು ಎಂಬುದು

ವ್ಯಕ್ತವಾಗುತ್ತದೆ. ಈ ಎರಡು ವಚನಗಳಲ್ಲೂ **'ಕಾಯಕ'** ಎಂಬ ಅರ್ಥಶಾಸ್ತ್ರದ ಒಂದೇ ಒಂದು ನುಡಿಯ ಸುತ್ತಲು ಶರಣರ ಹಲವಾರು ಧಾರ್ಮಿಕ ಕ್ರಿಯೆಗಳು ಹಾಗೂ ಪ್ರಕಾರಗಳು ಸುತ್ತಿಕೊಂಡಿವೆ. ಉದಾಹರಣೆಗೆ **'ಗುರು', 'ಜೀವನ್ಮುಕ್ತ', 'ಲಿಂಗ', 'ಶಿಲೆಯ ಕುಲ', 'ಜಂಗಮ', 'ವೇಷದ ರಾಶಿ', 'ಲಿಂಗಪೂಜೆ'** ಮುಂತಾದವು. ಈ ಪ್ರತಿಯೊಂದು ಕ್ರಿಯೆಯೂ ಶರಣಮಾರ್ಗದಲ್ಲಿ ಪ್ರತಿಯೊಬ್ಬ ಶರಣನು ಅವಶ್ಯ ಪಾಲಿಸಲೇ ಬೇಕಾದಂಥ ನಿಯಮಗಳು ಅಥವಾ ಕರ್ತವ್ಯಗಳು. ಬಹುಶಃ ಇಷ್ಟರಿಂದಲೇ ಇವುಗಳ ಮಹತ್ವವನ್ನರಿಯಬಹುದೆಂದು ತೋರುತ್ತದೆ. ಇಂಥ ಮಹತ್ವದ ವಿಷಯಗಳ ನಡುವೆಯೂ ಶರಣರು ಆರ್ಥಿಕ ವಿಚಾರಕ್ಕೆ ಕೊಟ್ಟ ಮಹತ್ವ ವಿಶೇಷ ಗಮನಾರ್ಹವಾದುದು.[೨] ಶರಣರ ಈ ಕಾಯಕದ ಮಹತ್ವದಲ್ಲಿ ಅವರ ಆರ್ಥಿಕ ಸಮಾನತೆಯ ಚಿಂತನೆ ಕೂಡ ಅಡಗಿರುವುದನ್ನು ಗಮನಿಸಬಹುದಾಗಿದೆ.

ಶರಣಧರ್ಮದಲ್ಲಿ ಕಾಯಕಕ್ಕೆ ಅಷ್ಟೊಂದು ಮಹತ್ವಕೊಟ್ಟಿದ್ದರಿಂಲೇ ಜಾತಿ ಹಾಗು ಮಾಡುವ ವೃತ್ತಿಯಲ್ಲಿ ಕೀಳರಿಮೆ ಉಂಟಾಗಲಿಲ್ಲ. 'ಕಾಯಕ' ವಿಚಾರ ಬಂದಾಗ ಎಲ್ಲರೂ ಸಮಾನರು ಎಂಬ ವಿಶಾಲವಾದ ದೃಷ್ಟಿಯಿಂದ ಅವರು ಆರ್ಥಿಕ ಸಂಸ್ಕೃತಿಯಿಂದ ನೆಮ್ಮದಿ ಜೀವನ ನಡೆಸುವಂತಾಯಿತು. ಈ ಹಿನ್ನಲೆಯಲ್ಲಿ ಶರಣರ ಕಾಯಕ ಜೀವನವನ್ನು ನೋಡಿದಾಗ ಶರಣರು ಸಾಧಿಸಿ ತೋರಿಸಿರುವ ಮನೋವೈಜ್ಞಾನಿಕ ದೃಷ್ಟಿಯಲ್ಲಿ ಇದೊಂದು ವೈಶಿಷ್ಟಪೂರ್ಣವಾದ ಸಾಧನೆ ಎಂದೇ ಹೇಳಬೇಕು.

ಶರಣರು ಯಾವುದೇ ಕಾಯಕವಾಗಿದ್ದರೂ ಅದು ಯಾವುದೇ ಶರಣರ, ಅವರ ನಿತ್ಯ ಜೀವನಕ್ಕೆ ಒಂದು ಜೀವನ ಮಾರ್ಗಮಾತ್ರವೆಂದರು. ಈ ಬಗೆಯ ಆರ್ಥಿಕ ಮಾರ್ಗದ ಪರಿಪಾಲನೆಯಿಂದ ಮಾತ್ರ ಆರ್ಥಿಕ ಸಮಾನತೆಯ ಮೂಲಭೂತ ಅಂಶವಾದ ಸರ್ವರ ಆರ್ಥಿಕ ಮಟ್ಟವನ್ನು ಸಮಾನ ರೇಖೆಯಲ್ಲಿ ಕೊಂಡೊಯ್ಯುವ ನೀತಿ ಮಾತ್ರವಾಗಬಲ್ಲದು ಎಂಬುದನ್ನು ಶರಣರು ಮನಗಂಡಿದ್ದರೆಂದು ತೋರುತ್ತದೆ. ಆದ್ದರಿಂದಲೇ ಯಾವುದೇ ವ್ರತಾಚರಣೆಗಳಿಗಿಂತ ಕಾಯಕ ನಿಷ್ಠೆಯೇ ಪರಮಶ್ರೇಷ್ಠವೆಂದರು. ವ್ರತಾಚರಣೆಗಳು ಹಾಗೂ ಗುರುಪೂಜೆ, ಲಿಂಗಪೂಜೆ ಮುಂತಾದ ನೀತಿ ನಿಯಮಗಳನ್ನು ನೈಷ್ಠಿಕವಾಗಿ ಪಾಲಿಸಲು ಇರುವ ಏಕೈಕ ಮಾರ್ಗವೆಂದರೆ **'ಕಾಯಕ'**, ಅಲ್ಲದೆ ಶರಣರಿಗೆ ಅದೇ ಕೈಲಾಸ ಕೂಡ [೩].

ಶರಣರು ನೀಡಿದ ಈ ಮಹತ್ವಪೂರ್ಣವಾದ ಕೊಡುಗೆಯನ್ನು, ಅವರ ಜೀವನ ಆದರ್ಶವನ್ನು ಎಲ್ಲರೂ ಮುಕ್ತಮನಸ್ಸಿನಿಂದ ಸ್ವೀಕರಿಸಿ ಜೀವನದಲ್ಲಿ ಅಳವಡಿಸಿಕೊಂಡರೆ ಬದುಕು ಬಂಗಾರವಾಗುತ್ತದೆ. ಬಡತನ–ಸಿರಿತನ ಇಂದು ನೆನ್ನೆಯದಲ್ಲ. ಶತಶತಮಾನ ಗಳಿಂದಲೂ ಈ ಕಂದರ ವಿಸ್ತಾರವಾಗುತ್ತಲೇ ಬಂದಿದೆ. ವಚನಕಾರರು [illegible] ಕಂಡ ರೀತಿ, ಅರ್ಥೈಸಿದ ರೀತಿಗೂ ಆಧುನಿಕರು ಕಂಡ ರೀತಿಗೂ ತುಂಬಾ ವ್ಯತ್ಯಾಸವಿದೆ. ಶರಣರು;

*ತನು ಶುದ್ಧವಿಲ್ಲದವಂಗೆ ದ್ರವ್ಯದ ಬಡತ[illegible]*
*ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ [illegible]ರಿಗೆ*
*ಎತ್ತನೋಡಿದಡತ್ತ ಲಕ್ಷ್ಮೀ ತಾನಾಗಿಪ್ಪಳು*
*ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಸೇವೆಯು[illegible]*

ಎಂದು ಹೇಳಿದ್ದಾರೆ. ಅವರು ತನು–ಚಿತ್ತ ಶುದ್ಧತೆಗೆ ಪ್ರಾಶಸ್ತ್ಯ ಕೊಟ್ಟವರು. ಅಂತವರಿಗೆ ಬಡತನವಿಲ್ಲ ಎಂದು ಹೇಳುವ ಶರಣರು ಚಿತ್ತಶುದ್ಧದಿಂದ ಜೀವನ ನಡೆಸಿದರೆ ಬಡತನ ಹತ್ತಿರವೇ ಸುಳಿಯದು ಎಂದು ಹೇಳಿದ್ದಾರೆ. ನೆಮ್ಮದಿ ಜೀವನಕ್ಕೆ ಹಣವಷ್ಟೇ ಮುಖ್ಯವಲ್ಲ ಎಂಬ ವಿಚಾರ ವಚನಗಳಲ್ಲಿ ಸಾಕಾರಗೊಂಡಿದೆ. ಮನುಷ್ಯನಿಗೆ ಹಣಬೇಕು. ಅದು ಬೇಡವೆಂದು ಹೇಳುತ್ತಿಲ್ಲ. ಏಕೆಂದರೆ ಹಣವಿಲ್ಲದಿದ್ದರೆ ಜೀವನದ ರಥ ಮುಂದೆ ಸಾಗುವುದಿಲ್ಲ ಎನ್ನುವುದು ನಿಜ. ಆದರೆ ಹಣವೇ ಸರ್ವಸ್ವವಲ್ಲ. ಹಣದಿಂದ ನೀವೊಂದು ಸುಂದರ ಹವಾನಿಯಂತ್ರಿತ ಬಂಗಲೆಯನ್ನು ಕೊಂಡು ಅದರಲ್ಲಿ ಅತ್ಯಂತ ನಯವಾದ ರೇಸಿಮೆಯ ಹಾಸಿಗೆಯ ಮೇಲೆ ಮಲಗಬಹುದು. ಆದರೆ ಸುಖವಾದ ನಿದ್ದೆಯನ್ನು ನೀವು ಕೊಳ್ಳಲಾರಿರಿ. ನೀವು ಔಷಧವನ್ನು ಕೊಳ್ಳಬಹುದೇ ವಿನಃ ಆರೋಗ್ಯವನ್ನು ಕೊಳ್ಳಲಾರಿರಿ. ಗ್ರಂಥಗಳನ್ನು ಕೊಳ್ಳಬಹುದು, ಆದರೆ ಜ್ಞಾನವನ್ನು ಕೊಳ್ಳಲು ಬರುವುದಿಲ್ಲ. ಬೆಲೆ ಬಾಳುವ ವಸ್ತ್ರಾಭರಣಗಳನ್ನು ಕೊಳ್ಳಬಹುದು, ಆದರೆ ಸೌಂದರ್ಯವನ್ನು ಕೊಳ್ಳಲಾಗದು. ಭೌತಿಕ ಭೋಗದ ರಾಶಿಯನ್ನು ಕೊಳ್ಳಬಹುದು, ಆದರೆ ಮಾನಸಿಕ ನೆಮ್ಮದಿ ಮತ್ತು ಆಧ್ಯಾತ್ಮಿಕ ಸಂತೃಪ್ತಿಗಳನ್ನು ಕೊಳ್ಳಲಾಗುವುದಿಲ್ಲ. ನೀವು ವಿಗ್ರಹವನ್ನು ಕೊಂಡು ದೇವಾಲಯಗಳನ್ನು ನಿರ್ಮಿಸಬಹುದು. ಆದರೆ ಭಗವಂತನನ್ನು ಕೊಳ್ಳಲಾಗದು. ಯಾವುದೇ ಕಛೇರಿಯಲ್ಲಿ ನೀವು ಒಂದು ಹುದ್ದೆಯನ್ನೋ, ಉನ್ನತ ಅಧಿಕಾರವನ್ನೋ ಕೊಳ್ಳಬಹುದು. ಆದರೆ ಸಾರ್ವಜನಿಕರ ವಿಶ್ವಾಸ ಗೌರವಗಳನ್ನು ಕೊಳ್ಳಲು ಬರುವುದಿಲ್ಲ. ನೀವು ಮಾನವ ದೇಹವನ್ನು ಬೇಕಾದರೂ ಕೊಳ್ಳಬಹುದು. ಆದರೆ ಪ್ರೀತಿಯನ್ನು ಕೊಳ್ಳಲಾಗದು. ಆದ್ದರಿಂದ, ವಿಶ್ವದ ಎಲ್ಲ ಆರ್ಥಿಕ ಅಪರಾಧಗಳು ಮತ್ತು ಭ್ರಷ್ಟಾಚಾರಗಳ ಸಮಸ್ಯೆಗಳಿಗೆ ಶರಣರು ಅನುಸರಿಸಿದ

'ಕಾಯಕವೇ ಕೈಲಾಸ' ಮಾರ್ಗವನ್ನು ಬಿಟ್ಟರೆ ಬೇರೆ – ಪರಿಹಾರವಿಲ್ಲ. ೪

ಸಿರಿವಂತಿಕೆ ಇದ್ದ ಮಾತ್ರಕ್ಕೆ ಶಾಂತಿ, ನೆಮ್ಮದಿ ದೊರೆಯುವುದಿಲ್ಲ. ಶಾಂತಿ, ನೆಮ್ಮದಿ, ಸುಖ, ಸಂತೋಷವನ್ನು ಹಣದಿಂದ ಕೊಳ್ಳಲಾಗುವುದಿಲ್ಲ. ಅದು ಮಾನಸಿಕ ಆರೋಗ್ಯದ ಮೇಲೆ ಅವಲಂಬಿತವಾಗಿರುತ್ತದೆ. ಇದಕ್ಕೊಂದು ನಿದರ್ಶನ ಕೊಡಬಹುದು. ಜಗದ್ವಿಖ್ಯಾತ ಉದ್ಯಮಿಯಾದ ಅರಿಸ್ಟೋಟಲ್ ಓನಾಸೀಸನಾ ಏಕೈಕ ಪುತ್ರಿ ಕ್ರಿಸ್ಟೀನಾ. ತಂದೆ ಮತ್ತು ಸೋದರ ಅಲೆಕ್ಸಾಂಡರ್ ತೀರಿಕೊಂಡ ಬಳಿಕ ಆಕೆ ಶತಕೋಟಿ ಡಾಲರ್‌ಗೆ ಏಕೈಕ ವಾರಸುದಾರಳಾದಳು. ಆಕೆ ನಾಲ್ಕು ಸಲ ವಿವಾಹವಾದಳು. ಎಲ್ಲವೂ ವಿಚ್ಛೇದನದಲ್ಲಿ ಪರ್ಯಾವಯಾವಸನಗೊಂಡವು. ತಿಯರಿ ರೂಸಲೆನ್ ದಾಂಪತ್ಯದಲ್ಲಿ ಏಕೈಕ ಪುತ್ರ ಅಧೀನ ಜನಿಸಿದನು. ಅಂದು ಅಕೆ ತನ್ನ ಗರ್ಭ ರಕ್ಷಣೆಗೆ ೧೭ ಲಕ್ಷ ವ್ಯಯಿಸಿದ್ದಳು. ಆದರೂ ಮಗು ಹುಟ್ಟಿದಾಗಲೇ ಕಾಮಾಲೆ ರೋಗ ಪೀಡಿತವಾಗಿತ್ತು. ಅಗಾಧ ಸೊತ್ತಿದ್ದರೂ ಕ್ರಿಸ್ಟೀನಾ ವ್ಯಾಕುಲ ಚಿತ್ತಳೂ ಅಸಂತುಷ್ಟಳೂ ಆಗಿದ್ದಳು. ಅನೇಕ ಸಲ ಆಕೆ ಅತ್ಮಹತ್ಯೆಗೂ ಪ್ರಯತ್ನಿಸಿ ವಿಫಲಳಾಗಿದ್ದಳು.

ಸಮಾಜದಲ್ಲಿ ಬಹುತೇಕ ಜನರು ಸಂಪತ್ತು ಮತ್ತು ಅದರಿಂದ ಬರುವ ಕೀರ್ತಿಯನ್ನು ಬಯಸುತ್ತಾರೆ. ಖ್ಯಾತಿಯಲ್ಲಿ ನೆಮ್ಮದಿಯನ್ನರುಸುತ್ತಾರೆ. ಮನುಷ್ಯನಲ್ಲಿ ಸದಾ ಒಂದಿಲ್ಲ ಒಂದು ಕಾರಣಕ್ಕೆ ನಡೆಯುವ ಸಂಘರ್ಷ, ಗೊಂದಲ ಕಣ್ಣೀರು ಸಂಕಷ್ಟಗಳಿಗೆ ಬಡತನವೇ ಕಾರಣವೆಂದು ತಿಳಿದಿರುತ್ತಾರೆ. ಹೊಟ್ಟೆಯ ಹಸಿವು ನಿವಾರಣೆಯಾದರೆ ಎಲ್ಲ ಸಮಸ್ಯೆಗಳೂ ಬಗೆಹರಿಯುತ್ತವೆ ಎಂದು ಅವರು ಭಾವಿಸುತ್ತಾರೆ. ಈ ಭಾವನೆಯಿಂದ ಅವರು ಹಣ ಸಂಪಾದನೆಯಲ್ಲಿ ತಮ್ಮೆಲ್ಲ ಶಕ್ತಿ ಗಮನವನ್ನು ಕೇಂದ್ರೀಕರಿಸುತ್ತಾರೆ. ಜೀವನದ ಮೌಲ್ಯ ಮತ್ತು ಸಿದ್ಧಾಂತಗಳನ್ನು ಸಂಪತ್ತಿನ ಶಿಖರಕ್ಕೆ ಏರಿಸುತ್ತಾರೆ. ಉದಾತ್ತ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಆಂತರಿಕ ಸೌಂದರ್ಯದಿಂದ ಬಾಹ್ಯ ಸೌಂದರ್ಯಕ್ಕೆ ಬೆಲೆ ಬರುವಂತೆ ಮಾಡಬೇಕು ಎಂದು ಯೋಚಿಸುವವರೂ, ಬಯಸುವವರೂ ತುಂಬಾ ವಿರಳ. ಏಕೆಂದರೆ ಮನುಷ್ಯನಲ್ಲಿ ಗುಪ್ತಗಾಮಿನಿಯಂತೆ ಸದಾ ಪ್ರವಹಿಸುತ್ತಿರುವ ಬಯಕೆಗಳು ಮರೀಚಿಕೆಯ ಹಿಂದೆ ಓಡುತ್ತಿರುತ್ತವೆ. ಈ ರೀತಿಯ ಓಡಾಟ ಮನುಷ್ಯನ ಸಾವಿನೊಂದಿಗೆ ಕೊನೆಗೊಳ್ಳುತ್ತದೆ.

ಹದಿನೇಳು ಲಕ್ಷ ರೂಗಳನ್ನು ವೆಚ್ಚಮಾಡಿದರೂ ಕ್ರಿಸ್ಟೀನಾಗೆ ಆರೋಗ್ಯವಂತ ಮಗುವನ್ನು ಹೆರಲಾಗಲಿಲ್ಲ. ಕೋಟಿಗಟ್ಟಲೆ ಸಂಪತ್ತಿದ್ದೂ ಕಣ್ಣಿಗೆ ತಂಪು ನೀಡುವ ಕುಟುಂಬ ಜೀವನದ ಕನಸುಕಾಣಲು ಆಕೆಗೆ ಸಾಧ್ಯವಾಗಲಿಲ್ಲ. ಇಂತಹ ಕೋಟಿಗಟ್ಟಲೆ ಕ್ರೀಸ್ಟೀನಾಗಳು ಇಂದು ಜಗತ್ತಿನಾದ್ಯಂತ ಇದ್ದಾರೆ. ಎಲ್ಲ ಸಮಸ್ಯೆಗಳಿಗೆ ಹಣವೊಂದೇ ಪರಿಹಾರ ಎಂಬುದನ್ನು ಅವರೆಲ್ಲರೂ ನಿರಾಕರಿಸುತ್ತಾರೆ. ಸಂಪತ್ತು ಹೆಚ್ಚಿದಂತೆ ಸಮಸ್ಯೆಗಳು ಹೆಚ್ಚುತ್ತಿವೆ. ಜೀವನ ಸೌಲಭ್ಯಗಳು ವೃದ್ಧಿಸಿದಂತೆಲ್ಲ ಶರೀರದ ಅಂಗಾಂಗಗಳ ಕೆಲಸ ಕಡಿಮೆಯಾಗಿ ಅವುಗಳ ಸ್ಥಾನದಲ್ಲಿ ಯಂತ್ರಗಳು ಬರುತ್ತಿವೆ. ತನ್ಮೂಲಕ ನಿಷ್ಕ್ರಿಯವಾದಂತಹ ಅವಯವಗಳಿಗೆ ರೋಗ ಮತ್ತು ಮರವು ಉಂಟಾಗುತ್ತವೆ. ದಿನವೆಲ್ಲ ಬೆವರು ಸುರಿಸಿ ದುಡಿದು ರಾತ್ರಿ ಮಲಗಲು ತನ್ನದೆಂದು ಒಂದು ಗುಡಿಸಲು ಇಲ್ಲದೆ ಪುಟಪಾತ್‌ನಲ್ಲಿ, ಮರದ ಕೆಳಗೆ ಮಲಗಿ ಯಾವುದೇ ಪರಿವೆಯಿಲ್ಲದೆ ಗೊರಕೆ ಹೊಡೆಯುವ ಬಡವನ ನೆಮ್ಮದಿ ಹಲವೊಮ್ಮೆ ಸುಖದ ಸುಪ್ಪತ್ತಿಗೆಯಲ್ಲಿರುವವರಿಗೆ ಮರೀಚಿಕೆಯಾಗುತ್ತದೆ. ಶಾಂತಿ, ನೆಮ್ಮದಿ ಎಂಬುದು ಸಿರಿವಂತಿಕೆಯ ಧನಕನಕಗಳ ಭಂಡಾರದಿಂದ ಬರುವುದಿಲ್ಲ. ನೈಜ ಸಿರಿವಂತಿಕೆಯು ಮನಸ್ಸಿನ ಸಿರವಂತಿಕೆಯಾಗಿದೆ ಎಂಬ ಸತ್ಯವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಂಡರೆ, ಶರಣತತ್ತ್ವದ ಹಿನ್ನಲೆಯಲ್ಲಿ ಈ ಸತ್ಯವನ್ನು ಹುಡುಕುತ್ತಾ ಹೋದರೆ ಭ್ರಷ್ಟಾಚಾರ ನಿರ್ಮೂಲನೆಮಾಡಲು ಸ್ವಲ್ಪಮಟ್ಟಿಗಾದರೂ ಸಹಕಾರಿಯಾಗುತ್ತದೆ.

ಶರಣರು ಸಾಮಾಜಿಕ ಸಮಾನತೆಯನ್ನು ತರುವಲ್ಲಿ ಅವರು ಅನುಸರಿಸಿದ ಅರ್ಥ ವ್ಯವಸ್ಥೆಯು ಮಹತ್ವದ್ದಾಗಿ ಕಂಡುಬರುತ್ತಿದೆ. ಅವರು ಬದುಕಿದಷ್ಟು ಕಾಲದಲ್ಲಿ ಯಾವುದೇ ಕಾನೂನಿನ ವ್ಯವಸ್ಥೆಗೆ, ಗೋಜು, ಗೊಂದಲಗಳಿಗೆ ಒಳಗಾಗದೇ, ಸ್ವತಂತ್ರ್ಯ ವಿಚಾರಶೀಲತೆಯಿಂದ, ತಮಗನಿಸಿದ್ದನ್ನು ಹೇಳಿದರು. ಅದರಂತೆ ಬದುಕಿದರು. ಅವರೆಂದೂ ಸಿರಿ, ಹೊನ್ನು, ದ್ರವ್ಯಗಳನ್ನು ಸಂಕುಚಿತ ಅರ್ಥದಿಂದ ಪರಿಭಾವಿಸಲಿಲ್ಲ. ಇವೆಲ್ಲ ಮಾಯೆ, ಅಹಂಕಾರದ ಪ್ರತೀಕವೆಂದೂ ಸ್ವೀಕರಿಸಲಿಲ್ಲ. ಹಣವಿಲ್ಲದ ಬಡತನ ಸ್ಥಿತಿ ಅವಮಾನಕಾರಕವೆಂದುಕೊಳ್ಳಲಿಲ್ಲ. ಸ್ವಾರ್ಥ ಅಭಿಮಾನವನ್ನು ಆರ್ಥದ ಬಗ್ಗೆ ಹೊಂದಿದ್ದರು. ಅದನ್ನು ದಾಸೋಹಕ್ಕಾಗಿ ಸದ್ವಿನಿಯೋಗಿಸಿದ ಕೀರ್ತಿ ಶರಣರಿಗೆ ಸಲ್ಲುತ್ತದೆ. ಇದಕ್ಕೆಲ್ಲ ಅವರ ಅಪರಿಗ್ರಹ ನೀತಿಯೇ ಕಾರಣ. ಗಾಂಧೀ ತತ್ತ್ವವೂ ಇದೇ ಆಗಿತ್ತು. ಅವರು ದುಡಿಯದೇ ತಿನ್ನುವವರನ್ನೂ ಕಳ್ಳರೆಂದು ಕರೆಯುತ್ತಾರೆ. ಮುಂದುವರೆದು ಅವರು ಹೇಳುವುದೆಂದರೆ ನಾವೆಲ್ಲರೂ ಒಂದು ರೀತಿಯಲ್ಲಿ ಕಳ್ಳರೇ. ನನ್ನ ತತ್‌ಕ್ಷಣಕ್ಕೆ ಉಪಯೋಗಕ್ಕೆ ಅಗತ್ಯವಿಲ್ಲದುದನ್ನ ನಾನು ಸಂಗ್ರಹಿಸಿಟ್ಟುಕೊಂಡರೆ; ಅದನ್ನು ಇನ್ನೊಬ್ಬರಿಂದ ಕದ್ದಂತೆಯೇ.

ನನ್ನ ಅಗತ್ಯಕ್ಕಿಂತ ಹೆಚ್ಚಿನ ಬಟ್ಟೆಗಳನ್ನು ಪೆಟ್ಟಿಗೆಯಲ್ಲಿ ತುಂಬಿ ಕೊಂಡರೆ, ಆ ಅರೆಬೆತ್ತಲೆಯವರನ್ನು ಕಂಡಾಗ ನಾನೂ ಸ್ವಲ್ಪಮಟ್ಟಿಗೆ ಕಾರಣ ಎಂಬುದು ನನ್ನ ನೆನಪಿಗೆ ಬರಬೇಕು. ಸಮಾಜದಲ್ಲಿ ತಾಂಡವವಾಡುತ್ತಿರುವ ಈ ವಿಷಮತೆಗೆ ಅತಿಯಾದ ಸಂಗ್ರಹಬುದ್ಧಿಯೇ ಕಾರಣ. ಈ ಅರ್ಥದಲ್ಲಿ ನಾವೆಲ್ಲ ಸಮಾಜದ ಈ ಏರುಪೇರಿಗೆ ಕಾರಣರಾದ ಕಳ್ಳರು ಎಂದು ಗಾಂಧೀಜಿ ಎಚ್ಚರಿಸುತ್ತಾರೆ. ೫.

ಕರುಳ ಕೇತಯ್ಯ ಎಂಬ ವಚನಕಾರರು 'ಇಲ್ಲಿ ಸಲ್ಲುವಂತೆ ನಡೆದುಕೊಳ್ಳಬೇಕಾದವರಲ್ಲಿ ಇರಬೇಕಾದ ನಾಲ್ಕು 'ಶೀಲ'ಗಳನ್ನು ವಿವರಿಸುತ್ತಾನೆ.

*ದ್ರವ್ಯ ಶೀಲ*
*ಧನ ಶೀಲ*
*ತನು ಶೀಲ*
*ಆತ್ಮ ಶೀಲ*
*ಬಾಯಕ್ಕೆಯ ಬೇಡುವವರೆಲ್ಲರು*
*ಬಡಪಾಯಿವಂತರ ಪಶುವಿನ ನೋವ ಬಲ್ಲರೆ*
*ಹಿಡಿವ ವಿಹಂಗೆ ನೋವ ಬಲ್ಲುದೆ,*
*ಇಂತೀ ದೆಸೆಯ ಕಂಡು ನಾನಂಜಿವೆ.*

ಬಾಯಕ್ಕಿ ಎಂದರೆ ರುಚಿ ರುಚಿಯಾದ ಭಕ್ಷ್ಯಭೋಕ್ಯಾದಿ ಗಳು. ಇವುಗಳನ್ನು ಹೇಗಾದರೂ ಪಡೆಯಬೇಕು ಎಂದು ಬಯಸುವ ದ್ರವ್ಯಲಂಪಟನು ಮಹಾಸ್ವಾರ್ಥಿಯಾಗುವುದರಿಂದ ಬಡಜನಗಳ ಸಂಕಟ ಅವನಿಗೆ ತಟ್ಟುವುದೇ ಇಲ್ಲ. ಇವನ್ನು ಉದಾಹರಣೆ ಯಿಂದ ವಚನಕಾರ ಸ್ಪಷ್ಟಪಡಿಸಿದ್ದಾನೆ. ವಿಹಂಗೆ ಎಂದರೆ ಹದ್ದು. ಅದು ಅನಾಮತ್ತಾಗಿ ಮೇಲಿನಿಂದ ಎರಗಿ ತನ್ನ ಬಲಿಯನ್ನು ಕಚ್ಚಿಕೊಂಡು ಹಾರುತ್ತದೆ. ತನ್ನ ಆಹಾರದ ಸಂಭ್ರಮದಲ್ಲಿ ಬಲಿಯಾದ ಪ್ರಾಣಿಯ ಸಂಕಟವನ್ನು ಆ ಹದ್ದು ಅರ್ಥಮಾಡಿಸಿಕೊಳ್ಳುವುದಿಲ್ಲ. ಲೋಕದ ಎಲ್ಲ ವಸ್ತುಗಳೂ ತನಗೆ ಮಾತ್ರ ದ್ರವ್ಯ ಎಂದುಕೊಳ್ಳುವ ವ್ಯಕ್ತಿಗೆ ದ್ರವ್ಯಶೀಲ ಇರುವುದಿಲ್ಲ. ಪ್ರಕೃತಿ ನೀಡುವ ವಸ್ತುಗಳಿಗೆ ಎಲ್ಲರೂ ಸಮಾನ ಹಕ್ಕುದಾರರು ಎಂದು ಭಾವಿಸುವವನೇ ದ್ರವ್ಯಶೀಲ.

ಬಹುಶಃ ಶರಣರ ನಡೆ-ನುಡಿಗಳೊಂದಾದ ಜೀವನ ಆದರ್ಶವನ್ನು ನಾವು ಇಂದು ಅರ್ಥಮಾಡಿಸಿಕೊಂಡು ಜೀವನದಲ್ಲಿ ಅಳವಡಿಸಿಕೊಂಡು ನಡೆಯದೆ ಆದರೆ, ಮೇಲು-ಕೀಳಿನ ಕಂದರದ ಅಂತರ ಕಡಿಮೆ ಆಗುತ್ತದೆ. ಹಾಗೆಯೇ ಮೋಸ, ವಂಚನೆ, ಅನ್ಯಾಯ, ಅನೀತಿ, ಅಧರ್ಮ ಎಲ್ಲಕ್ಕೂ ಕಡಿವಾಣ ಹಾಕಿದಂತಾಗುತ್ತದೆ. ಸೋಮಾರಿತನ ಮಾಯವಾಗಿ ಕ್ರಿಯಾಶೀಲತೆಯಿಂದ ವ್ಯಕ್ತಿಜೀವನದಲ್ಲಿ ಸುಖ ಶಾಂತಿ, ನೆಮ್ಮದಿಯನ್ನು ಪಡೆಯಲು ಸಾಧ್ಯವಾಗುತ್ತದೆ. ದುರಾಸೆ ಅಳಿದು ಇದ್ದುದರಲ್ಲೇ ತೃಪ್ತಿಪಡುವ ಗುಣ ತಾನಾಗಿಯೇ ಬರುತ್ತದೆ. ಹಾಸಿಗೆ ಇದ್ದಷ್ಟು ಕಾಲು ಚಾಚುವ ಮನಸ್ಥಿತಿ ನಿರ್ಮಾಣವಾಗುತ್ತದೆ. ಇಂತಹ ಪರಿಸ್ಥಿತಿ ನಿರ್ಮಾಣವಾಗಲು ಶರಣರ ಜೀವನ ಮೌಲ್ಯಗಳನ್ನು ಸ್ವಲ್ಪಮಟ್ಟಿಗಾದರೂ ಅನುಸರಿಸದರೆ 'ಸುಖೀ ಸಮಾಜ'ದ ಹೊಂಗನಸು ನನಸಾಗುವುದರಲ್ಲಿ ಸಂಶಯವಿಲ್ಲ. ಬಸವಣ್ಣನವರ ಈ ವಚನ.

*ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ.*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.*
*ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ.*
*ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ.*

ವ್ಯಕ್ತಿಯನ್ನು ಸನ್ಮಾರ್ಗದತ್ತ ಕೊಂಡೊಯ್ಯುವ, ಸುಸಂಸ್ಕೃತ ನನ್ನಾಗಿ ಮಾಡುವ ಈ ಸಪ್ತಸೂತ್ರಗಳಲ್ಲಿ ಕೆಲವನ್ನಾದರೂ ಜೀವನದಲ್ಲಿ ಅಳವಡಿಸಿಕೊಂಡರೆ ಬದುಕು ಸುಖ-ಶಾಂತಿಯ ಬೀಡಾಗುತ್ತದೆ; ಶಾಂತಿ ನೆಮ್ಮದಿಯ ತಾಣವಾಗಿತ್ತದೆ. ವ್ಯಕ್ತಿ ಸುಸಂಸ್ಕೃತನಾದಾಗ ಸಮಾಜ ಅಭಿವೃದ್ಧಿಯ ಪಥದತ್ತ ಸಾಗುತ್ತದೆ. ಭ್ರಷ್ಟಾಚಾರ ತಾನಾಗಿಯೇ ನಿರ್ಮೂಲನವಾಗುತ್ತದೆ.

ಸಮಾಜ ಪ್ರಗತಿಯ ಹೆಜ್ಜೆಗಳನ್ನಿಡಬೇಕಾದರೆ ಮತ್ತು ಸುಖಮಯ ಜೀವನ ನಡೆಸಬೇಕಾದರೆ ಎಲ್ಲರೂ ತಮ್ಮ ತಮ್ಮ ಉದ್ಯೋಗಗಳನ್ನು ಶ್ರದ್ಧೆ, ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಮಾಡಬೇಕು. ಕಾಯಕದ ಮಹತ್ವವನ್ನು ಅರ್ಥಮಾಡಿಕೊಂಡು ಅನುಷ್ಠಾನಕ್ಕೆ ತರಬೇಕು ಎಂಬ ವಿಚಾರವನ್ನು ಶರಣರು ಒತ್ತಿ ಹೇಳಿದ್ದಾರೆ. ಅವರು ಕಾಯಕಕ್ಕೆ ಮಹತ್ವಕೊಟ್ಟಂತೆ ಅಸಂಗ್ರಹವನ್ನು ವಿರೋಧಿಸಿದರು. ಅವರು ಏಕನಿಷ್ಠೆಯಿಂದ ಕಾಯಕವನ್ನು ಜೀವನದಲ್ಲಿ ಒಂದು ಅವಿಭಾಜ್ಯ ಅಂಗವಾಗಿ ರೂಪಿಸಿಕೊಂಡರು.

ಇಂದು ಕಷ್ಟಪಡದೆ ಬೆವರು ಸುರಿಸದೆ ಸುಖವನ್ನು ಬಯಸುವವರ ಸಂಖ್ಯೆ ಹೆಚ್ಚಾಗುತ್ತಿದೆ. ಸುಖಪಡಲು ಹಣಬೇಕು ಎಂಬ ಕಾರಣಕ್ಕಾಗಿ ಆ ಹಣವನ್ನು ಅನ್ಯಾಯದ ಮಾರ್ಗದಲ್ಲಿ ಸಂಪಾದನೆ ಮಾಡುವವರ ಸಂಖ್ಯೆ ದಿನೇ ದಿನೇ ವೃದ್ಧಿಯಾಗುತ್ತಿದೆ. ಸತ್ಯ, ಪ್ರಾಮಾಣಿಕತೆಯ ಜಾಗವನ್ನು ಅನ್ಯಾಯ, ಅಪ್ರಾಮಾಣಿಕತೆ, ದುರಾಶೆಗಳು ಆಕ್ರಮಿಸಿಕೊಂಡಿವೆ. ಇದರಿಂದ ಸಮಾಜದ ಆರೋಗ್ಯದಲ್ಲಿ ಏರುಪೇರಾಗಿದೆ. ಕುಟುಂಬದಲ್ಲಿ, ಸಮಾಜದಲ್ಲಿ ನೆಮ್ಮದಿ, ಶಾಂತಿ ದೊರೆಯ

ಬೇಕಾದರೆ ಆಯ್ದಕ್ಕಿ ಲಕ್ಕಮ್ಮನಂತಹ ಆದರ್ಶ ಗೃಹಿಣಿ ಬೇಕಾಗಿದ್ದಾರೆ. ಕಾಯಕದಿಂದ ಬಂದದ್ದು ಮಾತ್ರ ಶಿವನಿಗರ್ಪಿತ ಎಂದು ನಂಬಿ ಅನುಷ್ಠಾನಕ್ಕೆ ತಂದದ್ದು ಲಕ್ಕಮ್ಮನಂತಹ ದಿಟ್ಟ ಮಹಿಳೆಯ ಆದರ್ಶ ಇಂದಿನ ಗೃಹಿಣಿಯರಿಗೆ ದಾರಿದೀಪವಾಗಿದೆ. ಆಕಾಶದಲ್ಲಿ ಬೆಳ್ಳಿ ನಕ್ಷತ್ರ ಮಿನುಗುವಂತೆ ಇಪ್ಪತ್ತನೇ ಶತಮಾನದಲ್ಲೂ ಲಕ್ಕಮ್ಮನಂತಹ ಮಹಿಳೆಯನ್ನು ಕಾಣುತ್ತೇವೆ ಎಂಬುದಕ್ಕೆ ಕಳೆದ ಕೆಲವು ವರ್ಷಗಳ ಹಿಂದೆ ಕನ್ನಡ ದಿನಪತ್ರಿಕೆಯ ಮುಖಪುಟದಲ್ಲಿ ಪ್ರಕಟವಾದ ಸುದ್ದಿಯನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಅಧರ್ಮದಿಂದ, ಅನ್ಯಾಯದಿಂದ ತನ್ನ ಪತಿ ಸಂಪಾದಿಸಿದ ೧೩. ದಶಲಕ್ಷ ಇಟಲಿಯ ಕರೆನ್ಸಿಯನ್ನು ರೋಮನ್ ಮಹಿಳೆಯೊಬ್ಬಳು ಮಹಡಿಯ ಮೇಲಿಂದ ಬೀದಿಗೆಸೆದ ಪ್ರಸಂಗ ಆಶ್ಚರ್ಯವನ್ನುಂಟುಮಾಡುವಂತಹುದು. ಸುಮಾರು ಹತ್ತುಸಾವಿರ ಡಾಲರ್‌ಗೆ ಸಮನಾದ ಈ ಹಣವನ್ನು ಬೀದಿಗೆಸೆದು ವಿಷಯವನ್ನು ಪೋಲೀಸರಿಗೆ "ನನ್ನ ಪತಿಯು ಅಕ್ರಮ ಮಾರ್ಗಗಳಿಂದ ಸಂಪಾದಿಸಿದ ಹಣ ಇದು ಎಂದು ನನಗೆ ಖಾತರಿಯಾದುದರಿಂದ ಬೀದಿಗೆಸೆದೆ" ಎಂದು ದೂರವಾಣಿಯ ಮೂಲಕ ತಿಳಿಸುವ ದಿಟ್ಟತನವನ್ನು ತೋರುತ್ತಾಳೆ. ಈ ಪ್ರಸಂಗವನ್ನು ಗಮನಿಸುವಾಗ ನಮಗೆ ಥಟ್ಟನೆ ಆಯ್ದಕ್ಕಿ ಲಕ್ಕಮ್ಮ ನೆನಪಿಗೆ ಬರುತ್ತಾಳೆ. ಮಹಿಳೆಯರು ಜಾಗೃತರಾದರೆ, ಲಕ್ಕಮ್ಮನ ಜೀವನವನ್ನು ಆದರ್ಶವಾಗಿಟ್ಟುಕೊಂಡರೆ ಸತ್ಯ ಶುದ್ಧ ಕಾಯಕದ ಮೇಲೆ ಉತ್ತಮ ಸಮಾಜವನ್ನು ನಿರ್ಮಿಸಲು ಕೊಂಚ ಮಟ್ಟಿಗಾದರೂ ಸಾಧ್ಯವಾಗುತ್ತದೆ.

ನಮ್ಮ ಬದುಕು ಬೇರೆಯವರಿಗೆ ಆದರ್ಶವಾಗಿರಬೇಕು. ನಮ್ಮ ನಡೆ-ನುಡಿ, ಆಚಾರ-ವಿಚಾರ, ಇವೆಲ್ಲವುಗಳಲ್ಲಿ ಪಾರದರ್ಶಕತೆಯಿರಬೇಕು. ನಮ್ಮನ್ನು ನಾವೇ ತಿದ್ದಿಕೊಂಡು ನಡೆದರೆ ಬೇರೆಯವರಿಗೆ ಹೇಳುವ ಅವಶ್ಯಕತೆಯೇ ಉದ್ಭವಿಸುವುದಿಲ್ಲ. ಈ ಕಾರಣಕ್ಕಾಗಿಯೇ ಶರಣರ ಜೀವನವನ್ನು ಅಧ್ಯಯನ ಮಾಡಬೇಕು. ಅವರು ಬಿಟ್ಟುಹೋದ ಸಾಮಾಜಿಕ ಮೌಲ್ಯಗಳನ್ನು ಸಾಧ್ಯವಾದಮಟ್ಟಿಗಾದರೂ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, 'ಆತ್ಮಸಾಕ್ಷಿ'ಗನುಗುಣವಾಗಿ ನಡೆಯಬೇಕು. 'ಹಾಸಿಗೆ ಇದ್ದಷ್ಟು ಕಾಲು ಚಾಚು' ಬೇಕೆನ್ನುವ ಮನೋಧರ್ಮವನ್ನು ರೂಢಿಸಿಕೊಳ್ಳಬೇಕು. ನಾವು ಸಮಾಜದ ಒಂದು ಅಂಗ ಎಂಬುದನ್ನು ಮರೆಯಬಾರದು. ಅಂತರಂಗದಲ್ಲಿ ಮನೆಮಾಡಿ ಕೊಂಡಿರುವ ಕಲ್ಮಶಗಳನ್ನು ಹೊರಹಾಕದೆ ಬಹಿರಂಗವನ್ನು ಶುದ್ಧಿಮಾಡಿಕೊಂಡು ತೋರಿಕೆಗಾಗಿ ಜೀವನ ನಡೆಸುವುದು ನಮಗೆ ನಾವೇ ವಂಚನೆ ಮಾಡಿಕೊಂಡಂತಾಗುತ್ತದೆ. ಇಲ್ಲದೆ ಹೋದರೆ ಬೇವಿನ ಮರಕ್ಕೆ ಬೆಲ್ಲದ ಕಟ್ಟೆಯನ್ನು ಕಟ್ಟಿ ಹಾಲನೆರೆದಂತ್ತಾಗುತ್ತದೆ.

ಭ್ರಷ್ಟಾಚಾರದ ಕಾಯಿದೆ ಕಾನೂನುಗಳ ಬಗ್ಗೆ ಜನರಲ್ಲಿ ಜಾಗೃತಿಮೂಡಿಸುವ ಆಂದೋಲನವನ್ನು ಸರ್ಕಾರದ ಜೊತೆಗೆ ಸಾರ್ವಜನಿಕ ಸಂಘ ಸಂಸ್ಥೆಗಳು ಹಮ್ಮಿಕೊಳ್ಳಬೇಕು. ಬೀದಿನಾಟಕ, ಸಾಕ್ಷಚಿತ್ರ ಹಾಗೂ ಭಿತ್ತಿಪತ್ರಗಳ ಮೂಲಕ ಭ್ರಷ್ಟಾಚಾರದಿಂದ ಸಮಾಜದ ಮೇಲೆ ಆಗುವ ದುಷ್ಪರಿಣಾಮಗಳ ಬಗ್ಗೆ ಮನವರಿಕೆ ಮಾಡಿಕೊಡಬೇಕು. ವಿಶೇಷವಾಗಿ ಯುವಜನಾಂಗದವರಲ್ಲಿ ಅರಿವು ಮೂಡಿಸಬೇಕು. ಅದಕ್ಕಾಗಿ ಲೇಖನ ಸ್ಪರ್ಧೆ, ಚರ್ಚಾಸ್ಪರ್ಧೆ ಮೊದಲಾದವುಗಳನ್ನು ಏರ್ಪಡಿಸ ಬೇಕು. ಭ್ರಷ್ಟಾಚಾರದ ವಿರುದ್ಧ ಸಮರ ಸಾರಲು ಯುವ ಶಕ್ತಿಯನ್ನು ಬಳಸಿಕೊಳ್ಳುವಂತಾಗಬೇಕು. ಶತಶತಮಾನಗಳಿಂದ ಬೇರುಬಿಟ್ಟಿರುವ ಈ ವಿಷ ಬೇರುಗಳ ನಿರ್ಮೂಲನೆ ಕೂಡಲೆ ಆಗದಿದ್ದರೂ, ಜನಜಾಗೃತಿ ಮೂಡಿಸುವುದರ ಮೂಲಕ ಹಂತಹಂತವಾಗಿ ಭ್ರಷ್ಟಾಚಾರವೆಂಬ ರಾಕ್ಷಸಮುಷ್ಟಿಯಿಂದ ಬಿಡಿಸಿಕೊಳ್ಳಬಹುದು. ಇದಕ್ಕೆ ಎಲ್ಲರ ಸಹಕಾರ ಅತ್ಯಗತ್ಯ.

**(ಈ ವಿಷಯದ ಬಗ್ಗೆ ನನ್ನ ಗಮನ ಸೆಳೆದು ಲೇಖನ ಬರೆಯಲು ಪ್ರೇರೇಪಿಸಿದ ಆತ್ಮೀಯರಾದ ಶ್ರೀ ಜಿ. ನಾಗಸುಂದರ ಅವರಿಗೆ ಕೃತಜ್ಞತೆಗಳು).**

[೧] ಶರಣ ತತ್ತ್ವಚಿಂತನ–೪ ಸಂ. ಟಿ.ಆರ್. ಮಹಾದೇವಯ್ಯ ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಪು. ೧೨೧

[೨] ಶರಣ ತತ್ತ್ವಚಿಂತನ–೪ ಸಂ. ಟಿ.ಆರ್. ಮಹಾದೇವಯ್ಯ ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರ ಪು. ೧೨೧

[೩] ಶರಣ ತತ್ತ್ವಚಿಂತನ–೪ ಸಂ. ಟಿ.ಆರ್. ಮಹಾದೇವಯ್ಯ ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರ ಪು. ೧೨೧

[೪] ಮಹಾಮನೆ, ಸಂ. ಎಂ.ಜಿ. ನಾಗರಾಜ್, ಎಚ್.ಎಸ್.. ಸಿದ್ಧಗಂಗಪ್ಪ ಸಂಪುಟ ೧, ಡಿಸೆಂಬರ್–ಜನವರಿ ೧೯೮೮–೮೯, ಪುಟ–೭

[೫] ಬಸವೇಶ್ವರ–ಗಾಂಧೀಜಿ ಡಾ. ಎಚ್. ತಿಪ್ಪೇರುದ್ರಸ್ವಾಮಿ, ಪು ೬೭, ಪ್ರ. ಶ್ರೀ ಮುರುಗೋಡ ಮಹಾಂತ ಶಿವಯೋಗೀಶ್ವರ ಶತಮಾನೋತ್ಸವ ಸ್ಮಾರಕ ಪೀಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೮೭

❑

# ಕರ್ನಾಟಕ ಧಾರ್ಮಿಕ ಪರಂಪರೆ

– ಸಾಸಲು ಜೆ. ವಿಶ್ವನಾಥ್ *

ಜಗತ್ತಿನಲ್ಲಿ ಧರ್ಮ ಎಂದರೇನು ಎಂಬ ಪ್ರಶ್ನೆಗೆ ಧರ್ಮ ಪ್ರವರ್ತಕರು, ಧಾರ್ಮಿಕ ಸುಧಾರಕರು, ದಾರ್ಶನಿಕರು, ತತ್ವಜ್ಞಾನಿಗಳು ತಮ್ಮದೇ ಆದ ವಿಶೇಷ–ವಿಶಿಷ್ಟ ಅರ್ಥ ನೀಡಿದ್ದಾರೆ. ಅಂತಿಮವಾಗಿ ಅವರೆಲ್ಲರೂ ಪ್ರಕೃತಿಯ ಒಂದು ಭಾಗವಾಗಿ ಮಾನವನ **"ಉತ್ತಮ ನಡತೆಯ ಪರಿಶುದ್ಧ ಜೀವನವನ್ನೇ"** ಧರ್ಮವೆಂದರು. **"ಮಾನವನು ಮಾನವನನ್ನು ಅರ್ಥ ಮಾಡಿಕೊಳ್ಳುವುದೇ ನಿಜವಾದ ಧರ್ಮ."** ಬಸವಣ್ಣನವರು ತಮ್ಮ ವಚನದಲ್ಲಿ ಧರ್ಮವೆಂದರೆ **"ಅಂತರಂಗ, ಬಹಿರಂಗ ಶುದ್ಧಿ"**, ಇರುವುದೇ ಧರ್ಮವೆಂದರು.

**ಈ** ದೃಷ್ಟಿಯಿಂದ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದ ಇಂದಿನ ತನಕ ಹಲವಾರು ಧರ್ಮಗಳು ತಮ್ಮ ಅಸ್ತಿತ್ವವನ್ನು ಪಡೆದುಕೊಂಡು ಬಂದಿವೆ. "ಧಾರ್ಮಿಕ ಸಹಿಷ್ಣುತೆ, ಪರಧರ್ಮ ಗೌರವ" ಈ ನೆಲದ ಮಹತ್ವದ ಗುಣ. ಅಂತಹ ಧರ್ಮಗಳಲ್ಲಿ ಮುಖ್ಯವಾದುದೆಂದರೆ :

**೧. ಹಿಂದೂ ಧರ್ಮ :** ಈ ಧರ್ಮವನ್ನು ಹಿಂದೂ ಧರ್ಮ, ವೈದಿಕ ಧರ್ಮ, ಹೀಗೆ ಬಗೆಯಾಗಿ ಕರೆಯುತ್ತಾರೆ. ವೈದಿಕ ಧರ್ಮವೆಂದರೆ ವೇದೋಕ್ತವಾಗಿ ವೇದವರ್ಗದ ಧರ್ಮ ಎಂದರ್ಥ. ವೇದ ಮಾರ್ಗವೆಂದರೆ ಉತ್ತಮ ನಡತೆ ಎಂದರ್ಥ. ಹಿಂದೂ ಧರ್ಮವನ್ನು **'ಜೀವನ'** ವಿಧಾನವೆಂದೂ ಕರೆಯುತ್ತಾರೆ. ವೇದಾಂಗಗಳೆಂದು ಪ್ರಸಿದ್ಧವಾಗಿರುವ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ ಹಾಗೂ ಕಲ್ಪ ಸೂತ್ರಗಳು ವೇದಾರ್ಥವನ್ನು ಜನತೆಗೆ ಸುಲಭವಾಗಿ ತಿಳಿಸುವುದಕ್ಕಾಗಿ ರಚಿತವಾಗಿದೆ. ವೇದಗಳಲ್ಲಿ ಪ್ರಾಚೀನವಾದದ್ದು ಋಗ್ವೇದ. ಇದು ಮಾನವ ಜನಾಂಗದ ಪ್ರಾಚೀನ ಗ್ರಂಥ.

ಪ್ರಾಗೈತಿಹಾಸಿಕ ಕಾಲದಿಂದಲೂ ಹಿಂದೂ ಧರ್ಮ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿತ್ತೆಂಬುದಕ್ಕೆ ವೇದೋಕ್ತವಾದ ಅನೇಕ ಐತಿಹ್ಯಗಳಿವೆ. ತಲಾತಲಾಂತರದಿಂದ ಕನ್ನಡ ನಾಡಿನ ಜನರ ಜೀವನ ಶ್ರದ್ಧೆ ಹಾಗೂ ಸಾಮಾಜಿಕ ರೀತಿ–ನೀತಿಗಳನ್ನು ಆಡಳಿತ, ಕಲೆ ಶಿಲ್ಪ ಮುಂತಾದವುಗಳಲ್ಲಿ ಹಿಂದೂ ಧರ್ಮದ ಪ್ರಭಾವವಿದೆ. ರಾಮಾಯಣ, ಮಹಾಭಾರತ ಸ್ಥಳನಾಮಗಳ ಐತಿಹ್ಯಗಳು ಸಾವಿರ, ಸಾವಿರ ಸಂಖ್ಯೆಯಲ್ಲಿ ಕನ್ನಡ ನೆಲದಲ್ಲಿ ಸಿಗುತ್ತವೆ. ಸ್ಥಳಪುರಾಣ ಮತ್ತು ಜನಪದ ಸಂಸ್ಕೃತಿಯಲ್ಲೂ ಹಿಂದೂ ಧರ್ಮದ ದಟ್ಟ ಜೀವನ ದರ್ಶನಗಳನ್ನು ನಾವು ಕಾಣಬಹುದು. ಕನ್ನಡ ನಾಡನ್ನು ಆಳಿದ ರಾಜವಂಶದವರೆಲ್ಲರೂ ಅಂದರೆ ಚಾಲುಕ್ಯ ರಾಷ್ಟ್ರಕೂಟ, ಹೊಯ್ಸಳ, ಗಂಗ, ಯಾದವ ಮುಂತಾದವರು ಹಿಂದೂ ಧರ್ಮದ ವೈದಿಕ ದೇವ ಮೂಲ ರಾಜವಂಶಸ್ಥರೆಂದು ತಮ್ಮನ್ನು ಕರೆದುಕೊಂಡಿರುವುದು ಕರ್ನಾಟಕ ಅನಾದಿ ಕಾಲದಿಂದ ಹಿಂದೂ ಧಾರ್ಮಿಕ ನೆಲೆಯಲ್ಲಿ ಅದು ತನ್ನ ಅಸ್ತಿತ್ವ ಉಳಿಸಿಕೊಂಡಿರುವುದಕ್ಕೆ ಸಾಕ್ಷಿಯಾಗಿದೆ.

ಕನ್ನಡ ಅರಸು ಮನೆತನಗಳು ಮೂಲಭೂತವಾಗಿ ಹಿಂದೂ ಧರ್ಮಕ್ಕೆ ಅನುಯಾಯಿಯಾಗಿದ್ದರೂ ಪರಮತ ಸಹಿಷ್ಣುತೆಗಳಾಗಿದ್ದಕ್ಕೆ ನೂರಾರು ಶಾಸನಗಳ ಆಧಾರಗಳು ನಮ್ಮಲ್ಲಿವೆ. ಶೈವ ಮತ್ತು ವೈಷ್ಣವ ಪಂಥಗಳು ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಜನಪ್ರಿಯವಾಗಿ ತಮ್ಮ ಅಸ್ತಿತ್ವವನ್ನು ಇಂದಿಗೂ ಉಳಿಸಿಕೊಂಡು ಬಂದಿವೆ. ಹಿಂದೂ ಧರ್ಮದಲ್ಲಿ ಉನ್ನತ ವಿಚಾರಗಳಿದ್ದಂತೆ ಸಮಾಜ ಜೀವನಕ್ಕೆ ಮಾರಕವಾಗಿರುವ ಅಂಧಶ್ರದ್ಧೆ, ಮೌಢ್ಯಗಳು, ಜಾತೀಯತೆ, ಕೆಟ್ಟ ಸಂಪ್ರದಾಯಗಳ ಆಚರಣೆ, ನರಬಲಿ, ಪ್ರಾಣಿಬಲಿ, ಸ್ತ್ರೀ ಅಸಮಾನತೆ, ಬಾಲ್ಯ ವಿವಾಹ, ಸತಿಸಹಗಮನದಂತ ಕ್ರೂರ ಆಚರಣೆಗಳು ಜಾರಿಯಲ್ಲಿದ್ದವು. ಈ ಕ್ರೂರ ಆಚರಣೆಗಳ ವಿರುದ್ಧ ದಂಗೆಯೆದ್ದು ಹೊಸಮತ, ಹೊಸಜೀವನ ದರ್ಶನಗಳನ್ನು ನೀಡಲು ಬುದ್ಧ, ಮಹಾವೀರ, ಬಸವಣ್ಣನವರಂತ ಧಾರ್ಮಿಕ ನಾಯಕರು ಪ್ರಯತ್ನಶೀಲರಾಗಿರುವುದು ಚಾರಿತ್ರಿಕ ಸತ್ಯ. ಕನ್ನಡ ನೆಲದಲ್ಲಿ ಬಸವಣ್ಣನವರ ಧಾರ್ಮಿಕ ಕ್ರಾಂತಿ ಒಂದು ಮಹತ್ವದ ಐತಿಹಾಸಿಕ ಘಟನೆ. ಹಿಂದೂ ಧರ್ಮ ಅನೇಕ ಅಪಾಯಗಳಿಗೆ ಒಳಗಾಯಿತು. ಅನ್ಯಧರ್ಮಿಯರ ದಾಳಿ, ಆಳ್ವಿಕೆ, ದಬ್ಬಾಳಿಕೆಗಳಿಂದ ಹಿಂದೂ ಜೀವನ ಕ್ರಮದಲ್ಲಿ ಬದಲಾವಣೆ

* ಅಧ್ಯಾಪಕರು, ಎಸ್.ಜೆ.ಆರ್ ಕಾಲೇಜು. ರಾಜಾಜಿನಗರ, ಬೆಂಗಳೂರು–೫೬೦ ೦೧೦

ಕಂಡಿತು. ಹಿಂದೂ ಧಾರ್ಮಿಕ ಕೇಂದ್ರಗಳು ಮತಾಂತರ ದಾಳಿಗೆ ಸಿಕ್ಕಿ ಸರ್ವನಾಶವಾದವು. ಕೆಲ ಪಳೆಯುಳಿಕೆಗಳಂತೆ ಸಾಮ್ರಾಜ್ಯಗಳೇ ನಶಿಸಿ ಹೋದ ಘಟನೆಗಳೂ ಕರ್ನಾಟಕದಲ್ಲಿ ಸ್ವಲ್ಪ ಅತಿಯಾಗಿಯೇ ನಡೆಯಿತು.

ಹಿಂದೂ ಧರ್ಮದ ಉನ್ನತಿಗೆ ೮ನೇ ಶತಮಾನದಲ್ಲಿ ಶಂಕರಾಚಾರ್ಯರು, ೧೨ನೇ ಶತಮಾನದಲ್ಲಿ ರಾಮಾನುಜಾಚಾರ್ಯರು, ೧೩ನೇ ಶತಮಾನದಲ್ಲಿ ಮಧ್ವಾಚಾರ್ಯರು ತಮ್ಮದೇ ಆದ ನಿಟ್ಟಿನ ಸುಭದ್ರ, ಸ್ವದೃಢ, ಉತ್ತಮ ಧಾರ್ಮಿಕ ವಯವಸ್ಥೆಯೂ ನಿಲ್ಲಲು ಪ್ರಯತ್ನಿಸಿದರು. ಕರ್ನಾಟಕದಲ್ಲಿ ಸಹಬಾಳ್ವೆಯ ದ್ಯೋತಕಗಳಾಗಿ, ಮೊದಲಿಗೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮತಗಳು ಹಿಂದೂ ಧರ್ಮದ ಪುನರುಜ್ಜೀವನದ ಶಾಖೆಗಳಂತೆ ಉದಯಿಸಿ ಕ್ರಿಯಾ ಶೀಲತೆಯನ್ನು ಉಳಿಸಲು ಸಹಕರಿಸಿದವು.

ಮಧ್ವ, ಶಂಕರ, ರಾಮಾನುಜರ ನಂತರ ಕರ್ನಾಟಕದಲ್ಲಿ ಹಿಂದೂ ಜೀವನ ಶೈಲಿಯ ಉತ್ಕರ್ಷಕ್ಕೆ ಸಮಾಜದ ಸುಧಾರಣೆಗೆ ಶ್ರಮಿಸಿದವರು ವ್ಯಾಸಕೂಟ ಮತ್ತು ದಾಸಕೂಟ ಎಂದರೆ ತಪ್ಪಾಗದು. ಕನ್ನಡ ಭಾಷೆಯ ಮೂಲಕ ಸರಳ ಹಾಡುಗಳ ಮೂಲಕ ಇವರು ಸಮಾಜ ಸುಧಾರಣೆಗೆ, ಧರ್ಮ ರಕ್ಷಣೆಗೆ ಪ್ರಯತ್ನಪಟ್ಟರು. ಹಿಂದೂ ಧರ್ಮದ ಧಾರ್ಮಿಕ, ಸಾಮಾಜಿಕ ಉನ್ನತೀಕರಣಕ್ಕೆ ಶ್ರಮಿಸಿದರು. ಶಂಕರರು ಧರ್ಮ ಭಾರತದಲ್ಲಿ ಚಿರಸ್ಥಾಯಿಯಾಗಲು ನಾಲ್ಕು ಮಠಗಳನ್ನು ಶೃಂಗೇರಿ, ಬದರಿ, ಪುರಿ, ದ್ವಾರಕಗಳಲ್ಲಿ ಸ್ಥಾಪಿಸಿದರು. ಅದರಲ್ಲಿ ಶೃಂಗೇರಿ ಮಠವೇ ಅತೀ ಪ್ರಾಚೀನವಾದುದು.

*ಬೌದ್ಧಧರ್ಮ :*

ಕ್ರಿ.ಪೂ. ೬ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ಗೌತಮ ಬುದ್ಧನಿಂದ ಆರಂಭವಾದ ಬೌದ್ಧಧರ್ಮ ಮುಂದೆ ಅಖಂಡ ಭಾರತವನ್ನು ವ್ಯಾಪಿಸಿತು. ಈ ಧರ್ಮ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲೂ ತನ್ನ ಅಸ್ತಿತ್ವ ವ್ಯಾಪಿಸಿತು. ಕರ್ನಾಟಕದಲ್ಲಿ ಕ್ರಿ.ಪೂ. ೩ನೇ ಶತಮಾನದ ಹೊತ್ತಿಗೆ ತನ್ನ ಅಸ್ತಿತ್ವ ಉಳಿದುಕೊಂಡಿತ್ತು. ಅಶೋಕನ ಕಾಲದಲ್ಲಿ ಈ ಧರ್ಮ ಕರ್ನಾಟಕ ಪ್ರವೇಶಿಸಿತೆಂದು ಹೇಳುತ್ತಾರೆ. ಅಶೋಕನ ಬೌದ್ಧಧರ್ಮ ಸಭೆಯ ಅನಂತರ ಸಭೆಯ ಅಧ್ಯಕ್ಷತೆ ವಹಿಸಿದ್ದ ಧರ್ಮಪ್ರಚಾರ ಕಾರ್ಯಕ್ಕೆ ತನ್ನ ಭಿಕ್ಷಗಳ ಮುಖ್ಯನಾದ ಮಹಾದೇವನನ್ನು, ಈ ಭಿಕ್ಷುಗಳು ಕರ್ನಾಟಕದಲ್ಲಿ ಸಂಚರಿಸಿ ಧಾರ್ಮಿಕ ಸಂಘಟನೆ ಮಾಡಿದರು. ಅನುಯಾಯಿಗಳು, ಬೌದ್ಧ ಧಾರ್ಮಿಕ ಕೇಂದ್ರಗಳು ತಲೆ ಎತ್ತಿದವು. ಐದು ನೂರು ವಿಹಾರಗಳು, ಲಕ್ಷಾಂತರ ಜನರು ಬೌದ್ಧಧರ್ಮಕ್ಕೆ ಸೇರಿ ಭಿಕ್ಷುಗಳಾದರು. ಏಳನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಹೂಯನ್‌ತ್ಸಾಂಗ್ ಕರ್ನಾಟಕದಲ್ಲಿ ಅಶೋಕನು ಕಟ್ಟಿಸಿದ ಸ್ತೂಪಗಳಿವೆ ಎಂದು ಹೇಳಿದ್ದಾನೆ.

ಆಂಧ್ರ ಮತ್ತು ಮಹಾರಾಷ್ಟಗಳಲ್ಲಿ ಹೆಚ್ಚಿದ ಬೌದ್ಧ ಕೇಂದ್ರಗಳು ಕರ್ನಾಟಕದ ಗಡಿಯಲ್ಲೂ ತಲೆ ಎತ್ತಿದವು. ಕರ್ನಾಟಕದ ಗಡಿ ಬ್ರಹ್ಮಪುರಿ (ಕೊಲ್ಲಾಪುರ), ಬೀದರ್ ಜಿಲ್ಲೆಯ (ದೇಶ) ಈ ಸ್ಥಳಗಳಲ್ಲಿಯ ಉತ್ಖನನಗಳಲ್ಲಿ ಬೌದ್ಧ ಸ್ತೂಪಗಳಿದ್ದ ಕುರುಹುಗಳು ಸಿಕ್ಕಿವೆ. ಗುಲ್ಬರ್ಗ ಜಿಲ್ಲೆಯ ಸನ್ನತಿಯಲ್ಲಿ ನಾಲ್ಕು ಬೌದ್ಧಸ್ತೂಪಗಳಿರುವ ಬಗ್ಗೆ ಖಚಿತ ಮಾಹಿತಿ ಒದಗಿಸುತ್ತದೆ. ಮಾಗಡಿ ಹತ್ತಿರದ ದೊಡ್ಡಬಳ್ಳಾಪುರ ಹತ್ತಿರದ ರಾಜಘಟ್ಟ ಇತ್ತೀಚೆಗೆ ಸಂಶೋಧಿತವಾದ ಪ್ರಾಚೀನ ಬೌದ್ಧ ಸ್ತೂಪವಿರುವ ಪ್ರಮುಖ ಬೌದ್ಧ ಶಿಲೆಗಳು. ಬನವಾಸಿ ಪ್ರಾಂತ್ಯ ಬಾದಾಮಿ ಪರಿಸರ, ಕೋಲಾರ ಜಿಲ್ಲೆಯ ಅವನಿ ಪರಿಸರ, ಉತ್ತರ ಹುಬ್ಬಳ್ಳಿ ತಾಲ್ಲೂಕಿನ ಕೋಳಿವಾಡ – ಈ ಪ್ರದೇಶಗಳು ಬೌದ್ಧ ಕ್ರೇಂದ್ರಗಳಾಗಿದ್ದವು. ಬನವಾಸಿಯಲ್ಲಿ ೧೦೦ ಬೌದ್ಧ ಸಂಘರಾಮಗಳಿದ್ದ ಬಗ್ಗೆ ಹೂಯನ್‌ತ್ಸಾಂಗ್ ಮಾಹಿತಿ ನೀಡಿದ್ದಾನೆ. ಬುದ್ಧನ ಮಾನವ ರೂಪದ ಚಿತ್ರ ಸಹ ಬನವಾಸಿ ಪರಿಸರದಲ್ಲಿ ದೊರಕಿದೆ.

ಆದರೆ ೧೨ನೇ ಶತಮಾನ ಬರುವ ಹೊತ್ತಿಗೆ ಕರ್ನಾಟಕದಲ್ಲಿ ಜೈನ ಮತ್ತು ವೀರಶೈವ ಮತಗಳ ಪ್ರಾಬಲ್ಯ, ಜನಪ್ರಿಯತೆ ಹೆಚ್ಚಿ ಬೌದ್ಧಧರ್ಮ ಪೂರ್ಣವಾಗಿ ಅಳಿಸಿ ಹೋಯಿತು. ಇತ್ತೀಚಿನ ದಿನಗಳಲ್ಲಿ ಬೌದ್ಧಧರ್ಮ ಪ್ರಚಾರದಿಂದಾಗಿ ಕರ್ನಾಟಕದಲ್ಲಿ ಬುದ್ಧ ಕೇಂದ್ರ ಹಾಗೂ ಭಿಕ್ಷುಗಳನ್ನು ಕಾಣಬಹುದು. ಬೆಂಗಳೂರಿನ ಮಹಾಬೋಧಿ ಸೊಸೈಟಿ ಈಗ ಕ್ರಿಯಾಶೀಲವಾಗಿದೆ. ಇತ್ತೀಚೆಗೆ ಟಿಬೆಟಿನಿಂದ ವಲಸೆ ಬಂದ ಜನರು ತಮ್ಮ ಬೌದ್ಧಶಿಲೆ ಕಟ್ಟುತ್ತಿದ್ದಾರೆ. ಇತ್ತೀಚೆಗೆ ದೊಡ್ಡಬಳ್ಳಾಪುರ ರಾಜಘಟ್ಟದಲ್ಲಿ ೫–೬ ನೇ ಶತಮಾನದ ಪ್ರಾಚೀನ ಬೌದ್ಧಶಿಲೆಯನ್ನು ಸಾಸಲು ಜೆ. ವಿಶ್ವನಾಥ್‌ರವರು ಕಂಡುಹಿಡಿದಿದ್ದು ಉತ್ಖನನ ನಡೆದು ಬೌದ್ಧಸ್ತೂಪ ದೊರೆತಿದೆ. ಹೂಯನ್‌ತ್ಸಾಂಗ್ ಹೇಳಿದ ಆಂಧ್ರದ ಗಡಿಗೆ ಈ ಬೌದ್ಧನೆಲೆ ಕಾಣಸಿಗುತ್ತದೆ. ಪುರಾತತ್ವ ಇಲಾಖೆ ಉತ್ಖನನ ನಡೆಸಿದೆ. ಒಟ್ಟಾರೆ "ಆಸೆಯೇ ದುಃಖಕೆ ಮೂಲವೆಂದು ಸಾರಿದ" ಸರಳ ಜೀವನ ವಿಧಾನಗಳಿಂದ ಒಳ್ಳೆಯ ಬದುಕನ್ನು ಬದುಕುವ ಸರಳ ಸತ್ಯ.

ಧರ್ಮ ವರ್ಗದ ಬೌದ್ಧಧರ್ಮ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ತನ್ನ ಅಸ್ತಿತ್ವ ಉಳಿಸಿಕೊಂಡಿದೆ.

**ಜೈನಧರ್ಮ :**

ಕರ್ನಾಟಕದ ಸಾಂಸ್ಕೃತಿಕ ಪರಿಸರದಲ್ಲಿ ಜೈನಧರ್ಮ ಪ್ರಮುಖವಾದ ಸ್ಥಾನ ಪಡೆದಿದೆ. ಈ ಧರ್ಮ ಉತ್ತರ ಭಾರತದಲ್ಲಿ ಹುಟ್ಟಿದರೂ ಕರ್ನಾಟಕದಲ್ಲಿ ತನ್ನ ಅಸ್ತಿತ್ವವನ್ನು ತೋರಿದೆ. ೯ ರಿಂದ ೧೨ನೇ ಶತಮಾನದ ತನಕ ಮುನ್ನೂರು ವರ್ಷಗಳ ಅವಧಿಯಲ್ಲಿ ಕನ್ನಡ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಈ ಧರ್ಮ ಬೆಳೆಯಿತು. ಇಂದಿಗೂ ಶ್ರವಣಬೆಳಗೊಳ, ಕಾರ್ಕಳ, ಮೂಡಬಿದರೆ, ಹುಂಚ, ಲಕ್ಷ್ಮೇಶ್ವರ ಮುಂತಾದ ಜೈನ ಕೇಂದ್ರಗಳ ಪ್ರಾಚೀನ ವೈಭವಗಳನ್ನು ನಾವು ಕಾಣಬಹುದು. ಕಲೆ, ಸಾಹಿತ್ಯ, ವಾಸ್ತುಶಿಲ್ಪ ಜನಜೀವನದ ಸಹಜ ರೀತಿಗಳಿಗೆ ಜೈನಧರ್ಮದ ಮೌಲ್ಯಗಳಿಗೆ ಉದಾಹರಣೆಗಳು ನೂರಾರಿವೆ.

ಕನ್ನಡ ಸಂಸ್ಕೃತಿಯಲ್ಲಿ ಅರಳಿದ ಕುಂದ/ಕಂದಾಚಾರ್ಯ, ಸಾವಂತರು ಬದ್ರ, ಪೂಜ್ಯಪಾದ, ಅಕಲಂಕ, ವೀರಸೇನ, ಜಿನಸೇನ, ಪಂಪ, ರನ್ನ, ಜನ್ನ ರತ್ನಾಕರವರ್ಣಿಯರು ಇಂದಿಗೂ ಕನ್ನಡ ಜೈನ ಪರಂಪರೆಯಲ್ಲಿ ಕರ್ನಾಕಟದ ಮಹಾನ್ ವ್ಯಕ್ತಿಗಳಾಗಿ ಉಳಿದಿದ್ದಾರೆ.

ಕರ್ನಾಟಕದಲ್ಲಿ ಜೈನಧರ್ಮ ಕ್ರಿ.ಪೂ. ಕಾಲದಿಂದಲೇ ಆರಂಭವಾಗಿತ್ತು. ಆದರೆ ೯-೧೦ ನೇ ಶತಮಾನದ ರನ್ನನ ಜೈನ ಸಂಸ್ಕೃತಿಯ ಉನ್ನತಿಯ ಕಾಲ, ೧೦ನೇ ಶತಮಾನದ ವಡ್ಡಾರಾಧನೆ, ಹರಿಕೋಣನ ಬೃಹತ್ಕಥೆ, ಸುಮಾರು ೬೦೦ ರ ಶ್ರಮಣಬೆಳಗೊಳ ಶಾಸನಗಳಲ್ಲಿ ಜೈನ ಧರ್ಮ ಈ ನೆಲದಲ್ಲಿ ಬಂದು ಬೇರೂರಿದ ಕಥೆಗಳನ್ನು ಹೇಳುತ್ತಿವೆ. ಕ್ರಿ.ಪೂ. ೩ನೇ ಶತಮಾನದಲ್ಲಿ ಆಗಮಿಸಿದ ಜೈನಧರ್ಮ ಈ ನೆಲದಲ್ಲಿ ಇಂದಿಗೂ ಬೇರೂರಿದೆ. ಕದಂಬರ ಕಾಲದಿಂದಲೂ ಒಂದಿಲ್ಲೊಂದು ರೀತಿಯಲ್ಲಿ ಜೈನಧರ್ಮಕ್ಕೆ ಕರ್ನಾಟಕದಲ್ಲಿ ರಾಜಾಶ್ರಯ, ಜನಾಶ್ರಯ ದೊರಕಿತು.

ಕನ್ನಡ ನೆಲದಲ್ಲಿ ಇಂದು ಎಲ್ಲಾ ಜಿಲ್ಲೆಗಳಲ್ಲಿಯೂ ಜೈನರಿದ್ದಾರೆ. ನೂರಾರು ಬಸದಿಗಳಿವೆ. ಜೈನ ಮಠಗಳಿವೆ. ಜೈನಧರ್ಮದ ಒಳಪಂಗಡಗಳಾದ ಭೂಗಾರಾ, ಕಾಸಾರ, ಪಂಚಮಿ, ಚತುರ್ಥ, ಸೇತುವಾಳ, ಸಾದಗೌಡರು ಇಂದಿಗೂ ಚೈತನ್ಯದಾಯಕರಾಗಿದ್ದಾರೆ. ಅಮೂಲ್ಯವಾದ ಕನ್ನಡ, ಸಂಸ್ಕೃತಿ, ಪ್ರಾಕೃತ, ಹಸ್ತಪ್ರತಿ ಭಂಡಾರಗಳು ಕನ್ನಡ ನೆಲದಲ್ಲಿ ಸಾಕಷ್ಟಿವೆ.

ನೂರಾರು ವಿದ್ಯಾ ಕೇಂದ್ರಗಳನ್ನು ತೆರೆದಿರುವ ಜೈನರು ವಿಶ್ವವಿಖ್ಯಾತ ಮಂದಿರ ಸಂಸ್ಥೆಗಳನ್ನೂ ರೂಪಿಸಿದ್ದಾರೆ. ಸಾವಿರಾರು ವರ್ಷಗಳಿಂದ ಕನ್ನಡ ಭಾಷೆ, ಸಂಸ್ಕೃತಿ, ಸಹಕಾರ, ಪರಂಪರೆಗಳೊಂದಿಗೆ ಬೆಸದುಕೊಂಡ ಜೈನರು ಕನ್ನಡ ಸಂಸ್ಕೃತಿ ಮತ್ತು ಪರಂಪರೆ ಬೆಳೆಯಲು ಅಹರ್ನಿಷಿ ದುಡಿಯುತ್ತ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಅವಿಭಾಜ್ಯ ಅಂಗವಾಗಿ ನೆಲೆ ನಿಂತಿದ್ದಾರೆ.

**ಇಸ್ಲಾಂ ಧರ್ಮ :**

ಜಗತ್ತಿನ ಇತರ ಧರ್ಮಗಳಂತೆ ಅರಬ್ ದೇಶಗಳಲ್ಲಿ ೭ನೇ ಶತಮಾನದಲ್ಲಿ ಉಗಮವಾದ ಇಸ್ಲಾಂ ಧರ್ಮ, ೯-೧೦ ನೆ ಶತಮಾನದ ಹೊತ್ತಿಗೆ ಭಾರತಕ್ಕೆ ಆಗಮಿಸಿದ ಈ ಧರ್ಮ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲೂ ಸ್ಥಾನ ಪಡೆಯಿತು. ೧೧ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಮುಸ್ಲಿಂರು ಇದ್ದ ಸೂಚನೆಗಳು ಕೆಲ ಶಾಸನಗಳಲ್ಲಿ ದೊರಕುತ್ತದೆ. ಅರಬ್ಬಿ ವರ್ತಕರು ಕರ್ನಾಟಕದ ಪಶ್ಚಿಮ ತೀರದ ಪ್ರದೇಶಗಳೊಡನೆ ವ್ಯಾಪಾರ ನಡೆಸುತ್ತಿದ್ದುದು ಇದಕ್ಕೆ ಸಾಕ್ಷಿಯಾಗಿದೆ. ಅರಬ್ಬಿ ಲೇಖಕರು, ಮುಸ್ಲಿಂ ಜನರು ವ್ಯಾಪಾರಕ್ಕೆ ಭಾರತಕ್ಕೆ ಆಗಮಿಸಿ ಇಲ್ಲಿನ ವೇಷಭೂಷಣಗಳನ್ನು ತೊಟ್ಟು ಇರುತ್ತಿದ್ದರೆಂದು ಹೇಳಿದ್ದಾರೆ.

ಗೋವೆಯ ಕದಂಬರ ೧ನೇಯ ಜಯ ಕೇಶಿಯೂ ಅಂಗರಕ್ಷಕ ದಳದ ಮುಖ್ಯಸ್ಥ ತಾಜಿಕ ಕುಲದ ಅಲಿಯಮನ್ ಮಗ ಮದು ವರ್ದನನೆಂದೂ ಜಯಕೇಶಿ ಅವನಿಗೆ ಒಂದು ಗ್ರಾಮ ದತ್ತು ನೀಡಿದನೆಂದು ೧೦೫೪ ರ ಒಂದು ಶಾಸನ ತಿಳಿಸುತ್ತದೆ. ೧೨ ಮತ್ತು ೧೩ ನೇ ಶತಮಾನದಲ್ಲಿ ಅರಬ್ ತುರ್ಕದೇಶ ಹಾಗೂ ನಮ್ಮ ನಡುವಣ ಉತ್ತಮ ತಳಿಯ ಕುದುರೆಗಳ ವ್ಯಾಪಾರ ನಡೆಯುತ್ತಿತ್ತೆಂದು ಗ್ರಂಥಾಧಾರಗಳಿವೆ.

ಮಲ್ಲಿಕ್ ಕಾಪುರ್‌ನ ದಂಡೆಯಾತ್ರೆ ಹಾಗೂ ಬಹುಮನಿ ಸಾಮ್ರಾಜ್ಯದ ಸ್ಥಾಪನೆಯೊಡನೆ ಈ ಧರ್ಮ ಕರ್ನಾಟಕದಲ್ಲೂ ಒಂದು ಮಹತ್ವದ ಸ್ಥಾನ ಪಡೆಯಲು ಕಾರಣವಾಯಿತು. ಉತ್ತರ ಭಾರತ ಹಾಗೂ ಪಾಶ್ಚಾತ್ಯಗಳಿಂದ ಆಗಮಿಸಿ ಇಲ್ಲಿ ನೆಲೆಸಿದ ಮುಸ್ಲಿಮರು ಈ ನೆಲದ ಸಂಸ್ಕೃತಿ, ಆಚಾರ-ವಿಚಾರಗಳೊಡನೆ, ಬೆರೆತರು ವ್ಯಾಪಾರಿಗಳು, ರಾಜನೀತಜ್ಞರು, ಸಾಮಾನ್ಯರು, ದಿನೇ ದಿನೇ ತಮ್ಮ ಪ್ರಾಬಲ್ಯ ಬೆಳೆಸಿಕೊಂಡರು.

ಬಹಮನಿ ರಾಜ್ಯ ಒಡೆದ ಮೇಲೆ ಹುಟ್ಟಿದ ಬರೀದ್ ಶಾಹಿ ಮತ್ತು ಆದಿಲ್‌ಶಾಹಿ ಹಾಗೂ ಕುತುಬ್‌ಶಾಹಿ ಅರಸರು ಹಲವರು

ಚಿಕ್ಕನವಾಬರು ಮತ್ತು ಹೈದರ್ ಆಲಿ, ಟಿಪ್ಪುಸುಲ್ತಾನ್ ಇವರುಗಳ ಕಾಲದಲ್ಲಿ ಇಸ್ಲಾಂಧರ್ಮ ವಿಶೇಷವಾಗಿ ಕನ್ನಡ ನೆಲದಲ್ಲಿ ರಾಜಾಶ್ರಯದಲ್ಲಿ ಬೆಳೆಯಿತು.

ಬಹುಮನಿ ಅರಸರ ಕಾಲದಲ್ಲಿ ಆಫ್ರಿಕಾದಿಂದ ಬಂದ ಇಸ್ಲಾಮೀಯರು ಕರ್ನಾಟಕದಲ್ಲಿ ನೆಲೆ ನಿಂತರು. ಕಾಲಾಂತರದಲ್ಲಿ ಆಫಿಕ್ರಾದ ಸಿದ್ಧಿಗಳು ಉತ್ತರ ಭಾರತದಿಂದ ಬಂದವರೂ ಹೊಸದಾಗಿ ಇಲ್ಲಿ ಮತಾಂತರ ಹೊಂದಿದವರೂ ಒಂದು ಪ್ರತ್ಯೇಕ ಮಾರ್ಗವಾಗಿ ದಖ್ಖನಿಗಳೆಂದು ಕರೆಯಲ್ಪಟ್ಟು ಬೆಳೆದರು. ಮಾಲಿಕ್ ಬಿನ್ ವೀನಾರರ ಮೂಲಕ ಮತಾಂತರ ಹೊಂದಿದ ಕರಾವಳಿ, ಕರ್ನಾಟಕದ ಇಸ್ಲಾಮೀಯರು ಮಹಾಪಿಳ್ಳಿ ಹೆಂದು ಹೆಸರು ಪಡೆದರು. ಈಗ ಇವರನ್ನು ಮಾಪಿಳ್ಳೆಯೆಂದು ಕರೆಯುವರು.

ಕನ್ನಡ ನೆಲದಲ್ಲಿ ಇಂದು ಲಕ್ಷಾಂತರ ಮುಸ್ಲಿಮರು ಇದ್ದು ಷಿಯಾ ಮತ್ತು ಸುನ್ನಿ ಎಂಬ ಎರಡು ಪ್ರಮುಖ ವರ್ಗದವರೂ ಇದ್ದಾರೆ. ಉರ್ದು ಭಾಷೆಯ ಶಾಫೀ ವರ್ಗದವರು ಕರಾವಳಿ, ಕರ್ನಾಟಕದಲ್ಲಿ ವಿಶೇಷವಾಗಿ ಇದ್ದಾರೆ. ಕೆಲ ಮಳೆಯಾಳಂ ಭಾಷೆಯ ಮುಸ್ಲಿಂರು ಕ್ವಚಿತ್ತಾಗಿ ಈ ನೆಲದಲ್ಲಿ ನೆಲೆಸಿದ್ದಾರೆ.

ಕರ್ನಾಟಕದಲ್ಲಿ ಪ್ರಾಚೀನ ಹಾಗೂ ಆಧುನಿಕ ಅನೇಕ ಮಸೀದಿಗಳಿವೆ. ಹಲವು ಸಂತರ ಸಮಾಧಿ, ದರ್ಗಾಗಳಿವೆ. ಗುಲ್ಬರ್ಗಾದ ಬಂದೇ ನವಾಬರ್ ದರ್ಗಾ ಬಹು ಜನಪ್ರಿಯವಾಗಿದೆ. ಸಾಂತಾಫಿರ್ ಕ್ಷೇತ್ರ ಮೈಸೂರಿನಲ್ಲಿದೆ. ಬಾಬಾ ಬುಡನ್‌ಗಿರಿಯ ಸೂಫಿಸಂತ ಬಾಬಾಬುಡನ್‌ರವರು, ಉಲ್ಲಾಳದ ಸಯ್ಯದ್ ಮದನೀರವರು, ಕಾಸರಗೋಡಿನ ಮಲಿಕ್ ಬಿನ್ ದೀನರ್‌ರೂ, ಬೆಂಗಳೂರಿನ ಹಾಲ್‌ಅಮನ್, ಹಜ್ರತ್ ಯುರೇನ್ ಷಾವಲೀ, ಅವರು ಪ್ರಮುಖ ಸಂತರೂ. ಇವರಲ್ಲದೆ ಮಹಾಸಂತರ ಹೆಸರಲ್ಲಿ ದರ್ಗಾಗಳಿದ್ದು ಈ ಕ್ಷೇತ್ರಗಳಲ್ಲಿ ಹತ್ತಾರು ಕಡೆ ಹರಕೆ ಉರುಸ್‌ಗಳು ನಡೆಯುತ್ತಿದೆ. ಈ ಕ್ಷೇತ್ರದ ಧಾರ್ಮಿಕ ವಿಧಿಗಳಲ್ಲಿ ಮುಸ್ಲಿಂರ ಜೊತೆ ಜಾತಿಭೇದವಿಲ್ಲದೆ ಹಿಂದೂಗಳು ಆಚರಣೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಹಿಂದೂ ಧಾರ್ಮಿಕ ವಿಧಿ ಜಾತ್ರೆಗಳಲ್ಲಿ ಮುಸ್ಲಿಂರು, ಮುಸ್ಲಿಂರ ಹಬ್ಬಗಳಲ್ಲಿ ಹಿಂದುಗಳು ಸೇರಿ ಭಾವೈಕ್ಯತೆ ಮೆರೆವ ನೂರಾರು ಘಟನೆಗಳು ಈ ನೆಲದಲ್ಲಿವೆ.

ವೀರಶೈವ ಧರ್ಮ :

ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಹಿಂದೂ–ಜೈನ–ಬೌದ್ಧ–ಇಸ್ಲಾಂ, ಕ್ರಿಶ್ಚಿಯನ್ ಧರ್ಮಗಳಿಗಿಂತ ಭಿನ್ನವಾದ ಸಾಮಾಜಿಕ ಪುನರುಜ್ಜೀವನದ ಆಶಯವಾಗಿ ಬೇರೂರಿ ಬೆಳೆಯುವ ಶಕ್ತಿಯನ್ನು ೮೦೦ ವರ್ಷಗಳ ಹಿಂದೆ ಉಳಿಸಿಕೊಂಡದ್ದು ವೀರಶೈವ ಧರ್ಮ. ಮನಜ–ಮತ–ವಿಶ್ವಪಥ. ಸಹಕಾರ, ಸಹಬಾಳ್ವೆ, ಸರ್ವೋದಯ. ಜಾತಿರಹಿತ ಸಮಾಜದ ಕಲ್ಪನೆ, ವಿಶ್ವಕುಟುಂಬದ ಮಹತ್ವದ ಧ್ಯೆಯೋದ್ದೇಶಗಳಿಂದ ಸಮಾನತೆ, ನಾಗರಿಕ ಹಕ್ಕು, ಸ್ವಾತಂತ್ರ್ಯದ ಮಹತ್ವದ ಧ್ಯೇಯಗಳ ನಿಜವಾದ ಪ್ರಭಾಪ್ರಭುತ್ವದ ಮನೋಧರ್ಮ. ಈ ಧರ್ಮ ಅಂತರಂಗ, ಬಹಿರಂಗದ ಮಂತ್ರವಾಗಿ "ಕಾಯಕ ನಿಷ್ಠೆಗೆ" ಉಜ್ವಲ ಒತ್ತು ನೀಡಿತು. ಇದು ಜಗತ್ತಿನ ಅಪರೂಪದ ವಿಶಿಷ್ಟ ಧರ್ಮವಾಗಿ ಈ ನೆಲದಲ್ಲಿ ಬೇರೂರಿ ಬೆಳೆದದ್ದು ಒಂದು ರೋಚಕ ಅಧ್ಯಾಯ. ಜಗತ್ತಿನ ಇತಿಹಾಸದಲ್ಲಿ ಎಂದೂ ಎಲ್ಲೂ ಕಂಡು ಕೇಳದ ವಿಶಿಷ್ಟತೆ ಈ ಧರ್ಮ ಅಂತಃ ಸತ್ವವೆಂದರೆ ಅತಿಶಯವಾಗಲಾರದು.

ಶೈವಶಾಖೆಗಳಲ್ಲಿ ಒಂದಾದ ವೀರಶೈವ ಧರ್ಮ ಈ ಕನ್ನಡ ನೆಲದಲ್ಲಿ ಪುನರ್ ರೂಪ ಪಡೆದು ಅನಂತರ ದಕ್ಷಿಣ ಭಾರತದಲ್ಲೆಡೆ ಪಸರಿಸಿತು. ವೈದಿಕ ಧರ್ಮದ ಮೌಢ್ಯಗಳನ್ನು ಖಂಡಿಸುತ್ತಾ ತನ್ನದೇ ಆದ ಸಂಸ್ಕೃತಿ ಪರಂಪರೆ ಆಚಾರ–ವಿಚಾರಗಳನ್ನು, ಸಾಹಿತ್ಯ–ಸಂವಾದಗಳನ್ನು ಅರಗಿಸಿಕೊಂಡು ಜನಸಾಮಾನ್ಯರ ನೆಲೆಯಿಂದಲೇ ಪುಷ್ಟಿಗೊಂಡು ಬೆಳೆಯಿತು.

ಶೈವಶಾಖೆಗಳ ಲಕ್ಷಣಗಳಂತೆ ವೀರಶೈವ ಧರ್ಮವೂ ಶಿವಾಗಮ ತಳಹದಿಯ ಮೇಲೆ ರೂಪಿತಗೊಂಡಿತು. ಸೂಕ್ಷಾಗಮ, ಸುಪ್ರಭೇದ, ಸ್ವಯಂಭುವ; ಕಾರ್ಮಿಕ, ಪಾತುಲ ಮೊದಲಾದ ಆಗಮಗಳಲ್ಲಿ ವೀರಶೈವ ಧರ್ಮದ ಮೂಲ ತತ್ವಗಳು ಸಿಗುತ್ತವೆ. ಇವೇ ಅಲ್ಲದೇ ಶಿವಯೋಗಿ ಶಿವಾಚಾರ್ಯರ **'ಸಿದ್ಧಾಂತ ಶಿಖಾಮಣಿ'**, ಶ್ರೀಪತಿ ಪಂಡಿತರ **'ಶ್ರೀಕರ ಭಾಷ್ಯ'**, ಸ್ವಭಾನಂದ ಶಿವಾಚಾರ್ಯರ **'ಶಿವಾದ್ವೈತ ಮಂಜರಿ'** ಮುಂತಾದ ಸಂಸ್ಕೃತ ಗ್ರಂಥಗಳಲ್ಲಿ ಈ ಧರ್ಮ ಪ್ರತಿಪಾದಿತವಾಗಿದೆ. ಆದರೆ ೧೨ನೇ ಶತಮಾನದ ಗ್ರಂಥಗಳಲ್ಲಿ ಈ ವಚನ ಸಮೂಹದಲ್ಲಿ ಮತ್ತು ಶೂನ್ಯ ಸಂಪಾದನೆ **'ಲಿಂಗಲೀಲಾ ವಿಲಾಸ'**, **'ಶಿವತತ್ವ ಚಿಂತಾಮಣಿ'**, **'ವೀರಶೈವಾಮೃತ'**, **'ಮಹಾಪುರಾಣ'** ಮುಂತಾದ ಕನ್ನಡ ಗ್ರಂಥ ರಾಶಿಯಲ್ಲಿಯೂ ವೀರಶೈವ ಧರ್ಮವನ್ನು ವ್ಯವಸ್ಥಿತವಾಗಿ ವಿವರಿಸಲಾಗಿದೆ.

ವೀರಶೈವ ಧರ್ಮವನ್ನು **"ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ"** ಎಂದು ಕರೆಯಲಾಗಿದೆ. ಈ ಧರ್ಮದ ಪ್ರಕಾರ ಶಕ್ತಿಯುತವಾದ ಶಿವನೊಬ್ಬನೇ ಸತ್ಯ. ವಿಶ್ವಸೃಷ್ಟಿಯು ಸಕಲ ಸಮಸ್ತಕ್ಕೆ

ಸರ್ವಾಂತರ್ಯಾಮಿಯಾದ ಶಿವನೇ ಆಧಾರವೆಂದು ಈ ಧರ್ಮ ಪ್ರತಿಪಾದಿಸುತ್ತದೆ. ಶಿವನ ಹೊರತು ಅನ್ಯ ಸತ್ಯವಿಲ್ಲ. ಆದುದರಿಂದ ಶಿವನೇ ಜೀವ, ಲಿಂಗ ಎಂಬುದು ಶಿವನಿಗೂ, ಲಿಂಗ ಎಂಬುದು ಜೀವನಿಗೂ. ಈ ಧರ್ಮದಲ್ಲಿ ಈ ಬಳಸಿರುವ ಪರ್ಯಾಯ ಪದಗಳು. ಶಿವನ ಶಕ್ತಿಯ ಮಾಯೆಯಿಂದ ಈ ಜಗತ್ತು ಶಿವಮಯವಾಗಿದೆ. ಲಿಂಗಾಂಗ ಸಾಮರಸ್ಯ ಸಾಧಿಸಬೇಕಾದ ಸಾಧನ ಮಾರ್ಗ, ಈ ಧರ್ಮದ ಹೃದಯ ಪಂಚಾಚಾರ ಹಾಗೂ ಅಷ್ಟಾವರಣಗಳಿಂದ ಪೋಷಿತವಾಗಿದೆ. ಷಟ್‌ಸ್ಥಲ ಸಿದ್ಧಾಂತವೇ ವೀರಶೈವ ಸಾಧನಾ ಮಾರ್ಗ. ಈ ಮಾರ್ಗದಲ್ಲಿ ಭಕ್ತಿ, ಜ್ಞಾನ, ಧ್ಯಾನ, ಕರ್ಮ ಮತ್ತು ನೀತಿಯ ಆಚರಣೆಗೆ ಸಮಾನ ಅವಕಾಶವಿದೆ. ಭಾರತದ ಇತರ ಧರ್ಮಗಳಲ್ಲಿರುವಂತೆ ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹ ಮತ್ತು ಬ್ರಹ್ಮಚರ್ಯ ಮುಂತಾದ ನೈತಿಕ ಆಚರಣೆಗಳನ್ನು ಜನ ಸಾಮಾನ್ಯರಿಗೂ ಅರ್ಥವಾಗುವಂತೆ ವಿವರಿಸಿ ಅವುಗಳನ್ನು ಜನಸಾಮಾನ್ಯರು ಅರಿತು ಅಚರಿಸುವಂತೆ ಅರ್ಥಪೂರ್ಣವಾಗಿ ಈ ಧರ್ಮದಲ್ಲಿ ಅಳವಡಿಸಲಾಗಿದೆ. ಗುರು-ಲಿಂಗ-ಜಂಗಮರ ಸೇವೆಗೆ ತ್ರಿವಿಧ ದಾಸೋಹಕ್ಕೆ ಕಾಯಕ ನಿಷ್ಠೆಗೆ ಈ ಧರ್ಮದಲ್ಲಿ ಅಗ್ರಸ್ಥಾನವಿದೆ. ವೀರಶೈವ ಧರ್ಮದಲ್ಲಿ ಸಮಾನತೆಗೆ ಹೆಚ್ಚಿನ ಅವಕಾಶವಿದೆ. ಯಾವುದೇ ಜಾತಿ-ಧರ್ಮ-ಲಿಂಗ ಆಧಾರಿತ ತಾರತಮ್ಯಗಳಿಗೆ ಈ ಧರ್ಮದಲ್ಲಿ ಸ್ಥಾನವಿಲ್ಲ.

ಭಗವಂತನ ಸಾಕ್ಷಾತ್ಕಾರ ಮಾನವನ ಹಕ್ಕು ಮಾನವರೆಲ್ಲರೂ ಒಂದೇ ಎಂದು ಭೋದಿಸುವ ಈ ಧರ್ಮ ಅವರವರ ಕಾಯಕಗಳಿಗೆ ಮಾನ್ಯತೆ ನೀಡಿ ಕೆಲಸದ ಬಗೆಗಿನ ಮೇಲೂ-ಕೀಲು ಅಭಿರುಚಿ ಹೋಗಲಾಡಿಸಿ ಸಮೂನ ಮನೋಧರ್ಮ ನೆಲೆಸಲು ಪ್ರಯತ್ನಿಸಿತು. ಸರ್ವರೂ ಈ ಧರ್ಮದ ವಿಶಾಲ ಮನೋಭಾವಗಳಿಗೆ ಕಿವಿಗೊಟ್ಟು ಪಂಡಿತ ಪಾಮರಾದಿಯಾಗಿ ಈ ಧರ್ಮದ ನಿಷ್ಕಲ್ಮಶತೆಗೆ ಕಿವಿಗೊಟ್ಟು ಕ್ರಾಂತಿಯೋಪಾದಿಯಲ್ಲಿ ಕನ್ನಡ ನೆಲೆದಲ್ಲಿ ೮೦೦ ವರ್ಷಗಳಷ್ಟು ಹಿಂದೆಯೇ ಅಖಂಡ ದಕ್ಷಿಣ ಭಾರತದ ಪುನರುಜ್ಜೀವನಕ್ಕೆ ನಾಂದಿ ಹಾಡಿದ ಹೆಗ್ಗಳಿಕೆ ಈ ಧರ್ಮದ್ದು. ಧಾರ್ಮಿಕ ಆಚರಣೆ, ಪರಿಶುದ್ಧ ಜೀವನ ಮತ್ತು ವೈಚಾರಿಕ ಸ್ವಾತಂತ್ರ್ಯ ನಾವು ಜೊತೆಗೂಡಿ ಹೋಗಬಲ್ಲವೆಂಬುದನ್ನು ಈ ಧರ್ಮ ತೋರಿಸಿತು. ೧೨ನೇ ಶತಮಾನದ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ, ಚನ್ನಬಸವಣ್ಣ, ಅಂಬಿಗರ ಚೌಡಯ್ಯನಂತಹ ನೂರಾರು ವಚನಕಾರರು ಅಂದಿನ ಸಮಾಜದ ಬಹುತೇಕ ಸಹಸ್ರ -ಸಹಸ್ರ ಜನರು, ದೀನದಲಿತರು ಈ ಕಾಯಕ ನಿಷ್ಠೆಯ ಮಾನವ ಧರ್ಮಕ್ಕೆ ಮೆಚ್ಚುಗೆ ವ್ಯಕ್ತಪಡಿಸಿ ಆಚಾರಶೀಲ ಜೀವನ, ಸರಳ ಬದುಕು, ಸನ್ಮಾರ್ಗ ಪ್ರವರ್ತನೆಗಳಿಂದ ವೀರಶೈವ ಧರ್ಮ ಬೆಳೆಯಲು ಅನುವಾಯಿತು. ಈ ಕ್ರಾಂತಿಯನ್ನು ಚರಿತ್ರೆಕಾರರು, ಕಲ್ಯಾಣ ಕ್ರಾಂತಿ, ಕರ್ನಾಟಕ ಕ್ರಾಂತಿ, ಮಹಾನ್ ಧಾರ್ಮಿಕ ಕ್ರಾಂತಿ, ಕನ್ನಡ ಸಂಸ್ಕೃತಿಯ ಪುನರುಜ್ಜೀವನ ಸಾಹಿತ್ಯ ಕ್ರಾಂತಿ, ವಿಚಾರ ಕ್ರಾಂತಿ, ಮಹಾನ್ ಸಮಾಜ ಸುಧಾರಣೆ ಬಸವಣ್ಣ ಕ್ರಾಂತಿಯೆಂದೇ ಬಗೆ-ಬಗೆಯಾಗಿ ಉಲ್ಲೇಖಿಸಿದ್ದಾರೆ.

ವೀರಶೈವ ಧರ್ಮವನ್ನು ಲಿಂಗಾಯತ ಧರ್ಮವೆಂದೂ ಕರೆಯುತ್ತಾರೆ. ಇತ್ತೀಚೆಗೆ ಈ ಧರ್ಮದಲ್ಲಿ ಗುರು-ಪರಂಪರೆ, ವಿರಕ್ತಿ ಪರಂಪರೆಯೆಂದು ಎರಡು ವಿಭಿನ್ನ ಮಾರ್ಗಗಳು ರೂಪುಗೊಳ್ಳುತ್ತಿವೆ. ಒಟ್ಟಾರೆ ಜಗತ್ತಿನ ಎಲ್ಲಾ ಧರ್ಮಗಳಲ್ಲಿ ಒಳಸಂಗಡಗಳಿರುವಂತೆ ಇಲ್ಲಿಯೂ ಇದ್ದರೆ ಆಶ್ಚರ್ಯವಿಲ್ಲ. ಏನೇ ಆಗಲಿ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಅಂದಿನಿಂದ ಇಂದಿನವರೆಗೂ ವೀರಶೈವ ಧರ್ಮ ಚೈತನ್ಯ ದಾಯಕವಾಗಿ ಬೆಳೆದು ಬರುತ್ತಿದೆ.

**ಪ್ರಚಲಿತ :**

**"ದಯವಿಲ್ಲದ ಧರ್ಮದಾವುದಯ್ಯ", "ಧರ್ಮೋ ರಕ್ಷತಿ ರಕ್ಷತಃ", "ದಯವೇ ಧರ್ಮದ ಮೂಲ"**, ಎಂಬ ಮಾತುಗಳಲ್ಲಿ ಧರ್ಮದ ಅರ್ಥ ಸರಳವಾಗಿ ವ್ಯಕ್ತವಾಗಿದೆ. ಧರ್ಮವೆಂದರೇ ಗಹನ ಗೂಡಾರ್ತ ಮಹತ್ವ ಚಿಂತನೇ, ಜಿಜ್ಞಾಸೆಯಲ್ಲಿ ಅದು ಸರಳ ಬದುಕು, ಜೀವನ ಮಾರ್ಗ, ಸದ್ಗುಣ, ಸದ್ವರ್ತನೆ, ಸಮಾಜದಲ್ಲಿ ನೈತಿಕವಾಗಿ ಬದುಕುವ ಮಾರ್ಗ ಅರ್ಥಾತ್ "ಮನುಷ್ಯ ಮನುಷ್ಯರನ್ನೇ ಅರ್ಥಮಾಡಿಕೊಂಡು ನಿಷ್ಕಲ್ಮಶ ಮನಸ್ಥಿತಿಯಿಂದ ತಾವು ಬದುಕಿ ಬೇರೆಯವನ್ನು ಬದುಕಲು ಬಿಡುವುದೇ ನಿಜವಾದ ಧರ್ಮ."

ಈ ನಿಟ್ಟಿನಲ್ಲಿ ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಎಲ್ಲಾ ಧರ್ಮಗಳೂ ಒಂದಿಲ್ಲೊಂದು ರೀತಿಯಲ್ಲಿ ಈ ಮೇಲಿನ ಮಾತುಗಳಿಗೆ ಸಾಕ್ಷಿಗಳಾಗಿ ತಮ್ಮತನವನ್ನು ನೂರಾರು ವರ್ಷಗಳಿಂದ ಉಳಿಸಿಕೊಂಡು ಬಂದಿವೆ. ಈ ಎಲ್ಲಾ ಧರ್ಮಗಳ ಒಟ್ಟು ಜೀವನ ವಿಧಾನಗಳೆ ಕರ್ನಾಟಕ ಸಂಸ್ಕೃತಿಯಲ್ಲೂ ಕಂಡು ಬರುತ್ತವೆ. ಕರ್ನಾಟಕದ ಧಾರ್ಮಿಕ ಪರಂಪರೆಯೆಂದರೆ ಕನ್ನಡ ಸಂಸ್ಕೃತಿಯ ಅಧ್ಯಾಯನವೆಂದೇ ಅರ್ಥ.

ಧರ್ಮ ಮಾನವ ಜನಾಂಗದ ಬೆಳಕು. ಅಜ್ಞಾನವೆಂಬ ಅಂಧಕಾರವನ್ನು ತೊಡೆದು ಹಾಕುವ ಬೆಳಕೆಂಬ ವಿನ್ಯಾಸ್ತ್ರ ಆದರೆ ಈ ಅಸ್ತ್ರ ಸ್ವಾರ್ಥಿಕಗಳ, ಅಜ್ಞಾನಿಗಳ, ಮತಾಂಧರ ಕೈಯಲ್ಲಿ ಧಾರ್ಮಿಕ ಘರ್ಷಣೆಗಳಿಗೆ ನಾಂದಿಯಾಗಿ ಲಕ್ಷಾಂತರ ಜನರ ಸಾವಿಗೆ, ಸಾವಿರಾರು ವರ್ಷಗಳ ಧಾರ್ಮಿಕ ನೆಲೆಗಳ ಸರ್ವನಾಶಕ್ಕೆ, ಧಾರ್ಮಿಕ ಸಂಸ್ಕೃತಿಯ ಅವನತಿಗೆ ಕಾರಣ ವಾಗಿರುವುದೂ ನಮ್ಮ ಇತಿಹಾಸದ ಪುಟಗಳಲ್ಲಿ ಲಿಖಿತವಾಗಿದೆ.

ಹಿಂದೂ, ಬೌದ್ಧ, ಜೈನ, ಮುಸ್ಲಿಂ, ಕ್ರಿಶ್ಚಿಯನ್, ವೈಷ್ಣವ, ವೀರಶೈವ ಈ ಧರ್ಮಗಳಲ್ಲೂ ಜಗತ್ತಿಗೆ ಶಾಂತಿ ಸಾರುವ ಒಳ್ಳೆಯ ಜೀವನ ಸಾರದ ಅಂಶಗಳು ಸಾಕಷ್ಟಿವೆ. ಹಾಗೆಯೇ ಧಾರ್ಮಿಕ ಅಂಧಾನುಕರಣೆಗೆ ಕಾರಣವಾಗುವಂತೆ ಮತಾಂಧರು ಈ ಮೇಲಿನ ಎಲ್ಲಾ ಧರ್ಮಗಳನ್ನು ಒಡೆದು ವಿಭಾಗಗಳನ್ನು ಸ್ಥಾಪಿಸಿಕೊಂಡು (ಸೃಷ್ಟಿಸಿಕೊಂಡು) ಪ್ರಬಲರಾದವರು ಪ್ರಬಲರಲ್ಲದವರ ಮೇಲೆ ನಡೆಸಿಕೊಂಡು ಬರುತ್ತಿರುವ ದೌರ್ಜನ್ಯ, ದಬ್ಬಾಳಿಕೆ ಇಂದಿಗೂ ನಿಂತಿಲ್ಲ.

೧೦ನೇ ಶತಮಾನದ ಹೊತ್ತಿಗೆ ಬೆಳೆದ ಜೈನಧರ್ಮ ಕನ್ನಡ ಸಂಸ್ಕೃತಿ ಬೆಳೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸಿತು. ೧೨ನೇ ಶತಮಾನದ ವೀರಶೈವಧರ್ಮದಂತೆ ಕನ್ನಡ ಸಂಸ್ಕೃತಿಯ ಪುನರುಜ್ಜೀವನಕ್ಕೆ ನಾಂದಿ ಹಾಡಿತು. ಆದರೆ ಈ ಧರ್ಮಗಳು ಕನ್ನಡ ನೆಲದಲ್ಲಿ ಧಮಾಂಧರ ಕೈಯಲ್ಲಿ ನಲುಗಿ ಧಾರ್ಮಿಕ ಸಂಘರ್ಷಗಳಾಗಿ ನಾಂದಿ ಹಾಡಿ ಸಮಾಜದ ಸದ್ವಥ ಪ್ರಗತಿಗೆ ಧಕ್ಕೆ ತಂದ ವಿಚಾರವನ್ನು ನಾವು ಮರೆಯುವಂತಿಲ್ಲ.

ಎಲ್ಲ ಧರ್ಮಗಳಲ್ಲೂ ಉಪಧರ್ಮ, ಪಂಡಗಳು ನಿರ್ಮಾಣವಾಗುತ್ತಿರುವುದು ಧಾರ್ಮಿಕ ಚೌಕಟ್ಟು ನಶಿಸಿ ಧರ್ಮಗಳೇ ಜಾತಿಗಳಾಗುವ ಸಂಕುಚಿತ ಮಟ್ಟಕ್ಕೆ ಇಳಿಯುತ್ತಿರುವುದು ಇಂದಿನ ಮನುಕುಲದ ವಿಕಾಸಕ್ಕೆ, ಇಂದು ಧರ್ಮ ಅವಿವೇಕಿಗಳ ಕೈಯಲ್ಲಿ ಮನುಕುಲದ ನಾಶದ ಅಸ್ತ್ರವಾಗುತ್ತಿರುವುದು ಕಾಣುತ್ತಿದೆ.

ಕನ್ನಡದ ಶ್ರೇಷ್ಠಕವಿ ಪಂಪ ಒಂದು ಸಾವಿರ ವರ್ಷಗಳ ಹಿಂದೆಯೇ **"ಮನುಕುಲಂ ತಾನೊಂದೇ ವಲಂ"** ಎಂದಿದ್ದಾನೆ. ಎಲ್ಲಾ ಧರ್ಮಗಳು ಈ ಮಾನವಕುಲದ ಶಾಂತಿಯ ಸಂಕೇತಗಳೇ ಆದರೆ ಧರ್ಮ ಅರ್ಥಪೂರ್ಣವಾಗಿ ಸಂಸ್ಕೃತಿಯ ಪರಂಪರೆ ಸದ್ವರ್ತನೆಗಳಿಗೆ ಮನುಕುಲದ ವಿಕಾಸಕ್ಕೆ ಕಾರಣವಾಗಬೇಕಾದರೆ ಇಂದು ಪ್ರತಿಯೊಬ್ಬ ವ್ಯಕ್ತಿಗೂ ಜಾತ್ಯಾತೀತ, ಧರ್ಮ, ನಿರಪೇಕ್ಷೆ ಮಾನವತೆಯ ಅರ್ಥವನ್ನು ಮನದಟ್ಟು ಮಾಡಿಕೊಡಬೇಕು. ಪ್ರೀತಿಯಿಂದ ನೋಡುವಂತಾಗಬೇಕು. ಪ್ರಾಥಮಿಕ ಹಂತದಿಂದಲೇ, ಚಿಕ್ಕ ಮಕ್ಕಳ ಹಂತದಿಂದ ಈ ಪ್ರಜ್ಞೆ ಮೂಡುವಂತಾದರೆ ಧರ್ಮ ತನ್ನ ಅಸ್ತಿತ್ವ ಉಳಿಸಿಕೊಂಡು ಬೆಳೆಯಲು ಸಾಧ್ಯವಾಗುತ್ತದೆ.

❑

---

ತಾನೊರ್ವನು, ಕೊಲುವರು ಹಲಬರು
ಹಲವು ದಿಕ್ಕಿನ ಕಿಚ್ಚಿಯ್ದು ಸುಡುವಲ್ಲಿ ನೆಲನ ಮರೆಹೊಗಲು
ಜಲಮಯವಾತಿತ್ತು ನೋಡಾ
ಜಲದೊಳಗಾಳುವನ ಜಲಂಧರರಕ್ಕಸ ಭಕ್ಷಿಸುತ್ತಿರಲು
ಅಕಟಕಟ ಶಿವನೇ ಎನಲು
ಮುಕ್ಕಣ್ಣ ತೆರೆದನು, ರಕ್ಕಸನ ಸೊಕ್ಕು ಮುರಿಯಿತ್ತು
ಕೊಲುವರು ಹಲಬರುನೆಲನ ಬಿಟ್ಟೋಡಿದರು
ಹಲವು ದಿಕ್ಕಿನ ಕಿಚ್ಚು ಕೆಟ್ಟಿತ್ತು
ನೆಲ ಕರಗಿತ್ತು, ಜಲವರತಿತ್ತು
ಜಲಧಿಯ ಸಾಗರವದಾಂಟಿ, ಅಮೃತ ಸಾಗರವ ಬೆರೆಸಿ
ಅನುಪಮ ಸುಖಿಯಾದೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

*– ಸಿದ್ಧಲಿಂಗೇಶ್ವರ*

# ಥಿಯಾಸಫಿ ಮತ್ತು ಶರಣ ಸಾಹಿತ್ಯದಲ್ಲಿನ ಸಾಮ್ಯತೆ

– ಲಲಿತ ನಟರಾಜ್ *

ಥಿಯಾಸಫಿ ಅಂದರೆ ಬ್ರಹ್ಮವಿದ್ಯೆ. ಈ ಬ್ರಹ್ಮವಿದ್ಯೆ ಈ ಬ್ರಹ್ಮಾಂಡದ ಬ್ರಹ್ಮಂಡನಾಯಕನ ಮತ್ತು ಬ್ರಹ್ಮಾಂಡದಲ್ಲಿ (ವಿಶ್ವದಲ್ಲಿ) ಜೀವಿಸುವ ಸಕಲ ಜೀವರಾಶಿಗಳ ಹಿಂದಿನ, ಇಂದಿನ ಮತ್ತು ಮುಂದಿನ ಸ್ಥಿತಿಗಳನ್ನು ತಿಳಿಸುತ್ತದೆ. ಹಿಂದಿನ ಕಾಲದಿಂದಲೂ ಬ್ರಹ್ಮಜ್ಞಾನ ಜಿಜ್ಞಾಸುಗಳಿಗೆ ನಾನು ಯಾರು? ಎಲ್ಲಿಂದ ಬಂದೆ? ಈ ವಿಶ್ವದ ಉಗಮ ಹೇಗೆ ಆಯಿತು? ದೇವರು ಹೇಗಿದ್ದಾನೆ? ಇಂತಹ ಅನೇಕ ಮೂಲಭೂತ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಹಿಡಿಯುವುದರಲ್ಲಿಯೇ ಶ್ರದ್ಧೆ. ಶ್ರದ್ಧಾವಂತ ಸತ್ಯಾನ್ವೇಷಕರಿಗೆ ಈ ವಿದ್ಯೆಯಿಂದ ಮಾರ್ಗದರ್ಶನವಾಗಿದೆ. ಈ ಬ್ರಹ್ಮವಿದ್ಯೆಯು ತತ್ತ್ವಶಾಸ್ತ್ರವೂ ಹೌದು. ಒಂದು ಮತವೂ ಹೌದು, ವಿಜ್ಞಾನ ಕೂಡ ಹೌದು. ಈ ಎಲ್ಲವೂ ಬ್ರಹ್ಮವಿದ್ಯೆಯ ಹಲವು ಮುಖಗಳು. ನಮಗೆ, ಅಂದರೆ ನಮ್ಮ ಸ್ಥೂಲ ಪ್ರಜ್ಞೆಗೆ ತಿಳಿದಿರುವುದು ಬಹಳ ಕಡಿಮೆ. ನಮಗೆ ತಿಳಿಯದೆ ಇರುವುದು ಅನಂತ ಮತ್ತು ಅಗಾಧ.

ಅನಾದಿ ಕಾಲದಿಂದಲೂ ಕಾಲಕಾಲಕ್ಕೆ ಋಷಿ ಮುನಿಗಳಿಂದ, ಮತಸ್ಥಾಪಕರಿಂದ, ತತ್ತ್ವಜ್ಞಾನಿಗಳಿಂದ ಈ ಜ್ಞಾನವು ಪ್ರಪಂಚದ ಎಲ್ಲ ಜನರಿಗೆ ಕೊಡಲ್ಪಡುತ್ತಿದೆ. ಆಯಾ ಕಾಲಕ್ಕೆ ಜನತೆಗೆ ಅವರವರ ಮಾನಸಿಕ ಬೆಳವಣಿಗೆಗೆ ಅನುಸಾರವಾಗಿ ಈ ಬ್ರಹ್ಮಜ್ಞಾನ ಅವರಿಗೆ ಅರ್ಥವಾಗುವ ರೀತಿಯಲ್ಲಿ ಕೊಡಲ್ಪಡುತ್ತದೆ. ಅಂದರೆ ಈ ಋಷಿಮುನಿಗಳಿಗೆ, ತತ್ತ್ವಜ್ಞಾನಿಗಳಿಗೆ ಅವರು ಹೇಳಿದುದಕ್ಕಿಂತ ಹೆಚ್ಚಿಗೆ ಗೊತ್ತಿಲ್ಲ ಅಂತ ಅಲ್ಲ. ಅವರಿಗೆ ಗೊತ್ತಿದ್ದಂತಹ ಎಲ್ಲ ಜ್ಞಾನವನ್ನೂ ಜನರಿಗೆ ಕೊಡಲು ಸಾಧ್ಯವಾಗಿಲ್ಲ. ಯಾಕೆಂದರೆ ಜನಸಾಮಾನ್ಯರಿಗೆ ಅರ್ಥವಾಗುವಂತಹದ್ದನ್ನು ಮಾತ್ರ ಅರ್ಥವಾಗುವ ಹಾಗೆ ಹೇಳಬೇಕಾಗುತ್ತದೆ, ಅಲ್ಲವೆ ? ನೀರೇ ಇಳಿಯದಿರುವ ಗಂಟಲಿನಲ್ಲಿ ಕಡುಬು ತುರುಕುವುದು ಸಾಧ್ಯವೂ ಅಲ್ಲ, ಬಹುಶಃ ಸರಿಯೂ ಅಲ್ಲ.

ಎಲ್ಲ ಕಾಲದಲ್ಲೂ ಜ್ಞಾನವನ್ನು ಹುಡುಕುತ್ತ ಸಾಧನೆಯ ಮಾರ್ಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವಂತಹ ಕೆಲವು ಜನರ ಗುಂಪು ಇದ್ದೇ ಇರುತ್ತದೆ. ಅಂತಹ ಜನರಿಗೆ ತಕ್ಕ ಜ್ಞಾನ ಸಿಕ್ಕೇಸಿಗುತ್ತದೆ. ಇದೇ ರೀತಿ ಜಗತ್ತಿಗೆ ಜ್ಞಾನ ಕೊಡುವುದಕ್ಕಾಗಿಯೇ ಹುಟ್ಟಿದಂತಹ ಒಂದು ಸಂಸ್ಥೆ **ಥಿಯಾಸಫಿಕಲ್ ಸೊಸೈಟಿ.** ಈ ಸೊಸೈಟಿಯ ಸ್ಥಾಪಕರ ಮುಖಾಂತರ ಮತ್ತು ಇನ್ನೂ ಅನೇಕ ನಾಯಕರಿಂದ ಥಿಯಾಸಫಿಯ ಅನುಭವಸಿದ್ಧಜ್ಞಾನ ಜನರಿಗೆ ಕೊಡಲ್ಪಟ್ಟಿದೆ.

ಈಗ ವೀರಶೈವ ಧರ್ಮದ ಬಗ್ಗೆ ಸ್ವಲ್ಪ ತಿಳಿದುಕೊಳ್ಳೋಣ. ವೇದದ ಅನೇಕ ಸೂಕ್ತಿಗಳಲ್ಲಿ, ಆಗಮಗಳ ಉತ್ತರಭಾಗದಲ್ಲಿ ವೀರಶೈವಧರ್ಮದ ಉಲ್ಲೇಖ ಇದೆ. ಅಂದರೆ ಅಷ್ಟು ಪುರಾತನವಾದದ್ದು ಇದು. ಕಾಶ್ಮೀರದಲ್ಲಿ ಸಹ ಪುರಾತನ ಕಾಲದಿಂದ ಶಿವಪಂಥ ಇದೆ. ಸಂಸ್ಕೃತ ಕವಿ ಕ್ಷೇಮೇಂದ್ರನ ಕೆಲವು ಕೃತಿಗಳಿಂದ ಶೈವಪಂಥದ ಬಗ್ಗೆ ತಿಳಿದು ಬರುತ್ತದೆ. ಈ ಜಗತ್ತಿಗೆ ಒಡೆಯನಾದ ಒಬ್ಬನೇ ದೈವ ಶಿವ. ಅವನನ್ನು ಆರಾಧಿಸಿ ಅವನನ್ನು ಸೇರುವ ಬಗೆಯನ್ನು ಈ ಕವಿಯು ತನ್ನ ಕೃತಿಗಳಲ್ಲಿ ಮೂಡಿಸಿದ್ದಾನೆ.

ವೀರಶೈವರು ಕರ್ನಾಟಕದಲ್ಲಿ ಮಾತ್ರವೇ ಅಲ್ಲ; ದೇಶದ ಎಲ್ಲ ಕಡೆಯೂ ಇದ್ದಾರೆ. ವೀರಶೈವ ಧರ್ಮವು ಏಕದೇವತೋಪಾಸನೆಯ ಅಂದರೆ, ಶಿವನ ಉಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಶಿವಭಕ್ತಿ, ಶಿವಪೂಜೆ, ಲಿಂಗತೀರ್ಥವಿಲ್ಲದೆಯೆ ಏನನ್ನು ತಿನ್ನದ ವ್ರತ, ಲಿಂಗಧಾರಣೆ, ಶಿವದೀಕ್ಷೆ ಕಡ್ಡಾಯ, ಈ ಧರ್ಮದ ತಳಹದಿ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು.

ಕ್ರಿ.ಶ. ೧೨ನೆಯ ಶತಮಾನದಲ್ಲಿ ಭಾರತದ ದಕ್ಷಿಣ ಕ್ಷೇತ್ರದಲ್ಲಿ ಒಂದು ಧಾರ್ಮಿಕ ಆಂದೋಳನ ತಲೆದೋರಿತು. ಧರ್ಮಕ್ಕೆ ಹಿಡಿದಿದ್ದ ಗ್ಲಾನಿಯನ್ನು ಹೋಗಲಾಡಿಸಿ, ಅದರ

* C/o ಡಾ. ಎಚ್.ಎಂ. ಮರುಳಸಿದ್ಧಯ್ಯ ೬೨, 'ಈಶಕೃಪೆ', ಮಂಜುನಾಥ ಕಾಲೋನಿ, ಜೆ.ಪಿ. ನಗರ, ಬೆಂಗಳೂರು–೭೮. ಫೋನ್ : ೨೬೪೫೬೧೪೩

ಸಹಜ ಪರಮ ಪರಿಶುದ್ಧತೆಯನ್ನು ಮತ್ತೆ ಎತ್ತಿಹಿಡಿದವರು ಶ್ರೀ ಪ್ರಭುದೇವರು. ಇವರು ತಮ್ಮ ಇಡೀ ಶರಣ ಗಣವನ್ನು ಜಾಗೃತಗೊಳಿಸಿ ಜಗಜ್ಯೋತಿ ಬಸವಣ್ಣ, ಮಹಾದೇವಿ ಅಕ್ಕ, ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ಪ್ರಮಥರ ನೆರವಿನಿಂದ ಧರ್ಮದ ಧ್ವಜವನ್ನು ಮೇಲೆ ಎತ್ತಿಹಿಡಿದರು. ಹಿಂದಿನಂತೆ ಮತ್ತೊಮ್ಮೆ ಧರ್ಮಚಕ್ರ ಮುಂದೆ ಚಲಿಸತೊಡಗಿತು.

ಕಲ್ಯಾಣದಲ್ಲಿ ಬಸವಣ್ಣನವರ ಅನುಭವ ಮಂಟಪದಲ್ಲಿ ಅಲ್ಲಮಪ್ರಭುಗಳು ಶೂನ್ಯ ಸಿಂಹಾಸನವನ್ನು ಅಲಂಕರಿಸಿದ್ದರು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಶರಣರು ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ಹಂಚಿಕೊಳ್ಳಲು ಅಲ್ಲಿ ಸೇರುತ್ತಿದ್ದರು. ಧರ್ಮದ ದಾರಿಯಲ್ಲಿ ಸಾಧನೆ ಮಾಡುತ್ತಿದ್ದರು. ಪರಮಕರುಣೆ ಪ್ರಭುದೇವರ ಜೀವಿತದಲ್ಲಿ ಕಂಡುಬಂದರೆ ಭಗವಾನ್ ಬುದ್ಧರ ಶೀಲ ಪ್ರತಿಷ್ಠಾಪನೆಯನ್ನು ಬಸವಣ್ಣನವರ ಜೀವಿತದಲ್ಲಿ ಕಾಣಬಹುದು. ಪರಮ ವೈರಾಗ್ಯವನ್ನು ಪ್ರಭುದೇವರು ಮತ್ತು ಮಹಾದೇವಿ ಅಕ್ಕನ ಜೀವಿತದಲ್ಲಿ ನೋಡಬಹುದು.

ಶರಣರ ವಚನಗಳಲ್ಲಿ ಕಂಡುಬರುವುದು ಅನುಭಾವ. ಅವರು ತಮ್ಮ ಸಾಧನೆಯ ಮಾರ್ಗದಿಂದ ಕಂಡು ಕೊಂಡಂತಹ ಸತ್ಯವನ್ನು ವಚನಗಳ ಮೂಲಕ ಜನತೆಗೆ ತಿಳಿಸಿದರು; ಮಾರ್ಗದರ್ಶನ ಮಾಡಿದರು.

ಈಗ ತೌಲನಿಕವಾಗಿ ಥಿಯಾಸಫಿ ಹೇಳುವ ಜ್ಞಾನ ಮತ್ತು ಶರಣರ ವಚನಗಳಲ್ಲಿ ಇರುವ ಸಾಮ್ಯತೆಯನ್ನು ತಿಳಿದುಕೊಳ್ಳೋಣ. ಸಾಮಾನ್ಯ ಜನತೆಗೆ ಸರಳವಾಗಿ ಆಧ್ಯಾತ್ಮ ಭೋದಿಸಲೆಂದು ಥಿಯಾಸಫಿ ಸಂಸ್ಥೆ ಸ್ಥಾಪಿತವಾಯಿತು. ಈ ಸಂಸ್ಥೆಯ ಮುಖ್ಯ ಉದ್ದೇಶಗಳು ಮೂರು:

(೧) ಕುಲ, ಮತ, ಲಿಂಗ, ಜಾತಿ ಅಥವಾ ವರ್ಣಗಳ ಭೇದವನ್ನು ಎಣಿಸದೆ ಮಾನವರ ಸಾರ್ವತ್ರಿಕ ಸೋದರ ಭಾವದ ಒಂದು ಅಂಕುರವನ್ನು ಏರ್ಪಡಿಸುವುದು.

(೨) ತುಲನಾತ್ಮಕ ಮತ, ತತ್ತ್ವಶಾಸ್ತ್ರ ಮತ್ತು ವಿಜ್ಞಾನಗಳ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡುವುದು.

(೩) ಸ್ಪಷ್ಟವಲ್ಲದ ಪ್ರಕೃತಿ ನಿಯಮಗಳನ್ನು ಮತ್ತು ಮಾನವನಲ್ಲಿರುವ ಸುಪ್ತಶಕ್ತಿಗಳನ್ನು ಪರಿಶೋಧಿಸುವುದು.

ಈ ಸಂಸ್ಥೆಯಲ್ಲಿ ಸ್ತ್ರೀ-ಪುರುಸ ಭೇದವಿಲ್ಲದೆ ಸದಸ್ಯ ರಾಗುತ್ತಾರೆ. ಮತ್ತು ಈ ಸಂಸ್ಥೆಯ ಉದ್ದೇಶಗಳನ್ನು ಮನಃಪೂರ್ವಕವಾಗಿ ಒಪ್ಪಿ ಸದಸ್ಯರಾಗುತ್ತಾರೆ. ಮೇಲೆ ಹೇಳಿದ ಉದ್ದೇಶಗಳು ಈ ಎಲ್ಲ ಸದಸ್ಯರನ್ನು ಒಂದುಗೂಡಿಸಿವೆ. ಎಲ್ಲರೂ ಸಾರ್ವತ್ರಿಕ ಸಹೋದರಭಾವದ ಬೆಳವಣಿಗೆಗೆ ಪ್ರೋತ್ಸಾಹ ಕೊಡುತ್ತಾರೆ. ಬೇರೆ ಬೇರೆ ಅಭಿಪ್ರಾಯಗಳನ್ನು ಹೊಂದಿರುವವರು ಒಟ್ಟಿಗೇ ಒಂದೇ ಗುರಿಗಾಗಿ ಕೆಲಸ ಮಾಡಲು ಸಾಧ್ಯ ಎಂಬುದನ್ನು ತೋರಿಸುತ್ತಾರೆ. ಈ ಎಲ್ಲರನ್ನೂ ಒಟ್ಟಿಗೆ ಸೇರಿಸಿರುವ ಸರ್ವಮಾನ್ಯ ಆದರ್ಶಯಾವುದೆಂದರೆ ಸತ್ಯಾನ್ವೇಷಣೆ. ಉನ್ನತ ಆದರ್ಶಗಳಲ್ಲಿ ಭಕ್ತಿ, ಪರಿಶುದ್ಧ ಜೀವಿತ ಸೇವೆ, ವ್ಯಾಸಂಗ, ಅನುಷ್ಠಾನ ಇವುಗಳಿಂದ ಸತ್ಯವನ್ನು ತಿಳಿಯಲು ಸಾಧ್ಯ ಎಂದು ತಿಳಿದಿದ್ದಾರೆ. ಇವೆಲ್ಲವೂ ಬೇರೆಯವರು ತಮ್ಮ ಮೇಲೆ ಹೇರುವ ಮೂಢನಂಬಿಕೆ ಅಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸ್ವಂತ ವ್ಯಾಸಂಗ, ಧ್ಯಾನ ಮತ್ತು ಅನುಷ್ಠಾನದಿಂದ ಹಾಗೂ ಅನುಭಾವದಿಂದ ನಿಜವಾದ ನಂಬಿಕೆ ಹುಟ್ಟುತ್ತದೆ. ಪ್ರತಿಯೊಂದು ಮತವೂ ಬ್ರಹ್ಮವಿದ್ಯೆಯ ಒಂದೊಂದು ಮುಖ ಎಂಬುದು ಥಿಯಾಸಫಿಯ ಅಭಿಪ್ರಾಯ. ಆದುದರಿಂದಲೇ ಬೇರೆ ಮತಗಳನ್ನು ದ್ವೇಷಿಸುವುದನ್ನಾಗಲೀ, ಮತಾಂತರ ಮಾಡುವುದಾಗಲೀ ಸರಿಯಲ್ಲ. ತಮ್ಮ ತಮ್ಮ ಮತಗಳ ಬೋಧೆಯನ್ನು ಮೂಢನಂಬಿಕೆ ಬಿಟ್ಟು ಅನುಷ್ಠಾನ ಮಾಡುವುದೇ ಸರಿಯಾದ ದಾರಿ. ಶಾಂತಿ ಈ ಸದಸ್ಯರ ರಕ್ಷಾಕವಚ ಹಾಗೂ ಸತ್ಯ ಇವರ ಗುರಿ.

ಈ ಎಲ್ಲದರ ಬಗ್ಗೆ ಶರಣರ ವಚನಗಳಲ್ಲಿ ಏನು ಹೇಳಿದ್ದಾರೆ ಎಂಬುದನ್ನು ನೋಡೋಣ.

ಬಸವಣ್ಣನವರು ಹೇಳುತ್ತಾರೆ, ಕುಲ, ಜಾತಿ, ಮತಗಳು ಹುಟ್ಟಿನಿಂದ ಬರುವುದಲ್ಲ; ಅವರ ಕುಲಕಸುಬಿನಿಂದ ಬರುವಂತಹವೆಂದುಕಂಡರೂ ಅದು ಆಧಾರವಲ್ಲ. ಕುಲಕ್ಕಿಂತಲೂ ಅವರವರ ಸಂಸ್ಕಾರ ಮುಖ್ಯ. ಶಿವನನ್ನು ನಂಬಿ ಅವನ ಶರಣು ಹೋದವರೆ ಕುಲಜರು. "ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ ಕುಲವೇನೋ ಆವಂದಿರ ಕುಲವೇನೊ ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕೂಡಲಸಂಗನ ಶರಣರೆ ಕುಲಜರು" ಎಂಬ ಮಾತು ಮನನೀಯವಾದುದು.

ಅಕ್ಕಮಹಾದೇವಿ ತನ್ನ ಒಂದು ವಚನದಲ್ಲಿ ಆತ್ಮಕ್ಕೆ ಗಂಡು ಹೆಣ್ಣು ಎನ್ನುವ ಭೇದವಿಲ್ಲ. ಶಿವನೊಬ್ಬನೇ ಗಂಡ. ಭಕ್ತರೆಲ್ಲ ಅವನ ಪತ್ನಿಯರು ಎನ್ನುತ್ತಾಳೆ.

ಎಲ್ಲ ಜೀವಿಗಳಿಗೂ ಮೂಲ ಚೈತನವೇ, ಆ ಚೈತನ್ಯವೇ ಶಿವ ಅನ್ನುವ ಅನುಭವ ಶರಣರಿಗೆ ಚೆನ್ನಾಗಿ ಆಗಿತ್ತು. *"ಎನ್ನ ನಾನರಿಯದಲ್ಲಿ ಎಲ್ಲಿರ್ದೆ ಹೇಳಯ್ಯ? ಚಿನ್ನದೊಳಗಣ ಬಣ್ಣದಂತೆ ಎನ್ನೊಳಗಿರ್ದೆ."* ಇಂತಹ ಶಿವನನ್ನು ತಿಳಿಯಬೇಕಾದರೆ ಅನೇಕ ಸಾಧನೆಗೆ ನಮ್ಮನ್ನು ನಾವು ಒಳಗುಪಡಿಸಿಕೊಳ್ಳಬೇಕು. ಆ ಸಾಧನೆಗಳೇನು ? ವಚನಗಳಲ್ಲಿ ಅದನ್ನು ನೋಡೋಣ.

*"ಕಳಬೇಡ, ಕೊಲಬೇಡ ಹುಸಿಯ ನುಡಿಯಲು ಬೇಡ. ಮುನಿಯಬೇಡ. ಅನ್ಯರಿಗೆ ಅಸಹ್ಯಪಡಬೇಡ. ತನ್ನ ಬಣ್ಣಿಸಬೇಡ. ಇದಿರ ಹಳಿಯಲುಬೇಡ. ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗಶುದ್ಧಿ", "ದಯವಿಲ್ಲದ ಧರ್ಮವು ಅದಾವುದಯ್ಯ", "ದೇವಲೋಕ ಮರ್ತ್ಯಲೋಕ ವೆಂಬುದು..... ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ."*

ಹೀಗೆ ನಾವು ಇಲ್ಲಿ ಅನೇಕ ವಚನಗಳನ್ನು ಜ್ಞಾಪಿಸಿಕೊಳ್ಳ ಬಹುದು. ಎಲ್ಲವೂ ಸಾಧನಾಪ್ರಧಾನವೇ. ಅವರು ನಡೆದದ್ದನ್ನು ನುಡಿದರು. ಈಗ ಇಲ್ಲಿ ಒಂದು ಪ್ರಶ್ನೆ ಬರುತ್ತದೆ. ಈ ಎಲ್ಲ ಶೀಲಸ್ವಭಾವಗಳನ್ನು ಗಳಿಸಿಕೊಂಡು ಬೇಗ ಆ ದೇವರನ್ನು ಪ್ರತ್ಯಕ್ಷವಾಗಿ ಕಾಣುವುದಕ್ಕೆ ನಮಗೆ ಯಾಕೆ ಇನ್ನೂ ಸಾಧ್ಯವಾಗಿಲ್ಲ?

ಅದಕ್ಕೆ ಕಾರಣ ನಮ್ಮ ಮನಸ್ಸು. ಮನಸ್ಸು ನಮಗೆ ಮತ್ತು ದೇವರಿಗೆ ಮಧ್ಯೆ ಇರುವ ಒಂದು ಉಪಾದಿ (ಉಪಕರಣ). ನಾವು ಮನಸ್ಸು ಮಾಡಿದರೆ ಮಾತ್ರ ಇದೆಲ್ಲ ಸಾಧ್ಯವಾಗುತ್ತದೆ. ನಮ್ಮ ಮನಸ್ಸು ಹೇಗೆ ವರ್ತಿಸುತ್ತದೆ ಎಂದು ಬಸವಣ್ಣನವರು ಹೇಳುವುದು ಹೀಗೆ :

*"ಮರವನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾರುತಲಿದ್ದೇನೆ. ಬೆಂದ ಮನವ ನಾನೆಂತು ನಂಬು ವೆನಯ್ಯಾ? ಎಂತು ನೆಚ್ಚುವೆನಯ್ಯಾ. ಎನ್ನ ತಂದೆ ಕೂಡಲ ಸಂಗಮದೇವನಲ್ಲಿಗೆ ಹೋಗಲೀಯದಯ್ಯಾ". "ಬೆಲ್ಲವ ತಿಂದ ಕೋಡಗನಂತೆ ಲೋಕದ ಡೊಂಕ ನೀವೇಕೆ.....".*

ಈ ವಚನಗಳಲ್ಲಿ ಕಾಣಿಸುವುದು 'ನಾನು' ಅನ್ನುವ ಭಾವವೇ ಇಲ್ಲದ ಪರಶಿವನಲ್ಲಿ ಒಂದಾದ ಅದ್ವೈತವ ಮಾತ್ರ. ಇನ್ನು ಕೆಟ್ಟ ಯೋಚನೆ, ಕಾರ್ಯಗಳಿಗೆ ಜಾಗವೇ ಇಲ್ಲ.

ಈ ರೀತಿ ಮನಸ್ಸಿನ ಪರಿವರ್ತನೆ ಆದಲ್ಲಿ ಮನಸ್ಸು ಈ ಲೋಕದ ಅನೇಕ ಕೊರತೆಗಳನ್ನು ಮೀರಿ ಗಗನದಲ್ಲಿ ಸಂಚರಿಸಬಲ್ಲದು. ಸತ್ಯವನ್ನು ನೋಡಬಲ್ಲದು. ನೋಡಲು ಅಸಹ್ಯವಾಗಿ ಕಾಣುವ ಸಿಕ್ಕ ಸಿಕ್ಕ ಎಲೆಯನ್ನು ತಿನ್ನುವ ಕಂಬಳಿ ಹುಳು ಪರಿವರ್ತನೆ ಹೊಂದಿದ ಮೇಲೆ ಜಿಗಿದು ಹಾರಾಡಬಲ್ಲ ಸುಂದರ ಚಿಟ್ಟೆ ಆಗುವಂತೆ, ಉನ್ನತ ವಿಚಾರಗಳಿಗೆ ಒಗ್ಗೊಟ್ಟ ಮನಸ್ಸು ರೂಪಾಂತರ ಹೊಂದಿ ನಿತ್ಯವನ್ನು ನೋಡುವ ಸ್ಥಿತಿಗೆ ಬರುತ್ತದೆ. ಲೋಭ, ಮೋಹ, ದ್ವೇಷಗಳ ಸಂಪೂರ್ಣ ನಾಶದಿಂದ ಮಾನವರಲ್ಲಿ ಇಂತಹ ರೂಪಾಂತರ ಸಾಧ್ಯ. ಇವರೇ ಪರಮ ಸುಖಿಗಳು. ಈ ಸ್ಥಿತಿಯನ್ನು ತಲುಪಿದವರೇ ಮುಕ್ತರು.

ಶರಣರು ಹೇಳುತ್ತಾರೆ "ಅರಿದೊಡೆ ಶರಣ, ಮರೆದೊಡೆ ಮಾನವ," ಮರೆವಿನ ಪಂಜರದಲ್ಲಿ ಸಿಕ್ಕಿಬಿದ್ದವನು ಮಾನವ. ತಾನು ಯಾರು ? ಎಲ್ಲಿಂದ ಬಂದೆ ? ತನ್ನ ನಿಜಸ್ವರೂಪ ಏನು ? ತಾನು ಎಲ್ಲಿಗೆ ಹೋಗಬೇಕು ? ಎನ್ನುವುದನ್ನು ಮರೆತು ಬರಿಯ ಪ್ರಾಪಂಚಿಕ ಜೀವನ ಸಂಪಾದಿಸಿ, ಸತ್ಯವನ್ನು, ದೇವರನ್ನು ತಿಳಿದವ ಶರಣ. ಈ ಶರಣತ್ವದ ಗಳಿಕೆಯೇ ಮಾನವನ ಗುರಿ. ಇದು ಹಂತ ಹಂತಗಳಲ್ಲಿ ಆಗುತ್ತದೆ ಎಂದು ವಚನಗಳು ತಿಳಿಸಿವೆ. ಅವು "ಭಕ್ತತ್ವ, ಗುರುತ್ವ ಮತ್ತು ಜಂಗಮತ್ವ"

ನಿತ್ಯ ಜೀವನದಲ್ಲಿ ಸದಾಚಾರವನ್ನು ಅಳವಡಿಸಿ ಕೊಂಡು ಇಂದ್ರಿಯಗಳನ್ನು ಹರಿಯಬಿಡದೆ ಇಷ್ಟದೈವದ ಪೂಜೆ ಮಾಡಬಲ್ಲವನು ಭಕ್ತ.

ಅಂತರಂಗದಲ್ಲಿ ಅರಿವನ್ನು ಅಳವಡಿಸಿಕೊಂಡು ಮನಸ್ಸನ್ನು ನಿಗ್ರಹಿಸಿ ಆತ್ಮದ ಅನುಸಂಧಾನ ಮಾಡುವವನು ಗುರು.

ಆತ್ಮದ ಸಂಗದಲ್ಲಿ ಅನುಭಾವ ಅಳವಡಿಸಿಕೊಂಡು, ಭಾವನಗಳನ್ನು ಸಹ ನಿಗ್ರಹಿಸಿಕೊಂಡು ಸರ್ವವ್ಯಾಪಿ ದೈವಚೈತನ್ಯದೊಡನೆ ಭಾವಸಾಮರಸ್ಯ ಹೊಂದಬಲ್ಲವನು ಜಂಗಮ.

ಶರಣರ ವಚನಗಳನ್ನು ಬರೀ ಓದದೆ ಅವರ ಪದಗಳ ಹಿಂದಿನ ಅರ್ಥವನ್ನು ತಿಳಿಯಲು ಪ್ರಯತ್ನಿಸಿದರೆ ಒಂದು ಸಾಧನೆಯ ಪಥವೇ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ವಚನಗಳು ಆತ್ಮ ಕಥನಗಳಂತೆ ಇವೆ. ತಮ್ಮ ಪೂರ್ವದ ಸ್ಥಿತಿಗತಿ, ಮನಸ್ಸಿನ ದೊಂಬರಾಟ, ದ್ವಂದ್ವ ಇವುಗಳನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ. ಶರಣರು ತಮ್ಮ ಮೇಲೆಯೇ ತಾವು ಪರೀಕ್ಷೆ ಮಾಡಿಕೊಂಡು, ಆತ್ಮಾವಲೋಕನ ಮಾಡಿಕೊಂಡು ವಚನಗಳನ್ನು ಬರೆದಿದ್ದಾರೆ. ತಮ್ಮಲ್ಲಿ ದೋಷಗಳು ಇಲ್ಲದಿದ್ದರೂ ಇತರರ, ಸಮಾಜದ ದೋಷಗಳನ್ನು ತಮ್ಮ ಮೇಲೆ ಆರೋಪಿಸಿಕೊಂಡು ಲೋಕದ ಮನಸ್ಸನ್ನು ಚಿತ್ರಿಸುವ ಪ್ರಯತ್ನವನ್ನು ಕಾಣುತ್ತೇವೆ. ಸಾಮಾನ್ಯ ಸ್ಥಿತಿಯಿಂದ ಪರಿಪೂರ್ಣಾತ್ಮರು ಆಗುವವರೆಗೆ ಅವರ ವ್ಯಕ್ತಿತ್ವ ವಿಕಾಸಗೊಂಡಿರುವುದು ಪರಿವರ್ತನೆ ಹೊಂದಿರುವುದು ಅರ್ಥವಾಗುತ್ತದೆ. ಈ ವಚನಗಳನ್ನು ಆಯಾ ಹಂತದಲ್ಲಿದ್ದು ನೋಡಿ ಅರ್ಥಮಾಡಿಕೊಂಡಾಗ ಅವುಗಳ ವಿರಾಟ್‌ದರ್ಶನ ಆಗುತ್ತದೆ.

ವಚನ ಸಾಹಿತ್ಯ ಸದ್‌ಗೃಹಸ್ಥರಿಗೆ ಹಾಗೂ ವಿರಕ್ತರಿಗೆ ದಾರಿ ದೀಪವಾಗಿವೆ. ಇವುಗಳಲ್ಲಿರುವ ಸತ್ಯವನ್ನು ಅರಿತು ಶರಣರು ನಡೆದ ಸಾಧನೆಯ ಪಥದಲ್ಲಿ ನಾವೂ ನಡೆದಾಗ ನಮಗೂ ಅವರಂತೆ ಶಾಂತಿ, ಆನಂದ, ಮುಕ್ತಿ ಸಿಗುತ್ತದೆ.

ಇದೇ ರೀತಿ ದಾಸರ ಪದಗಳಲ್ಲಿ, ಸರ್ವಜ್ಞನ ಪದಗಳಲ್ಲಿ ಕೆಲವು ಜಾನಪದ ಹಾಡುಗಳಲ್ಲಿ, ಮಂಕುತಿಮ್ಮನ ಕಗ್ಗದಲ್ಲಿ ಸಾಧನೆಯ ಹಾದಿಯನ್ನು ನೋಡಬಹುದು. ಎಲ್ಲೆಲ್ಲಿ ಸತ್ಯ ಇದೆಯೋ; ಒಳ್ಳೆಯದು ಇದೆಯೋ ಅದನ್ನೆಲ್ಲ ಆರಿಸಿ ತೆಗೆದುಕೊಳ್ಳುವ ತೀಕ್ಷಣ ದೃಷ್ಟಿ, ಒಪ್ಪಿಕೊಳ್ಳುವ ಮನಸ್ಸು ಇರಬೇಕು. ಹೀಗಿದ್ದಾಗ ಎಲ್ಲ ಕಡೆಯೂ ನಮಗೆ ಸಾಧನೆ ಮುಂದುವರೆಸಲು ಬೇಕಾದ ವಿಷಯಗಳೇ ಸಿಗುತ್ತವೆ. ಥಿಯಾಸಾಫಿಕಲ್ ಸೊಸೈಟಿಯ ಸದಸ್ಯರು ಈ ರೀತಿ ಎಲ್ಲ ಮತಗಳ ಹಿಂದಿನ ತಿರುಳನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ.

ಮತಗಳೆರಡಾದರೂ ನಿಲವೊಂದೇ, ಗುರಿಯೊಂದೇ ಎಂಬುದು ಈ ತೌಲನಿಕ ಪರಿಶೀಲನೆಯಿಂದ ವೇದ್ಯವಾಗುತ್ತದೆ.

❑

---

ಬಸವಣ್ಣನ ಮನೆಯ ಮಗಳಾದ ಕಾರಣ
ಭಕ್ತಿ ಪ್ರಸಾದವ ಕೊಟ್ಟನು.
ಚೆನ್ನಬಸವಣ್ಣನ ತೊತ್ತಿನ ಮಗಳಾದ ಕಾರಣ
ಒಕ್ಕ ಪ್ರಸಾದವ ಕೊಟ್ಟನು.
ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ
ಮಗಳಾದ ಕಾರಣ ಜ್ಞಾನ ಪ್ರಸಾದವ ಕೊಟ್ಟನು
ಸಿದ್ಧರಾಮಯ್ಯನ ಶಿಶುಮಗಳಾದ ಕಾರಣ
ಪ್ರಾಣ ಪ್ರಸಾದವ ಸಿದ್ಧಿಸಿ ಕೊಟ್ಟನು.
ಮಡಿವಾಳಯ್ಯನ ಮನೆಯ ಮಗಳಾದ ಕಾರಣ
ನಿರ್ಮಲ ಪ್ರಸಾದವ ನಿಶ್ಚೈಸಿಕೊಟ್ಟನು.
ಇಂತೀ ಅಸಂಖ್ಯಾತ ಗಣಂಗಳೆಲ್ಲರು
ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ
ಚೆನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು.



– ಅಕ್ಕಮಹಾದೇವಿ

ಆತ್ಮಶಕ್ತಿಯೊಂದು ಕಡೆ, ದೇಹಶಕ್ತಿಯೊಂದು ಕಡೆ, ಆತ್ಮಸಿದ್ಧನೊಂದು ಕಡೆ ರಸಸಿದ್ಧನೊಂದು ಕಡೆ, ಸಾತ್ವಿಕತೆಯೊಂದೆಡೆ, ರಜೋಗುಣವೊಂದೆಡೆ ಈ ಶಕ್ತಿ ಶಕ್ತಿಗಳ ಢಕ್ಕಾ ಢಿಕ್ಕಿಯಲ್ಲಿ ವಿಜಯಿಯಾದುದು......

# ವಜ್ರದಿಂ ಬಯಲ್

("ಮರುಳಸಿದ್ಧ" ಜೂನಿಯರ್ ಇಂಟರ್)

– ಡಾ. ಹೆಚ್.ಎಂ. ಮರುಳಸಿದ್ಧಯ್ಯ *

**ಪಾತ್ರಗಳು : ಅಲ್ಲಮ ಪ್ರಭು, ಗೋರಕ್ಷ, ಕಿನ್ನರ, ನಂದೀಶ, ಭೂದೇವಿ**

**ಒಂದನೆಯ ದೃಶ್ಯ**

*(ಬಾಲ ಸೂರ್ಯನ ಕಿರಣಗಳು ಎಳೆ ಎಳೆಯಾಗಿ, ಜಗದಂಬೆಯ ಪಸುರುಡೆಯ ಮೇಲೆ ಮಿನುಗುವ ಮಂಜುವನಿಗಳೊಳಗೆ ತೂರಿ ನಸುಗೆಂಪು ಮುತ್ತುಗಳನ್ನಾಗಿ ಮಾಡಿವೆ. ತಿಳಿಗಾಳಿ ತೀಡುತ್ತಿದೆ. ಪಕ್ಷಿಗಳು ಉಲಿಯುತ್ತಿವೆ. ಜಗವು ಸ್ವಲ್ಪ ಸ್ವಲ್ಪ ಚೇತರಿಸುತ್ತಾ ಇದೆ. ಗಗನಾಂಗಣದಲ್ಲಿ ನಂದೀಶ್ವರನು ಅವಸರದಿಂದ ಹೋಗುತ್ತಿರುವನು. ಇದಿರಾಗಿ ಕಿನ್ನರನೊಬ್ಬನು ಬರುವನು)*

ಕಿನ್ನರ : ಆಗಸವಟ್ಟೆಯೊಳು, ಬೆಳಗಿನಲಿ ಅದೆಲ್ಲಿಗವ ಸರಮಾಗಿ ಪೋಗುತಿಹೆ ವಿಷಕಂಠವಾಹನ ?

ನಂದೀಶ : ಅಮರರನಿಬರುಮನೆಳ್ಚರಿಸಿ, ಪೂಮಳೆಗರೆಯುವೋಲ್ ಬೆಸನವನ್ನೀಯಲ್ ಪೋಗುತಿಹೆ !

ಕಿನ್ನರ : ಅದಾವ ಮಂಗಳ ಕಜ್ಜ ಜರುಗುತಿಪ್ಪುದೈ ?

ನಂದಿ : ಗೋರಕ್ಷನಾ ವಜ್ರದೇಹಮಿಂದು ಬಯಲ ದೇಹ ಮಕ್ಕುಂ !

ಕಿನ್ನರ : ಅದಾವ ಗೋರಕ್ಷ ?

ನಂದಿ : ಶ್ರೀ ಗಿರಿಯೊಳಿಹನೊಬ್ಬ ರಸಸಿದ್ಧ. ಎಲ್ಲ ರಸಗಳಿಂ ಬಲ್ಲಿದನು ತಾನಾಗಿ, ತನ್ನ ಕಾಯುವನು ವಜ್ರವಾಗಿಸಿಹನು. ಅವನೇ ಗೋರಕ್ಷ.

ಕಿನ್ನರ : ಅವನ ವಜ್ರದ ದೇಹ ಎಂತು ಬಯಲಪ್ಪುದೈ ?

ನಂದಿ : ಅದನೆಲ್ಲನುಸುರಲೆನಗೀಗ ಪೊೞ್ತಿಲ್ಲವೈ ! ಆನೀಗಲೇ ದೇವರ್ಕಳನಿಬರುಮನೆಳ್ಚರಿಪೆಂ !

ಕಿನ್ನರ : ಆರಿಂದ ಬಯಲಪ್ಪುದದನೊಂದನುಸುರಯ್ಯ. ಆನಿನ್ನ ಕಜ್ಜದಲಿ ಮೈಗೊಡುವೆ. ಬೇಗುಸುರು.

ನಂದಿ : ಕೇಳ್, ಕಿನ್ನರಾ ಕೇಳ್, ಮನಸಿಟ್ಟು ಕೇಳ್ ! ಬಳ್ಳಿಗಾವಿಯೊಳು ನಿರಹಂಕಾರಂಗೆ ಮೇಣ್ ಆತನಾಸತಿ ಸುಜ್ಞಾನಿಯರ್ಗೆ, ಪುಟ್ಟಿದನು ಅಲ್ಲಮನು. ಅವನೆಮ್ಮೊಡೆಯನವತಾರ ಪುರುಷನ್ ! ನಿರ್ಮಾಯನೆಂಬ ಗಣವರನ್ ! ಅವನ ಮಾಯಾಧೀನನಂ ಮಾಳ್ಪೆನೆಂದೆನುತೆ ಎಮ್ಮೊಡೆಯನೊಳು ಗಿರಿಜೆ ಪೈಜೆಯಂಗೈಯುತ್ತೆ, ಭೂಲೋಕದೊಳು ಮಾಯೆಯಾಗಿ ಜನಿಸಿರ್ದಳೈ ! ಅಲ್ಲಮನನೊಲಿಸಲನುವಾದಳ್ ! ಸೋಂತಲ್ ! ಮತ್ತಮಾದೇವಿ ಮಾದೇವಿಯಾಗಿ ಪುಟ್ಟಿಹಳ್. ಸುಜ್ಞಾನಿ, ನಿರಹಂಕಾರಿ, ಮದನಾರಿಸತಿ, ಕಬ್ಬಿಗಳ್ ಮೇಣ್‌ಪೆಣ್ತನದ ಪುಣ್ಯವೇ ಮೈವೆತ್ತು ಬಂದಿಹುದು !

ಕಾಲಚಕ್ರವು ಗಿರಗಿರನೆ ತಿರುತಿರುಗಿ ಓಡುತಿರೆ, ಪುಣ್ಯಮೂರುತಿ ಅಲ್ಲಮನು ಭಕ್ತ ವೃಂದಮಮ್ ಪರಿಕಿಸಲ್ ತಿರೆಯಮೇಲ್ ತಿರುಗಿದನ್ ! ಹೃದಯಗಳ ಕಡೆಕಡೆದು ನವನೀತವಂ ಬಾಯ್ಗೆ ಸವಿಯುಲಿಕ್ಕಿದಂ ! ಬಸವೇಶ, ಮಡಿವಳ ಮಾಚಿದೇವರ, ಸತ್ಯಕ್ಕ ಚೆಂಗಳೆಯ ಸಿದ್ಧರಾಮನ ಚೆನ್ನಬಸವನ ಹರಳಯ್ಯ ಮಾದರಸರಂ ಸಂತವಿಸಿ, ಭಕ್ತಿಕಡಲೊಳು ಮೀಸಿ, ಮಾಯೆಯಂದೂಡಿ, ಅಕ್ಕನಂ ಅಕ್ಕರೆಯ ಸವಿ ಜೇನಿನೊಳಗದ್ದಿ ಮೇಲೆತ್ತಿದನ್ ! ಇಂದು ಶ್ರೀಗಿರಿಯೊಳಗಿರುವ ರಸಸಿದ್ಧ ಮೇಣ್ ವಜ್ರದೇಹಿ ಗೋರಕ್ಷನಂ ಪರಿಕಿಸಲ್ ಪೊರಟಿಹನ್ !

* ೭೨, 'ಈಶಕೃಪೆ', ಮಂಜುನಾಥ ಕಾಲೋನಿ, ಜೆ.ಪಿ. ನಗರ, ಬೆಂಗಳೂರು–೭೮. ಫೋನ್ : ೨೬೫೯೬೧೪೩

ಪ್ರಸ್ತುತದೊಳಾತನೀ ಗಿರಿಯೆಡೆಗೆ ಬರುತಿಹನ್.
ಮುಂದೆ ಗೋರಕ್ಷನಂ ಸಾಧುವನ್ನಾಗಿಪಂ !
ಓ ಕಿನ್ನರಾ, ಕಿನ್ನರಾ, ಏನ್ ಕಲ್ಲಿನಂತಾದೆ ?
ನಾಂ ಪೇಳ್ದುದನಿತುಮಂ ಕೇಳ್ದೆಯೇನ್ ?

ಕಿನ್ನರ : (ಎಚ್ಚತ್ತು) ಞ್ಞ!

ನಂದಿ : ಕೇಳ್ದೆಯೇರಿಂ ನಾಂಪೇಳ್ದುದನಿತುಮಂ ?

ಕಿನ್ನರ : ಕೇಳ್ದೆನ್ ! ನಾನಾವ ಸುಂದರ ತಮಶರಣ ಲೋಕದೊಳಗಿದ್ದೆ ! ಅಲ್ಲಿಯಲ್ಲಮನನ್ ಕಂಡೆ ! ನಂದೀಶ್ವರಾ ಅಗಾಧಮಹುದಾಪ್ರಭುವಿನಾ ಮಹಿಮೆ ! ನಡೆ ತೆರಳ್ವ. ನೋಡದೋ-ಮೂಡ ಬಾನ್ ರಾಗವಳಿಯುತಲಿಹುದು.

### ಎರಡನೆಯ ದೃಶ್ಯ

(ಶ್ರೀ ಶೈಲದ ಒಂದು ಭಾಗದಲ್ಲಿ ಭೂದೇವಿಯು ಆನಂದದಲ್ಲಿ ತನ್ಮಯಳಾಗಿ ಹಾಡುತ್ತ ಕುಣಿಯುತ್ತಿದ್ದಾಳೆ.)

ದಿನಮಣಿಯುದಯಿಸಿ
ಕತ್ತಲೆಯೋಡಿಸಿ
ಪೂಗಳನರಳಿಸಿ ಪೊಳೆಯುವನು:
ಹಕ್ಕಿಗಳೆಲ್ಲವು
ರೆಕ್ಕೆಯ ಬಿಚ್ಚಿ
ಕಲಕಲರವದೊಳು ಹಾಡುವವು.

ಇಂದಿನ ದಿನದೊಳೆ
ಈ ಶುಭ ದಿನದೊಳೆ
ಗೋರಕ್ಷನು ತಾ ಬಯಲಹನು.
ಪುಣ್ಯಾ ಮೂರುತಿ
ಪಾಪು ವಿದೂರ
ಬಂದಿಹನಿಲ್ಲಿಗೆ ನಗುನಗುತ.

ದಿವಿಜರು ಇಂದಿನ
ದಿನದೊಳೆ ಪೂವಿನ
ಮಳೆಗರೆಯುವರೀ ತಾಣದಲಿ
ನಾನೇಧನ್ಯೆ !
ಧನ್ಯಗೋರಕ್ಷ
ಬಯಲದೇಹಿ ಅಲ್ಲಮನಿಂದ !

*(ಹಾಡುತ್ತ ಅಡಗುತ್ತಾಳೆ. ವಜ್ರದೇಹಿ ಗೋರಕ್ಷ ಮಲ್ಲಗಚ್ಚೆ ಬಿಗಿದು ವಜ್ರ ಮುಷ್ಟಿಯಲ್ಲಿ ಖಡ್ಗ ಹಿಡಿದುಕೊಂಡು ಬಂದು, ಹಾಡುತ್ತ ಕುಣಿಯುವನು.)*

ಶ್ರೀ ಶೈಲದ ಗಿರಿಕಂದರ ಕೇಳೀ
ರಸಸಿದ್ಧನು ನಾನು,
ಗೋರಕ್ಷನು ನಾನು.

ವಿಷ್ಣು ಮಹೇಶ್ವರ ಬ್ರಹ್ಮನು ನಾನು !
ವೀರನು ನಾನು
ಧೀರನು ನಾನು !

ನಭದಿಂ ಸಿಡಿಯುವ ಸಿಡಿಲಾನು !
ದಿವಿಜರು ಎಲ್ಲರು
ಮಣಿಯುವರೆನಗೆ !

ಕೇಸುರಿ ನಾನು, ಬಜ್ಜರ ಖಣಿಯಾನು !
ಮೂರೂ ಲೋಕದಿ
ಮೀರುವರಾರು ?
ನಾನೇ ಸಿದ್ಧ, ರಸಗಳ ಸಿದ್ಧ.

ಕಾಯದ ಕಾಂತಿಗೆ
ಕಂಗಳು ಕುಕ್ಕಿ
ವಜ್ರದ ಮುಷ್ಟಿಗೆ ಸಿಂಹಿಣಿ ಸಾಯ್ವಳು !
ಅರಮನೆ ಕಂಬಗಳೆ
ನ್ನಯ ಕಾಲ್ಗಳು !
ಹಜ್ಜೆಯನಿಡುತಿರೆ ಸುಯ್ವಳು ಧಾರಣಿ !
ಹ್ಹ ! ಹ್ಹ ! ಹ್ಹ ! ಹ್ಹ !
ಹ್ಹಿ ! ಹ್ಹಿ ! ಹ್ಹಿ ! ಹ್ಹಿ !
ಬಲ್ ಬಲಿ ! ಮೈಕಲಿ ! ವಜ್ರದಸಿದ್ಧ, ಗೋರಕ್ಷ !!!

*(ಕುಣಿಯುತ್ತ ಕುಣಿಯುತ್ತ ಮರೆಯಾಗುತ್ತಾನೆ. ಅಲ್ಲಿಗೆ ಪ್ರಭುದೇವರು ಬರುತ್ತಾರೆ. ದೇಹ ಕೃಶವಾಗಿದೆ. ಶಿಖೆ ತುಂಬ ಬೆಳೆದಿದೆ. ಬಿಳಿಯ ವಸ್ತ್ರ ಧರಿಸಿದ್ದಾರೆ).*

ಏಂ ಸೊಗನೀವುದೀ ಕಾನನಂ ! ನಡುವಗಲ
ಮಾರ್ತಾಂಡನುರುವಣೆಯನಡಗಿಸುತೆ
ತಂಪಂ ಪಿಡಿ ತಂದು ಸೆರೆಯಾಳಗೈಯುವುದು !
ಬಳ್ಳಿದಿಂಡುಗಳಿಲ್ಲಿ ಬಳುಬಳುಕಿ ಕಾಂತಿಯಿಂ
ಮುಗುಳ್ನಕ್ಕು, ಕಡುಗೆಂಪು ಹಳದಿ ರಾಜಾವರ್ತ
ವರ್ಣೋಪವರ್ಣಮಯ ಕಾಂತಿಯಿಂ ನಗುತಿರುವ
ಪೂಗಳನ್ನು ಪೊತ್ತದೇಂ ಸೊಬಗ ಚೆಲ್ಲುತ್ತಿಹವು !
ದಿನಮಣಿಯ ರಾಗರಂಜಿತ ರುಕ್ಮಕಿರಣಗಳ
ಕಾಂತಿಯೊಳ್ ಬೆರೆದು ಮೌಕ್ತಿಕ ಮಾಲೆಗಳ ತೆರದಿ
ಮಿನುಗುತಿಹ ಹಿಮವನಿಗಳೇಂ ಸೊಬಗನೀಯುತಿವೆ !
ಪ್ರಖರಕರನುದಯದೊಳಗೆಚ್ಚತ್ತ ಪಕ್ಕಿಗಳ್

ರೆಂಕೆಗಳ ಬಿರ್ಜೆ ಕಲಕಲರವಗೈಯುತ್ತೀ
ಗಿರಿಕಂದರಗಳಿಂದೆ ಪ್ರತಿಗಾನಗೈಸುತಿವೆ.
ಸೋಗೆಗಳ್ ತಮ್ಮ ಸೊಬಗಿನಗರಿಗಳಂ ಬಿರ್ಜೆ
ತೇರ್ಗಟ್ಟ ನಲವಿನಿಂ ಮೈಮರೆದು ಕುಣಿಯುತಿವೆ !
ಏಂ ವರ್ಣನಾತೀತ ಸೊಬಗ ಸಿರಿಯಿಂದಲೀ
ಭೂದೇವಿ ರಂಜಿಸುತೆ ಕಣ್ಮನವ ಸೆಳೆಯುವಳು !

ಏಂ ನವ ನಳಿನಿಗಳ್ ! ತಿಳಿಗೊಳಂಗಳೋಳ್
ಇನನಾಗಮನದೊಳೇಂ ಸೊಬಗಿನಿಂ ಕಮಲೆಯರ್
ಮನದಿ ಘನಸಂತಸವನಾಂತು ಶೋಭಿಸುತಿಹರ್ !
ಈ ಬನಂ ತವಸಿಗಳ್ಗತ್ಯಂತ ಮಾಧುರ್ಯವೀಯುತಿದೆ.
ತವಸಿಗಳ್ಗೇನೊಳ್ಳಿತಹ ತಾಣಮಾಗಿಹುದು !
ಮಾಧುರ್ಯ ಉಕ್ಕುತಿಹುದೀಗಿರಿಯಂ ನೋಡಲ್ಕೆ.
ಮಾಯೆಯಳಿದೆನಗೆ ಮೋಹವನಿಕ್ಕುವುದು ನೋಡಾ!

ಈಯೆಡೆಗೆ ಗೋರಕ್ಷನೇ ಬರುತಿಹನು. ಯೋಗ–
ವಟ್ಟೆಯೊಳು ಜಾನವಂ ಮಾಳ್ಪಂದದಲಿ ನಟಿಪೆಂ;
ಪರಿಕಿಸುವೆನವನ ರಸಸಿದ್ಧಿಯೆಂತೆಂಬುದಂ !
ಮಂಡಿಪೆಂ ಆನಿಲ್ಲಿ, ಬರಲವಂ.

*(ಯೋಗ ಮುದ್ರೆಯ ನಟಿಸಲು ಕುಳಿತುಕೊಳ್ಳುವರು.)*

## ಮೂರನೆಯ ದೃಶ್ಯ

**(ಅಲ್ಲಮಪ್ರಭುವಿನೆಡೆಗೆ, ಗೋರಕ್ಷನು ಹೆಮ್ಮೆಯಿಂದ ಉಬ್ಬಿ ದರ್ಪದಿಂದ ನಿಧಾನವಾಗಿ ನಿಮಿರ್ದೆದೆಯಿಂದ, ಸಿಂಹಗಾಂಭೀರ್ಯದಿಂದ ಕೈಯಲ್ಲಿ ಬಾಳ್ ಪಿಡಿದು ಬರುತ್ತಾ....)**

ಈಗಿರಿಗಾನೊಡೆಯನ್ !
ಕೈಲಾಸಕೆ ಸೊಡ್ಡಳನೊಡೆಯನ್;
ಶ್ರೀ ಶೈಲಕೆ ಗೋರಕನೊಡೆಯನ್ !
ಆನೇ ಸುಕೃತನ್ ! ರಾಜ್ಯಮಿದೆನ್ನದು !

*(ಮಾತನಾಡಿಕೊಳ್ಳುತ್ತ ಬರುವಾಗ ಅನತಿದೂರದಲ್ಲಿ ಯೋಗಮುದ್ರೆಯಲ್ಲಿ ಕುಳಿತಿರುವ ಪ್ರಭುವನ್ನು ಕಂಡು, ಮನಸ್ಸಿನಲ್ಲಿ....)*

ಅವನಿವನ್ ! ತವಸಿಗನೊ ಮೇಣ್ ಬರ್ದಿಲನೋ !
ಏಂ ಗಂಭೀರದಿ ಮಂಡಿಸಿ ಜಾನಾಸಕ್ತ–
ನೆನಿಪನೀ ತೇಜಸ್ವಿ ! ಕರದೊಳದಾವುದೋ
ಕರಿವಸ್ತುವನೊಂದಂ ಪಿಡಿದಿರ್ಪನ್. ಲಿಂಗಂ !
ಲಿಂಗಂ ! ಲಿಂಗ ಪೂಜೆಯನೆಸಗು ತಿಪಂ:
(ನಗುವನು)
ಹ್ಹ ! ಹ್ಹ ! ಹ್ಹ ! ಕೂಗಿನುಡಿಸುವೆನಿವನ.

(ಪ್ರಕಾಶ) ಎಲೆ ತವಸಿ ! ನೀನಾರು ?
ಬಂದಿರುವೆಯೇಕೆ ?
ಯಾರ ಆಣತಿಯಿಂದ ಕುಳಿತಿರುವೆಯಿಲ್ಲಿ ?

ಪ್ರಭು : (ಕಣ್ತೆರೆದು, ಅರಿಯದವರಂತೆ.)
ಯಾರವನು ಎನ್ನಂ ನುಡಿಸುತಿರ್ಪವರ್ !

ಗೋರಕ್ಷ : (ಸ್ವಗತವಾದರೂ ಕೇಳುವಂತೆ....)
ಹ್ಹ ! ಹ್ಹ ! ಹ್ಹೊ ! ಹ್ಹೊ ! ಹ್ಹೊ ! ಯಾರವರು!?
(ಪ್ರಕಾಶ) ಓ ! ಯಾರೂ ಅಲ್ಲ. ನಾನೇ
ಶ್ರೀಗಿರಿಯೊಡೆಯನ್ !
ಗೋರಕ್ಷನ್ ! ವಜ್ರದೇಹಿಗನ್ ! ನಿನ್ನ ಕೂಗಿದವನ್!

ಪ್ರಭು : (ಅಂಧರಂತೆ) ಯಾರವರು ? ವಜ್ರಮೆಂದೇನೋ
ನುಡಿಯುವರ್. 'ವಜ್ರ'ವೊಂದೇಕಿವಿದರೆಗೆ
ಬೀಳುತಿದೆ, ಕಾಣಿಸರ್ !

ಗೋರಕ್ಷ : (ಸ್ವಗತ) ಓ, ಹೋ ! ಇವನೇಂ
ಅಂಧನಾಗಿಹನೇನೋ !
(ಪ್ರಕಾಶ) ಓ ಅಂಧ ! ಬಾಯಿಲ್ಲಿ ತೋರುವೆನ್,
ಗೋರಕನಂ !
ಏಂ ಎನ್ನ ವಜ್ರದೇಹದ ದಿವ್ಯದುತಿ ನಿನ್ನ
ಕಂಗಳಂ ಕುಕ್ಕಿ ಕಣ್ಣಾಣದೊಲ್‌ಗೈದಿಹುದೆ ?
ಮೇಣ್ ಜಾತ್ಯಂಧನೋ ನೀಂ ?
ಅಂಧನಾಗಿರುವ ನೀನೆಂತು ಮರಗಿಡಗಳಂ
ಕಲ್ಮುಳ್ಳುಗಳ ಬಳ್ಳಿದಿಂಡುಗಳ ಗುಂಡುಗಳ
ದಾಂಟುತ್ತೈತಂದೆಯೆಯ್ ?

ಪ್ರಭು : (ಸ್ವಗತ ಕೇಳುವಂತೆ) ಕನ್ನಡವ ನುಡಿಯುವನ್ !
ಬಜ್ಜರವೆಂದೊರೆಯುವನ್; ಕಾಣಿಸದಿಪ್ಪನೇಕೆ ?
ಅವನೆಲ್ಲಿಹನಾಯೆಡೆಗೆ ಪೋಗುವೆನ್; ನೋಡಿ
ನುಡಿಸುವೆನ್. (ಎದ್ದು, ಗೋರಕ್ಷಕನ ಕಡೆಗಲ್ಲದೆ,
ಬೇರೆ ಕಡೆ ಹೋಗುವರು)

ಗೋರಕ್ಷ : (ನಗುತ್ತ) ಹ್ಹ ! ಹ್ಹ ! ಹ್ಹ ! ಓ ಅಂಧ ! ಆವೆಡೆಗೆ
ಪೋಗುತಿಹೆ ?
ಬಾಯಿಲ್ಲಿ ನಾನಿರುವೆ. ಆ ಕಡೆಗೆ ಪೋಪೆಯೇಕೆ ?
ಮರ್ಬಿನಿಂ ಮುರ್ಚಿರುವ ನಿನ್ನ ನೆಳೆದಪೆಂ
ಬೆಳಕಿಂಗೆ !

ಪ್ರಭು : (ಹಾಗೇ ಸಾಗುತ್ತ....) ಮುಂದಿರುವೆ ನೀನಲ್ತೆ ?
ಆಂ ಅಂಧನಲ್ತು !

ಮರ್ಬಿನಲಿ ನೀನಿರ್ದು, ಬೆಳಕಿಂಗೆ ಎಂತೊಯ್ವೆ?

ಗೋರಕ್ಷ : (ಅಚ್ಚರಿಯಿಂದ ಸ್ವಗತ) ಏನಿದೇನ್ !
ಆನಿವನ ಪಿಂದಿದ್ದವನದೆಂತು ಮುಂದೆ
ಬಂದೆನಾಂ !?

ಪ್ರಭು : (ಮಂದಸ್ಮಿತದಿಂದ) ಓ ನಿನ್ನ ಪೆಸರೇನಯ್ಯಾ ?

ಗೋರಕ್ಷ : ಗೋರಕ್ಷನೆಂದು ಮೊದಲೇ ಒರೆದೆನಲ್ತೆ ?

ಪ್ರಭು : ಅಹುದಹುದು ಮುದಿಮೆದುಳು !
ಇರಲಿ ಬಾ ನೀನೊಮ್ಮೆ ಎನ್ನನುಂ ನಿನ್ನ ಬಳಿ
ಕರೆದುಕೋ, ಬರಲಾರೆ.

ಗೋರಕ್ಷ : (ಮುಂದೆ ಬರುವನು. ಪ್ರಭು ಹಿಂದೆ ಸರಿಯುವಂತೆ
ಕಾಣುವುದು). ಏಕೆ ಸರಿಯುವೆ ಹಿಂದೆ ? ಮುಂದೆ
ಬಾ ಇಲ್ಲದಿರೆ, ಅಲ್ಲೆ ಇರು.

ಪ್ರಭು : ಏನಯ್ಯಾ ! ನೀಂ ಬರದೆ, ಬರಿದೆ ಪುಸಿ
ಮಾತ ಮಳೆಗರೆವೆ ! ಕತ್ತಲೆಯ ಮರ್ಬಿನೊಳು
ಮಾಯೆಯ ಮಡಿಲಲ್ಲಿ ಪಟ್ಟಿರ್ದು, ಕನಸಿನ
ರಾಜ್ಯದೊಳು – ಮಲಗಿದಲ್ಲಿಯೆ ಬಿದ್ದು –
ದೂರದಾ ಬಟ್ಟೆಯಂದಾಂಟುವಂದದಲ್ಲಿ
ಎನ್ನ ಕರೆಯ ಬರದೆ ನಿಂತಲ್ಲಿಯೇ ನಿಂತು,
ಪುಸಿಯ ನುಡಿಯುವೆಯಲ್ತೆ ?
ಹಾಕು ಬೆಂಕಿಯನು ನಿನ್ನಾ ವಜ್ರದೇಹಕ್ಕೆ !

ಗೋರಕ್ಷ : (ಸ್ವಲ್ಪ ಕನಲಿ) ಏಂ !
ಆನೇ ಪುಸಿಯುತಿಹೆನೆ ? ನೀನೆನ್ನ ವಜ್ರದೇಹವ
ನೋಡಿ ಮಚ್ಚರದಿಂದ, ಈ ತೆರಂ
ಏಳಿಸುತ್ತಿಹೆನ್ನ !
ನೀಂ ಮುದುಕನಾಗಿರ್ಪೆ, ಸುಕ್ಕಿರ್ಪುದದೋ
ಕಡವಸಂ !
ಅಪ್ರಯೋಜನ ನಿನ್ನ ಕಾಯಂ ಕಣಾ ಜೋಗಿ !
ನೀಂ "ಎನ್ನಕಾಯ ಮಾತನ ಕಾಯದಂತಿಲ್ಲ"
ಎನುತೆ ಕಂಡುಕಣ್ ಬಿಟ್ಟು ಕರುಬುತಿಹೆಯಲ್ತೆ?

ಪ್ರಭು : (ತಿರಸ್ಕಾರದಿಂದ) ಏಂ ಸುಡುಗಾಡುದೇಹಮೋ !
ನೀಂ ಕಾಕನೊಲು ಉರಗನೊಲು ಎಗ್ಗತನದಿಂ
ನಿನ್ನ ಕಾಯಮನೆ ಉದ್ದಂಡದಿಂ ಕೊರ್ಬಿ ಬಿರಿದು
ಹೆಮ್ಮೆಯಿಂ ಬಹು ಪೊಗಳಿಕೊಳುತಿರುವೆಯಲ್ಲಾ !!!
ತೆಗೆ ನಿನ್ನ ಉದ್ದಂಡವಾದೀ ಬರಿವೊಂಡು
ಕಾಯಮನ್ !

ಗೋರಕ್ಷ : (ಸಿಟ್ಟಿನಿಂದ..... ಹೀನಯಿಸುತ್ತ)
ಕರುಬದಿರು, ಓ ತವಸಿ, ಕರುಬದಿರು !
ಆಂ ಕಾಕನಲ್ತು ಮೇಣ್ ಉದ್ದಂಡನಲ್ಲು !
ಎಗ್ಗ ತನಮಿನಿತಿಲ್ಲಮೆನಗೆ !
ಆಂ ದಿವಾಕರ ಸಮಾನನ್ !
ದೃಢಕಾಯನ್ ! ಬಜ್ಜರಂ ! ನಿನ್ನಂತೆ
ಜಡಕಾಯನಲ್ತು !
ಭೋಗವರಿಯದ ನೀನು
ಯೋಗದಾಜೋಹಮಂ –
ತಳೆದೆನ್ನ ಲಕಲಕಿಪ ವಜ್ರದೇಹಮನ್
ನೋಡಿ ಕರುಬು ತಿಹೆಯೇನ್ ! ಕರುಬದಿರು !

ಪ್ರಭು : (ಸ್ವಗತ) ಇವನಂ ಕೆರಳ್ಚಿಸುವೆನ್;
ಸಾಧಿಸುವೆನೆನ್ನ ಕಜ್ಜಮನ್ !

(ಪ್ರಕಾಶ) ಓಽಸಿದ್ಧಾ !
ಕರುಬಿಲ್ಲ, ಮಚ್ಚರವೆಂಬುದಿನಿತಿಲ್ಲ ।
ದೇಹಮೆಂಬುದು ಕರ್ದಮ.
ನೆರೆಬಂದು ಪೊಡೆಯಲ್ಕೆ
ಕರ್ದಮವದೆಲ್ಲಿಹುದು ?
ನಿನ್ನ ದೇಹಕೆ ನೀನೇ ಹಿಗ್ಗುತಿಯಲ್ತೆ ?
ದೇಹಮೊಂದಕೆ ನೀಂ ಉಬ್ಬಿ ತಮದೊಳು
ಬಿದ್ದು ಮರ್ಬಿನಿಂ ಕಣ್ಗಾಣದೀರೀತಿ ಬೀಗುವರೆ?

(ಮೊಗವೆತ್ತಿ) ಅಯ್ಯೋ ಮಾನವರು ಮರ್ಬಿನೊಳು ಮುರ್ಚಿ,
ಮಾಂಸದ ಕೆಸರ ನೆತ್ತರಿನ ನೀರ ಎಲುವಿನಾ
ಕಟ್ಟಿಗೆಯ ಮನೆಯಿದಂ ನೆರೆನಂಬಿ ಏಸೊಂದು
ಪಾಪಕರ್ಯಮನೆಸಗುವರ್ !
ಓ ಶಿವನೆ, ಶಂಕರನೆ, ಉರಿಗಣ್ಣ, ಮುಕ್ಕಣ್ಣ,
ಬಾಯಿಲ್ಲಿ, ನೋಡಿಲ್ಲಿ, ಜಗವೆಲ್ಲ ಕೂಪದಲಿ !
ಎತ್ತು ಬಾ ಉದ್ಧರಿಸು ಬಾ. ಮುಳ್‌ಕೆತ್ತುಬಾ.

ಓ ಗಿರಿಕಂದರಂಗಳಿರಾ, ತರುಗಳಿರಾ
ಬಳ್ಳಿದಿಂಡುಗಳಿರಾ ಓ ಪಕ್ಕಿಸಂಕುಳವೆ,
ನಿಮ್ಮಗಳ ಸುಜ್ಞಾನವಿಲ್ಲವೀಮನುಜರ್ಗೆ ।
ಕೆಲರು ಕುಲಮದದಿಂದ ಕೆಲರು
ತನುಮದದಿಂದ ಕೆಲರು.
ಹೊನ್‌ಹೆಣ್ ಮಣ್ಣುಗಳಮದದಿ ಮದಿಸುತಲಿ
ಜಗದ ಸರ್ವಸ್ವವೂ ತಮ್ಮದೆಂದೆನುತಿಹರು.
ಮಾನವರು ದೇಗುಲದ ಕಟ್ಟಿದರ್ ಚಿರಮೆಂದು.

ವಿಷ್ಣು ಶಿವಮೂರ್ತಿಗಳನಿರಿಸಿ ಪೂಜಿಸುತಿಹರು
ತಮ್ಮ ಆತ್ಮದಿ ತಾವೆ ಅರಿಯಲಾರರು ಶಿವನ.
ಬಣ್ಣ ಬಣ್ಣದಿ ಜಾತಿಪಂಥಗಳ ಬಳಿದಿಹರು.
'ಈ ಬಣ್ಣ ಕಪ್ಪಾಯ್ತು ದೂರವಿರು ದೂರವಿರು
ಪತ್ತೆ ಸಾರದಿರ್, ಸಾರಿದರೆ
ನರಕಕುಂಡವುನಿನಗೆ !'
ಎನುತ ಬಲು ಆಚಾರನಡೆಸುವರು ಆಚಾರ
ಮರೆದು !

(ಗೋರಕ್ಷನಿಗೆ) – ಓ ಗೋರಕ್ಷ ! ಉದ್ಧಟನಂತಾಡದಿರ್
ಓಜೆಯಿಂ ನಡೆ !

**ಗೋರಕ್ಷ** : ಏಂ ! ಏಂ ನುಡಿಯುತಿಪ್ಪೆ ?
ಗಳಹುತಿಹೆ ಏಕನಿತು ಬಾಯ್ದೆರೆಯ
ಬೆಳೆಸಿನೀಂ ? ಕರ್ದಮಂ ಎಂಬೆಯಾ ಈ
ವಜ್ರದೇಹಮಂ !
ರೋಮದೊಳಗೊಂದನೂ ಅಳಿಸಲಾರನು
ಈಶ ! ಲೋಕದೊಳಗುದ್ಭವಿಸಿ, ನಿನ್ನಂತೆ
ಜಡದೇಹ– ಪೊತ್ತು ನಿಸ್ಸಾರವಹ ಬಾಳ್ವೆಯ
ಬಾಳಲೇಕೆ ?
ಹೆಚ್ಚು ನೀ ಗಳಹದಿರು ಆರಿಹರು ಎದುರಲ್ಲಿ ?

**ಪ್ರಭು** : ಉಳಿಸಿಕೆ*ಯಿಂದಿರು ಗೋರಕ್ಷ !
ಗೋರಕ್ಷ, ನೀನೀಪರಿಯಿಂದಿರಲ್,
ನಿನ್ನ ಗೋರಕ್ಷದಂಡಿಸದೆ ಬಿಡನ್ !

**ಗೋರಕ್ಷ** : (ಸ್ವಲ್ಪ ಅಚ್ಚರಿಯಿಂದ)
ಏಂ ! ಮತ್ತೊಬ್ಬನಿಹನೇನು ಗೋರಕ್ಷ !
ನಾನಲ್ತೆ ಬಲ್‌ಬೀರ ಗೋರಕ್ಷ, ರಸಸಿದ್ಧ ?

**ಪ್ರಭು** : ನೀಂ ಪೆಸರಿನಲಿ ಗೋರಕ್ಷ.
ನಿನ್ನಂಥ ಪಶುಗಳಿಗೆ ಪತಿಯಾಗಿಹನ್ !
ಅವನೊಬ್ಬ ಗೋರಕ್ಷ !

**ಗೋರಕ್ಷ** : ಆವನವನ್ ?
ಎನ್ನೋಲ್ ಬಲಿಷ್ಠ ನೇಂ ?
ವಜ್ರಕಾಯಮುಳ್ಳವನೇಂ ?

**ಪ್ರಭು** : ಅಯ್ಯೊ ! ಓ ಮರುಳೆ, ಪೇಳಲೇಂ ನಿನಗೆ ?
'ವಜ್ರ' ಮೆನ್ನುತನೀನು ಕಾಲವಂ ಕಳೆದೆಯ್ಯೆ,
ಕಾಲವಂ ಕಳೆದುನೀಂ ಕಾಲನಂ ಬರಿಸಿದೈ !
ಎನ್ನ ನೀಂ ಮುತ್ತುಗ*ನೆಂದೆ. ನೀನಾದರೋ......

**ಗೋರಕ್ಷ** : ನಾನೆಂದೆಂದಿಗುಂ ದೃಢ ! ಮುಪ್ಪಪ್ಪೆನೇಂ ?
(ಆಕಾಶದಲ್ಲಿದ್ದ ಕಿನ್ನರನು ಕಾಣಿಸದೆ, ಕೇಳಿಸುವಂತೆ ಗೋರಕ್ಷನಿಗೆ)

**ಕಿನ್ನರ** : ಮರುಚಣದೊಳೇ ನೀಂ ಬಯಲ್ !

**ನಂದಿ** : (ಕಿನ್ನರನಿಗೆ) ಉಶ್ ! ಹಿಡಿಬಾಯ ಬಿಗಿಯಾಗಿ ! ನಾನೊರೆದು ತಪ್ಪಿದೆಂ !

**ಗೋರಕ್ಷ** : (ಪ್ರಭುವೇ ತನಗೆಂದನೆಂದು) ಏನಂದೆ ? ಬಯಲ್, ಆರ್‌ಬಯಲ್ ? ನಿನಗೇಂ ಪುರ್ಚುಪಿಡಿದಿ ರ್ಪುದೇಂ ? ತಲೆಬುರುಡೆ ಕೆಟ್ಟಿಹುದೆ ? ಅರವತ್ತ ಕರೆಮರುಳು. ನಿನಗೀಗ ?

**ಪ್ರಭು** : ಎಪ್ಪತ್ತು ಎನಬಹುದು ಬೇಡೆಂದರಾರೀಗ ? ನಾಂ ನಿನ್ನಂ ಬಯಲ ದೇಹಿನಗೆಂದೆನೇಂ ? ಅಷ್ಟು ಸುಕೃತನೆ ನೀನು ಘನಕಾಯನಾಗಲ್ಕೆ ?

**ಗೋರಕ್ಷ** : ಘನವಲ್ತೆ, ಮತ್ತೇನು ಮಣ್ಣೆಂದೆಯೇಂ ? ಇರಲಿರಲಿ ಬರಿದೇಕೆಗಳಹುತಿಹೆ ಹುಚ್ಚನೊಲು. ನೀಂ ಬಂದ ಕಜ್ಜಮೇನ್ ಬೇಗುಸುರು !

**ಪ್ರಭು** : ಬಂದಕಾರಣಬೇಕೆ ? ನುಡಿಯುವೆನು ಕೇಳ್ ನಿಂದು ಭಕ್ತಿಯಾ ಪಾಲ್ಗಡಲು ಅವಿಚಾರ ದೌರಾತ್ಮ್ಯ, ಹೆಮ್ಮೆ ಜಂಬಗಳೆಂಬ ಪುಳಿಯಿಂದ ಬೆರೆದು, ಹೆತ್ತು ಮೊಸರಾಗಿ ಒಡೆದೊಡೆದು ನಾರುತಿದೆ ! ಆ ಪೆರ್‌ಕಡಲ ಕಡೆಕಡೆದು ನವನೀತಮಂ ಬರಿಸಿ, ಭಕ್ತರ ಹರಸಿ, ಸದ್ಗತಿಯ ನೀಡಲ್ಕೆ ಬಂದಿರುವೆ ! ಒಡಲಿನಾಸೆಂಯು ಪಿಡಿದು ಕುದಿಕುದಿದು ಕೋಟಲೆಯ ಪಡುವವರ ಕಳವಳವ ಕಳಚಲ್ಕೆ ಬುವಿಯಮೇಲ್ ತಿರುಗುತಿಹೆ, ಗೋರಕ್ಷಾ !

**ಗೋರಕ್ಷ** : ಹ್ಹ ! ಹ್ಹ ! ಹ್ಹ ! ಓ ! ಹೋ !! ಅದಕಾಗಿ ಬಂದೆಯೇಂ ? ಅರೆಚಣದೊಳಾಂ ನಿನ್ನ ಭಕ್ತನಾಗುವೆನಾ ದೊಡೆನ್ನಕಾಯವನೊಮ್ಮೆ ಮುನ್ನನೀ ಪರಿಕಿಸೈ ! ಕೈದುವಿದೆಕೊಳ್, ಮೊದಲ್ ಹೊಯ್ದು ನೋಡೀ ತನುವ ! ಕೂದಲೊಳ ಗೊಂದಿನಿತು ಕದಲಲಾಂ ಸಿದ್ಧನೇಂ ? ವಾದವಿನ್ನೇಕೆ ಕೊಳ್ ಖಡ್ಗಮಂ (ಕೈದು ನೀಡುವಂ).

**ಪ್ರಭು** : ಕೊಂದು ನೋಡುವುದಿದುವೆ ಪರಿಕಿಸುವ ಅಂದವೇ ? ಆಸುರೀ ಕೃತ್ಯವಿದು ಸಲ್ಲದೈ ! ಇದು ಗುಹೇಶ್ವರ ಮತಕೆ ಹೊಲ್ಲ ! ನಾನಿನ್ನ ಹರಣಮಂ....

ಗೋರಕ್ಷ : (ಅಪ್ಪರಲ್ಲೇ) ಹ್ಹ ! ಹರಣ ! ಸಾವು !!! ಸಾವಿಗದಾರ್ ಅಂಜುವರ್ !? ಹೇಡಿಯೇಂ ? ಸಾವಿಗಂಜಲಾಂ ಸಿದ್ಧನೇಂ ? ಈ ವಿಕಲ್ಪವ ಬಿಟ್ಟು ಕೈಪಟ್ಟು ಮಾಡಿನೀಂ ಅಸಿಪತ್ರದಿಂ ಹೊಡೆದು ನೋಡೆನ್ನ ಮೈಕಟ್ಟ !

ಪ್ರಭು : ಒಲ್ಲೆನೆಂದೆನಲೇಕೆ ? ಹುಟ್ಟಿಸಬಲ್ಲವನು ಹೊಂದಿಸಿದೊಡಾತಗೆ ಹೊಲ್ಲುವಾವುದು ? ಆನ್ ಸಲಿಸುವೆನೀತನರ್ತಿಯಂ ! ಸಾಯನಿವ, ಮೇಣ್ ಮಡಿಯೆ ಬರ್ದುಂಕಿಪೆಂ ! ಓಡಿಸುವೆ ನೀತನೀ ಹೆಮ್ಮೆಯಂ !

(ಪ್ರಕಾಶ) ತಾರಯ್ಯ ಖಡುಗಮಂ ! ನೀಡಯ್ಯ ಮೈಯ್ಯಂ !

*(ಖಡ್ಗಮಂ ಕರದಲ್ಲಿ ಬಲವಾಗಿ ಪಿಡಿದು ಝುಳಪಿಸುತೆ, ಗೋರಕ್ಷನಂ ಹೊಡೆಯುವನು. ಗೋರಕ್ಷನ ಮೈಯಿಂ ಖಣಿಲೆಂಬ ಕಡುಶಬ್ದ ಮಾತ್ರವೇ ಹೊರಟು, ಕಾನನಾಂತರದೊಳಬ್ಬರಿಸೆ, ಬೆದರಿ ಹಾಯ್ದುವು ಪಕ್ಷಿಸಂಕುಳ ! ಬಗ್ಗೆ, ಸಿಂಗ ಕರಡಿ, ಮಿಗಗಳೆಲ್ಲವು ಬೆದರಿದುವು !)*

ಗೋರಕ್ಷ : (ಸಂತಸದಿಂದ) ಹೊಡೆ ! ಹೊಡೆ !! ಇನ್ನೂ ಹೊಡೆ !!! ಮತ್ತು ಹೊಡೆ !!! ಮುನ್ನ ಮಗ್ಗಿಜೆಯ ಸೀರೆಯ ಛಲದಿಪಿಡಿಯುತಾ ಕೌರವಾನುಜನೆಳೆದು ಕೈಸೋಲ್ದು ಬಿಟ್ಟಂತೆ ನೀನೇ ಸೋಲ್ದು ಸಾಕಾಗಿ ಬಿಡುವನ್ನೆವರಂ ಹೊಡೆ. ಇತ್ತಿಹಂ ಭಾಷೆಯನು ನಿನಗೆ ! ರಿಸಿಯಂತಿರುವೆನೀಂ, ನಿನ್ನೊಳೇನಾದರೂ ಆತುಮದಶಕುತಿಯಿದ್ದರದರಿಂದ ಹೊಯ್ !

*(ಅಲ್ಲಮನು ಮತ್ತೆ ಖಂಡೆಯಮಂ ಎತ್ತಿ ಗೋರಕ್ಷನಾದೇಹಕ್ಕೆ, ಅಚ್ಚರಿಬಟ್ಟು ಅಬ್ಬರಿಸಿ, ಎರಗುವಾಸಿಡಿಲಿಂಗೆ ಸಿಡಿಲೆರುಗುವೋಲ್, ಪೊಡೆಯಲ್ಕೆ, ನಡುಗಿದುದು ಜಲ, ಶಿಲೆಗಳನು ಮೈಗೊಡಹಿದುದು ಗಿರಿ, ಕೂದಲೊಳಗೊಂದಾದರೂ ನಡುಗಲಿಲ್ಲ !)*

ಪ್ರಭು : (ಉದಾಸೀನತೆಯನ್ನು ತೋರಿಸುತ್ತ)
ಮೋಹದಲಿ, ಮಾಯಾಪ್ರಪಂಚದಲಿ,
ದೇಹಸಿದ್ಧಿಯಂ ಪಡೆದೆನೆಂಬೀ ಗಾಹಿನಿಂ
ವಜ್ರಪಿಂಡ ಶರೀರ ಫಲಿಸಿದೊಡಂ,
ಊಹಿಸುವೊಡಾ ಪ್ರಳಯವನು ನೀಂ
ಗೆಲುವೆಯೇನ್ ! ಸುಡು, ಸುಡು ಕಾಯಮಂ !
(ಖಡ್ಗ ಎಸೆವನು)
ಸಿದ್ಧಿಯುಳ್ಳವನಂಗದಲಿ ಖಣಿಲೆಂಬಧ್ವನಿ
ಹುಟ್ಟುವುದೆ ಹೊಯಿದೊಡೆ?
ಸಿದ್ಧಿಯೆಂಬುದಲ್ಲವಿದು !!

ಗೋರಕ್ಷ : (ಅತಿಯಚ್ಚರಿಯಿಂದ) ಏಂ ಜೋಗಿ ನೀನೆಂಬುದು ? ಬರಸಿಡಿಲು, ಶೀತೋಷ್ಣ, ಖಡುಗದ ಬಿರುಹೊಯಿಲಿಂಗೆ ಕೆಡದೀ ವಜ್ರಕಾಯ ಮುಂ 'ಸಿದ್ಧಿಯಲ್ಲಾ' ! ? (ಮುಂದುವರಿದು) ಸಿದ್ಧಿಯೆಂಬುದೆಂತಿಹುದು ತೋರ್‌ಕುರುಹ.

ಪ್ರಭು : ಕುರುಹಂ ನೋಡಲಾಸಿಪೆಯಾ ? ಅಂತಪ್ಪೊಡಿದೆ ಖಡ್ಗಮಂ ಕೊಳ್ (ಖಡ್ಗ ಎತ್ತಿಕೊಡುತ್ತ) ನಿಂತೇಕೆ ಬೆಕ್ಕಸಂ ಬೆರಗಾಗಿ ನೋಡುತಿಹೆ ? ಎನ್ನನೀ ಕತ್ತಿಯಿಂ ಹೊಯ್ದುಕಾಣ್ ತೋರುವೆಂ ನಿನಗಾಗ ಸರಿಯಪ್ಪ ಕುರುಹುಂ ! ಸಿದ್ಧತನದಾತಿರುಳಂ ! ಸಿದ್ಧಿಯಂತರದ ತಿಳಿಯಂ !

ಗೋರಕ್ಷ : (ಸ್ವಗತ ಸಂತಸದಿಂದ) ತೋರುವೆನ್ !
ಎನ್ನಯ ಬಲ್‌ಬೀರತನಮಂ ತೋರುವೆನ್ !
ಇವನ ಸತ್ವವದೆಂತೋ ಪರಿಕಿಪೆನ್ !
ನೀನೇ ಧನ್ಯ ಗೋರಕ್ಷ, ನೀನೇ ಧನ್ಯ !

(ಪ್ರಕಾಶ) ಓ ತವಸಿ,
ನಾಂ ನಿನ್ನ ಹೊಯ್ಯೆ ನಿನ್ನಯ ಕಾಯದಿಂ
ಒಂದಿನಿತು ರಕುತಮೆನ್ನ ಖಡುಗದಗ್ರಕೆ
ಉಣಿಸಾಗೆ ಸಾರ್ಥಕಂ !

ಪ್ರಭು : ಇರಲಿ ಪೊಡೆ !
ಈಗಳೇ ನಾಂ ಬಡವಾಗಿ ನಿನ್ನಯಾ ಖಡುಗಕ್ಕೆ
ರಕುತದ ಕೂಳಿಡಲ್ ಆಗದು. ಮುಂದೆನಾಂ
ಅತಿಬಡವಾಗುವೆನ್ !
ಎಲ್ಲರುಂ ಎನ್ನಂತೆ ಬಡವಾಗೆ ನಿಮ್ಮಂತೆ ಇಪ್ಪ
ದೃಢರ್ ನಾಣಿಗೀಡಾಗ್ವರೈ !

ಗೋರಕ್ಷ : ಇನ್ನೊಂದು,
ಓ ತವಸಿ ಇನ್ನೊಂದು !
ಆಂ ನಿನ್ನ ನಿಂದು ಪೊಡೆಯಲ್
ಲೋಗರೆನ್ನ ನಡೆಯುವಾಗಳ್ ನೋಡಿ
ಎನ್ನೆಡೆಗೆ ಬೆರಲ್ತೋರಿ ನಕ್ಕು ಹಾಸ್ಯದಿಂದ
'ನೋಡಿವನೆ, ದೃಢತನದಿ
ಬಡಪಾಯಿಯಿಯಾದೊಬ್ಬ ಜೋಗಿಯಂ
ಕೊಂದನೆ'ನ್ನರೇನ್ ?
ಸರಿಯುತಿಹೆ, ಹಿಂದೆಗೆಯುತಿಹೆನದಕೆ !

ಪ್ರಭು : ಹಿಂದೆಗೆಯದಿರ್ ! ಅಂಜದಿರ್ ! ಅಳುಕದಿರ್ !
ಭಯಪಡದಿರ್ ! ಭಯಬಿಟ್ಟು ಎದೆತೆಟ್ಟಿ
ಮುನ್ನುಗ್ಗಿ ಎನ್ನ ನೀಂ ಸೀಳ್ !
ಇದು ಪೈಜೆಯಲ್ತೆ ? ನೀಂ 'ಎನ್ನಂ ಸೀಳೆನಲ್'
ನೀಂ ಸೀಳ್ !!
ಮುಂಬರುವ ಅಪವಾದದಾನುಡಿಗೆ ನೀನಿಂದು
ಅಂಜದಿರ್ ! ನಿನ್ನಂಥ ಸಿದ್ಧ, ಬಲ್‌ಬೀರ
ಅಂಜುವರೆ ?

ಗೋರಕ್ಷ : (ವ್ಯಗ್ರದಿಂದ) 'ಅಂಜದಿರ್, ಅಳುಕದಿರ್'
ಎಂದೆನಗೆ ಪೇಳದಿರ್ !
ಆಂ ಎನ್ನಸುವಿರುವನ್ನೆವರಂ ಎಂದೂ
ಅಂಜೆನ್ !
ಅಳುಕೆನ್ ! ಬೆದರೆನ್ ! ಬೆಜ್ಜೆನ್ !
ಕೊಡು ಖಡುಗ ಕಡಿದಿಡುವೆ ! ಹಾಂ ! ಹ್ಯೋ !

*(ಖಡ್ಗ ಈಸಿಕೊಂಡು, ಪ್ರಭುವನ್ನು ಖಡ್ಗದಿಂದ ಹೊಡೆಯಲು, ಬಯಲಲ್ಲಿ ಹಾರಿದ ಹಕ್ಕಿನಂತಾಯಿತಾ ಖಡ್ಗ ! ಗೋರಕ್ಷ ಅಚ್ಚರಿಯಿಂದ ಮತ್ತೂ ಹೊಡೆಯುವನು. ಆದರೂ ಪ್ರಭುವಿನ ಕಾಯದಲ್ಲಿ ಕತ್ತಿ ಹಾರಾಡಿತು, ಸೀಳಲಿಲ್ಲ !)*

ಪ್ರಭು : (ನಸುಗನೆಯೊಡನೆ) ಏಂ !
ಗೋರಕ್ಷಾ ಏಗುತಿಹೆಯೇಕಿನಿತು ?
ಘಾತಿಸದಿಹೆಯನ್ನ ! ಏನ್‌ಕಾಯ !
ಏನ್ ಸಿದ್ಧಿ ! ಏನ್ ಮುಕ್ತಿ ! ಏನ್ ಶಕ್ತಿ !!!

*(ಗೋರಕ್ಷನು, ಸೋತು, ಆಸನ್ನ ಭಕ್ತನಾಗುತ್ತಾನೆ. ಆಕಾಶದಿಂದ ದೇವತೆಗಳು ಅಲರ ಮಳೆಗರೆವರು.)*



ಮನವ ಮರೆದು ಮಾಡಿದಡೆ ಲಿಂಗರೂಪಾಯಿತ್ತು
ಧನವ ಮರೆದು ಮಾಡಿದಡೆ ಜಂಗಮರೂಪಾಯಿತ್ತು
ತನುವ ಮರೆದು ಮಾಡಿದಡೆ ಪ್ರಸಾದರೂಪಾಯಿತ್ತು
ಇಂತೀ ತ್ರಿವಿಧವನರಿದು ಮಾಡಿದಡೆ ಬಯಲರೂಪಾಯಿತ್ತು
ಇಂತೀ ತ್ರಿವಿಧವನರಿದು ಮಾಡಿದಡೆ ಬಯಲರೂಪಾಯಿತ್ತು
ಮನವರಿಯನಾಗಿ ಲಿಂಗವನರಿತ
ಧನವನರಿಯನಾಗಿ ಜಂಗಮವನರಿತ
ತನುವನರಿಯನಾಗಿ ಪ್ರಸಾದವನರಿತ
ಈ ತ್ರಿವಿಧ ಸುಖವ ಮರೆದವನಾಗಿ ಬಯಲೆಂದರಿತ
ಮನವನೇ ಲಿಂಗ ಒಳಕೊಂಡಿತ್ತು.
ಧನವನೇ ಜಂಗಮ ಒಳಕೊಂಡಿತ್ತು.
ತನುವನೇ ಪ್ರಸಾದ ಒಳಕೊಂಡಿತ್ತು.
ಇಂತೀ ತ್ರಿವಿಧ ರೂಪನು ಒಳಗೊಂಡಿತ್ತು ಗುಹೇಶ್ವರ.

ಇಷ್ಟಲಿಂಗವ ತೋರಿ ಮೃಷ್ಟಾನ್ನವ ಹೊಡೆದವರಿಗೆ
ಇಷ್ಟಾರ್ಥಸಿದ್ಧಿಯದೆಲ್ಲಿಯದೊ ?
ಆದೆಲ್ಲಿಯದೊ ಲಿಂಗ ? ಆದೆಲ್ಲಿಯದೊ ಜಂಗಮ ?
ಅದೆಲ್ಲಿಯದೊ ಪಾದೋದಕ, ಪ್ರಸಾದ ?
ಅಲ್ಲದಾಟವನಾಡಿ ಎಲ್ಲರೂ ಮುಂದುಗೆಟ್ಟರು ಗುಹೇಶ್ವರ
ನಿಮ್ಮಾಣೆ.

– *ಅಲ್ಲಮಪ್ರಭು*

# ಕನಕಪುರದಲ್ಲಿ ಮಹಾತ್ಮಗಾಂಧಿ

– ವೇಮಗಲ್ ಸೋಮಶೇಖರ್ *

ಮಹಾತ್ಮಗಾಂಧಿಯವರು ಖಾದಿ ಪ್ರಚಾರಕ್ಕಾಗಿ ೧೯೨೭ ರಲ್ಲಿ ದಕ್ಷಿಣ ಹಿಂದುಸ್ಥಾನ ಪ್ರವಾಸ ಮಾಡುತ್ತಿದ್ದಾಗ ಮಾರ್ಚ್ ಮಾಹೆಯಲ್ಲಿ ಹಠಾತ್ತಾಗಿ ರೈಲಿನಲ್ಲಿಯೇ ಅನಾರೋಗ್ಯ ಗೊಂಡರು. ಹಾಗೆಯೇ ಪ್ರವಾಸ ಮುಂದುವರಿಸುತ್ತಾ ಕೊಲ್ಲಾಪುರದಿಂದ ಬೆಳಗಾವಿಗೆ ಬರುವ ವೇಳೆಗೆ ಗಾಂಧಿಯವರ ದೇಹಸ್ಥಿತಿ ಬಹಳ ಹದಗೆಟ್ಟಿತ್ತು. ಬೆಳಗಾವಿಯಲ್ಲಿ ಗಾಂಧಿಯವರನ್ನು ಪರೀಕ್ಷಿಸಿದ ವೈದ್ಯರು "ಅಧಿಕ ಪರಿಶ್ರಮದಿಂದ ರಕ್ತ ಒತ್ತಡ ಹೆಚ್ಚಾಗಿದೆ, ಇದನ್ನು ತಡೆಗಟ್ಟಬೇಕಾದರೆ ದೀರ್ಘ ವಿಶ್ರಾಂತಿ ಅಗತ್ಯ, ತಕ್ಷಣ ಯಾವುದಾದರೂ ಗಿರಿಧಾಮದಲ್ಲಿ ವಿರಮಿಸಬೇಕೆಂದು, ಸಲಹೆ ನೀಡಿದರು. ಪ್ರವಾಸದ ಕಾರ್ಯಕ್ರಮವೆಲ್ಲವನ್ನು ಮುಂದೂಡಲಾಯಿತು. ವೈದ್ಯರ ಸಲಹೆಯಂತೆ ಬೆಳಗಾವಿಯಿಂದ ನೇರವಾಗಿ ನಂದಿ ಗಿರಿಧಾಮಕ್ಕೆ ಆಗಮಿಸಿದ ಗಾಂಧೀಜಿ, ಕಸ್ತೂರಿಬಾ ಹಾಗೂ ಇತರ ಅನುಯಾಯಿಗಳೊಡನೆ ೪೫ ದಿವಸಗಳು ವಿಶ್ರಮಿಸಿ ಪೂರ್ಣಗುಣಮುಖರಾಗಿ ಬೆಂಗಳೂರಿಗೆ ಆಗಮಿಸಿದರು. ಕುಮಾರ ಕೃಪದಲ್ಲಿ ಬಿಡಾರ ಹೂಡಿದ್ದ ಗಾಂಧೀಜಿ ಕ್ರಮೇಣ ತಮ್ಮ ಖಾದಿ ಪ್ರವಾಸವನ್ನು ಮುಂದುವರಿಸಿದರು.

ದೀರ್ಘಕಾಲ ಬೆಂಗಳೂರಿನಲ್ಲಿಯೇ ಬಿಡಾರ ಹೂಡಿದ್ದ ಮಹಾತ್ಮ ಗಾಂಧಿಯವರು ತಮ್ಮ ಸಂಗಡಿಗರೊಂದಿಗೆ ಆಗಾಗ್ಗೆ ಇತರೆ ಜಿಲ್ಲೆಗಳಿಗೆ ಪ್ರವಾಸ ಹೋಗಿ ಬರುತ್ತಿದ್ದರು. ಗಾಂಧೀಜಿ ಬೆಂಗಳೂರಿನಲ್ಲಿ ಇದ್ದಷ್ಟು ದಿವಸವೂ ದೇಶೀಯ ವಿದ್ಯಾಶಾಲೆಯಲ್ಲಿ (National High School) ಗಾಂಧಿಯವರ ಸೇವೆಗಾಗಿಯೇ ವಿಶೇಷ ತರಬೇತು ಪಡೆದ ಸೇವಾದಳದ ಒಂದು ಗುಂಪು ಶಿಬಿರದಲ್ಲಿ ಉತ್ತಮ ಸೇವೆ ಸಲ್ಲಿಸುತ್ತಿತ್ತು. ಆ ಗುಂಪಿನಲ್ಲಿ ಕನಕಪುರ ಕೆ.ವಿ. (ಸರ್ದಾರ್) ವೆಂಕಟರಾಮಯ್ಯ ಎಂಬ ಸುಮಾರು ಇಪ್ಪತ್ನಾಲ್ಕು ವರ್ಷ ವಯಸ್ಸಿನ ಯುವಕ ಸ್ವಯಂ ಸೇವಕನಾಗಿ ಸೇವೆ ಸಲ್ಲಿಸುತ್ತಿದ್ದರು. ಅವರು ದೇಶೀಯ ವಿದ್ಯಾಶಾಲೆಯಲ್ಲಿ ರಸಾಯನಶಾಸ್ತ್ರ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದರು.. ಕನಕಪುರದ ಜನರು ಹೇಗಾದರೂ ಮಹಾತ್ಮಗಾಂಧಿಯವರನ್ನು ತಮ್ಮ ಊರಿಗೆ ಬರಮಾಡಿಕೊಳ್ಳಬೇಕೆಂದು ಬಯಸಿದರು. ಈ ಕಾರ್ಯಕ್ಕಾಗಿ ವೆಂಕಟರಾಮಯ್ಯನವರೇ ಸೂಕ್ತ ವ್ಯಕ್ತಿಯೆಂದು ಊರಿನ ಜನರೆಲ್ಲರೂ ನಿರ್ಧರಿಸಿ ಈ ಜವಾಬ್ದಾರಿಯನ್ನು ಅವರಿಂದ ವಹಿಸುವರು ಸ್ವಾಗತ ಸಮಿತಿಗಾಗಿ ಕನಕಪುರದ ಗುರಿಕಾರ ವೆಂಕಟರಮಣ ಗೌಡರನ್ನು ಅಧ್ಯಕ್ಷರನ್ನಾಗಿ, ಕೆ.ವಿ. ವೆಂಕಟಪ್ಪ (ಸರ್ದಾರ್ ವೆಂಕಟರಾಮಯ್ಯನವರ ಅಣ್ಣ)ನವರನ್ನು ಉಪಾಧ್ಯಕ್ಷರನ್ನಾಗಿ ಮತ್ತು ಡಿ. ವೆಂಕಟಾಚಲಪತಿ ಶೆಟ್ಟಿಯವರನ್ನು ಕಾರ್ಯದರ್ಶಿಯನ್ನಾಗಿ ನೇಮಿಸಿದರು. ಆಗ ಕನಕಪುರಕ್ಕೆ ಬೆಂಗಳೂರಿನಿಂದ ಬಂದು ಹೋಗಲು ಕನಕಪುರದ ಬಳಿ ಅರ್ಕಾವತಿ ನದಿಗೆ ಈಗಿರುವ ಸೇತುವೆ ಇಲ್ಲದಿದ್ದರಿಂದ ಬಿಡದಿ, ರಾಮನಗರದ ಮೂಲಕ ವಾಹನದಲ್ಲಿ ಹೋಗಬೇಕಾಗಿತ್ತು.

ಕನಕಪುರಕ್ಕೆ ಮಹಾತ್ಮರನ್ನು ಆಹ್ವಾನಿಸಲು ಕುಮಾರಕೃಪ ಭವನಕ್ಕೆ ವೆಂಕಟರಾಮಯ್ಯನವರು ಆಗಮಿಸಿದರು. ಆ ವೇಳೆಗೆ ವೆಂಕಟರಾಮಯ್ಯನವರು "ಗಾಂಧೀಜಿ ನಮ್ಮ ಊರಿಗೆ ಬಂದೇ ಬರುತ್ತಾರೆ" ಎಂಬ ನಂಬಿಕೆಯಿಂದ ವ್ಯಾಪಕ ಪ್ರಚಾರವನ್ನು ಮಾಡಿದ್ದರು. ಮಹಾತ್ಮರಿಗೆ ಮುಖ್ಯ ಕಾವಲುಗಾರರಾಗಿದ್ದ ಗಂಗಾಧರರಾವ್ ದೇಶಪಾಂಡೆಯವರನ್ನು ವೆಂಕಟರಾಮಯ್ಯನವರು ಕಂಡು ಈ ವಿಷಯದ ಬಗ್ಗೆ ಮಾತನಾಡಿದರು. ಗಂಗಾಧರರಾವ್ ದೇಶಪಾಂಡೆಯವರು "ಅಯ್ಯಾ ಯುವಕ, ಗಾಂಧಿಯವರ ಆರೋಗ್ಯ ಚೆನ್ನಾಗಿಲ್ಲ, ಅವರು ಶ್ರಮದಾಯಕ ಪ್ರವಾಸ ಮಾಡಬಾರದೆಂಬುದು ನಿಮಗೆ ತಿಳಿಯದೇ ?" ಎಂದರು. ಆಗ ವೆಂಕಟರಾಮಯ್ಯ "ಸಾರ್ ನಾವು ಕಷ್ಟಪಟ್ಟು ಮಹಾತ್ಮಗಾಂಧಿಯವರ ಸ್ವಾಗತಕ್ಕೆ ಒಳ್ಳೆಯ ಏರ್ಪಾಟು ಮಾಡಿದ್ದೇವೆ, ಗಾಂಧೀಜಿಯವರನ್ನು ಕನಕಪುರಕ್ಕೆ ಕರೆಯಿಸಿ ದರ್ಶನ ಮಾಡಿಸುವುದಾಗಿ ಮಾತುಕೊಟ್ಟಿದ್ದೇನೆ, ಎಲ್ಲರೂ

* ೧೬೦(೩೭೦) 'ದೀಪ' ನಾಲ್ಕನೇ ಅಡ್ಡರಸ್ತೆ, ಮದಕರಿನಾಯಕ ರಸ್ತೆ, ಲಕ್ಷ್ಮೀಪುರ, ಕೆಂಪೇಗೌಡ ನಗರ, ಬೆಂಗಳೂರು-೧೯

ಮಹಾತ್ಮರ ದರ್ಶನಕ್ಕೆ ಕಾತರರಾಗಿದ್ದಾರೆ" ಎಂದು ವಿನಂತಿಸಿದರು.

ಆಗ ದೇಶಪಾಂಡೆ ಗಂಗಾಧರರಾಯರು "ಹೋಗಲಿ ಎಷ್ಟು ನಿಧಿ ಕೂಡಿಸಿದ್ದೀರಿ?" ಎಂದು ಕೇಳಿದರು.

ವೆಂಕಟರಾಮಯ್ಯ : "ಮುನ್ನೂರು ರೂಪಾಯಿ"

ದೇಶಪಾಂಡೆ ಗಂಗಾಧರರಾಯರು "ಕೇವಲ ಮುನ್ನೂರು ರೂಪಾಯಿಗಾಗಿ ಈ ಕೆಟ್ಟ ಹಾಗೂ ದೂರಸಂಚಾರದ ಶ್ರಮವನ್ನು ಗಾಂಧಿಯವರು ವಹಿಸಬೇಕೆ ? ಆ ಹಣವನ್ನು ಇಲ್ಲಿಗೇ ತಂದುಕೊಟ್ಟುಬಿಡು, ಅದಕ್ಕಾಗಿ ನಾವು ಇಲ್ಲೇ ಒಂದು ಪುಟ್ಟ ಸಮಾರಂಭ ಮಾಡೋಣ, ದಯವಿಟ್ಟು ನಿಮ್ಮ ಊರಿಗೆ ಬರಲೇಬೇಕೆಂದು ತಗಾದೆ ಮಾಡಬೇಡ" ಎಂದರು. ಈ ಉತ್ತರದಿಂದ ಬಹಳಷ್ಟು ಬೇಸರಗೊಂಡ ವೆಂಟಕರಾಮಯ್ಯ ಕೆಲವು ನಿಮಿಷಗಳ ಕಾಲ ಮೂಕರಾಗಿ ನಿಂತುಬಿಟ್ಟರು. ಆಗ ಪಕ್ಕದಲ್ಲಿಯೇ ಇದ್ದ ರಾಜಾಜಿಯವರು ವೆಂಕಟರಾಮಯ್ಯನ ಮುಖ ನೋಡಿ "ಎಷ್ಟು ಗಾಢವಾದ ನಿರಾಶೆ ಈತನಲ್ಲಿ ಮೂಡಿದೆ. ಸೇವಾದಳದ ಒಬ್ಬ ಉತ್ತಮ ಕಾರ್ಯಕರ್ತನಾಗಿರುವ ಈ ಯುವಕನ ಸಲುವಾಗಿ ನಾವು ಕನಕಪುರಕ್ಕೆ ಹೋಗೋಣ, ದಯವಿಟ್ಟು ೩೧-೭-೧೯೩೭ ರಂದು ಕಾರ್ಯಕ್ರಮ ಏರ್ಪಡಿಸಿ" ಎಂದರು. ತಕ್ಷಣ ವೆಂಕಟರಾಮಯ್ಯ ಸಂತೋಷದಿಂದ ಕುಣಿದು ಕುಪ್ಪಳಿಸಿ ರಾಜಾಜಿ ಮತ್ತು ದೇಶಪಾಂಡೆ ಗಂಗಾಧರರಾವ್‌ರವರಿಗೆ ಪಾದಮುಟ್ಟಿ ಸಾಷ್ಟಾಂಗ ನಮಸ್ಕಾರ ಮಾಡಿ ಕೃತಜ್ಞತೆ ಅರ್ಪಿಸಿದರು. ನಂತರ ಕನಕಪುರಕ್ಕೆ ಆತುರಾತುರವಾಗಿ ಹೋಗಿ "ಕಾರ್ಯಕ್ರಮ ನಿಶ್ಚಿತವಾಯಿತು" ಎಂದು ಗೆಳೆಯರಿಗೆ ತಿಳಿಸಿದರು. ವೆಂಕಟರಾಮಯ್ಯ ಎಲೆತೋಟದ ಹಳ್ಳಿಯಲ್ಲಿದ್ದ ಪತ್ನಿ ಗೌರಮ್ಮನ ಬಳಿ ಹೋಗಿ 'ಕನಕಪುರಕ್ಕೆ ಬಾ ನಿನಗೆ ಮಹಾತ್ಮಗಾಂಧಿ ಮತ್ತು ಕಸ್ತೂರಿಬಾ ಅವರನ್ನು ತೋರಿಸ್ತೀನಿ' ಎಂದರು.

ಉಡುಪಿ ಮಂಜುನಾಥ ಉಪಾಧ್ಯಾಯ, ಅಪ್ಪಲು ನಾಯಿಡು, ಸಂಜೀವ ರೈ, ಕೆ.ಎಸ್. ತಿಮ್ಮಪ್ಪಯ್ಯ, ರಾಮಕೃಷ್ಣಭಟ್ಟ ಅವರುಗಳು ಬೈಸಿಕಲ್‌ಗಳನ್ನೇರಿ ಕನಕಪುರದ ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ಜನರನ್ನು ಮಹಾತ್ಮರ ಸಭೆಗೆ ಆಹ್ವಾನಿಸಿ ಬಂದರು. ಮಹಾತ್ಮರು ಕಸ್ತೂರಿ ಬಾ ಅವರೊಡನೆ ೩೧-೭-೧೯೩೭ ಭಾನುವಾರ ಮಧ್ಯಾಹ್ನ ಬಿಡದಿ, ರಾಮನಗರದ ಮೂಲಕ ಕನಕಪುರಕ್ಕೆ ಹೊರಟರು. ಈ ಸಭೆಗಾಗಿ ಕನಕಪುರದ ಪ್ರವಾಸಿ ಮಂದಿರದ ಮುಂಭಾಗದಲ್ಲಿ ವೇದಿಕೆಯನ್ನು ನಿರ್ಮಿಸಿದ್ದರು. ಆ ವೇಳೆಗೆ ಸುತ್ತಮುತ್ತಲಿನ ಊರುಗಳಿಂದ ಬಂದು ಸೇರಿದ್ದ ನೂರಾರು ಜನರು ಮಹಾತ್ಮರ ದರ್ಶನಕ್ಕಾಗಿ ಕಾಯುತ್ತಿದ್ದರು. ನಿಧಿಯನ್ನು ಅರ್ಪಿಸಲಾಯಿತು. ಆ ವೇಳೆಗೆ ಸಂಜೆ ಆಗಿದ್ದರಿಂದ ಕಸ್ತೂರಿ ಬಾ ಸಮೇತ ಆಗಮಿಸಿದ್ದ ಗಾಂಧಿಯವರು ಅಲ್ಲಿಯೇ ಉಳಿದುಕೊಳ್ಳಬೇಕಾಯಿತು. ಸಂಜೆ ಪ್ರವಾಸ ಮಂದಿರದ ಬಳಿಯಲ್ಲಿರುವ ರಾಮನ ಗುಡಿಯಲ್ಲಿ ಪ್ರಾರ್ಥನಾ ಸಭೆ ನಡೆಯಿತು. ಆ ಸಭೆಯಲ್ಲಿ ಕನಕಪುರದ ಆಂಗ್ಲೋ ವರ್ನಾಕುಲರ್ ಪಾಠಶಾಲೆಯಲ್ಲಿ ಉಪಾಧ್ಯಾಯರಾಗಿದ್ದ ಕವಿ ವಕ್ಕಲೇರಿ ಚಂದ್ರರಾವ್ ಕಾಟ್ಕರ್ ಪಿಟೀಲು ವಾದಕರೂ, ಚಿತ್ರಕಾರರೂ, ಕವಿಗಳೂ ಆಗಿದ್ದ ಅವರು ಪಿಟೀಲು ನುಡಿಸಿದರು. ಸಂಜೀವರಾಯರು ಹಾರ್ಮೋನಿಯಂ ನುಡಿಸಿದರು. ನಂತರ ಗಾಂಧೀಜಿಗೆ ಸೇವಿಸಲು ಕಡಲೇಕಾಯಿ ಮತ್ತು ಮೇಕೆಯ ಹಾಲು ಬಂದಿತು. ಅಂದು ರಾತ್ರಿ ಪ್ರವಾಸ ಮಂದಿರದಲ್ಲೇ ತಂಗಿದ್ದ ಮಹಾತ್ಮರು ಮಾರನೆಯ ದಿನ ೧-೮-೧೯೩೭ ಬೆಳಗ್ಗೆ ಅರ್ಕಾವತಿ ನದೀ ತೀರಕ್ಕೆ ಸ್ನಾನಕ್ಕೆ ಹೊರಟರು. ಜೊತೆಯಲ್ಲಿ ಹೋಗಿದ್ದ ಚಂದ್ರರಾವ್ ಕಾಟ್ಕರ್ ಅವರು ಮಹಾತ್ಮರು ಬಟ್ಟೆ ಒಗೆಯುತ್ತಿದ್ದಾಗ ಪೆನ್ಸಿಲ್‌ನಲ್ಲಿ ರೇಖಾಚಿತ್ರವನ್ನು ರಚಿಸಿದರು. ನಂತರ ಕಾಟ್ಕರ್ ಅವರು "ನಾನೇ ನಿಮ್ಮ ಬಟ್ಟೆಯನ್ನು ಒಗೆಯುತ್ತೇನೆ" ಎಂದಾಗ ಗಾಂಧೀಜಿ ಒಪ್ಪಲಿಲ್ಲ. ಕೊನೆಯಲ್ಲಿ ಕಾಟ್ಕರ್ ಅವರು ಗಾಂಧೀಜಿ ಒಗೆದ ಬಟ್ಟೆಗಳನ್ನು ಕೈಯಲ್ಲಿ ಹಿಡಿದು ಗಾಂಧಿಯವರನ್ನು ಹಿಂಬಾಲಿಸಿದರು. ಹಾದಿಯಲ್ಲಿ ಕಾಟ್ಕರ್ ಅವರ ಮನೆಯಿತ್ತು. ಮನೆಯಲ್ಲಿ ಕಾಟ್ಕರ್ ಅವರ ಐದು ದಿವಸದ ಗಂಡು ಮಗು ಇದ್ದುದರಿಂದ ಕಾಟ್ಕರ್ ಅವರು ಮನೆಯೊಳಕ್ಕೆ ಹೋಗಿ ಒದ್ದೆ ಬಟ್ಟೆಯನ್ನು ಹಿಂಡಿ, ಬಂದ ನೀರನ್ನು ಮಗುವಿನ ಮೇಲೂ ಮತ್ತು ಮನೆಯಲ್ಲೆಲ್ಲಾ ಚಿಮುಕಿಸಿದರು. 'ಏನಿದು' ಎಂದು ಪತ್ನಿ ಪ್ರಶ್ನಿಸಿದಾಗ "ಇದು ಗಾಂಧೀಜಿ ಸ್ಪರ್ಶಿಸಿದ ನೀರು, ಇದರಿಂದ ನಮಗೆ ಶುಭವಲ್ಲವೆ?" ಎಂದರು. ಆ ವೇಳೆಗೆ ಗಾಂಧೀಜಿ ಮುಂದೆ ಹೋಗಿ ಪ್ರಾರ್ಥನೆಗೆ ಸಿದ್ಧರಾಗುತ್ತಿದ್ದರು. ಸ್ವಲ್ಪ ತಡವಾಗಿ ಆಗಮಿಸಿದ ಕಾಟ್ಕರ್ ಅವರನ್ನು "ನೀವು ಏಕೆ ತಡವಾಗಿ ಆಗಮಿಸಿದಿರಿ" ಎಂದು ಕೇಳಿದರು. ಅದಕ್ಕೆ ನಡೆದ ವಿಷಯವನ್ನು ಕಾಟ್ಕರ್ ತಿಳಿಸಿದರು. ಆಗ ಗಾಂಧೀಜಿ "ನೀವು

ಮಾಡಿದ್ದು ಬಹಳ ಪಾಪದ ಕೆಲಸ, ನೀವು ಚಿಮುಕಿಸಿದ ನೀರಿನಿಂದ ಮಗುವಿಗೆ ಏನಾದರೂ ತೊಂದರೆಯಾದರೆ ನಾನು ಜವಾಬ್ದಾರನಲ್ಲ, ನೀವೇ ಅದಕ್ಕೆ ಕಾರಣರು" ಎಂದು ವಿನೋದವಾಗಿ ಹಿಂದಿಯಲ್ಲಿ ತಿಳಿಸಿ, ನಂತರ ಪ್ರಾರ್ಥನೆ ನಡೆಸಿದರು. ಆ ವೇಳೆಗೆ ಒಬ್ಬ ಮಹಿಳೆ ತನ್ನ ಮಗುವಿನೊಡನೆ ಆಗಮಿಸಿ ಗಾಂಧಿಯವರನ್ನು ಕಂಡು "ನನ್ನ ಮಗುವಿಗೆ ನೀವು ಕಿವಿ ಚುಚ್ಚಬೇಕು" ಎಂದು ಕೇಳಿಕೊಂಡರು. ಚಿನ್ನದ ಕಿವಿಯ ರಿಂಗನ್ನು ಇರಿಸಿದ ಒಂದು ಸಣ್ಣ ಡಬ್ಬವನ್ನು ಗಾಂಧಿಯವರ ಮುಂದಿಟ್ಟಳು. ಆಗ ಗಾಂಧೀಜಿ "ಆ ಕೆಲಸವನ್ನು ನಾನು ಮಾಡುವುದಿಲ್ಲ"ವೆಂದು ಹೇಳಿದರು. ಆಗ ಆ ಮಹಿಳೆ ತಂದಿದ್ದ ಡಬ್ಬವನ್ನು ಅಲ್ಲಿಯೇ ಬಿಟ್ಟು ಚಿನ್ನದ ರಿಂಗನ್ನು ತೆಗೆದುಕೊಂಡು ಹೊರಟುಬಿಟ್ಟಳು. ಕೊನೆಯಲ್ಲಿ ಗಾಂಧೀಜಿ ಚಂದ್ರರಾವ್ ಕಾಟ್ಕರ್ ಅವರಿಗೆ ಚರಕದಲ್ಲಿದ್ದ ಸ್ವಲ್ಪ ಹತ್ತಿಯನ್ನು ಉಡುಗೊರೆಯಾಗಿ ನೀಡಿದರು. ಅದನ್ನು ಈಗಲೂ ಅವರ ಕುಟುಂಬದವರು ಜೋಪಾನವಾಗಿ ಕಾಯ್ದಿರಿಸಿದ್ದಾರೆ. ಚಂದ್ರರಾವ್ ಕಾಟ್ಕರ್ ಅವರ ಪುತ್ರರಾದಂತಹ ಹರಿದೇವ ಕಾಟ್ಕರ್ ಅವರು ಲೆಫ್ಟಿನೆಂಟ್ ಜನರಲ್ ಆಗಿ ನಿವೃತ್ತಗೊಂಡು ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಗಾಂಧೀಜಿ ಕನಕಪುರಕ್ಕೆ ಆಗಮಿಸಿದ್ದಾಗ ಗಾಂಧೀಜಿ ಸ್ಪರ್ಶಿಸಿದ್ದ ನೀರನ್ನು ಚಿಮುಕಿಸಿಗೊಂಡ ಹರಿದೇವ ಕಾಟ್ಕರ್ ಅವರು ತಂದೆಯವರು ಹೇಳಿದ್ದ ಮಾತುಗಳನ್ನು ಈಗಲೂ ನೆನಪಿಸಿಕೊಳ್ಳುತ್ತಾರೆ. ಅಂದೇ ಕನಕಪುರದಿಂದ ಹೊರಟು ಗಾಂಧೀಜಿ ನೇರವಾಗಿ ಬೆಂಗಳೂರನ್ನು ತಲುಪಿದ್ದರು. ಗಾಂಧೀಜಿಯವರು ಈ ಭೇಟಿ ಕನಕಪುರದ ಜನತೆಯ ಮೇಲೆ ಗಾಢವಾದ ಖಾದಿ ಪ್ರಭಾವವನ್ನು ಬೀರಿತು. ಅಲ್ಲದೇ ಸ್ವಾತಂತ್ರ್ಯ ಸಂಗ್ರಾಮದ ಕಾವು ಅಧಿಕ ಗೊಂಡಿತು.

ಪುನಃ ಎರಡನೇ ಬಾರಿ ಮಹಾತ್ಮಗಾಂಧಿಯವರು ಹರಿಜನರ ಏಳ್ಗೆಗಾಗಿ ೧೯೩೪ ರಲ್ಲಿ ಪ್ರವಾಸ ಮಾಡುತ್ತಾ ೫-೧-೧೯೩೪ ಶನಿವಾರದಂದು ಬೆಳಗ್ಗೆ ಮೈಸೂರಿನಿಂದ ಹೊರಟು ಮಂಡ್ಯ, ಮದ್ದೂರು, ಶಿವಪುರ, ಸೋಮನಹಳ್ಳಿ, ಚನ್ನಪಟ್ಟಣ, ರಾಮನಗರ ಮಾರ್ಗವಾಗಿ ಪಯಣಿಸಿ ಸಂಜೆ ಸುಮಾರು ನಾಲ್ಕು ಗಂಟೆಗೆ ಕನಕಪುರ ತಲುಪಿದರು. ಅಲ್ಲಿ ನಡೆದ ಸಮಾರಂಭದಲ್ಲಿ ಹರಿಜನ ನಿಧಿಯನ್ನು ನೀಡಲಾಯಿತು. ಕೆಲವು ಸಾಮಾನುಗಳನ್ನು ಗಾಂಧೀಜಿ ಹರಾಜು ಹಾಕಿದರು. ನಂತರ ಬಿಡದಿ, ಕೆಂಗೇರಿ ಮಾರ್ಗವಾಗಿ ಅಂದು ರಾತ್ರಿ ಬೆಂಗಳೂರನ್ನು ತಲುಪಿದರು. ಕನಕಪುರಕ್ಕೆ ಈ ಎರಡನೆಯ ಭೇಟಿ ತಾಲ್ಲೂಕಿನ ಜನತೆಯ ಮೇಲೆ ಅಸ್ಪೃಶ್ಯತೆ ನಿವಾರಣೆ ಹರಿಜನೋದ್ಧಾರಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಪರಿಣಾಮ ಬೀರಿತು.



---

ಹಜ್ಜೆಯುಳ್ಳ ಮೃಗ ಇಬ್ಬರ ಕೂಡಿ ಹಲಬರನೆರಹಿ
ಹಬ್ಬವ ಮಾಡುವ ಭರವಸ
ಉಬ್ಬರವೆಂಬುದ ಒಬ್ಬರೂ ಅರಿಯರು ನೋಡಾ.
ಹಜ್ಜೆಯಿಲ್ಲದಮೃಗ ಇಬ್ಬರ ಕೂಡದು.
ಹಲಬರನೆರಹದು. ಹಬ್ಬವನೊಲ್ಲದು.
ತಾನೊಬ್ಬನೆಯಾಯಿತು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವಿನ
ಶರಣ ಸ್ವತಂತ್ರ, ಕಾಣಿರೋ.

ತಲೆವಾಲು ವೊಸರಲು ನೆಲಬೆಂದು ನೀರರತು
ಕಿಚ್ಚು ಕೆಟ್ಟಿತ್ತು ನೋಡಾ ಗಾಳಿ ಧೂಳಿಯ ಧಾಳಿನಿಂದು
ಅಂಬರದ ಸಂಭ್ರಮವಡಗಿತ್ತು ನೋಡಾ
ಹಾಲ ಕುಡಿದ ಶಿಶು ಸತ್ತು ತಾನು ತಾನಾದುದ
ನೇನೆಂದುಪಮಿಸುವೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

– ಸಿದ್ಧಲಿಂಗೇಶ್ವರರು

# ಗ್ರಾಮೀಣ ಪ್ರದೇಶಗಳಲ್ಲಿ ಮರಳು ಹಾಗೂ ಅಂತರ್ಜಲ ನಿರ್ವಹಣೆ

– ಡಾ. ಎಂ.ಜಿ. ಚಂದ್ರಕಾಂತ *
ಶ್ರೀಮತಿ ಎ.ಸಿ. ಹೇಮಾಲತ **

ನದೀ ಕಣಿವೆ ಪ್ರದೇಶಗಳು, ಮಾನವ ಬದುಕಿನ ನಿರ್ವಹಣೆಗೆ ಕೇಂದ್ರ ಸಂಪನ್ಮೂಲ ನೆಲೆಗಳಾಗಿವೆ. ಆ ಪ್ರದೇಶಗಳಲ್ಲಿ ನೀರಿನ ವಿಪುಲ ಸೌಲಭ್ಯ, ಫಲವತ್ತಿನ ಭೂಮಿ, ಪ್ರಾಣಿ ಮತ್ತು ಸಸ್ಯಗಳ ವ್ಯಾಪಕತೆಯ ಕಾರಣ, ನಾಗರೀಕತೆಗಳು ಬಾಳಿ ಬಂದಿವೆ. ಸಂಸ್ಕೃತಿಯ ಬೆಳಸೂ ಆಗಿದೆ. ಇಂದು ನಗರೀಕರಣ ಪ್ರಕ್ರಿಯೆಯ ಕಾರಣ ಈ ನದೀಪಾತ್ರಗಳಲ್ಲಿ ನಗರಗಳು, ರಾಜಧಾನಿಗಳೂ ನಿರ್ಮಾಣಗೊಂಡದ್ದೂ ದಿಟ. ಆದರೆ ಆಧುನಿಕ ಯುಗದಲ್ಲಿ, ಜೀವನಮಟ್ಟವನ್ನು ಏರಿಸುವ ನೆಪದಲ್ಲಿ ನದೀ ಪರಿಸರಕ್ಕೆ ಹಾನಿಯುಂಟುಮಾಡಲಾಗುತ್ತಿದೆ. ಈ ನದೀ ದಂಡೆಗಳಂತು ಮರಳನ್ನೇ ಒಂದು ಅಗಾಧ ಸಂಪನ್ಮೂಲವನ್ನಾಗಿ ಹೊಂದಿರುವಂಥವು. ಕಾರಣ ವಾಸ್ತುರಚನಾ ಕಾರ್ಯಗಳಲ್ಲಿ ಈ ಮರಳು ಮೂಲ ಕಚ್ಚಾವಸ್ತುವಾಗಿರುವುದಾಗಿದೆ. ಮರಳಿನ ಪದರಗಳಂತು, ಅಂತರ್ಜಲ ಪುನರುತ್ಥಾನಕ್ಕೆ ನೆರವಾಗುತ್ತವೆ.



ಇಂದಿನ ನಗರೀಕರಣ ಪ್ರಕ್ರಿಯೆಯ ಕಾರಣ, ವಿಶೇಷತಃ ಗೃಹ ನಿರ್ಮಾಣ ಕಾರ್ಯಗಳಿಗೆ ನದೀ ಮರಳಿನ ಪೂರೈಕೆಗೆ ಸತತ ಬೇಡಿಕೆ ಹೆಚ್ಚುತ್ತಿದೆ. ನಗರ ಹಾಗೂ ಉಪನಗರ ನಿರ್ಮಾಣ



ಅಭಿವೃದ್ಧಿ ಕಾರ್ಯಗಳಿಗೆ ಮರಳು ಮುಖ್ಯ ಸಂಪನ್ಮೂಲವಾಗಿದೆ. ಸೀಮೆಂಟ್ ಕಾಂಕ್ರೀಟ್ ಒತ್ತಚ್ಚು ತಂತ್ರಜ್ಞಾನದ ಅನಿವಾರ್ಯ ಘಟಕವಾಗಿ ಎಲ್ಲ ನಿರ್ಮಾಣಕಾರ್ಯದಲ್ಲಿ ಬಳಕೆಗೊಳ್ಳುತ್ತಿದೆ. ವಾಸ್ತವವಾಗಿ ಮರಳಿಗೆ ಪರ್ಯಾಯ ವಸ್ತುವಿಲ್ಲ. ಹೀಗಾಗಿ ಅದರ ಸದ್ಬಳಕೆ ಸೂಕ್ತವಾಗಿ ನಡೆಯದೆ, ಅರ್ಥಾತ್ ದುರುಪಯೋಗ ವಾಗಿ ನದೀ ಕೆಳಗಣ ಪ್ರದೇಶಗಳ ಮೇಲೆ ಹಾನಿಕಾರಕ ಪರಿಣಾಮವನ್ನುಂಟು ಮಾಡುತ್ತಿದೆ. ರಾಮನಗರ–ಕನಕಪುರ ಹಾದಿ ಬದಿಗೆ ಹರಿಯುವ ಅರ್ಕಾವತಿಯ ಮರಳು ಬಹಳವಾಗಿ ಅಗೆಯಲ್ಪಟ್ಟು, ನದಿ ಒಣಗಿರುವುದನ್ನು ಕಾಣಬಹುದು. ಅಂತರ್ಜಲ ಹಿಡಿದಿಟ್ಟುಕೊಳ್ಳಲು ನೆರವಾಗುವ ಶೋಧ ಮಾಧ್ಯಮವಾದ ಮರಳನ್ನೇ ಅಗೆದು ವಿಪರೀತ ಬಳಕೆ ಮಾಡುತ್ತಿದ್ದಾರೆ. ನೀರಿನ ಒಸರು ಒದಗಲು ಎಲ್ಲಿ ಸಾಧ್ಯ ! ಅಂತರ್ಜಲ ಪುನರುತ್ಥಾನಕ್ರಿಯೆಗೆ ತೀರ ಹಾನಿಯಾಗಿದೆ. ಅದರಿಂದಾಗಿ ನೀರಾವರಿ ಭಾವಿ ಯಾ ಕೃಷಿ ಬಳಕೆಗಿನ ಭಾವಿಗಳ ನೀರು ಬತ್ತುತ್ತಿವೆ. ಆಳಕ್ಕೆ ಅಗೆದರೂ ಆರಂಭದಲ್ಲಿಯ ಕೆಲವು ದಿನಗಳೊಳಗೆ ಬತ್ತಿದ ಬಾವಿಗಳಾಗುತ್ತಿವೆ. ಇದರಿಂದ

* ಪ್ರಾಧ್ಯಾಪಕರು, ಕೃಷಿ ಅರ್ಥಶಾಸ್ತ್ರ ವಿಭಾಗ, ಕೃಷಿ ವಿಶ್ವವಿದ್ಯಾಲಯ, ಹೆಬ್ಬಾಳ ** ಕೃಷಿ ವಿಶ್ವವಿದ್ಯಾಲಯ, ಹೆಬ್ಬಾಳ



ವ್ಯವಸಾಯದ ಕುಸಿತಕ್ಕೆ ಕಾರಣವಾಗುತ್ತದೆ. ಹಾಗೂ ಇದು ಭೂಮಿತಾಯಿಯ ಮೇಲೆ ಆಗುತ್ತಿರುವ ಪ್ರತ್ಯಕ್ಷ ಕ್ರೌರ್ಯವಾಗಿದೆ.

ಮರಳು ಇಡೀ ವರ್ಷದಲ್ಲಿ ನದಿಯಿಂದ ಬೆಳಸುಗೊಳ್ಳುತ್ತ ಅರ್ಥಾತ್ ರಾಶಿಗೊಳ್ಳುತ್ತ ಹೋಗುತ್ತದೆ. ಮರಳಿನ ಮುಖ್ಯ ಘಟಕವಾಗಿ (ರಾಸಾಯನಿಕ) ಸಿಲಿಕ್ ಅಂದರೆ ಸಿಲಿಕಾನ್ ಡೈ ಆಕ್ಸೈಡ್ ($SiO_2$) ಆಗಿದ್ದು ಅದು ಘನಘಟ್ಟಿಯಾದದ್ದು ಹಾಗೂ ಸವೆತ ನಿಧಾನವಾಗುವಂಥದ್ದು. ವರ್ತಮಾನದಲ್ಲಿ ಅದು ಬಹುಮುಖ ಉಪಯೋಗಿ ವಸ್ತುವಾಗಿದೆ. ಅದು ಕಾಮಗಾರಿಯಲ್ಲಿ, ಭೂಸವಕಳಿ ಮುಚ್ಚುವಲ್ಲಿ, ಉದ್ಯಮಗಳಲ್ಲಿ ಗಾಜು ತಯಾರಿಕೆಯಲ್ಲಿ ಕಚ್ಚಾವಸ್ತುವಾಗಿ ಬಳಕೆಗೊಳ್ಳುತ್ತಿದೆ.

ಗಣಿಗಾರಿಕೆ ಮಾದರಿಯಲ್ಲಿ ಮರಳುಗಾರಿಕೆ (sand mining) ಕಾರ್ಯವು ಅನೇಕ ದೇಶಗಳಲ್ಲಿ ಚಾಲ್ತಿಯಲ್ಲಿದೆ. ದಿಟ. ನದಿ ಪ್ರದೇಶದಲ್ಲಿ, ಕೆಳಗಣ ತೋಡು, ಕಾಲುವೆ, ತೊರೆಗಳ ಮೂಲಕ ಹರಿಯುವ ನದಿಯ ವಾರ್ಷಿಕವಾಗಿ ಹೊಸ ಮರಳನ್ನು ತಂದೊಡ್ಡುಟ್ಟುತ್ತದೆ. ಇದು ನದೀಪಾತ್ರದಲ್ಲಿ ನೈಸರ್ಗಿಕ ಕ್ರಿಯೆ. ಗ್ರೆಗರಿಯು ಮಾಡಿರುವ ಅಧ್ಯಯನದ (೧೯೭೭) ರೀತ್ಯಾ ಹೀಗೆ ಮರಳು ಶೇಖರಣೆಯಾಗುವ ಪ್ರಮಾಣ ನಾವು ತೋಡಿಕೊಳ್ಳುವ ಮರಳಿನ ಪ್ರಮಾಣಕ್ಕಿಂತ ಹೆಚ್ಚಿಗೆಯೆ ಇರುತ್ತದೆ. ಆದರೆ ಖಾಲಿಗೊಂಡ ಮರಳು ತಕ್ಷಣವೆ ನಿಸರ್ಗ ಮೂಲದಿಂದ ಶೇಖರಗೊಳ್ಳುವುದಿಲ್ಲ. ಕಾಲಕ್ರಮೇಣ ನದಿ ಹರಿವಿನ ದಂಡೆಗಳಲ್ಲಿ ಉಳಿಕೆಯಾಗಿ ನಿಂತಿದ್ದ ಮರಳು ರಾಶಿಯು ಸಡಿಗೊಳ್ಳುತ್ತ ನೀರಿನೊಡನೆ ಸಾಗಿ ಖಾಲಿ ಮರಳು ಜಾಗವನ್ನು ತುಂಬಿಕೊಳ್ಳುತ್ತದೆ. ಆದರೆ ಮರಳಿಗೆ ಇರುವ ಈಗಿನ ತೀವ್ರ ಬೇಡಿಕೆಯ ಕಾರಣ, ನದಿ, ಹಳ್ಳ, ಕೆರೆ, ತೊರೆಗಳ ದಂಡೆಯಲ್ಲಿ ಅದು ಸಾಗಿ ಬಂದು ಮೊತ್ತಗೊಳ್ಳುವ ಪ್ರಮಾಣವನ್ನು ಮೀರಿ ಮರಳು ತೋಡುವಿಕೆಯು ನಡೆಯುತ್ತಿದೆ. ಈ ಕಾರಣದಿಂದಾಗಿ ನೈಸರ್ಗಿಕ ಸಂಪನ್ಮೂಲವಾದ ಮರಳಿನ ಸರಬರಾಜು ವ್ಯವಸ್ಥೆಯು ತೀವ್ರ ಒತ್ತಡಕ್ಕೆ ಅರ್ಥಾತ್ ಏರುಪೇರಿಗೆ ಒಳಗಾಗುತ್ತಿದೆ.





ಅಭಿವೃದ್ಧಿಶೀಲ ಯಾ ಅಭಿವೃದ್ಧಿ ಸಾಧಕ ದೇಶಗಳಲ್ಲಿ, ಅವಿವೇಚನಾತ್ಮಕವಾದ ಮರಳಿನ ತೋಡುವಿಕೆಯಿಂದಾಗಿ ಹಾಗೂ ದುರ್ಬಳಕೆಯಿಂದಾಗಿ ನದಿ ಮೇಲಣ ಹಾಗೂ ಕೆಳಗಣ ಪ್ರದೇಶದ ಕಾಲುವೆಗಳಿಗೆ ಹಾಗೂ ವಸತಿಯ ಜನಕ್ಕೆ ತೊಂದರೆಯಾಗಿದೆ; ಅಂತರ್ಜಲ ಮಟ್ಟವು ಕುಸಿದಿದೆ. ಹೀಗಿದ್ದರೂ ಮುಂದುವರಿದಿರುವ ಈ ತೋಡುವಿಕೆ ಯಿಂದಾಗಿ, ಆ ಪ್ರದೇಶದ ಪರಿಸರದ ಮೇಲೆ (ನದೀ ಕೆಳಗಣ –ಮೇಲಣ ಪ್ರದೇಶದ ಪರಿಸರ) ಅಡ್ಡಪರಿಣಾಮಗಳಿಗೆ ಕಾರಣವಾಗಿದೆ. ಬೇಸಾಯೋತ್ಪನ್ನದಿಂದ ಬರುವ ಲಾಭಕ್ಕಿಂತ, ಮರಳುಗಾರಿಕೆ ಚಟುವಟಿಕೆಯಿಂದ ಆರ್ಥಿಕವಾಗಿ ಮುಖ್ಯ ಆದಾಯ ಮೂಲವು ರೈತರಿಗೆ ಒದಗಿದೆ. ಹೀಗಾಗಿ ಈ ಚಟುವಟಿಕೆಯು ರೈತರನ್ನು ಆಕರ್ಷಿಸಿ ಬಿಟ್ಟಿದೆ. ಈ ಕಾರಣ ರೈತರಿಗೆ ಮುಂದಿನ ಅಪಾಯದ ಬಗ್ಗೆ ಋಣಾತ್ಮಕ ಪರಿಣಾಮಗಳ ಬಗ್ಗೆ ತಿಳುವಳಿಕೆ ಕೊಡಬೇಕಾದ ಅಗತ್ಯವಿದೆ.

ಮರಳಿನ ಪದರಗಳು ನದೀ ಹರಿವಿನ ಮಾರ್ಗದಲ್ಲಿ, ದಂಡೆಯುಲ್ಲಿ ಇದ್ದಷ್ಟೂ ಅಂತರ್ಜಲ ಪುನರುತ್ಥಾನಕ್ಕೆ ಕಾರಣವಾಗುತ್ತದೆ. ಮರಳುಗಾರಿಕೆಯಿಂದ ಯಾವುದೇ ಪ್ರದೇಶದಲ್ಲಿ ಅಂತರ್ಜಲ ಪುನರುಜ್ಜೀವನಕ್ಕೆ ಹಾನಿ ಒದಗುತ್ತದೆ: ಅದರಿಂದ ಉಂಟಾದ ಅನುಗುಣ ನಷ್ಟಗಳ ಸರಣಿಯು ರೈತರನ್ನು ಬಾಧಿಸುತ್ತದೆ. ರೈತರಿಗೆ ಕೃಷಿಗೆ ಅಗತ್ಯ ಬೇಕಾದ ನೀರಿನ ಒದಗಣೆ ನೀರು ಸಂಗ್ರಹದ ಮೂಲಗಳಾದ ಕೊಳವೆಬಾವಿ, ತೆರೆದ ಬಾವಿ ಹಾಗೂ ಚಿಮ್ಮುವ ನೀರಿನ ಸೆಲೆಯು ಆಗಿವೆ. ಮರಳುಗಾರಿಕೆಯಿಂದ ಇಂದು ಬಾವಿ ಬತ್ತುವಿಕೆ ಹಾಗೂ ತೋಡುಬಾವಿಯ ವಿಫಲತೆಗೂ ಕಾರಣವಾಗುತ್ತಿದೆ.

**ಭಾರತದಲ್ಲಿ** ಶೇ. ೭೦ ರಷ್ಟು ಜನತೆ ತಮ್ಮ ಜೀವನ ನಿರ್ವಹಣೆಗಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಎರಾಬಿರ್ರಿ ಮಳೆಯ ಕಾರಣ ಬೇಸಾಯಕ್ಕೆ ಮುಖ್ಯ ಆಧಾರವಾಗಿ ಅಂತರ್ಜಲ ಸನ್ನಿಹಿತವಾದ ಭೂಜಲ ಸಂಗ್ರಹಾಗಾರಗಳಾದ ನೆಲಬಾವಿ, ಕೊಳವೆಬಾವಿ, ಚಿಲುಮೆಗಳು ಒದಗುತ್ತವೆ. ನದಿ ತೀರದ ಪ್ರದೇಶಗಳಲ್ಲಿ ಪ್ರಮುಖವಾಗಿ ಮರಳು, ನೀರನ್ನು ಭೂಜಲವಾಗಿ ಹಿಡಿದಿಟ್ಟುಕೊಳ್ಳಲು, ಅಂತರ್ಜಲ ಪುನರುತ್ಥಾನವಾಗಲು ಕಾರಣವಾಗಿದೆ. ಮಳೆಗಾಲದಲ್ಲಿ ಹರಿವ ನೆಲ ತೇಲುಜಲವು ನದಿ ಪಥದುದ್ದಕ್ಕೂ ಮರಳಿನ ಸಂಗ್ರಹಕ್ಕೆ ಕಾರನವಾಗುತ್ತದೆ. ಮರಳಿನ ಪದರಗಳು ನೀರನ್ನು ಸುರಂಧ್ರಗಳಲ್ಲಿ

ಹಿಡಿದಿಟ್ಟುಕೊಳ್ಳುವ ಸ್ಪಂಜಿನಂತೆ ಕೆಲಸ ಮಾಡುತ್ತವೆ. ತತ್ಫಲವಾಗಿ ಅಂತರ್ಜಲ ಪೂರಣ ಅರ್ಥಾತ್ ತಳನೀರು ಹೆಚ್ಚಳಕ್ಕೆ ಕಾರಣವಾಗುತ್ತವೆ.

ಸಾರವಾಗಿ ಹೇಳಿದರೆ : ಇತ್ತೀಚಿನ ದಿನಗಳಲ್ಲಿ ನಗರ, ಉಪನಗರ ಅಷ್ಟೇ ಏಕೆ ಪ್ರಗತಿಗೊಂಡ ಗ್ರಾಮೀಣ ಪ್ರದೇಶಗಳಲ್ಲಿಯೂ ಹೆಚ್ಚಿದ ಕಟ್ಟಡ ರಚನಾಕಾರ್ಯಗಳಿಂದ ಮರಳಿನ ಬೇಡಿಕೆ ತೀವ್ರಗೊಳ್ಳುತ್ತಿರುವುದಾಗಿದೆ. ಇದನ್ನು ಪೂರೈಸಲು ಅಕ್ರಮ ಮರಳು ತೋಡುವಿಕೆಯು ಹೆಚ್ಚು ಹೆಚ್ಚಾಗಿ ನಡೆಯುತ್ತಿದೆ. ಲಾರಿ ಮಾಲೀಕರು ಹಾಗೂ ಗುತ್ತಿಗೆದಾರರು ಸರಬರಾಜು ಮಾಡಲು ನದಿ ದಂಡೆಗಳ ಉತ್ತಮ ಮಾದರಿಯ ಮರಳನ್ನು ಅರಸಿ ಹೋಗುವಂತೆ ಮಾಡಿದೆ. ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿಗದಿಗೊಳಿಸಿರುವುದು ಮೂರು ಆಡಿ ಆಳದ ಮರಳು ಅಗತೆವನ್ನು ಮಾಡಿ ಒಂದು ಲಾರಿಗೆ ೪೫ ರೂ.ಗಳ ಸ್ವಾಮ್ಯ ಹಣ (ರಾಯಲ್ಟಿ) ಕೊಟ್ಟು ಮರಳು ಪಡೆಯಬೇಕೆನ್ನುವುದಿದೆ. ಆದರೆ ಇಂದು ೩೦ ಅಡಿ ಆಳದವರೆಗೂ ಅಕ್ರಮವಾಗಿ ಅಗೆದು ಮರಳು ತುಂಬಿಕೊಳ್ಳುವುದು (ಕೋಲಾರದ ಉತ್ತರ ಪಿನಾಕಿನಿ ನದಿದಂಡೆ ಇದಕ್ಕೊಂದು ಸ್ಪಷ್ಟ ಉದಾಹರಣೆ) ನಡೆದಿದೆ. ಇದನ್ನು ಇಲಾಖೆಯು ಗಂಭೀರವಾಗಿ ಸಮಾಜದ ಹಿತದ ದೃಷ್ಟಿಯಿಂದ ಗಮನಿಸಬೇಕಾದ ವಿಷಯವಾಗಿದೆ. ಕಾರಣ ಇಂಥ ಅದೂರದೃಷ್ಟಿಯ ತೋಡುವಿಕೆಯು ನದಿದಂಡೆಯ ಮರಳಿಗೆ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ನದಿ ಪ್ರದೇಶದ ವಾತಾವರಣದ ತಂಪು ಹವೆಯ ನಿರಂತರತೆಗೆ ನಿರ್ವಹಣೆಗೆ ಬಾಧಕವಾಗುತ್ತದೆ. ಮಳೆಯ ಏರಾಬಿರ್ರಿತನ ಕೂಡಿಕೊಳ್ಳುತ್ತದೆ. ಈ ಹಿನ್ನೆಲೆಗಳಿಂದಲೇ ನಮ್ಮ ರೈತರು ೧೯೮೫ ರಿಂದಲೇ ಬೇಸಾಯಕ್ಕೆ ಕೊಳವೆ ಬಾವಿ, ತೋಡು ನೆಲಬಾವಿಗಳನ್ನು ಅವಲಂಬಿಸಿದ್ದವರು, ಇಂಥ ನೀರಿನ ಕೊರತೆ ಕಾರಣ ಪರ್ಯಾಯ ಆದಾಯ ಮೂಲಕ್ಕೆ ಕಾತರಿಸ ತೊಡಗಿದರು. ಕೃಷಿಕಾಯಕ ಕಷ್ಟವೆನಿಸಲು ಅವಿಭಕ್ತ ಕುಟುಂಬಗಳ ಕ್ಷೀಣತೆ, ಉದ್ಯೋಗ ಅರಸಿ ವಲಸೆ ಇತ್ಯಾದಿ ಕಾರಣಗಳೂ ಸೇರಿ, ಮರಳು ತೋಡುವಿಕೆಯೊಂದು ಲಾಭದಾಯಕವೆಂದು ಗಮನಕ್ಕೆ ಬಂತು. ಲಾಭನಷ್ಟಗಳ ಲೆಕ್ಕಚಾರ ಶುರುವಾಯಿತು. ಮರಳು ಅಗೆದು ಮಾಡುವ ಮಾರಾಟ ಕೃಷಿಗಿಂತಲೂ ಹೆಚ್ಚು ಲಾಭ ತರುವ ದಂಧೆ ಎನಿಸಿತು. ಆದರೆ ಇಂಥ ಭ್ರಮಾತ್ಮಕ ಲಾಭ ನೆಲ, ಜಲ ಹಾಗೂ ಪರಿಸರದ ಮೇಲೆ ಉಂಟುಮಾಡುವ ಹಾನಿಕಾರಕ ಪರಿಣಾಮ, ಭವಿಷ್ಯತ್ತಿಗೆ ತರುವ ಅಪಾಯವನ್ನು ಗ್ರಹಿಸಬೇಕಿದೆ. ಅತಿ ಮರಳು ತೋಡಿದ ಕಾರಣವೇ ಉಂಟಾಗುವ ಅಂತರ್ಜಲ ಕುಸಿತ, ಬಾವಿಗಳ ವೈಫಲ್ಯ, ಬೇಸಾಯೋತ್ಪನ್ನಗಳ ಕ್ಷೀಣತೆ ಪರಿಸರ ಮಾಲಿನ್ಯ ಇತ್ಯಾದಿಗಳಿಗೆ ನಮ್ಮ ಮೇಲ್ನೂಚಿತ ಆರ್ಥಿಕ ಚಟುವಟಿಕೆಗಳು ಕಾರಣವಾಗುತ್ತಿರುವಾಗ, ನಮ್ಮ ಬದುಕನ್ನೇ ಕಳೆದುಕೊಳ್ಳ ಬೇಕಾಗುತ್ತದೆ. ಅಂತಾಗಿ ಸ್ವನಿಯಂತ್ರಣ, ಇಲಾಖೆಯ ಮೇಲುಸ್ತುವಾರಿ ಹಾಗೂ ಸಕ್ರಮಲಾಭ ಪಡೆಯುವಿಕೆ, ಪರಿಸರ ಸಮತೋಲನ ನಿರ್ವಹಣೆ ಇವುಗಳ ಚಾಲನೆಯಾದರೆ ರೈತರಿಗಷ್ಟೇ ಅಲ್ಲ, ಉಳಿದವರಿಗೂ ಶ್ರೇಯ.

❑

---

ಕೆರೆ ಹಳ್ಳ ಬಾವಿಗಳು ಮೈದೆಗೆದಡೆ
ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು.
ವಾರಿಧಿ ಮೈದೆಗೆದಡೆ
ರತ್ನ ಮುತ್ತುಗಳ ಕಾಣಬಹುದು.
ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದಡೆ
ಲಿಂಗವ ಕಾಣಬಹುದು.

– ಬಸವಣ್ಣ

ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇಕೆ ?
ಸತ್ಯವುಳ್ಳಾತಂಗೆ ತತ್ವವಿಚಾರದ ಹಂಗೇಕೆ ?
ಅರಿವುಳ್ಳಾತಂಗೆ ಅಗ್ಫವಣಿಯ ಹಂಗೇಕೆ ?
ಮನಶುದ್ಧವುಳ್ಳವಂಗೆ ಮಂತ್ರದ ಹಂಗೇಕೆ ?
ಭಾವಶುದ್ಧವುಳ್ಳವಂಗೆ ಹೂವಿನ ಹಂಗೇಕೆ ?
ಕೂಡಲಚೆನ್ನಸಂಗಯ್ಯಾ, ನಿಮ್ಮನರಿದಾತಂಗೆ
ನಿಮ್ಮ ಹಂಗೇಕೆ ?

– ಚನ್ನಬಸವಣ್ಣ

# ಗ್ರಾಮೀಣ ಮಹಿಳೆಯರ ಸಮಸ್ಯೆ ಮತ್ತು ಸವಾಲುಗಳು

– ಡಾ. ಎಚ್. ಜಯಮ್ಮ ಕರಿಯಣ್ಣ *

ಭಾರತ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಿಸುತ್ತಿರುವ ಈ ಕಾಲದಲ್ಲೂ ಗ್ರಾಮೀಣ ಮಹಿಳೆಯರು ಅನಕ್ಷರಸ್ಥರಾಗಿ ತಮ್ಮ ಸಮಸ್ಯೆ ಮತ್ತು ಸವಾಲುಗಳಿಗೆ ತಮ್ಮನ್ನು ತಮ್ಮ ಬದುಕನ್ನು ಒಪ್ಪಿಸಿಕೊಳ್ಳುತ್ತಿದ್ದಾರೆ. ಭಾರತೀಯ ಮಹಿಳೆಯರಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಸ್ವಾತಂತ್ರ್ಯವೇನೆಂದು ಇಂದಿಗೂ ತಿಳಿಯದು. ಹಿಂದೆ ಮನೆಯ ನಾಲ್ಕು ಗೋಡೆಯ ನಡುವೆ ತನ್ನೆಲ್ಲಾ ಸಮಯವನ್ನು ವ್ಯಯಿಸುತ್ತಿದ್ದಳು. ವಿವೇಕಾನಂದರು ಆಂಗ್ಲ ಭಾಷೆಯಲ್ಲಿ ಬರೆದ ಕೃತಿ 'ಅವರ ವಿಮೆನ್' ಎಂಬ ಪುಸ್ತಕದಲ್ಲಿ ನಮ್ಮ ಮಹಿಳೆಯರು ತಮ್ಮ ಅಜ್ಞಾನದ ಪೊರೆಯನ್ನು ಮೊದಲು ಕಳಚಬೇಕು. ವಿದ್ಯೆ ಕಲಿತು ಸುಸಂಸ್ಕೃತಳಾಗಿ ತನ್ನ ಹಕ್ಕು ಭಾದ್ಯತೆಗಳನ್ನು ತಿಳಿದುಕೊಳ್ಳಬೇಕು. ಆಗ ನಮ್ಮ ಭವ್ಯ ಪರಂಪರೆಯ ಭಾರತ ಉದ್ಧಾರವಾಗಬಲ್ಲದು ಎಂದಿದ್ದಾರೆ. ಮಹಾತ್ಮಾ ಗಾಂಧೀಜಿಯವರು ಸಹ ಮಹಿಳೆಯರ ವಿಷಯದಲ್ಲಿ ಅತೀವ ಅನುಕಂಪ ವ್ಯಕ್ತಪಡಿಸಿ ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡಿ. ಶಿಕ್ಷಣದಿಂದ ಜ್ಞಾನ, ತಿಳುವಳಿಕೆ ಬರುವುದಲ್ಲದೆ ತನ್ನ ಮಕ್ಕಳನ್ನು ಉತ್ತಮ ಭವಿಷ್ಯದ ದಾರಿಯಲ್ಲಿ ನಡೆಯುವಂತೆ ಪರಿಣಾಮ ಬೀರಬಲ್ಲಳು ಎಂದಿದ್ದಾರೆ.

ಮನೆಯೊಳಗೆ ಬದುಕು ಸವೆಸುತ್ತಿದ್ದ ಮಹಿಳೆಯರು ಪುರುಷನಿಗೆ ದಾಸಿಯಂತೆ ಅವನ ಮತ್ತು ಕುಟುಂಬದ ಸೇವೆಗೆ ಮಾತ್ರ ಸೀಮಿತ ಎಂಬ ಭಾವನೆ ಬೆಳೆದು ಬಂದು ಅವಳನ್ನು ತೆರೆಯ ಮರೆಯಲ್ಲಿ ದೇವತೆಗಳ ಸಾಲಿಗೆ ಸೇರಿಸಿತ್ತು. ಬಹುಶಃ ಶರಣರು ಮಹಿಳೆಯನ್ನು ತಾರತಮ್ಯವಿಲ್ಲದೆ ನಡೆಸಿಕೊಂಡು ಅವಳಿಗೆ ಗೌರವದ ಸ್ಥಾನ ಕೊಟ್ಟರು. ಹೀಗಿರುವಾಗ ಕೆಲವು ಮಹನೀಯರು ದೇಶದ ಸ್ವಾತಂತ್ರ್ಯ ಸಮಯದಲ್ಲಿ ಮಹಿಳೆಯರನ್ನು ಹೋರಾಟದಲ್ಲಿ ತೊಡಗಿಸಿಕೊಂಡರು. ಆನಂತರ ಹಳ್ಳಿಗಳೇ ಹೆಚ್ಚಾಗಿರುವ ಭಾರತದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬದುಕು ಸವೆಸುತ್ತಿರುವ ಮಹಿಳೆಯರನ್ನು ಅವರ ನೈಜವಾದ ಅಥವಾ ನಿಜವಾದ ಸಮಸ್ಯೆಗಳನ್ನು ಯಾರು ವಿಚಾರಿಸಿದ್ದಾರೆ ?

ಗ್ರಾಮಗಳನ್ನು ಉದ್ಧಾರ ಮಾಡಿ, ಗ್ರಾಮೀಣ ಮಹಿಳೆಯರಲ್ಲಿ ಹೊಸ ಜಾಗೃತಿಯನ್ನುಂಟು ಮಾಡಿ ಎಂದು ದೇಶದ ಧುರೀಣರು ಘೋಷಣೆ ಮಾಡುತ್ತಿದ್ದಾರೆ. ಅವರ ಹಿತಾಸಕ್ತಿಗಳಿಗೆ ಗಮನ ನೀಡುವ ಬಗ್ಗೆ ಪತ್ರಿಕೆಗಳಲ್ಲಿ ಹೇಳಿಕೆಗಳು ಪ್ರಕಟವಾಗುತ್ತಿವೆ. ಆದರೆ ಇವು ಯಾವುದೂ ಕಾರ್ಯರೂಪಕ್ಕೆ ಬಾರದೆ ಅದೇ ಒಂದು ಸಮಸ್ಯೆಯಾಗಿದೆ.

ಗ್ರಾಮಗಳಲ್ಲಿಯೂ ನಾಗರಿಕತೆ ಹೆಚ್ಚಾಗುತ್ತಿದ್ದರೂ, ಮೂಢನಂಬಿಕೆಗಳು, ಸಂಪ್ರದಾಯಗಳು ಹಾಗೇ ಉಳಿದು ಬಂದಿರುವುದು ಕಾಣಬರುತ್ತದೆ. ಬಾಲ್ಯವಿವಾಹ ಪದ್ಧತಿ ಕಡಿಮೆಯಾಗಿದ್ದರೂ ಪೂರ್ಣ ಪ್ರಮಾಣದಲ್ಲಿ ನಿಂತಿಲ್ಲ. ಇಂದಿನ ಮದುಮಗಳು ಹಿಂದಿನಂತೆ ನಾಚುವುದಿಲ್ಲವಾದರೂ ತಂದೆ ತಾಯಿ ಒಪ್ಪಿದ ವರನನ್ನು ವಿವಾಹವಾಗುತ್ತಾಳೆ. ಆದರೆ ವಿವಾಹದ ವಿಷಯದಲ್ಲಿ ಸಾಕಷ್ಟು ತಿಳುವಳಿಕೆ ಅವಳಲ್ಲಿರುವುದಿಲ್ಲ. ಸಾಮರಸ್ಯದಿಂದ ಪತಿಯೊಡನೆ ಬದುಕಿನುದ್ದಕ್ಕೂ ಇರಬೇಕಾದ ಇವಳಲ್ಲಿ ಆಂತರಿಕ ಆಸೆ, ಬಯಕೆಗಳು, ಕನಸುಗಳು ಕೈಗೂಡದೆ ಸಹನೆಯನ್ನು ಕಳೆದುಕೊಂಡು ಜಗಳ, ಬಡಿದಾಟ ಸಾಮಾನ್ಯವಾಗುತ್ತದೆ. ಕಾರಣ ಆರ್ಥಿಕ ಕಷ್ಟ, ತೀವ್ರ ಬಡತನ ತನ್ನ ಅಸಹಾಯಕ ಪರಿಸ್ಥಿತಿ. ಗಂಡ ಸೋಮಾರಿಯೂ ಕುಡುಕನಾದರಂತೂ ಅವಳ ಬವಣೆ ಹೇಳತೀರದು. ಗ್ರಾಮೀಣ ಪ್ರದೇಶದಲ್ಲಿ ನಗರಗಳಲ್ಲಿರುವಂತೆ ಹೆಜ್ಜೆಗೊಂದು ಶರಾಬಿನ ಅಂಗಡಿ ಇಲ್ಲದಿದ್ದರೂ ಕಳ್ಳಬಟ್ಟಿ ಶರಾಯಿ ಅಂಗಡಿಗಳು ಅವರನ್ನು ಸ್ವಾಗತಿಸುತ್ತವೆ. ಇಲ್ಲಿ ಕುಡಿದು ಬಂದ ಗಂಡನ ಸ್ವಭಾವ ದಲಿತ ಅಥವಾ ಕುಲೀನ ಮನೆತನದವನಾದರೂ ಅವರಲ್ಲಿ ಅಂಥ ವ್ಯತ್ಯಾಸವೇನೂ ಕಾಣುವುದಿಲ್ಲ. ಇನ್ನು ದಲಿತ ಮಹಿಳೆಯರ

* ಆಶೀರ್ವಾದ, ನಂ ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೩ನೇ ಹಂತ, ಬೆಂಗಳೂರು-೫೬೦ ೦೪೦

ಬಗ್ಗೆ [illegible] ನೋಡ. ಗ್ರಾಮೀಣ ಜನತೆಯಲ್ಲಿ ಬಡತನ ಒಂದಾದರೆ: ನಾಗರಿಕತೆಯ ಹೆಸರಿನಲ್ಲಿ ಗ್ರಾಮಗಳಿಗೆ ಲಗ್ಗೆ ಹಾಕಿರುವುದು ಕುಡಿತ, ಜೂಜು, ಒಂದಂಕಿ ಲಾಟರಿ ಮುಂತಾದವು. ಇರುವ ಭೂಮಿ, ಕಾಣಿಯನ್ನು ಮಾಡಿ ಜೂಜಾಡುವುದು ಹಣ ಸಂಪಾದನೆ ಆಸೆಯಲ್ಲಿ, ಸೋತು ಹೋದಾಗ ಕುಡಿತ ಮತ್ತಷ್ಟು ಹೆಚ್ಚು. ಕಷ್ಟಪಟ್ಟು ದುಡಿಯುವುದನ್ನು ಮರೆತ ಈ ಗಂಡಸರು ಸೋಮಾರಿತನ ಮೈಗೂಡಿಸಿಕೊಂಡು ಕೂಲಿ ಕೆಲಸ ಅವಮಾನವೆಂದು ತಿಳಿದವರು. ಆದರೆ ಮಹಿಳೆಯರು ಸೋಮಾರಿಗಳಾದರೆ ಹೊಟ್ಟೆ ತುಂಬುವುದೆ ಎಂದು ಸಿರಿವಂತರ ಹೊಲ, ಗದ್ದೆಗಳಲ್ಲಿ ಕೂಲಿ ಕೆಲಸ ಮಾಡಿ ತಂದ ಹಣ ಅಥವಾ ಧಾನ್ಯದಿಂದ ಗಂಜಿ ಕಾಯಿಸಿ ಗಂಡ ಮಕ್ಕಳಿಗೆ ಉಣಿಸಿ ಬದುಕು ಮಾಡುವುದನ್ನು ಕಾಣುತ್ತೇವೆ. ಈಕೆ ಸಂಪಾದನೆ ಮಾಡಿ ತಂದ ಕೂಲಿ ಹಣದ ಮೇಲೆಯೂ ಕಣ್ಣು ಹಾಕಿ ಹೆಂಡತಿಯನ್ನು ಬಡಿದು ಕಾಸು ಕಸಿದು ಕುಡಿದು ಬಂದು ಮಲಗುತ್ತಾರೆ. ಇದು ದಿನ ನಿತ್ಯ ನಡೆಯುವ ಅವರ ವ್ಯವಹಾರ. ಇದು ತೀರ ದುರ್ಬಲ ಕುಟುಂಬದ ಕತೆಯಾದರೆ, ಮಧ್ಯಮ ವರ್ಗದ ಕುಟುಂಬಗಳ ಮಹಿಳೆಯರ ಕಷ್ಟ ಮತ್ತೂ ಹೆಚ್ಚಿನದು. ಆಕೆಯ ಜವಾಬ್ದಾರಿ ಇನ್ನೂ ಹೆಚ್ಚಿನದು. ಬೆಳಗ್ಗೆ ಬೇಗ ಎದ್ದು ದನ, ಕುರಿಗಳನ್ನು ಹೊರಕ್ಕೆ ಬಿಟ್ಟು ಕೊಟ್ಟಿಗೆ ಮತ್ತು ಕೊಪ್ಪಲಿನ (ಕುರಿಗಳನ್ನು ಕೂಡುವ ಜಾಗ) ಕಸತೆಗೆದು ಹೊಲದ ಬದಿ ಇರುವ ತಿಪ್ಪೆಗೆ ಸುರಿದು ಬಂದು, ಹಾಲು ಕರೆದು, ಕುಡಿಯುವ ನೀರು ತಂದು ಮನೆಯ ಸ್ವಚ್ಛತೆಗೆ ಗಮನ ಕೊಡುತ್ತಾರೆ. ವಯಸ್ಸಾದ ಅತ್ತೆ, ಮಾವ, ಚಿಕ್ಕ ಮಕ್ಕಳಿಗೆ ಹೊಟ್ಟೆಗೆ ಮಾಡಿಟ್ಟು ಶಾಲೆಗೆ ಹೋಗುವ ಮಕ್ಕಳನ್ನು ಶಾಲೆಗೆ ಕಳಿಸಿ ತಾನು ಒಂದಿಷ್ಟು ಬುತ್ತಿ ಕಟ್ಟಿಕೊಂಡು ದುಡಿಯಲು ಹೊರಗೆ ಹೊರಡುತ್ತಾಳೆ. ಹೊರಗೆ ಸಂಜೆಯವರೆಗೆ ಹೊಲ, ಗದ್ದೆ, ತೋಟಗಳಲ್ಲಿ ದುಡಿದು ಮನೆಗೆ ಬರುವಾಗ ದನಕರುಗಳಿಗೆ ಮೇವನ್ನು ಸಂಗ್ರಹಿಸಿಕೊಂಡು, ಒಣಗಿದ ಸೌದೆಗಳ ಒಂದು ಕಟ್ಟನ್ನು ಹೊತ್ತು ತರುತ್ತಾಳೆ. ಹೊರಗೆ ದುಡಿದು ಹೈರಾಣವಾಗಿ ಬಂದ ಮೇಲೆ ವಿಶ್ರಾಂತಿಯ ಪ್ರಶ್ನೆ ಇಲ್ಲವೇ ಇಲ್ಲ. ಅವಳಿಗಾಗಿ ಕಾದಿರುವ ಮತ್ತೆ ಸಂಜೆಯ ಕೆಲಸ. ಒಳಗೆ ಬಂದವಳು ಕೈಕಾಲು ಮುಖ ತೊಳೆದು ದೀಪ ಹೊತ್ತಿಸಿ ಹಾಲು ಕುಡಿಯುವ ಮಗುವಿದ್ದರೆ ಹಾಲೂಡಿಸಿ ಮತ್ತೆ ಅಡಿಗೆ ಮನೆಗೆ ನುಗ್ಗಿ ರಾತ್ರಿಯ ಊಟಕ್ಕೆ ತಯಾರಿ ನಡೆಸುವಳು. ವಿಶ್ರಾಂತಿ ಇಲ್ಲದ ಶ್ರಮದ ದುಡಿಮೆಯಿಂದ ಹೆಚ್ಚು ಸೋತು ಹೋಗಿರುತ್ತಾಳೆ. ಇದು ಎಲ್ಲಾ ಕುಟುಂಬಗಳಲ್ಲಿ ಅಲ್ಲದಿದ್ದರೂ ಗ್ರಾಮೀಣ ಮಹಿಳೆಯರಲ್ಲಿ ಹೆಚ್ಚು ಜನರ ಜೀವನದ ಸ್ಥಿತಿಗತಿ. ಮಹಿಳೆ ತನ್ನ ಕುಟುಂಬದ ನೆಮ್ಮದಿಗಾಗಿ ದುಡಿಯುತ್ತಿರುವುದನ್ನು ಕಂಡರೂ ಗಂಡ ತನಗೆ ಇದು ಯಾವುದೂ ಸಂಬಂಧಿಸಿದಲ್ಲವೆಂದೂ, ಅದು ಅವಳ ಕರ್ತವ್ಯವೆಂದು ಭಾವಿಸಿ ಸುಮ್ಮನಿದ್ದು ಬಿಡುತ್ತಾನೆ.

ಗ್ರಾಮೀಣ ಮಹಿಳೆಯರ ಸಮಸ್ಯೆಗಳು ಅವರು ಬದುಕುತ್ತಿರುವ ಪರಿಸರದ ಪ್ರಭಾವ ಕಾರಣವೆನ್ನಬಹುದು. ಪ್ರಾಕೃತಿಕ ಹಿನ್ನೆಲೆ, ಸುತ್ತಲಿನ ಜನರು ಸಾಮಾಜಿಕ ಕಟ್ಟು ಪಾಡು, ದುಡಿಮೆಗೆ ತಕ್ಕ ಪ್ರತಿಫಲ ಇಲ್ಲದಿರುವುದು ಭೌಗೋಳಿಕ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಇದೆಲ್ಲ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಭಿನ್ನವಾಗಿದ್ದು, ಅಲ್ಲಿನ ಪರಿಸರಕ್ಕೆ ಹೊಂದಿಕೊಂಡಂತೆ ಮಹಿಳೆಯರ ಬದುಕು ರೂಪುಗೊಂಡಿರುತ್ತದೆ. ದುಡಿತ ಮತ್ತು ಅರ್ಥಿಕ ಸೌಲಭ್ಯಗಲೂ ಆ ಪರಿಸರಕ್ಕೆ ಅನುಗುಣವಾಗಿರುತ್ತದೆ. ವಾತಾವರಣ, ವೇಷಭೂಷಣಗಳು, ನಡೆ–ನುಡಿ, ಆಹಾರ–ಪಾನೀಯ ಜೀವನಕ್ರಮ, ಆಚಾರ–ವಿಚಾರ, ಜಾತಿಧರ್ಮ, ಸಂಸ್ಕೃತಿಗಳಲ್ಲಿ ಬಹಳಷ್ಟು ವ್ಯತ್ಯಾಸಗಳಿದ್ದು ಒಂದು ಗ್ರಾಮವನ್ನು ಮತ್ತೊಂದಕ್ಕೆ ಹೋಲಿಕೆ ಮಾಡಲಾಗದು. ಆಯಾ ಗ್ರಾಮಗಳ ಮಹಿಳೆಯರ ಆಶೋತ್ತರ, ಆರ್ಥಿಕತೆ, ಎದುರಿಸುತ್ತಿರುವ ಬಡತನ, ಅನಕ್ಷರತೆ ಇವೆಲ್ಲಾ ಒಂದೇ ರೀತಿಯಲ್ಲಿ ಕಂಡು ಬರುತ್ತವೆ. ಗ್ರಾಮೀಣ ಮಹಿಳೆಯರಲ್ಲಿ ಅಂಧಶ್ರದ್ಧೆ, ಅಜ್ಞಾನ ಮತ್ತು ಮೌಢ್ಯತೆ ಇಂದಿಗೂ ಹಾಗೆ ಉಳಿದು ಬಂದಿದೆ. ನಾಗರಿಕತೆಯಲ್ಲಿ ನಗರಗಳು ಬದಲಾಗಿದ್ದರೂ: ಮೂಢನಂಬಿಕೆ ಮುಂತಾದ ಆಚರಣೆಗಳು ನಗರದ ಅನೇಕ ಮಹಿಳೆಯರಲ್ಲಿಯೂ ಮುಂದುವರಿದಿದೆ. ಹೀಗಿರುವಾಗ ಗ್ರಾಮೀಣ ಮಹಿಳೆಯರ ಬಗ್ಗೆ ಏನು ಹೇಳಲು ಸಾಧ್ಯ? ಅಲ್ಲದೆ ಮಳೆ ಬಾರದ ಅಥವಾ ನದಿ ಕೆರೆಗಳಿಲ್ಲದ ಪ್ರದೇಶಗಳಲ್ಲಿ ವ್ಯವಸಾಯದ ಬವಣೆ, ಕುಡಿಯಲೂ ನೀರಿಲ್ಲದ ಪರಿಸ್ಥಿತಿ, ಆಂತರಿಕ ಕಲಹ, ಕುಟುಂಬಗಳಲ್ಲಿ ಆಸ್ತಿ ಮುಂತಾದ ಕಲಹದಿಂದ ಉಂಟಾದ ವೈಮನಸ್ಸು, ಘರ್ಷಣೆ. ಇವೆಲ್ಲವೂ ಮಹಿಳೆಯರ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರುತ್ತದೆ.

ನಗರದ ಮಹಿಳೆಯರಿಗೆ ದೊರೆಯುವ ಸೌಲಭ್ಯ ಸೌಕರ್ಯಗಳಿಂದ ಗ್ರಾಮೀಣ ಮಹಿಳೆಯರು ವಂಚಿತರು. ಶಿಕ್ಷಣವಿಲ್ಲದೆ ಅವಿದ್ಯಾವಂತ ಮಹಿಳೆಯರೇ ಹೆಚ್ಚಾಗಿರುವ ಗ್ರಾಮಗಳಲ್ಲಿ ಚರಂಡಿ ವ್ಯವಸ್ಥೆ ಇಲ್ಲದ ರಸ್ತೆಗಳು, ನೀರಿಲ್ಲದ ಮನೆಗಳು, ಶೌಚಾಲಯದ ವ್ಯವಸ್ಥೆ ಇಲ್ಲದೆ ಹೆಂಗಸರ, ಮಕ್ಕಳ ಪರದಾಟ ಹೇಳಲಾಗದು. ತಮ್ಮ ನಿತ್ಯ ಕರ್ಮಗಳನ್ನು ತೀರಿಸಲು ನಸುಕಿನಲ್ಲಿ ಮನೆಯಿಂದ ಹರಿದಾರಿ ದೂರ ಹೋಗಬೇಕಾದ ಪರಿಸ್ಥಿತಿ. ಇಂಥ ವಾತಾವರಣ ಅಥವಾ ಪರಿಸರದಲ್ಲಿ ಹೊರ ಜಗತ್ತನ್ನು ಕಾಣದ ಮಹಿಳೆಯರಲ್ಲಿರುವ ಬುದ್ಧಿವಂತಿಕೆ ಪ್ರತಿಭೆ ವಿಕಾಸವಾಗಲು ಅವಕಾಶವಿಲ್ಲದೆ ಅಲ್ಲಿಯೆ ಮುರುಟಿ ಹೋಗುತ್ತಿವೆ. ಇತ್ತೀಚೆಗೆ ಗ್ರಾಮಗಳಲ್ಲಿ ಟಿ.ವಿ ಮಾಧ್ಯಮಗಳು ಕಾಲಿರಿಸಿದ್ದು ತಮ್ಮ ಅಲ್ಪಸ್ವಲ್ಪ ಬಿಡುವಿನ ವೇಳೆಯನ್ನು ಧಾರಾವಾಹಿಗಳಲ್ಲಿ ಬರುವ ಹೆಣ್ಣಿನ ಕಣ್ಣೀರಿನ ನೋವಿನ ವೀಕ್ಷಣೆಯಲ್ಲಿ ಕಳೆದು ಬಿಡುತ್ತಿದ್ದಾರೆ.

ಗ್ರಾಮಗಳಲ್ಲಿ ಬತ್ತದ ಬೇಸಾಯ, ಅಡಿಕೆ, ತೆಂಗು, ಏಲಕ್ಕಿ ಇವು ಮಲೆನಾಡಿನ ಪ್ರದೇಶದ ಬೆಳೆಗಳಾದರು ಇಲ್ಲಿ ಎಲ್ಲಾ ಕೆಲಸಕ್ಕೆ ಕೂಲಿ ಆಳುಗಳು ಬೇಕು. ಅಂದರೆ ದಿನಗೂಲಿ ದುಡಿತದಲ್ಲಿ ಮಹಿಳೆಯರದೇ ಮೇಲುಗೈ. ಆದರೆ ಗಂಡಾಳುಗಳಿಗಿಂತ ಹೆಣ್ಣಾಳುಗಳಿಗೆ ಕೂಲಿ ಕಡಿಮೆ. ದುಡಿಮೆಗೆ ತಕ್ಕ ಪ್ರತಿಫಲ ವಿರುವುದಿಲ್ಲ. ಹೆಣ್ಣಾದರೂ ಹಾಲು ಮಾರುವ, ಮರಹತ್ತಿ ಹಣ್ಣು ಕಾಯಿಗಳನ್ನು ಕೊಯ್ಯುವ, ಮನೆಗೆ ಹೆಂಚು ಹೊದಿಸುವ ಕೆಲಸಗಳನ್ನು ಮಾಡಲು ಹಿಂಜರಿಯುವುದಿಲ್ಲ. ಉತ್ತರ ಕರ್ನಾಟಕದ ಕಡೆ ಹೊಲ ಉಳುವಾಗ ಎತ್ತುಗಳ ಬದಲಾಗಿ ಇಲ್ಲಿನ ಮಹಿಳೆಯರು ಒಂಟಿಯಾಗಿ ಅಥವಾ ಜೋಡಿಯಾಗಿ ನೊಗ ಹೊತ್ತು ಉಳುವುದನ್ನು ಕಣ್ಣಾರೆ ಕಂಡಿದ್ದೇವೆ. ದೈಹಿಕ ಶ್ರಮದಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚು ಶ್ರಮದ ಕೆಲಸ ನಿರ್ವಹಿಸುತ್ತಾರೆ. ಬೆಳಗಿನಿಂದ ಬೈಗಿನವರೆಗೆ, ಬಿಸಿಲು ಮಳೆ ಎನ್ನದೆ ದುಡಿಯುವ ಇವರ ಸಹನೆ ಶ್ರಮ ನೋಡಿದಾಗ ಅಸಹಾಯಕತೆಯ ಅರಿವಾಗಿ ಇದು ಅವರ ಬದುಕಿನ ದೈನಂದಿನ ಹೋರಾಟ ಎಂದು ಮನಸ್ಸು ಖಿನ್ನವಾಗುತ್ತದೆ.

ಇಷ್ಟೆಲ್ಲಾ ಕಷ್ಟಗಳನ್ನು ತನ್ನ ಕುಟುಂಬದ ಒಳಿತಿಗಾಗಿ ಬದುಕಿಗಾಗಿ ಒಳಗೆ ಹೊರಗೆ ದುಡಿದು ಅತ್ತೆ, ಮಾವ, ಗಂಡ, ಮಕ್ಕಳ ಪೋಷಣೆಯಲ್ಲಿ ತನ್ನ ಜವಾಬ್ದಾರಿಯನ್ನು ಹೊತ್ತು ರಕ್ಷಣೆ ಮಾಡುವ ಪತ್ನಿಯ ವಿಷಯದಲ್ಲಿ ಪ್ರೀತಿ, ಗೌರವ, ಅನುಕಂಪ ತೋರಿಸದ ಪತಿ ಇಲ್ಲಿ ನಿರ್ಲಿಪ್ತ. ಗ್ರಾಮಗಳಲ್ಲಿ ಮಾತ್ರವಲ್ಲ ನಗರದಲ್ಲಿ ನಾಗರಿಕತೆ ತಿಳಿದಿರುವ ಶ್ರೀಮಂತ, ಮಧ್ಯಮ ವರ್ಗದ ಕುಟುಂಬಗಳಲ್ಲಿ ಹೆಣ್ಣಿನ ಬಗ್ಗೆ ಒಂದು ರೀತಿಯ ಅಸಡ್ಡೆ ವ್ಯಕ್ತಪಡಿಸುವುದನ್ನು ಕಾಣಬಹುದು. ಹೆಣ್ಣು ಅಥವಾ ಹೆಂಡತಿ ಆಳಲ್ಲ; ಮನೆಯೊಡತಿ ಎಂಬ ಪ್ರೀತಿ ವಿಶ್ವಾಸ ತೋರಿಸುವ ಪುರುಷರು ಬೆರಳೆಣಿಕೆಯಲ್ಲಿ ಸಿಗಬಹುದು.

ಇಷ್ಟೆಲ್ಲಾ ಹಿಂಸೆ, ನೋವು, ಸಂಕಟ, ಕಷ್ಟಗಳನ್ನು ಅನುಭವಿಸುತ್ತಿರುವ ಗ್ರಾಮೀಣ ಮಹಿಳೆಯರ ಜೀವನ ಸುಧಾರಿಸಲು ನಗರದ ನಾಗರಿಕ, ವಿದ್ಯಾವಂತ ಮಹಿಳೆಯರು ಸಂಘ, ಸಂಸ್ಥೆಗಳನ್ನು ಕಟ್ಟಿಕೊಂಡು ನೊಂದ ಹೆಣ್ಣು ಮಕ್ಕಳಿಗಾಗಿ ಸರ್ಕಾರದಲ್ಲಿ ಹೋರಾಡುತ್ತಾರೆ. ಅವರು ಹಿಂದುಳಿದ ಗ್ರಾಮಗಳ ಮಹಿಳೆಯರನ್ನು ಸಂದರ್ಶಿಸಿ ಅವರನ್ನು ನೈರ್ಮಲ್ಯ, ಸ್ವಚ್ಛತೆಯ ಬಗ್ಗೆ ತಿಳುವಳಿಕೆ ಮೂಡಿಸಬೇಕು. ಪುರುಷರೂ ಅರಿತು ಅನುಸರಿಸುವಂತೆ ಪ್ರೋತ್ಸಾಹ ಕೊಡಬೇಕು. ಕ್ರಮೇಣ ಶಿಕ್ಷಣದ ಕಡೇ ಅವರ ಗಮನ ಸೆಳೆಯಬೇಕು. ಶಿಕ್ಷಣದ ಪ್ರಯೋಜನದಿಂದ ಉಂಟಾಗುವ ಪ್ರಯೋಜನಗಳನ್ನು ತಿಳಿಸಬೇಕು. ಸಹಿ ಮಾಡುವುದನ್ನು ಕಲಿಯುವುದೇ ಶಿಕ್ಷಣವಲ್ಲ. ಶಿಕ್ಷಣಕ್ಕಾಗಿ ತಮ್ಮ ಬಿಡುವಿಲ್ಲದ ಕೆಲಸದಲ್ಲಿ ಸ್ವಲ್ಪ ಒಂದೆರಡು ಗಂಟೆಗಳ ಕಾಲ ಬಿಡುವು ಮಾಡಿಕೊಂಡು ಕಲಿಯುವಂತೆ ಮನ ಒಲಿಸಬೇಕು. ನಮಗ್ಯಾಕೆ ಓದು ಬರಹ ಎಂದು ಹಿಂದೆ ಸರಿಯುವವರೆ ಹೆಚ್ಚು. ಮತ್ತೆ ಕೆಲವರು ತಮ್ಮ ಮಕ್ಕಳು ಕಲಿಯಲು ಹೋಗುತ್ತಿದ್ದಾರೆ. ನಮಗೆ ಬೇರೆ ಯಾಕೆಂದು ನೆಪಹೇಳಿ ಜಾರಿಕೊಳ್ಳುತ್ತಾರೆ. ಕಲಿಯುತ್ತಿರುವ ಮಕ್ಕಳು ಸ್ವಲ್ಪ ಬೆಳೆದರೆ ಸಾಕು ಶಾಲೆ ಬಿಡಿಸಿ ಕುರಿ, ದನ ಕಾಯಲು ಕಳಿಸುತ್ತಾರೆ. ಹೆಣ್ಣು ಮಕ್ಕಳನ್ನು ಚಿಕ್ಕವಯಸ್ಸಿನಲ್ಲಿಯೆ ಮದುವೆ ಮಾಡಿ ಜವಾಬ್ದಾರಿ ಕಳೆದುಕೊಳ್ಳುತ್ತಾರೆ. ಸ್ಥಿತಿವಂತ ವರನಾಗಿ ವಿವಾಹದ ವಯಸ್ಸು ಮೀರಿದ್ದರು ಮಗಳು ಸುಖವಾಗಿರುತ್ತಾಳೆಂದು ಮದುವೆ ಮಾಡಿಬಿಡುತ್ತಾರೆ. ಹೆಚ್ಚು ಕಡಿಮೆ ಆದಾಗ ತಮ್ಮ ಕರ್ಮ, ಹಣೆ ಬರಹ, ವಿಧಿ ಎಂದು ಮೇಲೆ ಕೈ ಮುಗಿಯುತ್ತಾರೆ.

ಸ್ತ್ರೀಗೆ ಶಿಕ್ಷಣ ಬೇಕು. ಇತ್ತೀಚೆಗೆ ಪ್ರತಿ ಗ್ರಾಮಗಳಲ್ಲಿಯೂ ಶಾಲೆ ತೆರೆಯಲಾಗಿದೆ. ಆದರೆ ಶಾಲೆಗೆ ಹೋಗುವವರು ಮಧ್ಯಮ ವರ್ಗದ ಮತ್ತು ಸ್ಥಿತಿವಂತರ ಮಕ್ಕಳು. ಅದರಲ್ಲೂ ಕೆಲವು ಮಕ್ಕಳು

ಏನೂ ಕೆಲಸವಿಲ್ಲದಾಗ ಶಾಲೆಗೆ ಬಂದು ಕೂಡುತ್ತವೆ. ಇತ್ತೀಚೆಗೆ ಸರ್ಕಾರ ಮಧ್ಯಾಹ್ನದ ಊಟದ ವ್ಯವಸ್ಥೆ ಮಾಡಿರುವುದರಿಂದ ತೀರ ದುರ್ಬಲ ವರ್ಗದವರ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಮುದಿ ವಯಸ್ಸಿನಲ್ಲಿ ತಮ್ಮನ್ನು ಸಾಕುವರೆಂಬ ನಂಬಿಕೆಯಿಂದ ಗಂಡುಮಕ್ಕಳಿಗೆ ತಂದೆ ತಾಯಿ ವಿದ್ಯೆ ಕಲಿಯುಲು ಅವಕಾಶ ಕೊಡುತ್ತಾರೆ. ಆದರೆ ಅದೇ ಹೆಣ್ಣು ಮಕ್ಕಳು ಕಂಡವರ ಮನೆಗೆ ಹೋಗುತ್ತಾಳೆ. ಅವಳಿಗೆ ಮನೆಕೆಲಸ, ಅಡಿಗೆ ಮಾಡುವುದು, ಮಕ್ಕಳನ್ನು ಸುಧಾರಿಸುವುದು ಕಲಿತರೆ ಸಾಕೆನ್ನುತ್ತಾರೆ: ಹೆಣ್ಣು ಮಕ್ಕಳಿಗೇಕೆ ವಿದ್ಯೆ ಎಂದು ತಾತ್ಸಾರ ಮಾಡುತ್ತಾರೆ. ಪ್ರತಿಯೊಬ್ಬ ಮಕ್ಕಳು ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣದವರೆಗಾದರೂ ಕಲಿಯಲೇಬೇಕು ಎಂಬ ಸರ್ಕಾರದ ಘೋಷಣೆ. ಈಗಲೂ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದು ಕಡಿಮೆ. ಅದರೆ ಹಳ್ಳಿಯಿಂದ ಬಂದು ನಗರದಲ್ಲಿ ನೆಲಸಿರುವ ದಂಪತಿಗಳು ಮನೆ ಕೆಲಸ, ಕೂಲಿ ಕೆಲಸ ಮಾಡುತ್ತಿದ್ದರೂ ತಮ್ಮ ಹಾಗೆ ತಮ್ಮ ಮಕ್ಕಳು ಅವಿದ್ಯಾವಂತರು ಆಗಬಾರದೆಂದು ಹೇಳುತ್ತಾ ಶಾಲೆಗೆ ಕಳಿಸುತ್ತಿದ್ದಾರೆ. ಆ ರೀತಿ ಗ್ರಾಮೀಣ ದಂಪತಿಗಳು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವ ಬಗ್ಗೆ ನಿರ್ಧಾರಕ್ಕೆ ಬರಬೇಕು.

ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿ ಬೆಳೆಯುತ್ತಿರುವ ಹೆಣ್ಣು ಮಕ್ಕಳಿಗೆ ಬಾಲ್ಯದ ಆಟ ಪಾಠದ ಕಲ್ಪನೆ ಇಲ್ಲವೆಂದೇ ಹೇಳಬೇಕು. ತಾಯಿಗೆ ಮೊದಲ ಮಗಳಾಗಿ ಹುಟ್ಟಿದರಂತು ಮುಗಿಯಿತು. ತಾಯಿಯ ಕೆಲಸದಲ್ಲಿ ಭಾಗಿಯಾಗಿ ಅವಳ ನೆರವಿಗೆ ಹೋಗಬೇಕು. ತಾಯಿಯ ನೋವು, ದುಃಖದಲ್ಲಿ ಸಹಭಾಗಿ ಯಾಗುತ್ತಾ, ತಾಯಿಯ ಬಸಿರು, ಬಾಣಂತನ, ರೋಗ ರುಜಿನಗಳ ನಡುವೆ, ತನಗಿಂತ ಕಿರಿಯರನ್ನು ನೋಡಿಕೊಳ್ಳುವ ಕೆಲಸ ವಹಿಸಿಕೊಳ್ಳಬೇಕು. ೮-೧೦ ವಯಸ್ಸಿನ ಹೆಣ್ಣು ಮಗು ಅಡುಗೆ ಮಾಡುವ, ಸೌದೆ, ಹುಲ್ಲು, ಸೊಪ್ಪುಸದೆ ತರುವ ಕೆಲಸ ಮಾಡುತ್ತವೆ. ಆನಂತರ ಹೊರಗೆ ದುಡಿಯುವ ಕೆಲಸ, ಕೆಲಸ ಮಾಡಿಯೂ ಬೈಗಳು ಕೆಲವು ಸಾರಿ ತಪ್ಪಿಲ್ಲದೆ ಹೊಡೆತ ತಿನ್ನುವ ಪರಿಸ್ಥಿತಿಯಲ್ಲಿ ಹೆದರಿ ಬಾಯಿ ಬಿಡಲಾಗದೆ ನೊಂದವಳು, ಲೈಂಗಿಕ ಕಿರುಕುಳಕ್ಕೂ ಸಿಕ್ಕಿ ನರಳುವ ಹೆಣ್ಣು ಮಕ್ಕಳ ಮಾನಸಿಕತೆಯ ಬಗ್ಗೆ ಕೇಳುವರಾರು ? ಇಂತಹ ಕ್ರೌರ್ಯವನ್ನು ಅನುಭವಿಸುತ್ತಾ ಬದುಕುವ ಹೆಣ್ಣು ಮಕ್ಕಳ ಸ್ಥಿತಿಗತಿಯನ್ನು ಯೋಚಿಸಬೇಕಾಗುತ್ತದೆ.

ಗ್ರಾಮೀಣ ಮಹಿಳೆಯರಲ್ಲಿ ಹೊಸ ರೀತಿಯ ಜಾಗೃತಿ ಅತಿ ಅವಶ್ಯಕ. ಕುಟುಂಬದ ಹಿತ ಸಾಧನೆಯ ಮಾರ್ಗ ದೇಶದ ಹಿತ ಸಾಧಿಸುವುದಕ್ಕೆ ಮುಖ್ಯವಾಗುತ್ತದೆ. ಕುಟುಂಬ ಶಾಂತಿ ನೆಮ್ಮದಿಯಿಂದ ಇರಲು ದೈಹಿಕ, ಮಾನಸಿಕ, ವೈವಾಹಿಕ ಜೀವನದ ಜೊತೆ ಆರೋಗ್ಯವೂ ಮುಖ್ಯ. ಅವರ ನಿಜವಾದ ಸಮಸ್ಯೆಗಳನ್ನು ಪರಿಶೀಲಿಸಿ ಸೂಕ್ತ ಪರಿಹಾರದ ಮಾರ್ಗಕಂಡು ಕೊಂಡಾಗ ಮಾತ್ರ ಅವರ ಏಳಿಗೆ ಸಾಧ್ಯವಾಗಬಲ್ಲದು. ಇಂತಹ ಮುಖ್ಯ ಪರಿಹಾರ, ಜಾಗೃತಿ ಮೂಡಿಸಲು ಹೊರಗಿನಿಂದ ಬಂದ ಸಂಘ ಸಂಸ್ಥೆಗಳು ಎಷ್ಟು ದಿನ ಅವರೊಡನಿದ್ದು ಮಾರ್ಗದರ್ಶನ ನೀಡಬಲ್ಲರು ? ಆದ್ದರಿಂದ ಅವರುಗಳ ನೇತೃತ್ವದಲ್ಲಿ ಈ ಎಲ್ಲಾ ಮಹಿಳೆಯರು ಒಂದೆಡೆ ಕಲೆತು ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸಬೇಕು. ತಮ್ಮಲ್ಲಿಯೆ ಒಬ್ಬರು ಮುಂದಾಳತ್ವ ವಹಿಸಿಕೊಂಡು ಧೈರ್ಯ ಮತ್ತು ಆತ್ಮವಿಶ್ವಾಸ ದಿಂದ ಹೋರಾಡಲು ಸಿದ್ಧರಾಗಬೇಕು. ಅಂತಹುದೇ ಈಗ ಗ್ರಾಮ ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ಸೊಸೈಟಿ, ಮಹಿಳಾ ಅಭಿವೃದ್ಧಿ ಮುಂತಾದ ಸಂಘ ಸಂಸ್ಥೆಗಳ ಮೂಲಕ ಮಹಿಳೆಯ ಅಭಿವೃದ್ಧಿಗೆ ಕೆಲಸ ಮಾಡಬೇಕಾಗುತ್ತದೆ.

ಮೊದಲಿಗೆ ಸ್ತ್ರೀ ಶಿಕ್ಷಣದ ಬಗ್ಗೆ ಗಮನಹರಿಸಬೇಕು. ಸಾಕ್ಷರತೆಯ ಮತ್ತು ಶಾಲೆಗಳ ಮೂಲಕ ಕಲಿಯುವುದು ಬಹಳ ಮುಖ್ಯ. ಗ್ರಾಮೀಣ ಹೆಣ್ಣು ಮಕ್ಕಳು ಕಾಲೇಜು ಕಲಿಯುವ ಅನಿವಾರ್ಯತೆ ಇಲ್ಲವಾದರೂ ಕುಟುಂಬದ ಹಿತಾಸಕ್ತಿ, ಸಾಮಾಜಿಕ ಶುಚಿತ್ವ, ಪರಿಶುದ್ಧ ನಡತೆ, ಪ್ರಾಮಾಣಿಕತೆ, ಶುಚಿ-ರುಚಿಯ ಆಹಾರ ತಯಾರಿಕೆ, ಉಳಿತಾಯದಿಂದಾಗುವ ಪ್ರಯೋಜನ, ಆರೋಗ್ಯದ ಬಗ್ಗೆ ತಿಳುವಳಿಕೆ, ಹಿರಿಯರನ್ನು ಗೌರವಿಸುವ, ಕಿರಿಯರನ್ನು ಪ್ರೀತಿಯಿಂದ ನಡೆಸಿಕೊಳ್ಳುವ, ಅತಿಥಿಗಳ ಯೋಗಕ್ಷೇಮ, ಪರಸ್ಪರಲ್ಲಿ ನಂಬಿಕೆ, ಹೊಂದಿಕೊಳ್ಳುವಿಕೆ ಈ ಎಲ್ಲವೂ ಶಿಕ್ಷಣದ ಒಂದು ಭಾಗವಾಗಿ ಪರಿಣಾಮ ಬೀರುತ್ತದೆ.

ಇನ್ನು ಗ್ರಾಮಗಳ ಆರ್ಥಿಕತೆಯ ಬಗ್ಗೆ ಯೋಚಿಸೋಣ. ಗ್ರಾಮಗಳಲ್ಲಿ ಬೆಳೆಯುವ ತರಕಾರಿ, ಹಣ್ಣು, ಹಂಪಲು, ಹಾಲು, ಹೈನುಗಳನ್ನು ವಿತರಣೆ ಮಾಡುವ ವ್ಯವಸ್ಥೆ ಆಗಬೇಕು. ಇವುಗಳು ಕೆಡದಂತೆ ರಕ್ಷಿಸಲು ಶೈತ್ಯಾಗಾರಗಳು ಬೇಕು. ಈ ಶೈತ್ಯಾ ಗಾರಗಳನ್ನು ಒಂದೊಂದು ಗ್ರಾಮದಲ್ಲಿಯೂ ವ್ಯವಸ್ಥೆ ಮಾಡಲು

ಸಾಧ್ಯವಿರುವುದಿಲ್ಲ. ನಾಲ್ಕಾರು ಗ್ರಾಮಗಳಿಗೆ ನಡುವಿರುವ ಒಂದು ಗ್ರಾಮವನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಕಟ್ಟಿಸಿದ ಶೈತ್ಯಾಗಾರದ ಪ್ರಯೋಜನವನ್ನು ಸುತ್ತ ಮುತ್ತಲ ರೈತರು ಪ್ರಯೋಜನ ಪಡೆಯಬಹುದು.

ಇವಲ್ಲದೆ ಗ್ರಾಮಗಳಲ್ಲಿ ಬೇರೆ ಉದ್ಯೋಗಗಳು, ಉದ್ಯಮಗಳು ಸಾವಿರದಷ್ಟಿವೆ. ಕೆಲವು ಉದ್ಯಮಗಳಿಗೆ ಬೇಕಾಗುವ ಕಚ್ಚಾ ವಸ್ತುಗಳನ್ನು ಸಂಘ ಸಂಸ್ಥೆಗಳು ಒದಗಿಸಿಕೊಡುವಂತಾಗ ಬೇಕು. ಕಸವನ್ನು ರಸವನ್ನಾಗಿ ಮಾಡುವ ಉದ್ಯಮಗಳು ಬೆಳೆಯಬೇಕು. ಯಾವ ವಸ್ತುವಿಗೆ ಹೆಚ್ಚು ಬೇಡಿಕೆ ಇದೆ. ಎಂತಹ ವಸ್ತುವನ್ನು ಬಯಸುತ್ತಾರೆ ಎಂಬುದನ್ನು ಗಮನಿಸುತ್ತಿರಬೇಕು. ಹಲವಾರು ಬಗೆಯ ಚಟ್ನಿಪುಡಿ, ವಿವಿಧ ಹಪ್ಪಳ, ಉಪ್ಪಿನಕಾಯಿ, ಸಂಡಿಗೆ, ಶಾವಿಗೆ ಮುಂತಾದ ಪದಾರ್ಥಗಳು ವಿದೇಶಿ ಮಾರುಕಟ್ಟೆ ಯಲ್ಲಿ ಹೆಚ್ಚು ಬೇಡಿಕೆ ಇದೆ. ಅಲ್ಲದೆ ನಮ್ಮ ನಗರ ಜೀವನದ ಮಹಿಳೆಯರು ಹೊರಗೆ ಹೋಗಿ ದುಡಿಯುವುದರಿಂದ ತಾವೇ ತಯಾರಿಸಿಕೊಳ್ಳಲು ಸಮಯದ ಅಭಾವದಿಂದ ಸಾಧ್ಯ ವಾಗುವುದಿಲ್ಲ. ಸಿದ್ಧ ಆಹಾರ ಪದಾರ್ಥಗಳು ಅವರ ನೆರವಿಗೆ ಬರುತ್ತವೆ. ವಿದೇಶಗಳ ಮತ್ತು ದುಡಿಯುವ ಮಹಿಳೆಯರನ್ನು ಗಮನದಲ್ಲಿರಿಸಿಕೊಂಡು ತಯಾರಿಸುವ ವಸ್ತುಗಳನ್ನು ಗ್ರಾಮ ಸಂಘಗಳ ಮೂಲಕ ವ್ಯವಸ್ಥಿತವಾಗಿ ನಡೆಸಬೇಕು. ಈ ರೀತಿಯ ವ್ಯವಹಾರ ಆರ್ಥಿಕ ನೆರವನ್ನು ನೀಡುವುದರ ಜೊತೆ ಮಹಿಳೆಯರಿಗೆ ಆತ್ಮವಿಶ್ವಾಸ ಬೆಳೆಯುತ್ತದೆ. ಇಲ್ಲಿ ಗಂಡಸರ ನೆರವನ್ನು ಪಡೆದುಕೊಳ್ಳಲು ಸಾಧ್ಯವಿದ್ದು ಅವರಿಗೂ ದುಡಿಮೆಯಲ್ಲಿ ಆಸಕ್ತಿ ಮೂಡಿಸಬಹುದು. ಇದಲ್ಲದೆ ದುಡಿಮೆಯನ್ನು ಮುಂದುವರಿಸುತ್ತಾ ಹೇಳುವುದಾದರೆ ಮಹಿಳೆ ತನ್ನ ಬಿಡುವಿನ ವೇಳೆಯನ್ನು ವ್ಯರ್ಥಮಾಡಿಕೊಳ್ಳದೆ ತಮ್ಮಲ್ಲಿ ದೊರೆಯಬಹುದಾದ ಸೊಪ್ಪು, ಸದೆ, ತರಗೆಲೆ, ಸಗಣಿ, ಗಂಜಲ, ಕುರಿ, ಕೋಳಿ, ಕಸ, ಬೇಡವಾದ ಎಲ್ಲಾ ವಸ್ತುಗಳನ್ನು ಒಂದು ಕಡೆ ಸಂಗ್ರಹಿಸಿ ಉತ್ತಮ ಸಾವಯವ ಗೊಬ್ಬರವನ್ನಾಗಿ ತಯಾರಿಸಿಕೊಳ್ಳಬಹುದು. ನಗರಗಳಿಂದ ಅಥವಾ ಮಾರು ಕಟ್ಟೆಯಿಂದ ತರುವ ರಾಸಾಯನಿಕ ಗೊಬ್ಬರಕ್ಕಿಂತ ಹೆಚ್ಚು ಉಪಯುಕ್ತ.

ಗ್ರಾಮ ನೈರ್ಮಲ್ಯದ ಕಡೆ ಗಮನಕೊಡುವ ಅಗತ್ಯವಿದೆ. ಒಟ್ಟರೆ ಗ್ರಾಮಗಳಲ್ಲಿ ಶೌಚಾಲಯಗಳಿಲ್ಲದೆ ಹೆಂಗಸರು ಮಕ್ಕಳು ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಳ್ಳಲು ಊರ ಹೊರಗಿನ ಹೊಲ, ಗದ್ದೆ, ತೋಟ, ಕೆರೆ ಕುಂಟೆಗಳನ್ನು ಆಶ್ರಯಿಸ ಬೇಕಾಗುತ್ತದೆ. ಅಲ್ಲದೆ ಬಚ್ಚಲ ನೀರು ಹೊರಗೆ ಹರಿದು ಬಂದು ನಿಂತು ಕೊಳೆತುನಾರುತ್ತದೆ. ಇದರಿಂದ ರೋಗ ರುಜಿನಗಳಿಗೆ ಆಹ್ವಾನ ಕೊಟ್ಟಂತಾಗುತ್ತದೆ. ನೀರು ಸರಾಗವಾಗಿ ಹರಿದು ಹೋಗಲು ಕಾಲುವೆಯಂತೆ ಮಾಡಿ ಅದರ ಮೂಲಕ ಬಳಸಿದ ನೀರನ್ನು ತೋಟ, ತುಡಿಕೆಗಳಿಗೆ ಅಥವಾ ತರಕಾರಿ ಬೆಳೆಯಲು ಬಳಸಿಕೊಳ್ಳಬಹುದು. ಸ್ವಚ್ಛತೆಗೆ ಸ್ವಚ್ಛತೆಯ ಜೊತೆ ಉತ್ತಮ ತರಕಾರಿ ಬಳಕೆಗೆ ಸಿಗುತ್ತದೆ. ಶೌಚಾಲಯಗಳಿಗಾಗಿ ಮನೆಯಿಂದ ಸ್ವಲ್ಪ ದೂರದಲ್ಲಿ ಒಂದು ದೊಡ್ಡ ಗುಂಡಿಯನ್ನು ತೋಡಿ ಬಹಿರ್ದೆಸೆಗೆ ಬಳಸಿಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳಬೇಕು. ಮಲಮೂತ್ರ ವಿಸರ್ಜನೆಯ ನಂತರ ಅರ್ಧ ಬುಟ್ಟಿಯಷ್ಟು ಮಣ್ಣು ಅಥವಾ ಸೊಪ್ಪು ಸದೆ ಹಾಕಿ ಬರುವುದರಿಂದ ಸೊಳ್ಳೆ, ನೊಣಗಳ ಹಾವಳಿ ಇಲ್ಲದೆ ಇರಬಹುದು. ಅಲ್ಲದೆ ಈ ಗುಂಡಿ ತುಂಬಿದ ನಂತರ ಮೇಲೆ ಅಗಲವಾದ ಹಲಗೆ ಅಥವಾ ಕಲ್ಲು ಚಪ್ಪಡಿಯನ್ನು ಮುಚ್ಚಿ ಅದೇ ರೀತಿ ಮತ್ತೊಂದು ಗುಡಿಯನ್ನು ನಿರ್ಮಿಸಿ ಕೊಳ್ಳಬೇಕು. ೬-೮ ತಿಂಗಳ ನಂತರ ಆ ಗೊಬ್ಬರದ ಉಪಯೋಗ ಮಾಡಿಕೊಳ್ಳಬಹುದು. ಇದರಿಂದ ಪರಿಸರದ ಪ್ರಜ್ಞೆಯೊಂದಿಗೆ ಗ್ರಾಮ ನೈರ್ಮಲ್ಯಕ್ಕೂ ಗಮನಕೊಟ್ಟಂತೆ ಆಗುತ್ತದೆ.

ಭಾರತೀಯ ಸಂಸ್ಕೃತಿಯ ಬಗ್ಗೆ ದೇಶ ವಿದೇಶಗಳಲ್ಲಿ ಹೆಚ್ಚು ಗೌರವದ ಸ್ಥಾನ ಪಡೆದಿದೆ. ಆದರೆ ನಗರಗಳಲ್ಲಿ ನಮ್ಮದಲ್ಲದ ವಿದೇಶಿ ಸಂಸ್ಕೃತಿ ಮತ್ತು ನಾಗರಿಕತೆಗೆ ಮಾರುಹೋಗಿದ್ದಾರೆ. ಹೆಣ್ಣಿಗೆ ಭೂಷಣವಾದ ಹಣೆಯ ಕುಂಕುಮ, ಮುಡಿಯ ಹೂವು, ಕೈಯ ಬಳೆಗಳು ಕಾಣೆಯಾಗಿವೆ. ದೇವರಿಗೆ ಎರಡೂ ಕೈ ಜೋಡಿಸಿ ಮುಗಿಯುವ ಹಾಗೂ ದೀರ್ಘದಂಡ ನಮಸ್ಕಾರ ಮಾಡುವ ಪದ್ಧತಿ ಮಕ್ಕಳಿಂದ ಮರೆಯಾಗಿದೆ. ಅದಕ್ಕೆ ಬದಲಾಗಿ ಎರಡೂ ಭುಜ ಮುಟ್ಟಿ, ಅಂಗೈ, ಮುಂದಿನ ಬೆರಳುಗಳನ್ನು ಚುಂಬಿಸುವ ಪರಿಪಾಠ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿಯೂ ಬೆಳೆಯುತ್ತಿದೆ. ಹಿಂದೆ ನಮ್ಮ ಗ್ರಾಮೀಣ ಮಹಿಳೆಯರು ಕೋಳಿ ಕೂಗುವುದಕ್ಕೆ ಮೊದಲೆ ಎದ್ದು ದಿನ ಅಥವಾ ವಾರಕ್ಕೆ ಬೇಕಾಗುವ ಹಿಟ್ಟನ್ನು ಬೀಸುವ ಕಲ್ಲಿನಿಂದ ಬೀಸಿ ಪಡೆಯುತ್ತಿದ್ದಳು. ಮನೆ ಮಂದಿ ಎಲ್ಲಾ ಸಕ್ಕರ ನಿದ್ರೆಯಲ್ಲಿರುವಾಗ ತಾನು ಬೀಸುವ ಕಲ್ಲಿನ

ಮುಂದೆ ಕುಳಿತು ಬೀಸುವಾಗ ಏಕತಾನತೆಯನ್ನು ಮರೆಯಲು ಜನಪದ ಹಾಡುಗಳನ್ನು

*'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಾಲಿ*
*ಎಳ್ಳು ಜೀರಿಗೆ ಬೆಳೆಯೋಳ*
*ಎಳ್ಳು ಜೀರಿಗೆ ಬೆಳೆಯೊಳ ಭೂತಾಯ*
*ಎದ್ದೊಂದು ಗಳಿಗೆ ನೆನೆದೇನು'*

ಹಾಡುತ್ತಿದ್ದಳು. ಮಕ್ಕಳಿಲ್ಲದವಳು ಬಂಜೆ ಎಂದು ಎಲ್ಲರೂ ಬೆರಳು ಮಾಡಿ ತೋರಿಸುತ್ತಾರೆ. ಆ ನೋವನ್ನು ಅನುಭವಿಸಿದ ತಾಯಿ 'ಮಕ್ಕಳಿಲ್ಲದ ಬಾಳು, ಬಾಳೆಯ ಹಾಸುಂಡು ಬೀಸಿ ಒಗೆದಾಂಗ, ಮಕ್ಕಳಿರಲವ್ವ ಮನೆ ತುಂಬ' ಈ ಹಾಡುಗಳು ಬೀಸುವ ಕಲ್ಲಿನ ಹಿಮ್ಮೇಳದ ಲಯದಲ್ಲಿ ಜೋಗುಳವಾಗಿರುತ್ತಿತ್ತು. (ಇದು ನನ್ನ ತಾಯಿ ಬೀಸುವಾಗ ಹಾಡುತ್ತಿದ್ದುದನ್ನು ಕೇಳುತ್ತಾ ನಿದ್ರೆಯಲ್ಲಿ ತೇಲಿಹೋದ ಅನುಭವ) ಇಂದು ಗ್ರಾಮಗಳಿಗೂ ಹಿಟ್ಟು ಬೀಸುವ ಗಿರಣಿಗಳು ಬಂದು ಅವಳ ದೈನಂದಿನ ಶ್ರಮ ಕಡಿಮೆಯಾಗಿದೆ. ಇದರಿಂದ ಸಮಯದ ಉಳಿತಾಯವೂ ಆಗುತ್ತದೆ. ಈ ಉಳಿದ ಸಮಯವನ್ನು ಸದುಪಯೋಗ ಪಡಿಸಿಕೊಂಡು ಗ್ರಾಮಗಳು ಭಾರತೀಯ ಸಂಸ್ಕೃತಿಯ ಪ್ರತೀಕಗಳಾಗಿ ಬೆಳೆಯಬೇಕು. ಗುಡಿ ಅಥವಾ ಚಾವಡಿಗಳಲ್ಲಿ ಮಹಿಳೆಯರು ಒಂದೆಡೆ ಸೇರಿ ಅಕ್ಷರಾಭ್ಯಾಸದಿಂದ ಓದು ತಮ್ಮ ತಮ್ಮ ನಡುವಿನ ಅಂತರವನ್ನು ವಿಚಾರ ವಿನಿಮಯದಿಂದ ಕಡಿಮೆ ಮಾಡಿಕೊಳ್ಳಬೇಕು. ಆಗ ಮಹಿಳೆಯರ ಸಮಷ್ಟಿ ಚಿಂತನೆಗೆ ಅವಕಾಶವಾಗುತ್ತದೆ. ತಮ್ಮ ಮುಂದಾಳತ್ವದಲ್ಲಿ ಗಂಡಸರು, ಯುವಕರ ನೆರವಿನಿಂದ ರಸ್ತೆ ಮಾಡಿಸುವ, ಕೊಳಚೆ ನೀರು ಸರಾಗವಾಗಿ ಹರಿದು ಹೋಗಲು ಚರಂಡಿ ಮಾಡಿಸುವ ಕೆಲಸದಿಂದ ಕಾಲದ ಹಾಗೂ ಸ್ವಚ್ಛತೆಯನ್ನು ಕಾಪಾಡಿಕೊಂಡಂತೆ ಆಗುತ್ತದೆ. ಇದಲ್ಲದೆ ತಮ್ಮ ಊರು, ಗ್ರಾಮಗಳಲ್ಲಿನ ಕೆರೆಯಲ್ಲಿ ತುಂಬಿರುವ ಹೂಳುಗಳನ್ನು ಸರ್ಕಾರದ ನೆರವಿಗೆ ಕಾಯದೆ ಹೆಚ್ಚು ನೀರಿನ ಸಂಗ್ರಹಣೆಗಾಗಿ ಮನೆಗೊಂದು ಆಳಿನಂತೆ ನಿಂತು ಮಾಡಬೇಕಾದ ಕೆಲಸ. ಇದರಿಂದ ನೀರಿನ ಬವಣೆ ತಪ್ಪಿ ಗ್ರಾಮದ ಹಿತರಕ್ಷಣೆ ಆಗುತ್ತದೆ. ಇಂತಹ ಕೆಲಸಗಳಿಂದ ಬೇರೆಯವರಿಗೆ ಮಾದರಿ ಗ್ರಾಮವಾಗಿ ಬೆಳೆಯುತ್ತದೆ. ಮಹಿಳೆ ಮನಸ್ಸು ಮಾಡಿದರೆ ಸಾಧಿಸಲಾಗದ ಯಾವ ಕೆಲಸವು ಕಾಣುವುದಿಲ್ಲ. ಗಾಂಧಿಜೀಯ ಕನಸು ನನಸಾಗುತ್ತದೆ. ಸರ್ಕಾರವು ಕಣ್ಣು ತೆರೆದು ಸಹಾಯ ಹಸ್ತ ನೀಡಬಹುದು. ಸಾಲದ ಹೊರೆಯಿಲ್ಲದೆ ನೆಮ್ಮದಿಯ ಬದುಕು ನಮ್ಮದಾಗುತ್ತದೆ.

❑

---

ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ ?
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ ?
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ ?
ಆಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ ?
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ
ಚೆನ್ನಮಲ್ಲಿಕಾರ್ಜುನಾ ?



ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ.
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ.
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ.
ನೆನಹಿಂಗೆ ಅರುಹಾಗಿ ಕಾಡಿತ್ತು ಮಾಯೆ.
ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ.
ಚೆನ್ನಮಲ್ಲಿಕಾರ್ಜುನಾ,
ನೀನೊಡ್ಡಿದ ಮಾಯೆಯನಾರಿಗೂ ಗೆಲಬಾರದು.

– ಅಕ್ಕಮಹಾದೇವಿ

# ಕಥಾಕಾಲಕ್ಷೇಪ - ಕಥಾಕೀರ್ತನ

- ಹುಲಿಕಲ್ ನಾಗರಾಜ *

ಕಥೆ ಹೇಳುವುದು ಒಂದು ಕಲೆ. ಕೇಳುವವರಿಂದ ಹೇಳುವವರಿಗೆ ಸ್ಫೂರ್ತಿ. ಹೇಳುವವರಿಂದ ಕೇಳುವವರಿಗೆ ಸಮಾಧಾನ. ವಿಚಾರ ಎಂಥದ್ದೇ ಆಗಿರಲಿ ರಸವತ್ತಾಗಿ ಬಣ್ಣಿಸಿ ಹೇಳುವುದರಿಂದ ಕೇಳುಗ ಭಾವುಕನಾಗುತ್ತಾನೆ. ಮನುಷ್ಯನ ಈ ಅಪೇಕ್ಷೆಯನ್ನು ತಣಿಸಲು ನಮ್ಮಲ್ಲಿ ಹಲವಾರು ಕಲಾ ಪ್ರಕಾರಗಳು ಹುಟ್ಟಿಕೊಂಡಿವೆ. ಆದಿಕವಿ ವಾಲ್ಮೀಕಿ ರಚಿಸಿದ ರಾಮಾಯಣವನ್ನು ಆದಿಗಮಕಿಗಳಾದ ಲವಕುಶರು ಹಾಡಿ ಶ್ರೀರಾಮಚಂದ್ರನನ್ನು ತಲೆದೂಗಿಸಿದರು. ಗಮಕಲೆಯ ತರುವಾಯ ಹುಟ್ಟಿದ ಕೀರ್ತನಕಲೆ ಮಹಾರಾಷ್ಟದ ಸಂತರ ಪ್ರಭಾವದಿಂದ ಬೆಳಕಿಗೆ ಬಂದು ಇಂದು ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಕೇರಳ ರಾಜ್ಯದಲ್ಲಿ ತನ್ನ ಕಂಪನ್ನು ಬೀರಿದೆ.

ಕೀರ್ತನ ಕಲೆ ಪೌರಾಣಿಕ ವಿಷಯಕ್ಕೆ ಸೀಮಿತವಾದುದ್ದಲ್ಲ. ಅಲ್ಲದೆ ಹರಿಕಥೆ ಎಂದು ಕರೆಸಿಕೊಳ್ಳುವ ಈ ಕಲೆ ಶಿವಕಥೆ, ಭಕ್ತರ ಕಥೆ, ಸಂತರ ಕಥೆ, ಜಿನ ಕಥೆ, ಬುದ್ಧ ಕಥೆ ಹಾಗೂ ಜಾನಪದದ ಸೊಗಡುಳ್ಳ ಕಥೆಗಳನ್ನು ಹೊಂದಿ ಒಟ್ಟಾರೆ ಕೀರ್ತನ ಕಲೆ ಎನಿಸಿಕೊಂಡಿದೆ. ಕೀರ್ತನ ಎಂದರೆ ಸ್ತುತಿಸು ಎಂಬ ಅರ್ಥವನ್ನು ಹೊಂದಿದ್ದರೂ ಕ್ರಮೇಣ ಹಿಗ್ಗಿ ಕೀರ್ತನ, ಸ್ತುತಿಯು ವಿಶೇಷಾರ್ಥವನ್ನು ಪಡೆದು ಹರಿಕಥೆ, ಕಥಾಕಲಾಕ್ಷೇಪ ಎಂಬ ಸಮಾನಾರ್ಥವನ್ನು ಪಡೆಯಿತು. ಶ್ರೀ ಕೇಶವದಾಸ್‌ಜೀಯವರು ಹೇಳಿದಂತೆ "ಸನಾತನ ಧರ್ಮ ಮತ್ತು ಸಂಸ್ಕೃತಿಯ ಪ್ರಚಾರದಲ್ಲಿ ಭಗವಂತನ ಗುಣಗಾನವನ್ನು ನವರಸಭರಿತವಾಗಿ ನಿರೂಪಿಸುವ ಕಥನ ಗೀತದ ಕಲಾಕೌಶಲ್ಯವೇ ಕಥಾಕೀರ್ತನ". ಈ ಕಲೆಯನ್ನು ನಿರ್ವಹಿಸುವ ಕಲಾವಿದರು ಹರಿದಾಸರು ಅಥವಾ ಕೀರ್ತನ ಕಾರರು.

ಸಾವಿರ ವರ್ಷಗಳ ಪ್ರಾಚೀನತೆಯಿರುವ ಕನ್ನಡ ಸಾಹಿತ್ಯದಲ್ಲಿ ಹರಿಕಥೆ ಪದದ ಬಳಕೆಯಾಗಲಿ ಪ್ರಚಾರವಾಗಲಿ ಇಲ್ಲವೆಂಬ ಮಾತು ಅಚ್ಚರಿ ಮೂಡಿಸುವಂತಹುದು. ಸಂಪ್ರದಾಯದ ಪ್ರಕಾರ ಪ್ರಹ್ಲಾದನೇ ಮೊದಲ ಹರಿಭಕ್ತನಾದರೆ ದೇವರ್ಷಿನಾರದರು ಹರಿದಾಸರಲ್ಲಿ ಮೊದಲಿಗರು. ಇಂದು ಈ ನಿಟ್ಟಿನಲ್ಲಿ ಕೀರ್ತನಕಲೆಯ ಅಭಿವ್ಯಕ್ತಿ ಮತ್ತು ದಾಸಸಾಹಿತ್ಯ, ಶರಣ ಸಾಹಿತ್ಯದ ಪಾತ್ರ ಎಷ್ಟು ಮಹತ್ವದೆಂದು ಹಲವಾರು ಕೀರ್ತನ ಕಾರರು ತಮ್ಮ ಕಥಾನಿರೂಪಣೆಯ ಮೂಲಕ ತೋರಿಸಿದ್ದಾರೆ.

ಭಾರತೀಯ ಸಾಹಿತ್ಯದಲ್ಲಿ ಒಂದು ಪ್ರಮುಖ ಸೆಲೆ ಭಕ್ತಿಯಸೆಲೆ. ವೇದಗಳಲ್ಲಿ ದೇವತಾಸ್ತುತಿ ಯಜ್ಞಯಾಗಾದಿಗಳ ಕ್ರಮವಿರುವಂತೆ ಉಪನಿಷತ್ತಿನಲ್ಲಿ ಭಕ್ತಿಯ ಎಳೆಯನ್ನು ಗಮನಿಸಬಹುದು.

*ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್*
*ತೇನತ್ಯಕ್ತೇನಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಮ್*

ಎಂಬುವಲ್ಲಿ ಈ ಜಗತ್ತು ಪರಮೇಶ್ವರನಿಂದ ಆವೃತವಾಗಿದೆ. ಪರಧನಕ್ಕೆ ಆಸೆಪಡದಿರು, ಎನ್ನುವಾಗ ಸಾರ್ವತ್ರಿಕ ಹಿತಸಾಧಿಸುವ ಕಳಕಳಿ ಎದ್ದು ಕಾಣಿಸುತ್ತದೆ. ಹೀಗೆ ಆಸ್ತೀಕ ಪರಂಪರೆಯಿಂದ ಮೂಡಿಬಂದ ಭಕ್ತಿ ಕ್ರಮೇಣ ಭಗವದ್ಗೀತೆಯಲ್ಲಿ ಭಕ್ತಿಯೋಗ ಎಂಬ ಅಧಿಕರಣವೇ ಆಯಿತು.

ಕೃಷ್ಣಪರಮಾತ್ಮನ ಗೀತಾವಾಕ್ಯ, ಶರಣರ ವಚನಗಳು, ಸಂತರ ನುಡಿಗಳು ದಾರ್ಶನಿಕರ ಆಣಿಮುತ್ತುಗಳು, ಕವಿಗಳ ಕೆಲವು ಪ್ರಮುಖ ನುಡಿಗಳು ಪೂರಕವಾಗಿ ಕೀರ್ತನ ಕಲೆಯನ್ನು ಉತ್ತುಂಗಕ್ಕೇರಿಸಿವೆ. ಹೀಗೆ ಪ್ರಾರಂಭದಲ್ಲಿ ವಿಷ್ಣು ಕತೆಯಾಗಿ ರೂಪುಗೊಂಡ ಕೀರ್ತನ ೧೯೧೫ ಸುಮಾರಿಗೆ ಶಿವನ, ಶಿವಭಕ್ತರ ಕಥೆಯನ್ನು ವಸ್ತುವಾಗಿ ಒಳಗೊಳ್ಳುವಷ್ಟು ಬೆಳೆದಿತ್ತು.

ಹರಿಕಥೆ ಏಕವ್ಯಕ್ತಿ ನಾಟಕರಂಗ. ನಾಟಕ ಕಲೆಯಂತೆಯೇ ಇದು ಒಂದು ಸಂಕೀರ್ಣಕಲೆ. ಈ ಕಲೆಯನ್ನು ನಿರ್ವಹಿಸು ವವರಿಗೆ ಅಪಾರಜ್ಞಾನ ಕಲೆಗಳ ಪರಿಚಯ ಅವಶ್ಯ, ಸಾಹಿತ್ಯಜ್ಞಾನ, ಶ್ರುತಿಜ್ಞಾನ, ಸಂಗೀತಜ್ಞಾನ, ಆಕರ್ಷಕವಾಗಿ ಕಥೆಯನ್ನು ಬೆಳೆಸುವ ಪ್ರೌಢಿಮೆ ಉಪಕಥೆಗಳಿಂದ ಶ್ರೋತೃಗಳನ್ನು ರಂಜಿಸುವ ಕುಶಲತೆ ಸ್ಪಷ್ಟ ಉಚ್ಚಾರಣೆ, ನಿರರ್ಗಳವಾದ ವಾಕ್‌ಚಾತುರ್ಯ.

*೧೦೪, ಹಳೆತಿಪ್ಪಸಂದ್ರ, ಎಚ್.ಎ.ಎಲ್. ೨ನೇ ಹಂತ, ಬೆಂಗಳೂರು-೮

ಸಾಂಪ್ರದಾಯಿಕ ವೇಷಭೂಷಣ ಹಿತಮಿತವಾದ ಹಾವಭಾವ ವಿನ್ಯಾಸ, ಸನ್ನಿವೇಶಕ್ಕೆ ತಕ್ಕ ರಸಾನುಭೂತಿಯನ್ನು ಅಳವಡಿಸಿಕೊಂಡು ಕಥೆ ನಿರೂಪಿಸುವ ನೈಪುಣ್ಯತೆ ಅವಶ್ಯ. ಪ್ರಸ್ತುತ ರಾಜಕೀಯ ವಿದ್ಯಮಾನಗಳನ್ನು ಸಾಮಾಜಿಕ ವಿಡಂಬನೆಗಳನ್ನು ಜೀವನ ಮೌಲ್ಯಗಳನ್ನು, ವಿಧಿ ವಿಧಾನಗಳನ್ನು ಮೇಳವಿಸಿ ಪುರಾಣ ವಸ್ತುವಿನೊಂದಿಗೆ ಸಮೀಕರಿಸಿ ಕೇಳುಗರನ್ನು ತನ್ನೆಡೆಗೆ ಎಳೆಯುವ ನಿಲುವು ಕೀರ್ತನಕಾರನಿಗಿರಬೇಕು.

ಕಥಾಕೀರ್ತನ ಕಲೆಯಲ್ಲಿ ಮುಂದುವರೆಯುತ್ತಿರುವ ಕೀರ್ತನಕಾರ ಒಂದು ಸಂಚಾರಿ ವಿಶ್ವವಿದ್ಯಾಲಯವಿದ್ದಂತೆ. ಸ್ವಾಮಿ ವಿವೇಕಾನಂದರು ಹೇಳುವಂತೆ *"ನಾನು ಅಕ್ಷರಜ್ಞಾನವಿಲ್ಲದವರನ್ನು ವಿದೇಶದಲ್ಲೂ ನೋಡಿದ್ದೇನೆ. ಇಲ್ಲಿಯೂ ನೋಡಿದ್ದೇವೆ. ಆದರೆ ಇಲ್ಲಿಯ ಜನರಲ್ಲಿ ಅಕ್ಷರ ಜ್ಞಾನವಿಲ್ಲದಿದ್ದರೂ ಇವರ ಹೃದಯವಂತಿಕೆ ಅಲ್ಲಿಯವರಿಗಿಂತ ಸಾವಿರಪಾಲು ಹೆಚ್ಚು ಇದಕ್ಕೆ ಕಾರಣ ನಮ್ಮ ಕೀರ್ತನಕಾರರು, ಹರಿಕಥಾದಾಸರೇ ಆಗಿದ್ದಾರೆಂದು ಅಭಿಪ್ರಾಯಪಟ್ಟಿದ್ದಾರೆ."*

ಜನಪದರಿಗೆ ಶಿಷ್ಟಕಲೆ, ಶಿಷ್ಟರಿಗೆ ಜನಪದ ಕಲೆಯಾಗಿ ಒಟ್ಟಿನಲ್ಲಿ ಇದೊಂದು ತ್ರಿಶಂಕು ಕಲೆಯಾಗಿದೆ. ಹರಿಕಥೆ ಮತ್ತು ಗಮಕ ಕಲೆಗಳೆರಡೂ ಅವಳಿ-ಜವಳಿ ಕಲೆಯಾಗಿರುವುದ ರಿಂದ ಅಲ್ಪಮಟ್ಟಿನ ಗಮಕಾಭ್ಯಾಸವು ಕೀರ್ತನಕಾರರಿಗೆ ಅವಶ್ಯ. ಈ ಕಲೆಯನ್ನು ಉಳಿಸಲು ಹೊಸಕೆರೆ ಚಿದಂಬರಯ್ಯನವರು ರಚಿಸಿದ ಕೀರ್ತನ ಕಂಠಾಭರಣ ಹೊತ್ತಿಗೆಯ ಕೀರ್ತನಕಾರರ ಆಕರ ಗ್ರಂಥಗಳಲ್ಲಿ ಸಂಗ್ರಹಯೋಗ್ಯವಾದುದ್ದು. ಆಸ್ಥಾನ ವಿದ್ವಾನ್ ಕೊಣನೂರು ಸೀತಾರಾಮಶಾಸ್ತ್ರಿಗಳು, ಮೈಸೂರು ಕೃಷ್ಣ ಶಾಸ್ತ್ರಿಗಳು ಪಂಡಿತ ಶಿವಮೂರ್ತಿಶಾಸ್ತ್ರಿಗಳು, ವೆಂಕೋಬ ದಾಸರು, ಸೊಸಲೆ ನಾರಾಯಣದಾಸರು, ಹರಿಹರಾನಂದ ಭಾರತೀಯರು. ಭದ್ರಗಿರಿ ಅಚ್ಯುತದಾಸರು, ಕೇಶವದಾಸರು ಸರ್ವೋತ್ತಮದಾಸರು, ಟಿ.ಕೆ. ವೇಣುಗೋಪಾಲ ದಾಸರು, ಗೋಪಿನಾಥ ದಾಸರು, ಅಲ್ಲದೆ ಉತ್ತರ ಕರ್ನಾಟಕದ ಕುರ್ತುಕೋಟಿ ಶ್ರೀಪಾದ ದಾಸರು, ಪಂಚಾಕ್ಷರಿ ಗವಾಯಿಗಳು, ಪುಟ್ಟರಾಜಗವಾಯಿಗಳು, ಆರ್. ಗುರುರಾಜುಲು ನಾಯ್ಡುರವರು ಈ ಮಹಾನ್ ಕೀರ್ತನಕಾರರು ತಮ್ಮ ಜೀವಿತಾವಧಿಯಲ್ಲಿ ಕೀರ್ತನ ಕಲೆಗೆ ತಮ್ಮನ್ನು ಮುಡುಪಾಗಿಟ್ಟುಕೊಂಡ ಚೇತನರು ಹಾಗೂ ಕೀರ್ತನ ಕಲೆಯ ಪ್ರಾಚಾರ್ಯರು.

ಇಂತಹ ಕೀರ್ತನಕಲೆ ಇಂದು ಮಾಧ್ಯಮಗಳ ಪ್ರಭಾವದಿಂದ ಹಿಂದೆ ಸರಿದಿದೆ. ಆದರೂ ತನ್ನ ಛಾಪನ್ನು ಅಲ್ಲಲ್ಲಿ ಉಳಿಸಿಕೊಂಡಿದೆ. ಸಮಾಜವನ್ನು ಶುದ್ಧೀಕರಿಸುವ ಕಾರ್ಯವನ್ನು ಹರಿಕಥಾ ಕ್ಷೇತ್ರಪಾಲಕರು ಮಾಡುತ್ತಲೇ ಬರುತ್ತಿದ್ದಾರೆ. ಭಗವದ್ಭಕ್ತಿ ಸಂಪ್ರದಾಯದ ಚೌಕಟ್ಟಿನಲ್ಲಿ ತಾವು ತಿಳಿಸಬೇಕೆಂದಿರುವ ವಿಷಯವನ್ನು ಸಮರ್ಥವಾಗಿ ಅಭಿವ್ಯಕ್ತಿಸಬಲ್ಲ ಹರಿದಾಸರು ಜನರಲ್ಲಿ ಎಲ್ಲ ತೆರನಾದ ಜಾಗೃತಿ ಮೂಡಿಸುವ ಸಂಭವ ಇನ್ನು ಕೆಲವು ದಿನಗಳಲ್ಲೇ ಕಂಡುಬರುತ್ತದೆ.

ಕಲೆಗೆ ಸಾವಿಲ್ಲ, ಕಲಾವಿದನಿಗೆ ಸುಖವಿಲ್ಲ ಎಂಬ ಇತ್ತೀಚಿನ ನಾಣ್ನುಡಿಗೆ ಅಪವಾದ ಎಂಬಂತೆ ಜಾತಿ ಮತ ಪಂಗಡ ಎಲ್ಲವನ್ನು ಮೀರಿ ಬೆಳೆದು ಕೀರ್ತನ ಕಲೆಯನ್ನು ಉತ್ತುಂಗಕ್ಕೇರಿಸುವ ಭಾವನೆ ಎಲ್ಲಾ ಕೀರ್ತನಕಾರರಲ್ಲಿ ಮೂಡಿದರೆ ಕೀರ್ತನಕಾರರು ಸಮಾಜಸುಧಾರಕರು ಎಂಬ ನುಡಿ ನಿಜವೆನಿಸುತ್ತದೆ.



---

ವೇಷದಲ್ಲಿ ಭಕ್ತನಾದಡೇನು,
ವೇಷದಲ್ಲಿ ಮಹೇಶನಾದಡೇನು, ಗುಣವಿಲ್ಲದನ್ನಕ್ಕರ ?
ಕ್ಷೀರಕ್ಕೂ ತಕ್ರಕ್ಕೂ ಭೇದವೇನುಂಟು ?
ರುಚಿಯಿಂದಲ್ಲದೆ ರೂಪದಿಂದವೆ ?
ಕಪಿಲಸಿದ್ಧಮಲ್ಲಿಕಾರ್ಜುನಾ.

★ ★ ★

ಕಸವ ಕೊಂಡು ಹೊಸ ಧ್ಯಾನವ ಕೊಟ್ಟಡೆ,
ಒಲ್ಲೆಂಬ ಚದುರರಾರು ?
ಜಲವ ಕೊಂಡು ಅಮೃತವ ಕೊಟ್ಟಡೆ,
ಒಲ್ಲೆಂಬ ಭಾಷೆಯದಾರದು ?
ಎನ್ನಂತರಂಗದ ಜ್ಞಾನವ ಕೊಂಡು
ಸುಜ್ಞಾನವಪ್ಪ ನಿಮ್ಮ ಕರತೇಜವ ಕೊಟ್ಟಡೆ,
ಒಲ್ಲೆನೆಂಬ ಪಾತಕಿ ಯಾರು ?
ಕಪಿಲಸಿದ್ಧಮಲ್ಲಿಕಾರ್ಜುನ ಮಡಿವಾಳ ತಂದೆ.

★ ★ ★

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು
ತಾ ಮಾಡಿದ ಹೆಣ್ಣು ತನ್ನ ತೊಡಯನೇರಿತ್ತು
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು
ಅದು ಕಾರಣ, ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಿಸಿಯಲ್ಲ;
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ !

– ಸಿದ್ಧರಾಮ



ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀ ಮ.ನಿ.ಪ್ರ
ಪರಮ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ
ಮಹಾಸ್ವಾಮಿಗಳವರ
ಪಟ್ಟಾಧಿಕಾರದ ರಜತ ಮಹೋತ್ಸವ
ಸಂದರ್ಭ ಸಂಚಿಕೆ

# ದೇಗುಲ ಸಂಪದ

## ಜಾಹಿರಾತು




GMR Power Corporation Private Limited


GMR Energy Limited


Vemagiri Power Generation Limited


GMR GROUP - Highway project in Andhra Pradesh and Tamil Nadu


Hyderabad International Airport Limited


GMR Industries Limited - Sugar Division


GMR Industries Limited - Ferro alloys Division


GMR Institute of Technology





ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರುಪಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವದ ಈ ಶುಭಸಂದರ್ಭದಲ್ಲಿ 'ದೇಗುಲ ಸಂಪದ' ಎಂಬ ನೆನಪಿನ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿರುವುದಕ್ಕೆ ವೀರಶೈವ ಪತ್ತಿನ ಸಹಕಾರ ಸಂಘ ನಿಯಮಿತ, ಚನ್ನಪಟ್ಟಣ ಇವರಿಂದ ಹಾರ್ದಿಕ ಶುಭಾಶಯಗಳು

# ವೀರಶೈವ ಪತ್ತಿನ ಸಹಕಾರ ಸಂಘ ನಿಯಮಿತ

## ಚನ್ನಪಟ್ಟಣ ತಾಲ್ಲೂಕು, ಚನ್ನಪಟ್ಟಣ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

### ದಿನಾಂಕ 28-02-2005 ಕ್ಕೆ ಇರುವಂತೆ ಪ್ರಗತಿನೋಟ

| | | |
|---|---|---|
| ಸದಸ್ಯರ ಸಂಖ್ಯೆ | : | 700 |
| ಪಾವತಿಯಾದ ಷೇರು ಬಂಡವಾಳ | : | 4,36,000 |
| ಕಾಯ್ದಿರಿಸಿದ ನಿಧಿಗಳು | : | 1,55,000 |

| ಠೇವಣಿಗಳು : | | | ದಿನಾಂಕ 10-05-03 ಜಾರಿಗೆ ಬಂದಂತೆ | | |
|---|---|---|---|---|---|
| 1) ಉಳಿತಾಯ ಠೇವಣಿ | : | 74,174 | 1 ದಿನದಿಂದ 45 ದಿನಗಳವರೆಗೆ | - | 5.5% |
| 2) ನಿತ್ಯನಿಧಿ ಠೇವಣಿ | : | 7,13,914 | 46 ದಿನದಿಂದ 90 ದಿನಗಳವರೆಗೆ | - | 6.5% |
| 3) ಸಂಚಿತ ಠೇವಣಿ | : | 13,350 | 91 ದಿನದಿಂದ 1 ವರ್ಷದವರೆಗೆ | - | 7.5% |
| 4) ನಗದುಪತ್ರ ಠೇವಣಿ | : | 8,65,500 | 1 ವರ್ಷದಿಂದ 3 ವರ್ಷದವರೆಗೆ | - | 8.5% |
| 5) ಕಾಯಂ ಠೇವಣಿ | : | 1,35,000 | 3 ವರ್ಷದಿಂದ 5 ವರ್ಷದವರೆಗೆ | - | 10.5% |

ಮೇಲ್ಕಂಡ ನಿಶ್ಚಿತ ಠೇವಣಿ ಮೇಲೆ ಬಡ್ಡಿಯನ್ನು ನೀಡಲಾಗುತ್ತದೆ.

ನಗದು ಪತ್ರ

ನೀವು ಸಂಘದಲ್ಲಿ ತೊಡಗಿಸಿದ ಹಣವು 7 ವರ್ಷಕ್ಕೆ ದ್ವಿಗುಣವಾಗುತ್ತದೆ ಮತ್ತು ಆಭರಣಗಳ ಸಾಲ 15% ರಂತೆ ದೊರೆಯುತ್ತದೆ. ಹಾಗೂ ನೀವು ತೊಡಗಿಸಿದ ಠೇವಣಿಗಳ ಮೇಲೆ ಸಾಲ ದೊರೆಯುತ್ತದೆ.

ಇತಿ ಕಾರ್ಯಕಾರಿ ಮಂಡಳಿ

### ನಿರ್ದೇಶಕ ಮಂಡಳಿ ಸದಸ್ಯರು

| | | | |
|---|---|---|---|
| ಬಿ. ಬಸವರಾಜು | ಅಧ್ಯಕ್ಷರು | ಹೆಚ್.ಎಸ್. ಕುಮಾರಸ್ವಾಮಿ | ನಿರ್ದೇಶಕರು |
| ಎಸ್.ಎಂ. ಬಸವರಾಜು | ನಿರ್ದೇಶಕರು | ಕೆ. ನಾಗೇಶ್ | - " - |
| ಬಿ. ಬಸಪ್ಪ | - " - | ಸಿ.ಎನ್. ಧರ್ಮಪ್ರಕಾಶ್ | - " - |
| ಬಿ.ಎಸ್. ಶಿವಶಂಕರ್ | - " - | ಶ್ರೀಮತಿ ಜಯಮ್ಮ | ಮಹಿಳಾ ನಿರ್ದೇಶಕರು |
| ರೇವಣಸ್ವಾಮಿ | - " - | ಎನ್. ಓಂಕಾರಸ್ವಾಮಿ | ನಿರ್ದೇಶಕರು (ಪ.ಜಾ.) |
| ಡಿ.ಎಂ. ಶಿವಸ್ವಾಮಿ | - " - | ಎಸ್.ಬಿ. ಮಹೇಶ್ | ಕಾರ್ಯದರ್ಶಿ |

ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಪಟ್ಟಾಧಿಕಾರ ರಜತ ಮಹೋತ್ಸವದ ಈ ಶುಭಸಂದರ್ಭದಲ್ಲಿ 'ದೇಗುಲ ಸಂಪದ' ಎಂಬ ನೆನಪಿನ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿರುವುದಕ್ಕೆ ಅಖಿಲ ಭಾರತ ವೀರಶೈವ ಮಹಾಸಭಾ, ಚನ್ನಪಟ್ಟಣ ತಾ॥ ಘಟಕ, ಇವರಿಂದ ಹಾರ್ದಿಕ ಶುಭಾಶಯಗಳು

# ಅಖಿಲ ಭಾರತ ವೀರಶೈವ ಮಹಾಸಭಾ

ಚನ್ನಪಟ್ಟಣ ತಾ॥ ಘಟಕ, ಶ್ರೀ ವಿರಕ್ತಮಠ, ಬಿ.ಎಂ. ರಸ್ತೆ
ಚನ್ನಪಟ್ಟಣ, ಬೆಂ.ಗ್ರಾ.ಜಿಲ್ಲೆ

## ಕಾರ್ಯಕಾರಿ ಮಂಡಳಿ ಸದಸ್ಯರು

| | | |
|---|---|---|
| ಗೌರವಾಧ್ಯಕ್ಷರು | : | ಶ್ರೀ ಶ್ರೀ ಎಂ. ಶಿವರುದ್ರ ಸ್ವಾಮಿಗಳು<br>ವಿರಕ್ತಮಠ, ಚನ್ನಪಟ್ಟಣ |
| ಅಧ್ಯಕ್ಷರು | : | ಶ್ರೀ ಎಸ್.ಎಂ. ಬಸವರಾಜು<br>ಶ್ಯಾನುಭೋಗನಹಳ್ಳಿ |
| ಉಪಾಧ್ಯಕ್ಷರು | : | ಶ್ರೀ ಮಾದಪ್ಪ<br>ಶ್ರೀ ವೀರಭದ್ರಯ್ಯ<br>ಶ್ರೀಮತಿ ಜಿ.ಸಿ. ಭಾಗ್ಯಮ್ಮ |
| ಪ್ರಧಾನ ಕಾರ್ಯದರ್ಶಿ | : | ಶ್ರೀ ಬಿ. ಬಸಪ್ಪ |
| ಕೋಶಾಧಿಕಾರಿ | : | ಎಚ್.ಎಸ್. ಕುಮಾರಸ್ವಾಮಿ |
| ಕಾರ್ಯದರ್ಶಿ | : | ಶ್ರೀ ಎಂ. ಮರಿಯಪ್ಪ<br>ಶ್ರೀ ಪಿ. ಸಿದ್ಧಲಿಂಗಸ್ವಾಮಿ<br>ಶ್ರೀ ಬಿ. ರಾಮಯ್ಯ<br>ಶ್ರೀ ಬಿ.ಎಸ್. ಪುಟ್ಟಸ್ವಾಮಿ |
| ಸಂಘಟನಾ ಕಾರ್ಯದರ್ಶಿ | : | ಶ್ರೀ ಬಿ. ಶಿವವಿರಪ್ಪ<br>ಕಂಟ್ರಾಕ್ಟ್ ಬಸಪ್ಪ<br>ಶ್ರೀ ಎಚ್. ಬಸಪ್ಪ<br>ಶ್ರೀ ಪರಮೇಶ್ |

---

ಉದಕ ಹೋೞಗಿ ಗುರುಪಾದೋದಕವೆನಿಸಿತ್ತು;
ಗುರುಪಾದೋದಕ ಹೋೞಗಿ ಕ್ರಿಯಾಪಾದೋದಕವೆನಿಸಿತ್ತು;
ಕ್ರಿಯಾಪಾದೋದಕ ಹೋೞಗಿ ಜ್ಞಾನಪಾದೋದಕವೆನಿಸಿತ್ತು;
ಜ್ಞಾನಪಾದೋದಕವೆ ಶರಣನ ಮನದ ಮೊನೆಯಲ್ಲಿ
ಕಪಿಲಸಿದ್ಧಮಲ್ಲಿಕಾರ್ಜುನನಾಗಿ ನಿಂದಿತ್ತು.

– ಸಿದ್ಧರಾಮ

---

ಹಗಲು ನಾಲ್ಕು ಜಾವ ಅಶನಕ್ಕೆ ಕುದಿವರು,
ಇರುಳು ನಾಲ್ಕು ಜಾವ ವ್ಯಸನಕ್ಕೆ ಕುದಿವರು,
ಅಗಸ ನೀರೊಳಗಿರ್ದು ಬಾಯಾರಿ ಸತ್ತಂತೆ,
ತಮ್ಮೊಳಗಿರ್ದ ಮಹಾಘನವನರಿಯರು
ಚೆನ್ನಮಲ್ಲಿಕಾರ್ಜುನಾ.

– ಅಕ್ಕಮಹಾದೇವಿ

ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ ಕೇಳಿರಯ್ಯಾ.
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ.
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು.
ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ.
ಇದರಾಡಂಬರವೇಕಯ್ಯಾ ?
ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ,
ಲಿಂಗಾಂಗಸಾಮರಸ್ಯವ ತಿಳಿದು,
ನಿಮ್ಮ ಪಾದಪದ್ಮದೊಳು ಬಯಲಾದ ಪದವೆ ಕೈಲಾಸವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ.

– *ಸಿದ್ಧರಾಮ*

---

ಲೇಸೆನಿಸಿಕೊಂಡು ಅಯ್ದು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ನಾಲ್ಕು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ಮೂರು ದಿವಸ ಬದುಕಿದಡೇನು ?
ಲೇಸೆನಿಸಿಕೊಂಡು ಎರಡು ದಿವಸ ಬದುಕಿದಡೇನು ?
ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ !
ಅಜಕಲ್ಪಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ !!
ಎಂದುದಾಗಿ ಕೂಡಲಸಂಗನ ಶರಣರ ವಚನದಲ್ಲಿ
ಲೇಸೆನಿಸಿಕೊಂಡು ಒಂದು ದಿವಸ ಬದುಕಿದಡೇನೊ !

– *ಬಸವಣ್ಣ*

ನೆಲದ ಮರೆಯ ನಿಧಾನದಂತೆ,
ಮುಗಿಲ ಮರೆಯಲಡಗಿದ ಮಿಂಚಿನಂತೆ,
ಬಯಲ ಮರೆಯಲಡಗಿದ ಮರೀಚಿಯಂತೆ,
ಕಂಗಳ ಮರೆಯಲಡಗಿದ ಬೆಳಗಿನಂತೆ,
ಗುಹೇಶ್ವರ ನಿಮ್ಮ ನಿಲವು

– *ಅಲ್ಲಮಪ್ರಭು*

---

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದ ಕುದುರೆಯ ಬಯಸುವವರು
ವೀರರೂ ಅಲ್ಲ, ಧೀರರೂ ಅಲ್ಲ.
ಇದು ಕಾರಣ, ನೆರೆ ಮೂರು ಲೋಕವೆಲ್ಲವು
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೊ !.

– ಅಲ್ಲಮಪ್ರಭು

ಶ್ರೀ ದೇಗುಲ ಮಠದ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ
ಪಟ್ಟಾಧಿಕಾರದ ರಜತ ಮಹೋತ್ಸವ ಸಮಾರಂಭಕ್ಕೆ ಆಗಮಿಸುವ
ಭಕ್ತ ಮಹಾಶಯರುಗಳಿಗೆ ಸ್ವಾಗತ ಕೋರುವ































## MAYURA GROUP

70, Marenahalli, J P Nagar 2nd Phase, Bangalore - 560 078 Tel: 2297 7777 Fax: 2649 3777
Mobile: 94481 11777 E-mail: mfp@bgl.vsnl.net.in Web:www.goodbreadonline.com www.rightcaterers.com

**WE CATER FOR ALL OCCASIONS AT ANY LOCATION**

Printed at: Geetanjali Graphics #4, M.S.R. Indl Estate, Bangalore - 54. Ph: 23604087